# ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ

## (ಪ್ರಾರಂಭದಿಂದ ಕ್ರಿ.ಶ. ೧೩೩೬ ರ ವರೆಗೆ)

Cover Page



ಸಂಶೋಧಕರು

**ಸಾಯಬಣ್ಣ ಕ. ಮೇಲಕಾರ**

ಎಂ.ಎ., ಎಂ.ಫಿಲ್., ಡಿಪ್. ಇನ್ ಎಪಿ.

ಮಾರ್ಗದರ್ಶಕರು

**ರವಿ ಕೋರಿಶೆಟ್ಟರ**

ಎಂ.ಎ., ಪಿಎಚ್.ಡಿ.



ಪ್ರಾಧ್ಯಾಪಕರು

ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ




**ಪಿಎಚ್.ಡಿ. ಪದವಿಗಾಗಿ ಕರ್ನಾಟಕ ವಿಶ್ವವಿದ್ಯಾಲಯದ
ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗಕ್ಕೆ
ಸಾದರ ಪಡಿಸಿದ ಮಹಾಪ್ರಬಂಧ**

**೨೦೦೨**


Dedication
ಅರ್ಪಣೆ
ಸದಾ ನನ್ನ ಏಳ್ಗೆಗಾಗಿ ಶ್ರಮಿಸಿ ದಿವಂಗತರಾದ
ಪೂಜ್ಯ ಮಾತೋಶ್ರೀ ಕಾಸಿಬಾಯಿ ಕ. ಮೇಲಕಾರ
ಇವರಿಗೆ ಈ ಮಹಾಪ್ರಬಂಧವನ್ನು
ಕೃತಜ್ಞತಾಪೂರ್ವಕವಾಗಿ
ಅರ್ಪಿಸುವೆ

# ದೃಢೀಕರಣ ಪತ್ರ

Declaration.

ಶ್ರೀ ಸಾಯಬಣ್ಣ ಕ. ಮೇಲಕಾರ ಇವರು **''ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ''** (ಪ್ರಾರಂಭದಿಂದ ೧೩೩೬ರ ವರೆಗೆ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧದ ವಿಷಯವು ಈ ಮೊದಲು ಇಡಿಯಾಗಿ, ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಧಾರವಾಡ

ದಿನಾಂಕ : ೩೦-೧೨-೨೦೦೨

ಡಾ. ರವಿ ಕೋರಿಶೆಟ್ಟರ
ಪ್ರಾಧ್ಯಾಪಕರು
ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ-೫೮೦ ೦೦೩



# ಪ್ರಮಾಣ ಪತ್ರ

## Certificate

"ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ" (ಪ್ರಾರಂಭದಿಂದ ಕ್ರಿ.ಶ.೧೩೩೬ರ ವರೆಗೆ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ರವಿ ಕೋರಿಶೆಟ್ಟರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧದ ವಿಷಯವು ಈ ಮೊದಲು ಇಡಿಯಾಗಿ, ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಧಾರವಾಡ<br>
ದಿನಾಂಕ : ೩೦-೧೨-೨೦೦೨

**ಸಾಯಬಣ್ಣ ಕ. ಮೇಲಕಾರ**<br>
ಮೇಲ್ವಿಚಾರಕರು<br>
ಪ್ರಾಚ್ಯವಸ್ತು ಸಂಗ್ರಹಾಲಯ<br>
ಕನ್ನಡ ಸಂಶೋಧನ ಸಂಸ್ಥೆ<br>
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

## ನೆನಿಕೆ Acknowledgement

ನನ್ನ ಸಂಶೋಧನೆಗೆ ಮಾರ್ಗದರ್ಶಕರಾಗಲು ಒಪ್ಪಿ ಅಧ್ಯಯನದ ಉದ್ದಕ್ಕೂ ನನ್ನ ಮೇಲೆ ವಿಶ್ವಾಸವನ್ನಿಟ್ಟು ಆತ್ಮೀಯತೆಯಿಂದ ಕ್ಷೇತ್ರಕಾರ್ಯಮಾಡುವ ಬಗೆಯನ್ನು ಪ್ರಾಯೋಗಿಕವಾಗಿ ಕಲಿಸಿಕೊಟ್ಟು ಮಹಾಪ್ರಬಂಧದ ರಚನೆಗೆ ಕಾರಣರಾದ ನನ್ನ ವಿದ್ಯಾಗುರುಗಳಾದ ಡಾ. ರವಿಕೋರಿಶೆಟ್ಟರ ಅವರಿಗೆ ಹೃದಯ ಪೂರ್ವಕವಾಗಿ ಮೊದಲು ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ನಾನು ವಿಶ್ವವಿದ್ಯಾಲಯದಲ್ಲಿ ಸೇವೆಗೆ ಸೇರುವಾಗ ಪಿ ಎಚ್. ಡಿ. ಮಾಡುತ್ತಿರುವ ವಿಷಯ ಅರಿತು ಅದನ್ನು ಬೇಗನೆ ಮುಗಿಸುವಂತೆ ಸಲಹೆ ನೀಡಿದ ವಿಶ್ರಾಂತ ಕುಲಪತಿಗಳು ಡಾ. ಎ. ಎಂ. ಪಠಾಣರು, ವಿಶ್ರಾಂತ ಕುಲಸಚಿವರು ಹಾಗೂ ಸಧ್ಯ ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗದ ಮುಖ್ಯಸ್ಥರು ವಿಶ್ವವಿದ್ಯಾಲಯದ ಸಮಾಜಿಕಶಾಸ್ತ್ರದ ನಿಕಾಯ ಡೀನರು ಹಾಗೂ ನನ್ನ ಗುರುಗಳಾದ ಡಾ. ಎಸ್. ರಾಜಶೇಖರರವರಿಗೂ ಮತ್ತು ಪೂಜ್ಯ ಗುರುಗಳಾದ ಡಾ. ವಸಂತ ರಾಯಚೂರ ಇವರೆಲ್ಲರೂ ನನ್ನ ಸಂಶೋಧನೆಗೆ ಸ್ಫೂರ್ತಿ ನೀಡಿ ಆಶೀರ್ವದಿಸಿರುವರು ಅವರಿಗೂ ಕೃತಜ್ಞಾಪೂರ್ವಕವಾಗಿ ನಮನಗಳನ್ನು ಸಲ್ಲಿಸುವೆ.

ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗದ ನನ್ನ ಗುರುಗಳಾದ ಡಾ. ಎಂ.ಟಿ. ಕಾಂಬಳೆ ಡಾ. ಕೆ. ಆರ್. ಬಸವರಾಜ, ಪ್ರೊ. ಎಚ್. ಬಿ. ಸುಂಕಾದ, ಪ್ರೊ. ಅಶೋಕ, ಶೆಟ್ಟರ ಸಧ್ಯ ಬಿಜಾಪೂರಜಲ್ಲೆಯ ಪಿ. ಜಿ. ಕೇಂದ್ರದ ನಿರ್ದೇಶಕರಾದ ಎಸ್. ಕೆ. ಕಲ್ಲೋಳಿಕರ ಪ್ರೊ. ಶ್ರಿಮತಿ ವಾರೀಜಾ ಆರ್. ಬೋಲಾರ, ಡಾ. ಐ.ಕೆ. ಪತ್ತಾರ ಮತ್ತು ಸ್ನೇಹಿತ ಶಿಲಾಧರ್ ಮುಗಳಿ ಇವರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸದೆ ಇರಲಾರೆ.

ಈಗ ನಾನು ಸೇವೆ ಸಲ್ಲಿಸುತ್ತಿರುವ ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಕರಾದ ಡಾ. ರಘುನಾಥ ಭಟ್ಟ, ಪ್ರೊ. ಸಿ.ಬಿ. ಕಡಕೋಳ, ಎಸ್.ಬಿ. ಹಿರೇಮಠ ಇವರು ನೀಡಿದ ಸಹಕಾರ ಹಾಗೂ ನನ್ನ ಎಲ್ಲಾ ಸಹೋದ್ಯೋಗಿಗಳ ಪ್ರೋತ್ಸಾಹ ದೊರಕ್ಕಿದ್ದರಿಂದ ಅವರೆಲ್ಲರಿಗೂ ಕೃತಜ್ಞತೆಗಳನ್ನು ಸಲ್ಲಿಸುವೆ.

ವಿಶ್ವವಿದ್ಯಾಲಯದಲ್ಲಿ ನನ್ನನ್ನು ಯಾವತ್ತು ಪ್ರೀತಿಯಿಂದ ಕರೆದು ಸಂಶೋಧನಾ ಕ್ಷೇತ್ರದಲ್ಲಿ ಮಾಡಬೇಕಾದ ನನ್ನ ಮುಂದಿನ ಗುರಿಯ ಕುರಿತು ಚಿಂತಿಸಲು ಕಾರಣರಾದ ಪ್ರಾಧ್ಯಾಪಕರುಗಳಾದ ಅಮೃತಗೌಡ ಇನಾಮದಾರ, ಡಾ. ಬಿ. ಪಿ. ಸಿದ್ಧಾಶ್ರಮ ಡಾ. ಆರ್.ಡಿ. ಕನಮಡಿ, ಪ್ರೊ. ರಾಜಶೇಖರ ಜಾಡರ, ಡಾ. ಎಸ್. ಎಸ್. ಹುಗಾರ, ಡಾ. ಪಿ. ಎಚ್. ಮುಂದಿನಮನಿ, ಡಾ. ರು. ಮ. ಷಡಕ್ಷಾರಯ್ಯ, ಡಾ. ಶ್ರೀನಿವಾಸ ಪಾಡಿಗಾರ, ಡಾ. ಎಸ್. ಶೆಟ್ಟರ, ಪ್ರೊ. ಶ್ರೀಶೈಲಪ್ಪಾ ಮಳಗಿ, ಇವರೆಲ್ಲರಿಗೂ ನನ್ನ ಕೃತಜ್ಞತೆಗಳು ಹೇಳುವೆ.

ವಿವಿಧ ಇಲಾಖೆ, ವಿಶ್ವವಿದ್ಯಾಲಯ ಮತ್ತು ಕಾಲೇಜುಗಳಲ್ಲಿ ಉಪನ್ಯಾಸಕರಾಗಿ ಸೇವೆಸಲ್ಲಿರುತ್ತಿರುವ ಗೆಳೆಯರಾದ ಆರ್. ಆರ್. ಬಿರಾದಾರ, ವಿ. ಎಸ್. ಬಡಿಗೇರ, ಬಿ. ಆರ್. ರಾಠೋಡ,

ರಾಮು ಚಲವಾದಿ, ಎ. ವ್ಹಿ. ನಾಗನೂರ, ಆನಂದ ಕುಲಕರ್ಣಿ, ರಾಮು ಸಜ್ಜನ, ಎಸ್. ವಿ. ಕೆರುಟಗಿ, ಜಿ.ಬಿ. ಕುಲಕರ್ಣಿ, ಸಂಗಮೇಶ ಚಲವಾದಿ, ಬಂಧುಗಳಾದ ಸಾಬಣ್ಣ ತಳವಾರ, ಡಾ. ನಾಗಾಬಾಯಿ ಬುಳ್ಳಾ, ಪ್ರೊ. ಸುರೇಶ ಪೂಜಾರ, ಕಾಶಿನಾಥ, ಜಗನ್ನಾಥ ಓಲೆಕಾರ, ಎಸ್. ಬಿ. ದೇಸನೂರ, ಇವರೆಲ್ಲರ ಸಹಕಾರ ದೊರೆತಿದ್ದು ಇವರೆಲ್ಲರಿಗೂ ನನ್ನ ಕೃತಜ್ಞತೆಗಳು.

ನನ್ನ ಆತ್ಮೀಯ ಗೆಳೆಯರಲ್ಲೊಬ್ಬರಾದ ಡಾ. ಸುಭಾಸ ರಾ. ಚಿಂಚೋಳಿ ಇವರು ನನ್ನ ಕ್ಷೇತ್ರಕಾರ್ಯಕ್ಕೆ ಬಂದು ಸಹಾಯ ನೀಡಿದ ಇವರಿಗೂ ಈ ಸಂದರ್ಭದಲ್ಲಿ ಕೃತಜ್ಞತೆಗಳನ್ನು ಸಲ್ಲಿಸುವೆ.

ವಿದ್ಯಾರ್ಥಿಗಳ ದಿಸೆಯಿಂದಲು ಆಶ್ರಯ ಒದಗಿಸಿಕೊಟ್ಟು ನಮ್ಮನ್ನು ಮಕ್ಕಳಂತೆ ಕಂಡು ಉನ್ನತ ಶಿಕ್ಷಣ ಕಲಿಯಲು ಕಾರಣೀಕರ್ತರರಾದ ನನ್ನ ವಿದ್ಯಾಗುರುಗಳ ತಂದೆಯವರಾದ ಶ್ರೀ ಕೆ. ಎಸ್. ಮರಿಸ್ವಾಮಿ ಹಾಗೂ ಅವರ ಧರ್ಮಪತ್ನಿ ಸರ್ವಮಂಗಳಂ ಕೊರಿಶೆಟ್ಟರ ಮತ್ತು ಸಂಶೋಧನಾ ಕೆಲಸದ ನಿಮಿತ್ಯವಾಗಿ ಗುರುಗಳ ಮನೆಗೆ ಹೋದಾಗ ಗೌರವದಿಂದ ನಮ್ಮನ್ನು ಕಂಡು ಆಶೀರ್ವಾದಿಸಿದ ಶ್ರೀಮತಿ ವಿಶಾಲ ಅಕ್ಕಾರವರಿಗೂ ಸೂರ್ಯ-ಚಂದ್ರರಂತಿರುವ ಅವರ ಮಕ್ಕಳಾದ ಪೂಜಾ ಹಾಗೂ ಶಾಶ್ವತ ಇವರು ಕೂಡಾ ನಮ್ಮನ್ನು ಆತ್ಮಿಯಂತೆ ಕಂಡಿರುವರು ಅವರೆಲ್ಲರಿಗೂ ನನ್ನ ನಮನಗಳನ್ನು ಹೇಳುವೆ.

ಉನ್ನತ ಶಿಕ್ಷಣದವರೆಗ ಓದಲು ಶ್ರಮಿಸಿದ ಪೂಜ್ಯ ತಂದೆಯವರಾದ ಕಲ್ಲಪ್ಪ, ಸಹೋದರ ಚಂದ್ರಶೇಖರ ಸಹೋದರಿ ಶರಣಮ್ಮಾ ಅಕ್ಕಳಿಗೂ ಹಾಗೂ ನನ್ನ ಮನೆಯ ಜವಾಬ್ದಾರಿಯಲ್ಲಿ ಮಕ್ಕಳಾದ ಸಿಂಧು, ರಶ್ಮಿ, ಭರತರ ಲಾಲನೆ-ಪೋಷಣೆಯ ಹೊಣೆಹೊತ್ತು ಸಂಶೋಧನೆಗೆ ತೊಂದರೆ ಬಾರದಂತೆ ಸಹಕರಿಸಿದ ಪತ್ನಿ ರಮಾಳಿಗೂ ನನ್ನ ಕೃತಜ್ಞತೆಗಳು.

ಪಿ ಎಚ್.ಡಿ. ಸಂಶೋಧನೆಗಾಗಿ ಶಿಷ್ಯವೇತನ ಮಂಜೂರಮಾಡಿ ಸಂಶೋಧನೆಗೆ ಅನುಕೂಲ ಮಾಡಿಕೊಟ್ಟ ಮಾನ್ಯ ಕುಲಪತಿಗಳು, ಕುಲಸಚಿವರು ಹಾಗೂ ಪ್ರವರ್ಗ-1 ರ ಘಟಕದ ವಿಶೇಷ ಅಧಿಕಾರಿಗಳಿಗೆ, ಗ್ರಂಥಾಲಯದ ಮುಖ್ಯಸ್ಥರು ಹಾಗೂ ಹಣಕಾಸು ಅಧಿಕಾರಿಗಳು ಇವರೆಲ್ಲರಿಗೂ ಕೃತಜ್ಞತೆಗಳನ್ನು ಹೇಳುವೆ.

ಇನ್ನೂ ಅನೇಕ ಸ್ನೇಹಿತ ಬಂಧುಗಳು, ಹಿತೈಸಿಗಳೆಲ್ಲರ ಸಹಾಯ ಸಹಕಾರ ದೊರೆತಿದ್ದು, ಅವರೆಲ್ಲರಿಗೂ ಮತ್ತು ಈ ಮಹಾಪ್ರಬಂಧವನ್ನು ವೇಳೆಗೆ ಸರಿಯಾಗಿ ಡಿ.ಟಿ.ಪಿ. ಮಾಡಿ ಕೊಟ್ಟ ಶ್ರೀ ಆರ್. ಕೆ. ಹೆಗಡೆ ಹಾಗೂ ಅವರ ಪತ್ನಿ ಆಶಾ ಹೆಗಡೆ ಮತ್ತು ಗೋವಿಂದರಾಜ ವೈದ್ಯ, ಬೈಂಡ ಮಾಡಿಕೊಟ್ಟ ಬಿರಾದಾರ ಇವರೆಲ್ಲರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಎಸ್. ಕೆ. ಮೇಲಕಾರ

# Abbreviations
# ಸಂಕ್ಷೇಪಗಳು

**English**

| | | |
|---|---|---|
| A.R.I.E. | : | Annual Report on Indian Epigraphy |
| A.R.S.I.E. | : | Annual Report on South Indian Epigraphy |
| A.R.H.S.A.D. | : | Annual Report of Hyderabad State Archaeological Department |
| A.S. | : | Archaeological Study |
| A.I. | : | Ancient India |
| A.H.K. | : | A History of Karnataka |
| A.W.C.K. | : | Administration under the Chalukyas of Kalyana |
| C.K.I. | : | Corpus of Kadamba Inscriptions |
| E.I. | : | Epigraphia Carnatica |
| E.C.S.I. | : | Economic Conditions Southern India |
| E.C.K. | : | Economic Condition in Karnataka |
| E.C.T.S.I | : | Early Chamber Tomes of South India |
| I.A. | : | Indian Antiquery |
| I.K.D.H.S. | : | Inscriptions in Kannada District of Hyderabad State |
| I.K. (K.D) | : | Inscriptions of Karnataka (Koppal District) |
| I.K.C.S.D.S.I. | : | Investigation into Neolithic Culture of Shorapur Doab South India |
| I.A.R. | : | Indian Archaeology A Review |
| J.G.S.H. | : | Journal of the Geological Survey of Hyderbad |

**ಕನ್ನಡ**

| | | |
|---|---|---|
| ಆ. ವಿ. ಶಾ. ಒ. ಅ. | : | ಆರನೆಯ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ |
| ಇ. ದ. | : | ಇತಿಹಾಸ ದರ್ಶನ |
| ಕ.ಪ.ಕ.ಸಾ. | : | ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ |
| ಕ.ಶಾ.ಸಾ.ಅ. | : | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ |
| ಕ.ಕೊ. | : | ಕರ್ನಾಟಕದ ಕೋಟೆಗಳು |
| ಕ.ಭಾ. | : | ಕರ್ನಾಟಕ ಭಾರತಿ |
| ಕ.ಸಂ.ಸ. | : | ಕರ್ನಾಟಕ ಸಂಸ್ಕೃತಿ ಸಮೀಕ್ಷೆ |
| ಕ.ಶ. | : | ಕರ್ನಾಟಕದ ಕಲಚುರಿಗಳು |
| ಕ.ನಾ.ಶಾ.ಕ. | : | ಕನ್ನಡನಾಡಿನ ಶಾಸನ ಕವಿಗಳು |
| ಕ.ವಾ.ಶಿ. | : | ಕರ್ನಾಟಕದ ವಾಸ್ತು ಶಿಲ್ಪ ಮತ್ತು ಶಿಲ್ಪಕಲೆ |

| | |
|---|---|
| ಕ.ಪು.ನೆಯ | : ಕರ್ನಾಟಕದ ಪುರಾತತ್ವ ನೆಲೆಗಳು |
| ಕ.ಚ. | : ಕರ್ನಾಟಕ ಕವಿಚರಿತೆ |
| ಕ.ಪ್ರಾ.ಕಾ.ಶ. | : ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಕಲೆ |
| ಕ.ದೇ. ಕೋ. | : ಕರ್ನಾಟಕ ದೇವಾಲಯ ಕೋಶ |
| ಕ.ವಿ.ವಿ.ಶಾ.ಸಂ-೨, | : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ |
| ಕು.ಲಿ.ಪ್ರ.ಪ್ರಾ.ಅ. ಒ.ಅ. | : ಕುಷ್ಟಗಿ ಲಿಂಗಸುಗೂರ ಪ್ರದೇಶದ ಪ್ರಾಗೈತಿಹಾಸಿಕ ಅನ್ವೇಷಣೆ - ಒಂದು ಅಧ್ಯಯನ |
| ಕು.ತಾ. | : ಕುಷ್ಟಗಿ ತಾಲೂಕ |
| ಕೊ.ತಾ. | : ಕೊಪ್ಪಳ ತಾಲೂಕ |
| ಗಂ.ತಾ | : ಗಂಗಾವತಿ ತಾಲೂಕ |
| ಛಾ. ಚಿ. | : ಛಾಯಾ ಚಿತ್ರಗಳು |
| ತ.ನ. | : ತಲವಿನ್ಯಾಸ ನಂಬರ |
| ತ.ನಾ.ಒ.ಅ. | : ತದರವಾಡಿ ನಾಡು : ಒಂದು ಅಧ್ಯಯನ |
| ನ.ಅ.ಕೃ. | : ನಯಸೇನ ಮತ್ತು ಅವನ ಕೃತಿಗಳು |
| ನಾ.ಒ.ಅ. | : ನಾಗರಖಂಡ ಒಂದು ಅಧ್ಯಯನ |
| ಪ್ರ.ಕ. | : ಪ್ರಭುದ್ಧ ಕರ್ನಾಟಕ |
| ಭ.ಸ. | : ಭಗೀರಥ ಸಂಕಲ್ಪ |
| ಭಾ.ದೇ.ನೆ.ಹಿ. | : ಭಾರತೀಯ ದೇವಾಲಯ ನೆಲೆ-ಹಿನ್ನೆಲೆ |
| ಮಾ.ಕ. | : ಮಾನವಿಕ ಕರ್ನಾಟಕ |
| ಯು.ಭಾ.ಸಾ. | : ಯುಗಯಾತ್ರಿ ಭಾರತೀಯ ಸಂಸ್ಕೃತಿ |
| ವ.ಸಾ. ಒ.ಸಾ.ಅ. | : ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ |
| ಶ.ಸಾ.ದ. | : ಶರಣ ಸಾಹಿತ್ಯ ಪತ್ರಿಕೆ |
| ಶಾ.ಕ.ಸ್ತ್ರೀ.ಸ. | : ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ |
| ಶಾ.ಕ.ವ. | : ಶಾಸನಗಳಲ್ಲಿ ಕರ್ನಾಟಕದ ವರ್ತಕರು |

# ವಿಷಯಾನುಕ್ರಮಣಿಕೆ

Content

ಪುಟಗಳು

chapter-1

ಅಧ್ಯಾಯ - ಒಂದು

# ಪ್ರಸ್ತಾವನೆ

Preface

ವಿಸ್ತಾರ ಗೊಳ್ಳುತ್ತಿರುವ ಚರಿತ್ರೆಯ ಅರ್ಥವ್ಯಾಪ್ತಿಯಿಂದ ಸೂಕ್ಷ್ಮ ಅಧ್ಯಯನಕ್ಕೆ ಹೆಚ್ಚು ಒತ್ತು ಕೊಟ್ಟಂತೆ, ಪ್ರಾದೇಶಿಕ ಅಧ್ಯಯನಕ್ಕೂ ಮಹತ್ವ ನೀಡಿ ಅಲ್ಲಿ ಬದುಕುವ ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಭೌಗೋಳಿಕ ವ್ಯಾಪ್ತಿಯ ಪರಿಸರದ ಜ್ಞಾನ ಸಿಗುವಂತಾಗಲು ಸೂಕ್ಷ್ಮ ಮತ್ತು ಪ್ರಾದೇಶಿಕ ಅಧ್ಯಯನಗಳ ಅವಶ್ಯಕತೆ ಇಂದಿನ ಶೈಕ್ಷಣಿಕ ವ್ಯವಸ್ಥೆಯಲ್ಲಿ ಹೆಚ್ಚು ಹೆಚ್ಚು ಅಳವಡಿಸಬೇಕಿದೆ.

**ಉದ್ದೇಶ**

ಕನ್ನಡ ನಾಡಿನ ಚರಿತ್ರೆಯ ರಚನೆಗೆ ದಾಖಲೆಗಳ ಕೊರತೆ ಇಲ್ಲವಾದರೂ ಆತಂಕ, ಅಡೆತಡೆಗಳು ಹಲವಾರು ಇವೆ. ವಿಸ್ತಾರ ಭೂಭಾಗ ಹೊಂದಿದ ಕರ್ನಾಟಕಕ್ಕೆ (ಕನ್ನಡನಾಡಿಗೆ) ಎರಡುಸಾವಿರಕ್ಕಿಂತ ಹೆಚ್ಚಿನ ಪರಂಪರೆಯಿದೆ. ಇಲ್ಲಿ ಸಾಮ್ರಾಜ್ಯ ಕಟ್ಟಿ ಆಡಳಿತನಡೆಸಿದ ಅರಸೊತ್ತಿಗೆಗಳು ಅನೇಕ. ಅಂದು ಆಡಳಿತ ನಡೆಸಲು ಸುಲಭವಾಗಲಿ ಎಂಬ ಉದ್ದೇಶದಿಂದ ರಾಜ್ಯವನ್ನು ಚಿಕ್ಕ-ದೊಡ್ಡ ವಿಭಾಗ, ಉಪವಿಭಾಗಗಳನ್ನು ಮಾಡಿಕೊಂಡು ಆಡಳಿತ ನಡೆಸಿದ್ದರು. ಆದರೆ ಆಯಾ ಆಡಳಿತ ವಿಭಾಗಗಳ ಆಡಳಿತ ವರ್ಗ, ಅಲ್ಲಿ ಬದುಕುವ ವಿವಿಧ ಜನವರ್ಗ, ಅವರ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ಅವರ ಸಾಂಸ್ಕೃತಿಕ ಬದುಕನ್ನು ಒಂದೇ ದೃಷ್ಟಿಯಡಿ ಅಭ್ಯಾಸ ಮಾಡುವುದು ಕಷ್ಟಸಾಧ್ಯ. ಅದಕ್ಕಾಗಿ ಇಂದು ಚರಿತ್ರೆಯ ಅಧ್ಯಯನವನ್ನು ಸೂಕ್ಷ್ಮ ಮತ್ತು ಪ್ರಾದೇಶಿಕ ವಿಭಾಗಗಳ ಮಟ್ಟದಲ್ಲಿ ವಿಂಗಡಿಸಿ ಆಯಾ ವಿಭಾಗಗಳಲ್ಲಿಯ ಜನರ ಬದುಕಿನ ಸಾರವನ್ನು ಅರಿತುಕೊಳ್ಳುವ ಪ್ರಯತ್ನ ನಡೆದಿದೆ. ಇದರ ಮೊದಲ ಪ್ರಯತ್ನವೆ ನಮ್ಮ ಈ ''ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ.''

ಕ್ರಿ.ಶ. ೧೯೯೭ ರಂದು ಹೊಸದಾಗಿ ರಚನೆಗೊಂಡ ಕರ್ನಾಟಕ ರಾಜ್ಯದ ಹೊಸ ಜಿಲ್ಲೆಗಳಲ್ಲಿ ಕೊಪ್ಪಳ ಜಿಲ್ಲೆಯು ಒಂದಾಗಿದೆ. ಭೌಗೋಳಿಕ ವ್ಯಾಪ್ತಿಗೆ ಅನುಗುಣವಾಗಿ ವಿಭಾಗಿಸಲ್ಪಟ್ಟ ಜಿಲ್ಲೆಗಳು ಕೇವಲ ಆಡಳಿತದ ಅನುಕೂಲತೆಯಿಂದಲ್ಲ .ಅಲ್ಲಿಯ ಜನರ ಸಾಮಾಜಿಕ ಜೀವನದ ಅಭಿವೃದ್ಧಿಯ ಹಿತದೃಷ್ಠಿಯಿಂದ ರಾಜರು, ರಾಜ್ಯಸರಕಾರಗಳು ಕಾಲಕ್ರಮದಲ್ಲಿ ಇಂತಹ ಆಡಳಿತಾತ್ಮಕ ನಿರ್ಧಾರಗಳನ್ನು ತೆಗೆದುಕೊಳ್ಳುತ್ತ ಬಂದಿರುವರು. ಹೀಗೆ ೧೯೯೭ ರಲ್ಲಿ ಗಂಗಾವತಿ, ಕುಷ್ಟಗಿ, ಯಲಬುರ್ಗಾ ಮತ್ತು ಕೊಪ್ಪಳ ತಾಲೂಕು ಗಳನ್ನೊಳಗೊಂಡು ಹೊಸದಾಗಿ ರಚನೆಯಾದ ಕೊಪ್ಪಳ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ ನಡೆಯಬೇಕೆಂಬ ದೃಷ್ಠಿಯಿಂದ ಜಿಲ್ಲೆಯಲ್ಲಿ ದೊರಕುವ ೩೦೦ ಕ್ಕೂ ಹೆಚ್ಚು ಶಾಸನಗಳನ್ನು ಮುಖ್ಯ ಆಕರಗಳನ್ನಾಗಿ ಬಳಸಿಕೊಂಡು ಅಧ್ಯಯನ ಮಾಡಲು ಮುಂದಡಿಯಿಟ್ಟಿರುವೆ.

## ವ್ಯಾಪ್ತಿ ಮತ್ತು ಸ್ವರೂಪ

ಈ ಅಧ್ಯಯನಕ್ಕೆ ನಾವು ಹಾಕಿಕೊಂಡಿರುವ ಕಾಲಮಿತಿ ಕೊಪ್ಪಳ ಜಿಲ್ಲೆಯಲ್ಲಿರುವ ಪ್ರಾಗೈತಿಹಾಸಿಕ ಮಾನವನ ನೆಲೆಗಳ ಸಂಸ್ಕೃತಿಯಿಂದ ಕ್ರಿ.ಶ. ೧೩೩೬ರ ವಿಜಯನಗರ ಸ್ಥಾಪನೆಯ ಆರಂಭ ಕಾಲಕ್ಕೆ ಸೀಮಿತಗೊಂಡಿದೆ. ಕೊಪ್ಪಳ ಇಂದು ಜಿಲ್ಲಾ ಕೇಂದ್ರವಾಗಿದ್ದಂತೆ ಪ್ರಾಚೀನವಾಗಿಯೂ ತಿರುಳ್ಗನ್ನಡನಾಡಿನ ಮಹಾ ಕೋಪಣನಗರವಾಗಿ, ಶಾಸನಗಳಲ್ಲಿ ಕುಪಣ, ಕೋಪಣ, ಕೋಪಣಾಚಲ, ಕೋಪಣ ತೀರ್ಥವಾಗಿ ಹೆಸರುಗಳಿಸಿತ್ತಲ್ಲದೆ, ಬೌದ್ಧ, ಜೈನ ಧರ್ಮಗಳ ಮಹಾನಕೇಂದ್ರವಾಗಿ ಮೆರೆದಿತ್ತು. ಇಂದು ನಾಲ್ಕು ತಾಲೂಕುಗಳನ್ನು ಮೈಗೂಡಿಸಿಕೊಂಡ ಕೊಪ್ಪಳ ಜಿಲ್ಲೆಯು ದಕ್ಷಿಣಭಾರತ, ಅದರಲ್ಲಿಯೂ ಕರ್ನಾಟಕ ಚರಿತ್ರೆಯಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿದೆ. ಹೈದ್ರಾಬಾದ ಕರ್ನಾಟಕದ ಹಿಂದೂ ಳಿದ ಪ್ರದೇಶವೆಂಬ ಹಣೆಪಟ್ಟಿಕಟ್ಟಿಕೊಂಡರೂ ಶ್ರೀಮಂತ ಚರಿತ್ರೆಯನ್ನು ಹೊಂದಿದೆ.

ಇಲ್ಲಿ ಆದಿಶಿಲಾಯುಗದಿಂದಲೇ ಮಾನವ ತನ್ನ ಅಲೆಮಾರಿ ಜೀವನ ನಡೆಸಿದ್ದು, ಅವನು ಬಳಸಿದ ಕಲ್ಲಾಯುಧಗಳು ಕುಷ್ಟಗಿ ತಾಲೂಕಿನ ಹನುಮಸಾಗರ ಬೆಟ್ಟದಲ್ಲಿ ದೊರಕುತ್ತವೆ. ನಂತರ ಬಂದ ಸೂಕ್ಷ್ಮ ಶಿಲಾಯುಗ, ನವಶಿಲಾಯುಗ, ತಾಮ್ರ ಶಿಲಾಯುಗ ಮತ್ತು ಬೃಹತ ಶಿಲಾಯುಗ ಮಾನವರು ಜಿಲ್ಲೆಯ ಕೊಪ್ಪಳ, ಹಿರೇಬೆನಕಲ್, ಶಿವಪುರ, ಇಂದರ್ಗಿ, ಬಂಡಿಹರ್ಲಾಪುರ, ತಾವರಗೇರಿ, ಚಿಕ್ಕಬೆನಕಲ್, ಮಲ್ಲಾಪುರ, ಚಿಕ್ಕರಾಂಪುರ, ಆನೆಗುಂದಿ, ಕುಂಟೋಜಿ, ಹೆಬ್ಬಾಳ, ಹೇಮಗುಡ್ಡ ಮುಂತಾದ ನೆಲೆಗಳಲ್ಲಿ ಬದುಕಿ ಬಿಟ್ಟುಹೊದ ಶಿಲಾಯುಧಗಳು, ಬಂಡೆ ಚಿತ್ರಗಳು ಅಂದಿನ ಚಾರಿತ್ರಿಕ ದಾಖಲೆಗಳಾಗಿ ಜಿಲ್ಲೆಯ ಪ್ರಾಗೈತಿಹಾಸಿಕ ಮಾನವ ಸಂಸ್ಕೃತಿಯ ಅಧ್ಯಯನಕ್ಕೆ ಸಹಾಯಕವಾಗಿವೆ.

ಶಿಲಾಯುಗ ಮುಗಿದು ಇತಿಹಾಸ ಆರಂಭಕಾಲಕ್ಕೆ ಬಂದರೆ ಅಶೋಕ ಚಕ್ರವರ್ತಿಗೆ ಸಂಬಂಧಿಸಿದ ಎರಡು ಶಾಸನಗಳು ಕೊಪ್ಪಳದ ಗವಿಮಠ ಮತ್ತು ಪಾಲ್ಕಿಗುಂಡು ಬೆಟ್ಟದ ಬಂಡೆಯ ಮೇಲೆ ಕಂಡುಬರುತ್ತವೆ. ಇವು ಮೌರ್ಯರ ಚರಿತ್ರೆ ಮತ್ತು ಬೌದ್ಧಧರ್ಮದ ಮೇಲೆ ಬೆಳಕು ಚೆಲ್ಲುತ್ತವೆ. ಮೌರ್ಯರ ನಂತರ ಬಂದ ಶಾತವಾಹನ ಸಂಸ್ಕೃತಿಯನ್ನು ಬಿಂಬಿಸುವ ವಸ್ತುಗಳು ಮೇಲಿನ ಶಿಲಾಯುಗ ನೆಲೆಗಳಲ್ಲಿ ಅಲ್ಲದೆ ಜಿಲ್ಲೆಯ ಇತರೆ ಗ್ರಾಮಗಳ ಹಾಳುಮಣ್ಣಿನ ಪರಿಸರದಲ್ಲಿ ದೊರಕುತ್ತಿದ್ದು,ಅವು ಶಾತವಾಹನರ ಚರಿತ್ರೆಯನ್ನರಿಯಲು ಪುರಕ ಪ್ರಮಾಣಗಳಾಗಿವೆ.

ಜಿಲ್ಲೆಯ ನಿಶ್ಚಿತ ಚರಿತ್ರೆಯು ಬಾದಾಮಿ ಚಾಲುಕ್ಯರಿಂದ ದೊರಕುತ್ತದೆ. ಇವರ ಕಾಲಕ್ಕೆ ಸೇರಿದ ಕೆಲವು ಶಾಸನಗಳ ಸಾಲುಗಳು ಕೊಪ್ಪಳದಲ್ಲಿದ್ದಂತೆ ಬೇರೆ ನೆಲೆಗಳಲ್ಲಿಯೂ ಕೂಡ ದೊರಕುತ್ತವೆ. ರಾಷ್ಟ್ರಕೂಟರ ಕಾಲವಂತು ಜಿಲ್ಲೆಯ ಜೈನಧರ್ಮದ ಇತಿಹಾಸ ಅಧ್ಯಯನಕ್ಕೆ ಹೆಸರು ಪಡೆದಂತಹ ಕಾಲ. ಕೊಪ್ಪಳ, ಯಲಬುರ್ಗ, ಕುಕನೂರ, ಆನೆಗುಂದಿ, ಅಡೂರ, ರಾಜೂರ ಇತ್ಯಾದಿಗಳು ಜೈನ ಕೇಂದ್ರಗಳಾಗಿದ್ದರೂ ಕೊಪ್ಪಳವೇ ಪ್ರಮುಖ ಜೈನ ಕೇಂದ್ರವಾಗಿ ಹೆಸರುಪಡೆದಿತ್ತು. ತೀರ್ಥವೆಂದೆ ಹೆಸರು ಗಳಿಸಿದ ಕೊಪ್ಪಳದಲ್ಲಿ

ಗಂಗರಿಂದ-ವಿಜಯನಗರ ಕಾಲದವರೆಗೆ ನಾಡಿನ ಬೇರೆ ಬೇರೆ ಕಡೆಯಿಂದ ಶಾಂತಿ-ನೆಮ್ಮದಿ ಬಯಸಿ ಬಂದ ಜೈನ ಮುನಿಗಳು, ಕಂತಿಯರು, ಶ್ರಾವಕ-ಶ್ರಾವಕಿಯರು ತಮ್ಮ ಕೊನೆಕಾಲವನ್ನು ಇಲ್ಲಿಯೇ ಕಳೆದು ಕೊನಗೆ ಸಲ್ಲೇಖನ ವ್ರತ ಕೈಕೊಂಡು ಇಂಗುಣಿ, ಸಮಾದಿ ಮರಣ ಮೂಲಕ ಸಾವನ್ನಪ್ಪಿದರ ಬಗ್ಗೆ ನೂರಕ್ಕೂ ಹೆಚ್ಚು ದೊರೆತ ನಿಶಿಧಿಗೆ ಶಾಸನಗಳು ಉಲ್ಲೇಖ ಮಾಡುವವು. ಅರಸರು,ಸಾಮಂತ-ಮಂಡಳೇಶ್ವರರೆನ್ನದೆ ಕೊಪ್ಪಳಕ್ಕೆ ಬಂದು ಬಸದಿಗಳನ್ನು ಕಟ್ಟಿಸಿ ದಾನಧರ್ಮಗಳನ್ನು ನೀಡಿರುವರು. ರಾಷ್ಟ್ರಕೂಟ ಸಾಮಂತ ಶಂಕರಗಂಡನು ಕೊಪ್ಪಳದಲ್ಲಿ ಜಯಧೀರ ಹೆಸರಿನ ಬಸದಿಯನ್ನು ಕಟ್ಟಿಸಿದ್ದನು. ಕುಕನೂರದಲ್ಲಿ ನವಲಿಂಗ ಮತ್ತು ಮಹಾಮಾಯೇ ಜೇಷ್ಠಾದೇವಿಯ ದೇವಾಲಯಗಳು ನಿರ್ಮಾಣಗೊಂಡಿದ್ದವು.

ಕಲ್ಯಾಣ ಚಾಲುಕ್ಯರ ಕಾಲಕ್ಕೆ ಜಿಲ್ಲೆಯ ಇತಿಹಾಸ ಸಂಪೂರ್ಣವಾಗಿ ಕಂಡುಬರುತ್ತದೆ. ಚಾಲುಕ್ಯರಸರು ಬರೆಸಿದ ನೂರಾರು ಶಾಸನಗಳು ಅಂದು ನಿರ್ಮಿಸಿದ ಮಾದಿನೂರ, ಆಳವಂಡಿ, ಕವಲೂರ, ಇಟಗಿ, ಕುಕನೂರ ಇತ್ಯಾದಿ ಅಗ್ರಹಾರ ಶಿಕ್ಷಣ ಕೇಂದ್ರಗಳು ಅವುಗಳ ನಿರ್ವಹಣೆಗೆ ಅನೇಕ ಗ್ರಾಮ-ಭೂದಾನಗಳನ್ನು ನೀಡಿದ್ದನ್ನು ಹೇಳುತ್ತವೆ. ಇಲ್ಲಿ ಸೋಭನರಸ, ಮಹದೇವರಂತಹ ಪ್ರಮುಖ ಸಾಮಂತರು ಆಡಳಿತ ನಡೆಸಿ ಅನೇಕ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇವರಲ್ಲದೆ ಯಾದವರು, ಯರಂಬರಿಗೆಯ ಸಿಂಧರು, ಹೊಯ್ಸಳರು ಸಹ ಕೊಪ್ಪಳ ನಾಡಿನ ಮೇಲೆ, ಕೊಪ್ಪಳದ ಮೇಲೆ ಅಧಿಕಾರ ಹೊಂದಿದ್ದರಲ್ಲದೆ ಕೊಪ್ಪಳ ತೀರ್ಥದ ಜೊತೆಗೆ ಒಳ್ಳೆಯ ಸಂಬಂಧವನ್ನು ಇಟ್ಟುಕೊಂಡಿದ್ದರು.

## ಇದುವರೆಗಿನ ಅಧ್ಯಯನ

ಕರ್ನಾಟಕದ ಚರಿತ್ರೆಯ ಕುರಿತು ಇದುವರೆಗೂ ಸಾಕಷ್ಟು ಅಧ್ಯಯನಗಳು ನಡೆದಿದ್ದು,ಕೆಲವು ಮಾತ್ರ ನಮ್ಮ ಅಧ್ಯಯನ ವ್ಯಾಪ್ತಿಯ ಕೊಪ್ಪಳ ಜಿಲ್ಲೆಯ ಮೇಲೆ ಬೆಳಕು ಚೆಲ್ಲುತ್ತವೆ. ಅವುಗಳಲ್ಲಿ

Bandarkar, R.G. The Early History of the Deccan (collected works of Bandarkar, Vol-III, Poona, 1929); Saletore, B.A., Ancient Karnataka, Vol-I, (History of Tuluvas. 1936); Yazdani, G. (Ed), The Early History of the Deccan (2 Vols, Oxford, 1960) ಗ್ರಂಥಗಳು ಕರ್ನಾಟಕ ಮತ್ತು ದಕ್ಷಿಣ ಭಾರತವನ್ನು ಮುಂದಿಟ್ಟುಕೊಂಡು ಬರೆದ ಗ್ರಂಥಗಳಾಗಿವೆ.

ಇನ್ನೂ ರಾಜವಂಶಗಳನ್ನು ಕುರುತು ಬರೆದ ಗ್ರಂಥಗಳಲ್ಲಿ ಕೆಲವು ಕೊಪ್ಪಳ ಜಿಲ್ಲೆಯನ್ನು ಸ್ಪರ್ಧಿಸುತ್ತವೆ. ಅಂತವುಗಳಲ್ಲಿ

Fleet, J.S., The Dynasties of Kanares District (Bombay Gazetter, Vol-I, part-II, pp-277-538, 1884); Nagaraj Rao, M.S. (Ed), The Chalukyas of Badami, 1978; Gopal,

B.R., The Chalukyas of Kalyani and the Kalachuries, Dharwad, 1981; Altekar, A.S., The Rastrakutas and their Times, 1934; Krishna Murari., The Chalukyas of Kalyani, 1977; Ritti, Shrinivas., The Seunas (The Yadavas of Devagiri), Dharwad, 1973; Narasimha Murthy, A.V., The Yadavas of Devagiri, Mysore, 1971; ಲಕ್ಷ್ಮೀನಾರಾಯಣರಾವ್, ಎನ್. ಮತ್ತು ಪಂಚಮುಖಿ, ಆರ್. ಎಸ್., ಕರ್ನಾಟಕದ ಅರಸುಮನೆತನಗಳು, ಧಾರವಾಡ, ೧೯೪೬.

ಇವಲ್ಲದೆ ಕರ್ನಾಟಕ ಚರಿತ್ರೆಯ ವಿವಿಧ ಮುಖಗಳನ್ನು ಪರಿಚಯಿಸುವ ಸಾಂಸ್ಕೃತಿಕ ವಿಷಯವುಳ್ಳ ಹಲವಾರು ಗ್ರಂಥಗಳು ಪ್ರಕಟಗೊಂಡಿದ್ದು, ಅವುಗಳಲ್ಲಿ ಕೆಲವು ಮಾತ್ರ ಕೊಪ್ಪಳ ಜಿಲ್ಲೆಯ ಸಾಂಸ್ಕೃತಿಕ ಚರಿತ್ರೆಯನ್ನು ಸ್ಪರ್ಷಿಸುತ್ತವೆ. ಅವುಗಳಲ್ಲಿ

Desai, Dinkar., The Mahamandaleshvaras under the Chalukyas of Kalyani, Bombay, 1951; Diksit, G.S., Local self Government in Medieval Karnataka, Dharwad 1964; Cousins, Henry, The Chalukyan architerture of the Kanares Distracts; Culcutta, 1926; Goswami, A., The art of the Rastrakutas, 1958; Kuppuswamy, G.R., Economic conditions in Karnataka, Dharwad, 1975; Gururajachar, S., Some aspects of Economic and Social Life in Karnataka, Mysore, 1974; ಚಿದಾನಂದಮೂರ್ತಿ, ಎಂ., ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರ, ೧೯೭೯, ತಿಪ್ಪೆರುದ್ರಸ್ವಾಮಿ, ಎಚ್., ಕರ್ನಾಟಕ ಸಂಸ್ಕೃತಿಕ ಅಧ್ಯಯನ, ಮೈಸೂರ,೧೯೬೮; ಕಲಬುರ್ಗಿ, ಎಂ. ಎಂ. ೧) ಶಾಸನ ವ್ಯಾಸಂಗ, ಭಾಗ-೧, ೨, ಧಾರವಾಡ, ೧೯೭೮, ೨) ಶಾಸನಗಳಲ್ಲಿ ಶಿವಶರಣರು, ಗದಗ, ೧೯೭೮, ೩) ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು, ಬೆಂಗಳೂರ, ೧೯೮೨; ಚೆನ್ನಕ್ಕ,ಎಲಿಗಾರ., ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಧಾರವಾಡ, ೧೯೯೦, ಶೇಷಶಾಸ್ತ್ರೀ, ಆರ್., ಕರ್ನಾಟಕದ ವೀರಗಲ್ಲುಗಳು, ಬೆಂಗಳೂರು, ೧೯೮೨, ಗೋಪಾಲರಾವ್, ಎಚ್. ಎಸ್., ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಅಧ್ಯಯನ, ೧೯೯೩; ಡಾ. ಚನ್ನಬಸಪ್ಪ ಪಾಟೀಲ, ಎಸ್., ಕರ್ನಾಟಕದ ಕೋಟೆಗಳು, ಸಂ-೧, ಹಂಪಿ, ೧೯೯೯ ಎಂಬ ಹಲವಾರು ಗ್ರಂಥಗಳು ಪಿ ಎಚ್.ಡಿ. ಮಹಾಪ್ರಬಂಧಗಳು ಬೆಳಕು ಕಂಡಿವೆ. ಕೊಪ್ಪಳ ಜಿಲ್ಲೆಯನ್ನು ಮುಖ್ಯವಾಗಿ ಇಟ್ಟುಕೊಂಡು ಬರೆದ ಗ್ರಂಥಗಳಲ್ಲಿ ಪ್ರಮುಖವಾದವುಗಳೆಂದರೆ.

ತಿರುಳ್ಗನ್ನಡ, (ಅಖಿಲ ಭಾರತ ೬೨ ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಕೊಪ್ಪಳ, ೧೯೯೩). ಸವಿಸಂಚಿಕೆ; ಡಾ. ಸುರೇಶ, ಕೆ. ಎಂ. ಮತ್ತು ಸಂಗಡಿಗರು., ಕರ್ನಾಟಕ ದೇವಾಲಯಕೋಶ (ಕೊಪ್ಪಳ ಜಿಲ್ಲೆ), ಹಂಪಿ, ೧೯೯೯, Channabasappa Patil, S., Temples of Raichur and Bellary District, 1992; ಕಲಬುರ್ಗಿ, ಎಂ. ಎಂ., ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಹಂಪಿ, ೧೯೯೯; ಪಾಟೀಲ, ಬಿ.ಸಿ.,



ಇಟಗಿ ಮಹದೇವ ದೇವಾಲಯ, ೨೦೦೧; ಮಾದೆನೂರು ನೆನಹು, ೧೯೯೦; ಕೊಪ್ಪಳ : ಸಾಂಸ್ಕೃತಿ ಪರಂಪರೆ ೧೯೯೮; ವೃಷಭೇಂದ್ರಸ್ವಾಮಿ, ಎಸ್. ಎಂ. ಹಾಗೂ ಇತರರು (ಸಂ), ಗವಿದೀಪ್ತಿ, ಗವಿಮಠ, ೧೯೭೬; ಡಾ. ಚನ್ನಬಸವ ಹಿರೇಮಠ, ೧)ಎಡದೊರೆನಾಡು, ಹಂಪಿ, ೨೦೦೨; ೨) ಕೊಪ್ಪಳ ರಾಯಚೂರ ಜಿಲ್ಲೆಯ ಶಾಸನಗಳು, ೧೯೯೯; ಪಾಟೀಲ,ಬಿ.ಸಿ. ರಾಜಶೇಖರಪ್ಪ, ಶಂಭುಲಿಂಗಪ್ಪ, ಕೊಪ್ಪಳದ ಹೆಚ್ಚಿನ ಶಾಸನಗಳು, ಕೊಪ್ಪಳ, ೧೯೯೮; ಶ್ರೀ ಡಾ. ದೇಸಾಯಿ, ಪಿ.ಬಿ. ಶಾಸನ ಪರಿಚಯ, ಧಾರವಾಡ, ೧೯೫೬;ಡಾ. ದೇವರಕೊಂಡಾರೆಡ್ಡಿ,(ಸಂ) ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಹಂಪಿ, ೧೯೯೯; ಡಾ. ಅ. ಸುಂದರ, ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ ೧೯೯೪, ಬೆಂಗಳೂರ; ಡಾ. ಎಸ್. ಎಲ್. ಶಾಂತಕುಮಾರಿ; ಕುಕನೂರು ಒಂದು ಸಾಂಸ್ಕೃತಿಕ ಸಮೀಕ್ಷೆ ೧೯೭೫; ಧಾರವಾಡ, ಡಾ. ಬಿ. ವ್ಹಿ. ಶಿರೂರ್, ಯಲಬುರ್ಗಿ ಸಿಂಧರು, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ; ಡಾ. ಬಾ. ರಾ. ಗೋಪಾಲ, ಕರ್ನಾಟಕದಲ್ಲಿ ನವಶಿಲಾಯುಗ, ೧೯೮೭, ಧಾರವಾಡ ಗಳಲ್ಲದೇ, ಕೆಲವು ಕನ್ನಡ ವಿಶ್ವವಿದ್ಯಾಲಯ, ಹಂಪಿ ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳಿಂದ ಎಂ. ಫಿಲ್. ಹಾಗೂ ಪಿಎಚ್.ಡಿ. ಮಹಾಪ್ರಬಂಧಗಳು ಹೊರಬಂದಿವೆ.

**ಆಕರ ಸಾಮಗ್ರಿ**

ಈ ನಾಡಿನ ಚರಿತ್ರೆಯ ರಚನೆಗೆ ಸಂಬಂಧಿಸಿದ ಮಾಹಿತಿಗಳನ್ನು, ಪ್ರಾಚ್ಯವಸ್ತು ಮತ್ತು ಸಾಹಿತ್ಯ ವಿಭಾಗಳಾಗಿ ವಿಂಗಡಿಸಲಾಗಿದೆ. ಪ್ರಾಚ್ಯವಸ್ತು ಮೂಲಾಧಾರಗಳಲ್ಲಿ ಉತ್ಖನನದಿಂದ ದೊರೆತ ವಸ್ತುಗಳು, ಕ್ಷೇತ್ರಕಾರ್ಯದಲ್ಲಿ ದೊರೆತ ಶಿಲಾಯುಧಗಳು, ಮಡಿಕೆ ಚೂರುಗಳು, ಮಣಿಗಳು, ಶಾಸನಗಳು, ನಾಣ್ಯಗಳು ಮತ್ತು ಸ್ಮಾರಕಗಳು ಸೇರಿಕೊಳ್ಳುತ್ತವೆ. ಸಾಹಿತ್ಯ ಮೂಲಾಧಾರಗಳಲ್ಲಿ ದೇಶಿಯ ಮತ್ತು ವಿದೇಶಿಯ ಬರವಣಿಗೆಗಳ ನೆರವನ್ನು ಪ್ರಸ್ತುತ ಅಧ್ಯಯನಕ್ಕೆ ಪಡೆಯಲಾಗಿದ್ದರೂ, ಅಧ್ಯಯನಕ್ಕೆ ಮುಖ್ಯ ಸಾಧನ ಸಾಮಗ್ರಿಗಳೆಂದರೆ, ಉತ್ಖನನದಲ್ಲಿ ದೊರೆತ ವಸ್ತುಗಳು, ನಾಣ್ಯಗಳು, ಶಾಸನಗಳು, ದೇವಾಲಯಗಳು, ಗವಿ-ಬಂಡೆ ವರ್ಣಚಿತ್ರಗಳು ಮತ್ತು ಸ್ಮಾರಕಗಳಾಗಿವೆ.

ನಮ್ಮ ನಾಡಿನ ಚರಿತ್ರೆಯ ರಚನೆಗೆ ಶಾಸನಗಳು ಜೀವನಾಡಿಯಾಗಿವೆ. ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಶಾಸನಗಳೇ ಮೂಲ ಆಕರಗಳಾಗಿದ್ದು, ಬೇರೆ ಬೇರೆ ಸಂಪುಟಗಳಲ್ಲಿ ಪ್ರಕಟಗೊಂಡ ಸುಮಾರು ೩೫೦ ಕ್ಕೂ ಹೆಚ್ಚು ಶಾಸನಗಳು ಬಳಕೆಗೊಂಡಿವೆ. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨ ಸಂಪೂರ್ಣ ಕೊಪ್ಪಳ ಜಿಲ್ಲೆಗೆ ಸಂಬಂಧಿಸಿದೆ.

ಒಂದು ದೇಶದ ಸಂಸ್ಕೃತಿಯನ್ನು ಪ್ರತಿನಿಧಿಸುವ ಸಾಧನಗಳೆಂದರೆ ಸ್ಮಾರಕಗಳು. ಇವುಗಳಲ್ಲಿ ಶಿಲಾಗೋರಿ, ದೇವಾಲಯ, ನಾಗರಿಕ ಕಟ್ಟಡ, ವೀರಗಲ್ಲು, ಮಾಸ್ತಿಗಲ್ಲು, ನಿಶಿಧಿ ಇತ್ಯಾದಿಗಳು ಸೇರುತ್ತವೆ. ಕೆಲವು ಬಾರಿ ಶಾಸನ ಮತ್ತು ಸಾಹಿತ್ಯ ಕೃತಿಗಳು ಹೊರಗೆಡುಹದೆ ಹೋದ ವಿಷಯಗಳನ್ನು ಈ ಎಲ್ಲಾ

ಸ್ಮಾರಕಗಳು ಹೊರಗೆಡಹುತ್ತವೆ. ಇವುಗಳಿಂದ ಬೇರೆ ಬೇರೆ ಧರ್ಮಗಳ, ಅಂದಿನ ಜನಜೀವನ, ಕಲಾಭಿರುಚಿ, ಕಲಾಕೌಶಲ್ಯ, ರಚನಾಕ್ರಮ ಮುಂತಾದ ವಿಷಯವೊಳಗೊಂಡಿರುವುದನ್ನು ಅರಿಯಲು ಸಾಧ್ಯವಿದೆ. ಕೊಪ್ಪಳ ಜಿಲ್ಲೆಯಲ್ಲಿ ಶೈವ, ವೈಷ್ಣವ, ಜೈನ ದೇವಾಲಯಗಳು, ಅನ್ನಸತ್ರ, ಅರವಟ್ಟಿಗೆ, ಕೆರೆ-ಬಾವಿಗಳು ನಿರ್ಮಾಣವಾಗಿದ್ದನ್ನು ಶಾಸನಗಳು ಉಲ್ಲೇಖಿಸುತ್ತವೆ.

ಸಾಹಿತ್ಯವು ಜನರ ನಿತ್ಯ ಜೀವನ ಪ್ರವಾಹದಲ್ಲಿ ಬಳಕೆಯಾಗಿ ಜನರ ಜೀವನ ಪ್ರತಿಬಿಂಬವಾಗಿ ಕೆಲಸ ಮಾಡುತ್ತದೆ. ಆಯಾ ಕಾಲದ ಜನಜೀವನದ ಚಿತ್ರಣವನ್ನು ಮೂಡಿಸುವ ಕಾವ್ಯ ಪುರಾಣಗಳ ಮಹತ್ವಗಳು, ಸಮಕಾಲೀನ ಗ್ರಂಥ ಸಾಹಿತ್ಯಗಳು ಚರಿತ್ರೆಯ ರಚನೆಗೆ ಮುಖ್ಯ ಸಾಮಗ್ರಿಯಾಗಿವೆ. ಹೀಗೆ ಶಾಸನ ಹಾಗೂ ಕ್ಷೇತ್ರಕಾರ್ಯದಲ್ಲಿ ದೊರೆತ ಪ್ರಾಗೈತಿಹಾಸಿಕ ಶಿಲಾಯುಗ ಮಾನವನ ಉಪಕರಣಗಳನ್ನು, ದೇವಾಲಯಗಳನ್ನು ಮೂಲ ಸಾಮಗ್ರಿಯಾಗಿ ಬಳಸಿಕೊಂಡು ಅಧ್ಯಯನಕ್ಕೆ ತೆಗೆದುಕೊಂಡ ವಿಷಯದ ಸಮರ್ಥನೆಗಾಗಿ, ಅವುಗಳಿಗೆ ಸಹಾಯಕವಾಗಿ ಹಿಂದಿನಿಂದ ಇಲ್ಲಿಯವರೆಗೂ ಪ್ರಕಟಗೊಂಡ (ವಿಷಯಕ್ಕೆ ಸಂಬಂಧಿಸಿದ) ಆಧುನಿಕ ಸಂಶೋಧನಾ ಲೇಖನ ಗ್ರಂಥಗಳನ್ನು ಇಲ್ಲಿ ಆಕರಗಳನ್ನಾಗಿ ಬಳಸಿಕೊಂಡಿರುವೆವು.

**ಅಧ್ಯಯನದ ರೀತಿ**

''ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ''ವೆಂಬ ತಲೆ ಬರಹದಡಿಯಲ್ಲಿ ಮಹಾಪ್ರಬಂಧವು ರಚನೆಗೊಂಡಿದೆ. ಪ್ರಸ್ತುತ ನಮ್ಮ ಈ ಮಹಾಪ್ರಬಂಧವು ಹನ್ನೊಂದು ಅಧ್ಯಾಯಗಳಲ್ಲಿ ವಿಂಗಡಣೆಯಾಗಿ ವಿವರಿಸಲ್ಪಟ್ಟಿದೆ.

**ಅಧ್ಯಾಯ ಒಂದು**

ಪ್ರಥಮ ಅಧ್ಯಾಯವು ಅಧ್ಯಯನಕ್ಕೆ ತೆಗೆದುಕೊಂಡ ವಿಷಯದ ಉದ್ದೇಶ ಮತ್ತು ವ್ಯಾಪ್ತಿಯನ್ನು ಒಳಗೊಂಡಿದೆ.

**ಅಧ್ಯಾಯ ಎರಡು**

ದ್ವಿತಿಯ ಅಧ್ಯಾಯವು ಕೊಪ್ಪಳ ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಪ್ರಾಗೈತಿಹಾಸಿಕ ಹಿನ್ನೆಲೆಯ ವಿಷಯವನ್ನು ಹೊಂದಿರುವುದು.

**ಅಧ್ಯಾಯ ಮೂರು**

ತೃತೀಯ ಅಧ್ಯಾಯವು ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಅಂದರೆ ಕ್ರಿ.ಪೂ. ೩ ನೆ ಶತಮಾನದಿಂದ ಕ್ರಿ.ಶ. ೧೩೩೬ ರವರೆಗೆ ಬರುವ ಪ್ರತಿಯೊಂದು ಅರಸುಮನೆತನಗಳ ಹಾಗೂ ಸಾಮಂತ ಮನ್ನೆಯ ಆಡಳಿತಗಾರರ ಜೀವನ ಚರಿತ್ರೆಯನ್ನು ಹೊಂದಿರುವುದು.

**ಅಧ್ಯಾಯ ನಾಲ್ಕು**

ನಾಲ್ಕನೆಯ ಅಧ್ಯಾಯವು ಕೊಪ್ಪಳ ಜಿಲ್ಲೆಯ ಐತಿಹಾಸಿಕ ಆಡಳಿತ ವಿಭಾಗಗಳ ಕುರಿತಾಗಿದೆ.

**ಅಧ್ಯಾಯ ಐದು**

ಐದನೆಯ ಅಧ್ಯಾಯವು ಕೊಪ್ಪಳ ಜಿಲ್ಲೆಯ ಮೇಲೆ ಆಡಳಿತ ನಡೆಸಿದ ಪ್ರಾಚೀನ ಅರಸರು ತಮ್ಮ ಆಡಳಿತವನ್ನು ಹೇಗೆ ನಿರ್ವಹಿಸಿದ್ದರು ಮತ್ತು ಯಾರು ಇಲ್ಲಿ ಆಡಳಿತ ನಡೆಸಿದ್ದರೆಂಬುದನ್ನು ಹೇಳುವದಾಗಿದೆ.

**ಅಧ್ಯಾಯ ಆರು**

ಆರನೆಯ ಅಧ್ಯಾಯವು ಜಿಲ್ಲೆಯಲ್ಲಿ ಅಂದು ಪ್ರಚಲಿತವಾಗಿದ್ದ ಸಮಾಜ ವ್ಯವಸ್ಥೆಯ ವಿವಿಧ ಮುಖಗಳನ್ನು ಅರಿಯುವದಾಗಿದೆ.

**ಅಧ್ಯಾಯ ಏಳು**

ಏಳನೆಯ ಅಧ್ಯಾಯವು ಧಾರ್ಮಿಕ ವ್ಯವಸ್ಥೆಯ ಕುರಿತಾಗಿದ್ದು, ಅಂದು ಜಿಲ್ಲೆಯಲ್ಲಿದ್ದ ಬೌದ್ಧ, ಜೈನ, ವೈಷ್ಣವ ಮತ್ತು ಶೈವ ಹಾಗೂ ವೀರಶೈವ ಧರ್ಮಗಳ ಕುರಿತ ವಿಷಯವನ್ನೊಳಗೊಂಡಿದೆ.

**ಅಧ್ಯಾಯ ಎಂಟು**

ಎಂಟನೆಯ ಅಧ್ಯಾಯವು ಅರ್ಥ ವ್ಯವಸ್ಥೆಯ ಕುರಿತು ಚರ್ಚಿತಗೊಂಡಿದೆ.

**ಅಧ್ಯಾಯ ಒಂಬತ್ತು**

ಒಂಬತ್ತನೆಯ ಅಧ್ಯಾಯವು ಜಿಲ್ಲೆಯ ಪ್ರಾಚೀನ ಶಿಕ್ಷಣ ಕೇಂದ್ರಗಳಾದ ಅಗ್ರಹಾರ, ಬ್ರಹ್ಮಪುರಿ, ಘಟಕಾಸ್ಥಾನಗಳಲ್ಲಿ ಕಲಿಸುತ್ತಿದ್ದ ಶಿಕ್ಷಣ ಹಾಗೂ ಶಾಸನ ಕವಿಗಳ ಕುರಿತು ಚರ್ಚಿತ ವಿಷಯ ಹೊಂದಿರುವುದು.

**ಅಧ್ಯಾಯ ಹತ್ತು**

ಹತ್ತನೆಯ ಅಧ್ಯಾಯವು ಮುಖ್ಯವಾಗಿ ಜಿಲ್ಲೆಯಲ್ಲಿ ಕಂಡುಬರುವ ದೇವಾಲಯಗಳ ವಿಶಿಷ್ಟ ಲಕ್ಷಣಗಳ ಕುರಿತು ಚರ್ಚಿತ ವಿಷಯ ಹಾಗೂ ಅದಕ್ಕನುಗುಣವಾಗಿ ಕೆಲವು ದೇವಾಲಯಗಳ ವಿವರಣೆಯನ್ನು ಹೊಂದಿರುವದು.

## ಅಧ್ಯಾಯ ಹನ್ನೊಂದು

ಈ ಕೊನೆಯ ಅಧ್ಯಾಯವು ಮೇಲಿನ ಅಧ್ಯಾಯಗಳಲ್ಲಿ ಚರ್ಚಿತವಾದ ವಿಷಯದ ಒಟ್ಟು ಫಲಿತಾಂಶದ ಸಮೀಕ್ಷೆಯನ್ನೊಳಗೊಂಡಿದೆ.

ಹೀಗೆ ಉತ್ಖನನ, ಶಾಸನ, ನಾಣ್ಯ, ಸ್ಮಾರಕ, ವರ್ಣಕಲೆ ಮತ್ತು ಆಧುನಿಕ ಸಾಹಿತ್ಯ ಗ್ರಂಥಗಳ ಸಹಕಾರದೊಂದಿಗೆ ವ್ಯಾಪಕ ಕ್ಷೇತ್ರಕಾಯ ಕೈಕೊಂಡು,ಅಲ್ಲಿ ತಿಳಿದು ಬಂದ ವಿಷಯವನ್ನು ದಾಖಲೆಗಳ ಸಹಾಯದಿಂದ ಪ್ರಬಂಧವನ್ನು ರಚಿಸಲಾಗಿದೆ. ಪ್ರಬಂಧಕ್ಕೆ ಛಾಯಾಚಿತ್ರ, ದೇವಾಲಯಗಳ ತಲವಿನ್ಯಾಸ ನಕ್ಷೆ ಹಾಗೂ ಭೂಪಟಗಳನ್ನು ಬಳಸಿಕೊಳ್ಳಲಾಗಿದೆ.



# ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ನೆಲೆಗಳು




**ಸೂಚನೆ-೧**

p- ಹಳೆಯ ಶಿಲಾಯುಗ (Palaeaolithic)
M-ಸೂಕ್ಷ್ಮ ಶಿಲಾಯುಗ (Microlithic)
N-ನವಶಿಲಾಯುಗ (Neolithic)
C-ತಾಮ್ರಶಿಲಾಯುಗ (Chalcolithic)
ME-ಬೃಹತ್ ಶಿಲಾಯುಗ (Megalithic)
MS-ಮೌರ್ಯಶಾತವಾಹನರ ಕಾಲ (Mourya Satavahana)

ಸ್ಕೇಲಪ್ರಕಾರ ಇರುವುದಿಲ್ಲ

## ಗ್ರಾಮಗಳು

1. ಅಡೂರ MS
2. ಅರಳೀಹಳ್ಳಿ N,C
3. ಅರನಾಳ N
4. ಅಂಜನಹಳ್ಳಿ C
5. ಆನೆಗುಂದಿ M, N,C, ME
6. ಅಗೋಲಿ ME
7. ಇಂದರ್ಗಿ N, C,ME
8. ಇಮ್ಲಾಪೂರ (ಇದ್ಲಾಪೂರ) M
9. ಉಳೇನೂರ MS
10. ಕಕ್ಕಗೋಳ N,MS
11. ಕನಕಗಿರಿ C
12. ಕಂದಕೂರ MS
13. ಕಾತರಾಳ N
14. ಕುಂಟೋಜಿ N,C
15. ಕೆರೇಹಳ್ಳಿ C
16. ಕೆಸರಟ್ಟಿ C
17. ಕೆಸರೂರು MS
18. ಕೊಪ್ಪಳ N,ME, MS
19. ಗಡ್ಡಿ ME
20. ಗ್ವಾನಾಳ MS
21. ಗುಡೂರು ME
22. ಗುಮ್ಮಗೇರ MS
23. ಗೋನಾಳ N,C,MS
24. ಗೋತಗಿ MS
25. ಚಿಕ್ಕರಾಂಪುರ N,C,ME
26. ಚಿಕ್ಕ ತಿಮ್ಮನಾಳ MS
27. ಚಿಕ್ಕಬೆನಕಲ್ ME
28. ಜರಕುಂಟಿ N
29. ಜದುವಾಲ ME
30. ಜಂಗಮರಕಲ್ಲುಗುಡಿ ME
31. ಜಟ್ಲಾಪುರ MS
32. ಜಾಲಿಹಾಳ MS
33. ಜುಮ್ಲಾಪುರ MS
34. ಟಕ್ಕಳಿ MS
35. ತಾವರಗೇರ N,C,ME, MS
36. ತಿಪ್ಪನಹಾಳ (ಗ.ತಾ.) N
37. ತಿಪ್ಪನಹಾಳ (ಯ.ತಾ.) N,ME
38. ತಿಮ್ಮಾಪುರ ME
39. ತೆಗ್ಗಿನಹಾಳ MS
40. ದೋಬಿಹಾಳ MS
41. ನಂದೀಹಳ್ಳಿ C
42. ನವಲಿಹಳ್ಳಿ MS
43. ನಾಗರಹಾಳ MS
44. ಪನ್ನಾಪುರ C
45. ಪುರ MS
46. ಬಂಡರಹಾಳ ME
47. ಬಂಡಿಹರ್ಲಾಪುರ N
48. ಬಸರಿಹಾಳ ME
49. ಬೀಚಗಲ್ MS
50. ಬಾಚನಾಳ MS
51. ಬಿಳೇಬಾವಿ ME
52. ಬೇವಿನಾಳ C
53. ಮರಕುಂಬಿ ME
54. ಮಲ್ಲಾಪುರ M,N,C,ME
55. ಮುಸಲಾಪುರ N
56. ಮುಸ್ತಾಪುರ MS
57. ಮುದೇನೂರ MS
58. ಮೇಗೂರು MS
59. ಯಮ್ಮಿಗುಡ್ಡ (ಹೇಮಗುಡ್ಡ) ME
60. ರಾಂಪುರ N
61. ರಾಮದುರ್ಗ N
62. ಲಿಂಗನಬಂಡಿ MS
63. ವೆಂಕಟಾಪುರ N,ME
64. ವೆಂಕಟಗಿರಿ ME
65. ಶಂಕರಗೋಳ MS
66. ಶಿವಪುರ C,ME
67. ಶ್ಯಾಡಲಗೇರಿ MS
68. ಸಾಣಾಪುರ ME
69. ಸಿಂಗನಾಳ C
70. ಸಿರಿವಾರ MS
71. ಸೋಮನಾಳ MS
72. ಹನುಮಸಾಗರ P
73. ಹಿರೇಜಂತಕಲ್ N,C
74. ಹಿರೇಬೆನಕಲ್ N,C,ME,MS
75. ಹಿರೇಮನ್ನಾಪುರ MS
76. ಹಿರೇತೆಮ್ಮಿನಾಳ MS
77. ಹೆರೂರ N,C,MS
78. ಹೆಬ್ಬಾಳ N,C
79. ಹೊಸಕೇರಿ N,MS
80. ಹೊಸೂರು MS

Chapter-2

ಅಧ್ಯಾಯ - ಎರಡು

# ಭೌಗೋಳಿಕ ಸ್ವರೂಪ ಮತ್ತು ಪ್ರಾಗೈತಿಹಾಸಿಕ ಹಿನ್ನೆಲೆ

## ೧. ಭೌಗೋಳಿಕ ಪರಿಸರ

ನಾಡು ಅಥವಾ ದೇಶದ ಚರಿತ್ರೆಯು ಅಲ್ಲಿಯ ಭೂರಚನೆ ಮತ್ತು ಪರಿಸರದ ಮೇಲೆ ರೂಪುಗೊಂಡಿರುತ್ತದೆ. ಹೀಗಾಗಿ ಭೌಗೋಳಿಕ ಪರಿಸರದ ಅಧ್ಯಯನವು ಬಹಳ ಕ್ಲಿಷ್ಟ ಹಾಗೂ ಜಟಿಲವಾದ ವಿಷಯವಾಗಿದ್ದು, ಅದು ಕಲ್ಲು, ಮಣ್ಣು, ಖನಿಜ, ಸಸ್ಯ, ಹವಾಮಾನ, ಮಳೆ, ಗಾಳಿ, ಜೀವಸಂಕುಲ ಸಂಪತ್ತನ್ನು ಒಳಗೊಂಡು ರೂಪಿತವಾಗಿರುತ್ತದೆ.

ಕರ್ನಾಟಕದ ಭೂ ಪರಿಸರ ರಚನೆ ಮುಖ್ಯವಾಗಿ ಚಾತುರ್ಥ ಭೂಯುಗಕ್ಕೆ ನದಿ ಸಂಬಂಧ, ಸಮುದ್ರ ಸಂಬಂಧ ಮತ್ತು ವಾಯು ಸಂಬಂಧಗಳು ಕಾರಣವಾಗಿವೆ. ಇದರ ಭೂ ಸ್ವರೂಪವು ಮಳೆ ಬೀಳುವ ಪ್ರಮಾಣ ಹಾಗೂ ಸಸ್ಯ ವರ್ಗಗಳನ್ನಾಧರಿಸಿದೆ.[೧] ನಮ್ಮ ಈ ಕರ್ನಾಟಕದ ಭೂಮಿಯನ್ನು ರೇಖಾಂಶಾತ್ಮಕವಾಗಿ ಕರಾವಳಿ, ಸಹ್ಯಾದ್ರಿ ಶ್ರೇಣಿ, ಮಲೆನಾಡು ಹಾಗೂ ಮೈದಾನ ಪ್ರದೇಶಗಳೆಂಬ ನಾಲ್ಕು ಪ್ರಾಕೃತಿಕ ಭೂ ಕ್ಷೇತ್ರಗಳನ್ನಾಗಿ ವಿಂಗಡಿಸಲಾಗಿದೆ. ಮತ್ತು ಈ ಮೈದಾನವನ್ನು ಉತ್ತರ ಹಾಗೂ ದಕ್ಷಿಣ ಮೈದಾನ ಪ್ರದೇಶಗಳೆಂದು ವಿಂಗಡಿಸಲಾಗಿದೆ.[೨] ಕರ್ನಾಟಕದ ಈ ಮೈದಾನ ಪ್ರದೇಶದ ವ್ಯಾಪ್ತಿಗೆ ನಮ್ಮ ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನವು ಒಳಪಡುತ್ತಿರುವುದು ಗಮನೀಯವಾಗಿದೆ.

ಭೌಗೋಳಿಕವಾಗಿ ಉತ್ತರ ಮೈದಾನ ಪ್ರದೇಶವು ಬಹಳ ಹಳೆಯದಾಗಿದ್ದು ವಿಶಾಲವಾಗಿ ಹರಡಿಕೊಂಡ ತಪ್ಪಲು ಪ್ರದೇಶವೆಂದು ಹೆಸರುಗಳಿಸಿದೆ. ಎರೆ ಮಣ್ಣು ಮೈದಾನ ಪ್ರದೇಶದ ಬಹುಭಾಗವನ್ನು ಆವರಿಸಿಕೊಂಡಂತೆ ಕುರುಚಲು ಗಿಡ ಗಂಟಿಗಳನ್ನು ಹೊಂದಿದ ಬಯಲು ಪ್ರದೇಶವಿದಾಗಿದೆ. ಇಲ್ಲಿಯ ಮಣ್ಣು ಫಲವತ್ತಾಗಿದ್ದರೂ ಕಡಿಮೆ ಪ್ರಮಾಣದ ಮಳೆಯಿಂದಾಗಿ ಕೃಷಿ ಉತ್ಪನ್ನ ಗರಿಷ್ಟ ಮಟ್ಟ ಮುಟ್ಟಲಾಗಿಲ್ಲ. ಇದು ಹೆಚ್ಚು ಪ್ರಮಾಣದಲ್ಲಿ ಒಣ ಬೇಸಾಯಕ್ಕೆ ಒಳಪಟ್ಟಿರುತ್ತದೆ. ಹೀಗಾಗಿ ರೈತರು ಇಲ್ಲಿ ಕಡಿಮೆ ಪ್ರಮಾಣದ ತೇವಾಂಶದಲ್ಲಿ ಬೆಳೆಯುವ ದವಸಧಾನ್ಯ ಹಾಗೂ ಇತರ ಎಣ್ಣೆಕಾಳು ಬೀಜಗಳನ್ನೆ ಹೆಚ್ಚಾಗಿ ಬೆಳೆಯುತ್ತಾರೆ. ಇದು ಹೆಚ್ಚಾಗಿ ಮುಂಗಾರಿ ಮಳೆಯ ಪ್ರದೇಶವಾಗಿರುವುದರಿಂದ ಕುರುಚಲು (ಚದುರಿದಂತೆ)ಸಸ್ಯವರ್ಗದ ಅರಣ್ಯ ಪ್ರದೇಶವನ್ನು ಹೊಂದಿದೆ. ಆದ್ದರಿಂದ ಬರಗಾಲವನ್ನು ತಡೆದುಕೊಳ್ಳುವ ಮತ್ತು ಸಸ್ಯಾಹಾರಿಗಳಾದ ಜಿಂಕೆ, ಮೊಲ ಮೇಕೆ, ಕುರಿಗಳಂತಹ ಚಿಕ್ಕ ಪುಟ್ಟ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ಸಸ್ಯ ಸಂಪತ್ತು ಹಾಗೂ ಬೆಟ್ಟಗಳಿರುವಲ್ಲಿ ಕಾಡು ಪ್ರಾಣಿಗಳಾದ ಚಿರತೆ, ನರಿ, ಕತ್ತೆಕಿರುಬ, ಮುಳ್ಳುಹಂದಿ, ತೋಳಗಳು ಇಂದಿಗೂ ನೆಲೆಸಿದ್ದು ಅವು ಇಂದಿಗೂ ಗಂಗಾವತಿ ಮತ್ತು ಕೊಪ್ಪಳ ತಾಲೂಕುಗಳಲ್ಲಿ ಹರಡಿಕೊಂಡು ಎತ್ತರವಾದ ಮತ್ತು ದೊಡ್ಡ ದೊಡ್ಡ ಬಂಡೆಗಳಿಂದ ರೂಪಿತವಾದ ಗುಡ್ಡಗಳಲ್ಲಿ ಕಂಡುಬರುತ್ತವೆ.

ಭೂ ವೈಜ್ಞಾನಿಕವಾಗಿ ಕೊಪ್ಪಳ ಜಿಲ್ಲೆಯು ಪಚ್ಚೆಕಲ್ಲು (Green stone), ಮರಳು ಶಿಲೆ (Sand stone), ಸ್ಪಟಿಕಾಂತರ ಶಿಲೆ(Quartzites) ಮತ್ತು ಡೊಲರೈಟ್‌ಡೈಕ್ಸ್ ಎಂಬ ಹಲವಾರು ಸಂಕೀರ್ಣ ಶಿಲೆಗಳಿಂದ ಆವೃತವಾಗಿದೆ. ಪಚ್ಚೆಕಲ್ಲು ಹೆಚ್ಚಿನ ಪ್ರಮಾಣದಲ್ಲಿ ದೊರಕುವದರಿಂದ ಗಣಗಾರಿಕೆ ಸಾಕಷ್ಟು ಪ್ರಮಾಣದಲ್ಲಿ ನಡೆಯುತ್ತಿದೆ. ಆದರೆ ಇತರ ಖನಿಜ ಸಂಪತ್ತು ಅಲ್ಪ ಪ್ರಮಾಣದಲ್ಲಿದೆ. ಈ ಪ್ರದೇಶ ಸಮುದ್ರ ಪಾತಳಿಯಿಂದ ದೂರಹಾಗೂ ಕಡಿಮೆ ಎತ್ತರದ ಭೂ ಭಾಗವಾಗಿರುವದರಿಂದ ಹವಾಮಾನವು ವೈಪರಿತ್ಯದಿಂದ ಕೂಡಿರುತ್ತದೆ.[೩] ಅಂತರ್ಜಲವು ಸಾಕಷ್ಟು ಪ್ರಮಾಣದಲ್ಲಿದ್ದು ಮಳೆಯ ನೀರು ಕಲ್ಲು ಗುಡ್ಡಗಳ ಅಡಿಯಲ್ಲಿ ಹಾಗೂ ತಗ್ಗು ಪ್ರದೇಶದಲ್ಲಿ ಸಂಚಯವಾಗುತ್ತದೆ.

ಇಂತಹ ಭೂ ಪರಿಸರ ವ್ಯವಸ್ಥೆಯಡಿಯಲ್ಲಿ ಬರುವಂತಹ ಈ ಕೊಪ್ಪಳ ಜಿಲ್ಲೆಯು ದಿನಾಂಕ ೧೫-೮-೧೯೯೭ ರಲ್ಲಿ ಗಂಗಾವತಿ, ಕುಷ್ಟಗಿ, ಯಲಬುರ್ಗಾ ಮತ್ತು ಕೊಪ್ಪಳ ತಾಲೂಕುಗಳನ್ನು ಹೊಂದಿ ಪ್ರತ್ಯೇಕ ಜಿಲ್ಲೆಯ ಸ್ಥಾನ ಪಡೆಯಿತು. ಸ್ವಾತಂತ್ರ್ಯ ಪೂರ್ವ ಹೈದ್ರಾಬಾದ ನಿಜಾಮನ ಕಾಲದಲ್ಲಿಯೂ ಜಿಲ್ಲೆಯ ಸ್ಥಾನ ಪಡೆದುಕೊಂಡಿತ್ತು. ಹೊಸದಾಗಿ ಜಿಲ್ಲೆ ಹಾಗೂ ಜಿಲ್ಲಾ ಕೇಂದ್ರ ಸ್ಥಳವಾಗಿ ರಚನೆಗೊಂಡ ಕೊಪ್ಪಳವು ಪೂರ್ವ ರೇಖಾಂಶ ೭೫°-೭೬' ಮತ್ತು ಉತ್ತರ ಅಕ್ಷಾಂಶ ೧೫°-೧೫' ರ ಮೇಲ್ಗಡೆ ಬರುತ್ತಿದ್ದು ಸಮುದ್ರ ಮಟ್ಟದಿಂದ ೫೨೩.೦೪ ಮೀಟರ ಎತ್ತರದಲ್ಲಿದೆ.[೪]

ಕರ್ನಾಟಕದ ಭೂ ಪ್ರದೇಶದಲ್ಲಿ ಹರಡಿಕೊಂಡ ಕಂದು, ಕಪ್ಪು ಮಣ್ಣು, ರೇವೆ ಮಣ್ಣು ಮತ್ತು ಲ್ಯಾಟರೈಟ್ ಮಣ್ಣುಗಳು[೫] ಜಿಲ್ಲೆಯ ಭೂ ಪ್ರದೇಶದ ತುಂಬೆಲ್ಲ ಹರಡಿಕೊಂಡಿದ್ದು ಬಹುತೇಕ ಭೂ ಭಾಗವನ್ನು ಕಪ್ಪು (ಎರೆ) ಮಣ್ಣು ಆವರಿಸಿಕೊಂಡಿದೆ. ಇದು ಬಹಳ ಆಳವಾಗಿರುವದರಿಂದ ಬೇಸಿಗೆಯಲ್ಲಿ ಆಳವಾದ ಬಿರುಕುಗಳುಂಟಾಗಿ ಮೇಲಿನ ಮಣ್ಣು ಈ ಬಿರುಕುಗಳಲ್ಲಿ ಸೇರಿ ಕೆಳಗಿನ ಮಣ್ಣು ಮೇಲೆ ಬರುವದರಿಂದ ಈ ಮಣ್ಣು ನಿರಂತರ ಪ್ರಕ್ರಿಯೆಯಲ್ಲಿ ತೊಡಗಿ ಯಾವಾಗಲು ಫಲವತ್ತಾಗಿರುತ್ತದೆ. ಇದಕ್ಕೆ ಒಂದೆರಡು ಸಲ ದೊಡ್ಡ ಪ್ರಮಾಣದ ಮಳೆ ಬಂದರೆ ಸಾಕು ಬೆಳೆಗಳು ಸಮೃದ್ಧವಾಗಿ ಬೆಳೆಯುತ್ತವೆ.

ಭೂ ಪರಿಸರಕ್ಕೆ ಹೊಂದಿಕೊಂಡಂತೆ ಇರುವ ಬೆಟ್ಟ ಗುಡ್ಡಗಳು ಜೀವ ಪರಿಸರಕ್ಕೆ ಹೆಚ್ಚು ಸಹಕಾರವನ್ನು ನೀಡುತ್ತವೆ. ಈ ಜಿಲ್ಲೆಯ ಬೆಟ್ಟಗಳು ಗರಿಷ್ಟ ಪ್ರಮಾಣದ ಎತ್ತರ ಹೊಂದಿರದಿದ್ದರೂ ಚದುರಿದಂತೆ ಜಿಲ್ಲೆಯ ತುಂಬೆಲ್ಲಾ ಹರಡಿಕೊಂಡು ಪರಿಸರ ಸಮತೋಲನ ಕಾಯ್ದುಕೊಂಡು ಬಂದಿವೆ. ಮುಖ್ಯವಾಗಿ ಯಲಬುರ್ಗಾ ತಾಲೂಕಿನ ಬೆಣಕಲ್ಲು ಗ್ರಾಮದ ಹತ್ತಿರದ ಗೌರಿಬೆಟ್ಟ, ಅಳಿಯಪ್ಪ ಮಠದ ಹತ್ತಿರದ ಕೆಲವು ಕಲ್ಲಿನಿಂದೊಡಗೂಡಿದ ದಿಣ್ಣೆಗಳು, ಕೊಪ್ಪಳ ಸುತ್ತಲಿರುವ ಗವಿಮಠ, ಪಾಲ್ಕಿಗುಂಡು, ಚಂದ್ರಬಂಡೆ ಬೆಟ್ಟಗಳು ಬೆಣಚು (Granite) ಕಲ್ಲಿನ ಬೆಟ್ಟಗಳಾಗಿದ್ದು ಎತ್ತರವಾಗಿವೆ. ಅದೇ ರೀತಿ ಕೊಪ್ಪಳ ತಾಲೂಕಿನ ಗ್ರಾಮವಾದ ಗಬ್ಬೂರದ ಪೂರ್ವ ಹಾಗೂ ಆಗ್ನೇಯ ಭಾಗದ ಗ್ರಾಮಗಳ ಪ್ರದೇಶಗಳಲ್ಲಿ ಹರಡಿಕೊಂಡಿರುವ ಬೆಟ್ಟಗಳು ಪ್ರಮಾಣದಲ್ಲಿ ಸಮನಾಗಿರದಿದ್ದರೂ ಶಿವಪುರ, ಇಂದರ್ಗಿ, ಹಿರೇಬೆಣಕಲ್, ಹೇಮಗುಡ್ಡ, ಆನೆಗುಂದಿ, ಮಲ್ಲಾಪುರ, ಚಿಕ್ಕರಾಂಪುರ ಇತ್ಯಾದಿ ಗ್ರಾಮಗಳನ್ನು ಸುತ್ತುವರೆದ ಬೆಟ್ಟಗಳು ಬೃಹತ್ ಪ್ರಮಾಣದ ಬೆಣಚು

ಬಂಡೆಗಳ ಬೆಟ್ಟಗಳಾಗಿವೆ. ಕುಷ್ಟಗಿ ತಾಲೂಕಿನ ತಾವರಗೇರ, ಶ್ಯಾಡಲಗೇರಿ, ಹನುಮಸಾಗರದ ಬೆಟ್ಟಗಳು ಸಹ ದೊಡ್ಡ ಪ್ರಮಾಣದಲ್ಲಿದ್ದು ಇವು ಬೆಣಚು ಮತ್ತು ಕೆಂಪು ಮರಳು ಬಂಡೆಗಳ ಬೆಟ್ಟಗಳಾಗಿವೆ.

ಜಿಲ್ಲೆಯ ಕಲ್ಲು, ಮಣ್ಣಿಗೆ ಅನುಗುಣವಾಗಿ ಇದರ ಭೂಮಿಯ ಒಳಮೈ ಹಾಗೂ ಮೇಲ್ಮೈಗಳಲ್ಲಿ ಅನೇಕ ರೀತಿಯ ಖನಿಜ ಸಂಪತ್ತು ಕಂಡು ಬರುತ್ತದೆ. ಕನಕಗಿರಿ ಪ್ರದೇಶದಲ್ಲಿ ಬಂಗಾರದ ನಿಕ್ಷೇಪಗಳು ಅಲ್ಪ ಪ್ರಮಾಣದಲ್ಲಿ ಕಂಡು ಬಂದರೆ, ಇದರ ಸಮೀಪದಲ್ಲಿಯೆ ಇರುವ ಮಸ್ಕಿ ಹಾಗೂ ಹಟ್ಟಿಗಳಲ್ಲಿ ಹೆಚ್ಚಿನ ಪ್ರಮಾಣದ ಬಂಗಾರದ ನಿಕ್ಷೇಪಗಳು ಇರುವವು. ಕಬ್ಬಿಣದ ಅದಿರು ಕುಷ್ಟಗಿ ತಾಲೂಕಿನ ಜಡೆಗುಡ್ಡದ ಬೆಟ್ಟದಲ್ಲಿ ಕಂಡು ಬಂದರೆ, ತಾಮ್ರದ ನಿಕ್ಷೇಪಗಳು ಕಂಡುಬರುವದಿಲ್ಲ. ಮೈಕಾ (Mica) ಶಿಲೆ ಕುಷ್ಟಗಿ ತಾಲೂಕಿನ ಹರಬಲ, ಹಂಚಿನಹಾಳ ಗ್ರಾಮಗಳ ಪರಿಸರದಲ್ಲಿ ಕಂಡುಬಂದರೆ, ಕ್ವಾಡ್ಜ (quartz) ಶಿಲೆಯು ಅನೇಕ ಕಡೆಗೆ ಕಂಡುಬರುವವು. ಮನೆ ಕಟ್ಟಲು ಬಂಡೆಗಲ್ಲಿನ ಗಣಿಗಳಾದ ಕೆಂಪು ಮರಳು, ಮರಳು ಬೆಣಚು ಶಿಲೆಗಳ ದಿನ್ನೆಗಳು ನಾಲ್ಕು ತಾಲೂಕುಗಳ ಪರಿಸರದಲ್ಲಿ ಹರಡಿಕೊಂಡಿರುವವು.

ಜಿಲ್ಲೆಯು ಉತ್ತರ ಮೈದಾನ ಪ್ರದೇಶಕ್ಕೆ ಒಳಪಡುವದರಿಂದ ಇಲ್ಲಿ ಕುರುಚಲು ಗಿಡಗಂಟಿಗಳನ್ನು ಬಿಟ್ಟರೆ, ದಟ್ಟವಾದ ಅರಣ್ಯ ಕಂಡುಬರುವದಿಲ್ಲ. ಕೊಪ್ಪಳ ಜಿಲ್ಲೆಯ ದಕ್ಷಿಣ ಗಡಿಯಾಗಿ ಹರಿಯುವ ತುಂಗಭದ್ರಾ ನದಿಯೇ ಜಿಲ್ಲೆಯ ದೊಡ್ಡ ನದಿಯಾಗಿದ್ದು, ಹಿರೇಹಳ್ಳ, ಕಡೂರ ಹತ್ತಿರದ ಹಳ್ಳ, ನಿಡಸೋಗಿಹಳ್ಳ, ಪುರಗ್ರಾಮದ ಹಳ್ಳ ಮತ್ತು ರಾಮಪುರ ಕಿಲಾರಟ್ಟಿ ಹಳ್ಳಗಳು ಇದರ ಉಪನದಿಗಳಾಗಿವೆ. ಹೀಗಾಗಿ ಜಿಲ್ಲೆಯ ಕೃಷಿ ಬೇಸಾಯವು ಹೆಚ್ಚಾಗಿ ಮಳೆ ಆಧಾರಿತವಾಗಿದೆ. ಹೀಗಿದ್ದರೂ ಗಂಗಾವತಿ ತಾಲೂಕಿನ ಹೆಚ್ಚಿನ ಪ್ರದೇಶ ಮತ್ತು ಕೊಪ್ಪಳ ತಾಲೂಕಿನ ಆಗ್ನೆ ದಕ್ಷಿಣದ ಕೆಲವು ಗ್ರಾಮಗಳು ತುಂಗಭದ್ರಾ ಆಣೆಕಟ್ಟಿನ ನೀರಾವರಿಗೆ ಒಳಪಟ್ಟು ಜಿಲ್ಲೆಯ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಸಹಕಾರಿಯಾಗಿದೆ.

ಇಲ್ಲಿಯ ಮಳೆಯ ಪ್ರಮಾಣ ಕಡಿಮೆಯಾಗಿದೆ, ವಾರ್ಷಿಕವಾಗಿ ೫೭೨ ಮಿ.ಮಿ. ಸರಾಸರಿ ಕಡಿಮೆ ಮಳೆ ಬಿದ್ದರೆ, ಹೆಚ್ಚಿನ ವಾರ್ಷಿಕ ಮಳೆಯು ೯೪೭.೬ ಮಿ.ಮಿ. ಬೀಳುತ್ತದೆ.[೬]

ಹವಾಮಾನದಲ್ಲಿ ಯಾವ ವೈಪರಿತ್ಯಗಳು ಕಂಡು ಬರದಿದ್ದರೂ ಮಳೆಗಾಲ ಮತ್ತು ಚಳಿಗಾಲದಲ್ಲಿ ಹವಾಮಾನವು ತಂಪಾಗಿರುತ್ತದೆ. ಬೇಸಿಗೆಯಲ್ಲಿ ಉಷ್ಣಾಂಶವು ಅತೀ ಹೆಚ್ಚೆಂದರೆ ಸರಾಸರಿ ೩೫ ರಿಂದ ೩೮ ಡಿಗ್ರಿ ಸೆಲ್ಸಿಯಸ್‌ನಷ್ಟು ಇರುತ್ತದೆ. ಇಂತಹ ಹವಾಮಾನಕ್ಕೆ ತಕ್ಕ ಹಾಗೆ ಕಕ್ಕೆ, ಜಾಲಿ, ಹುಣಸೆ, ಹೊಂಗೆ, ಹಲೆ, ಮುತ್ತಗ, ದಿಂಡಿನ, ತುಜ್ಜಲು, ಹುರಗಲು, ಹೊನ್ನೆ, ಕಮ್ಮರ (ಕರಚಿ), ಮತ್ತಿಯಂತಹ ಗಿಡ ಮರದ ಸಸ್ಯಗಳಿರುವ ಅರಣ್ಯ ಕಂಡುಬರುತ್ತದೆ.[೭] ಇವುಗಳ ಜೊತೆಯಲ್ಲಿ ಮಾವು, ಬೇವು, ನೀಲಗಿರಿಗಳು ಸಹ ಕಂಡು ಬರುವವು.

ಸಸ್ಯ ಸಂಪತ್ತಿಗೆ ಅನುಗುಣವಾಗಿ ಜಿಲ್ಲೆಯಲ್ಲಿ ಪ್ರಾಣಿ ಸಂಪತ್ತು ಸಹ ಕಂಡುಬರುತ್ತದೆ. ಮನುಷ್ಯನಿಗೆ ಬಹಳ ಉಪಯೋಗವಾಗುವ ಪ್ರಾಣಿವರ್ಗ ಇಲ್ಲಿದೆ. ಕೃಷಿ ಮತ್ತು ಉದ್ಯೋಗಕ್ಕೆ ಅನುಕೂಲವಾದ ಎತ್ತು,

ಆಕಳು, ಎಮ್ಮೆ, ಕೋಣ, ಮೇಕೆ, ಕುರಿ, ಕೋಳಿಗಳು ಇರುವವು. ನರಿ, ಮೊಲ, ತೋಳ, ಕತ್ತೆಕಿರುಬ, ಮುಳ್ಳುಹಂದಿಗಳಂತಹ ಕಾಡು ಪ್ರಾಣಿವರ್ಗ ಗುಡ್ಡಗಾಡು ನದಿ ಹಳ್ಳ ಪ್ರದೇಶಗಳಲ್ಲಿ ಉಂಟು.

ಇಂತಹ ವೈರುಧ್ಯಗಳಿಂದ ಕೂಡಿರುವ ಭೌಗೋಳಿಕ ಪರಿಸರ ಹಾಗೂ ಜೀವಪರಿಸರಗಳಿಗೆ ಅನುಗುಣವಾಗಿ ಪ್ರಾಚೀನ ಮಾನವನ ಜೀವನ ನಡೆದು ಬಂದಿರುವುದು. ೧೯ನೇ ಶತಮಾನದಲ್ಲಿ ಪ್ರಾಕ್ತನ ಶಾಸ್ತ್ರದ ಅಧ್ಯಯನ ಭಾರತದ ಇತರ ಪ್ರದೇಶಗಳಲ್ಲಿ ನಡೆದು ಬಂದಂತೆ ಈ ಕೊಪ್ಪಳ ಜಿಲ್ಲೆಯಲ್ಲಿಯು ನಡೆದು ಬಂದಿದ್ದರಿಂದ ಹಳೆಶಿಲಾಯುಗ, ಮಧ್ಯಶಿಲಾಯುಗ, ನವಶಿಲಾಯುಗ, ತಾಮ್ರ ಶಿಲಾಯುಗ, ಬೃಹತ್‌ಶಿಲಾಯುಗ ಮಾನವನ ನೆಲೆಗಳು ಇಲ್ಲಿ ಬೆಳಕು ಕಂಡವು.

## ೨. ಪ್ರಾಗೈತಿಹಾಸಿಕ ಹಿನ್ನೆಲೆ ಮತ್ತು ಅಧ್ಯಯನ

ಶಿಲಾಯುಗವು ಅತ್ಯಂತ ಧೀರ್ಘವಾದ ಕಾಲ. ಅದನ್ನು ಹಳೆಯ ಶಿಲಾಯುಗ, ಮಧ್ಯಶಿಲಾಯುಗ (ಸೂಕ್ಷ್ಮಶಿಲಾಯುಗ), ನವಶಿಲಾಯುಗ, ತಾಮ್ರಶಿಲಾಯುಗ ಮತ್ತು ಬೃಹತ್ ಶಿಲಾಯುಗಗಳೆಂದು ವಿಂಗಡಿಸಲಾಗಿದೆ. ಈ ಶಿಲಾಯುಗದ ಪ್ರತಿಯೊಂದು ಹಂತವನ್ನು ಅಂದಿನ ಮಾನವ ಆಯುಧೋಪ ಕರಣಗಳನ್ನು ತಯಾರಿಸಲು ಬಳಸಿದ ತಂತ್ರ ಹಾಗೂ ಅದರ ಮೂಲಕ ಸಿದ್ಧಪಡಿಸಿದ ಉಪಕರಣಗಳ ಮಾದರಿ ಮತ್ತು ಆಕೃತಿಗಳಿಗೆ ಅನುಗುಣವಾಗಿ ನಿರ್ಧರಿಸಲಾಗಿದೆ. [೮]

## ಭಾರತದಲ್ಲಿ ಶಿಲಾಯುಗ ಅಧ್ಯಯನ

ಭಾರತದಲ್ಲಿ ಶಿಲಾಯುಗದ ಕುರಿತು ಕಳೆದ ನೂರು ವರ್ಷಗಳ ಹಿಂದಿನಿಂದಲೂ ಸಂಶೋಧನೆ ಮತ್ತು ಅಧ್ಯಯನ ನಡೆಯುತ್ತಾ ಬಂದಿದೆ. ೩೦ ನೇಮೇ ೧೮೬೩ ರಲ್ಲಿ ಚೆನ್ನೈ ಬಳಿಯ ಪಲ್ಲಾವರಮ್‌ದಲ್ಲಿ ಮೊದಲ ಬಾರಿಗೆ ಭಾರತದ ಭೂ ಸರ್ವೆಕ್ಷಣ ವಿಭಾಗದ ರಾಬರ್ಟ್ ಬ್ರೂಸ್‌ಫೂಟನು ಪ್ರಾಚೀನ ಶಿಲಾಯುಗಕ್ಕೆ ಸೇರಿದ ಕೈಕೊಡಲಿಯನ್ನು ಕಂಡು ಹಿಡಿದನು.[೯] ನಂತರ ಸುಮಾರು ಕ್ರಿ.ಶ. ೧೮೭೦ ರ ದಶಕದಲ್ಲಿ ಬ್ರೂಸ್‌ಫೂಟನು ದಖ್ಖನ್ ಪ್ರದೇಶದಲ್ಲಿ ನವಶಿಲಾಯುಗದ ಅನೇಕ ನೆಲೆಗಳನ್ನು ಕಂಡು ಹಿಡಿದು ಪ್ರಕಟಿಸಿದನು.[೧೦] ಅಲ್ಲಿಂದ ಈ ಶತಮಾನದ ೫ ನೇ ದಶಕದವರೆಗೂ ಕೇವಲ ಹಳೆಯ ಶಿಲಾಯುಗ ಮತ್ತು ನವಶಿಲಾಯುಗ ಸಂಸ್ಕೃತಿಗಳ ಪರಿಚಯ ಮಾತ್ರ ಇತಿಹಾಸಕಾರರಲ್ಲಿತ್ತು. ಆದರೆ ಇವೆರಡು ಸಂಸ್ಕೃತಿಗಳ ಮಧ್ಯೆ ಇರುವ ಸಾಂಸ್ಕೃತಿಕ ಹಂತಗಳ ಕುರಿತು ಅವರಿಗೆ ತಿಳಿದಿರಲಿಲ್ಲ. ಕ್ರಿ.ಶ. ೧೯೫೦ ರಲ್ಲಿ ಡಾ. ಸಾಂಕಲಿಯಾರವರು ಅಹ್ಮದನಗರ ಜಿಲ್ಲೆಯ ನೇವಾಸದ ಬಳಿಯ ಪ್ರವರಾನದಿ ದಡದ ಪದರುಗಳಲ್ಲಿ ಮಧ್ಯ ಶಿಲಾಯುಗಕ್ಕೆ ಸೇರಿದ ಉಪಕರಣಗಳನ್ನು ಬೆಳಕಿಗೆ ತಂದರು.[೧೧] ಮತ್ತೆ ೧೯೬೪ ರಲ್ಲಿ ಅಂತಿಮ ಹಳೆ ಶಿಲಾಯುಗ ಹಂತವುಕೂಡಾ ಇಲ್ಲಿ ಇರುವುದರ ಬಗ್ಗೆ ಬೆಳಕು ಕಂಡಿತು. ಇದಕ್ಕೆ ಪೂರಕವಾಗಿ ಎಂ.ಎಲ್.ಕೆ. ಮೂರ್ತಿಯವರು ಆಂಧ್ರ ಪ್ರದೇಶದ ಚಿತ್ತೂರ ಜಿಲ್ಲೆಯ ರಾಳ್ಳಕಾಲವ ಹಳ್ಳದಲ್ಲಿ ಅಂತಿಮ ಹಳೆ ಶಿಲಾಯುಗದ ಉಪಕರಣಗಳನ್ನು ಗುರುತಿಸಿದರು.[೧೨] ಇದರಿಂದ ಭಾರತದಲ್ಲಿ ಹಳೆ ಶಿಲಾಯುಗ ಸಂಸ್ಕೃತಿಯ ಮೂರು ಹಂತಗಳು ಮತ್ತು ನವಶಿಲಾಯುಗ ಸಂಸ್ಕೃತಿಗಳು ಒಂದರ

ನಂತರ ಒಂದು ಬೆಳೆದು ಬಂದಿರುವುದನ್ನು ಸಿದ್ಧಮಾಡಿ ತೋರಿಸಲು ಭಾರತೀಯ ಸಂಶೋಧಕರು ಕೆಲವು ವರ್ಷಗಳ ಕಾಲ ಸತತ ಪ್ರಯತ್ನದಲ್ಲಿ ತೊಡಗಬೇಕಾಯಿತು.

## ಕರ್ನಾಟಕ ಮತ್ತು ಕೊಪ್ಪಳ ಜಿಲ್ಲೆಯಲ್ಲಿ ಶಿಲಾಯುಗ ಅಧ್ಯಯನ

ಕರ್ನಾಟಕ ಶಿಲಾಯುಗ ಸಂಸ್ಕೃತಿಯ ಕುರಿತು ಪುರಾತತ್ವ ಶಾಸ್ತ್ರಜ್ಞರು ಹಲವು ದಶಕಗಳಿಂದ ಸಂಶೋಧನೆಯಲ್ಲಿ ತೊಡಗಿದ್ದಾರೆ. ಭಾರತದ ಶಿಲಾಯುಗ ಸಂಸ್ಕೃತಿಯನ್ನು ಬೆಳಕಿಗೆ ತಂದ ರಾಬರ್ಟ ಬ್ರೂಸ್‌ಪೂಟ್‌ನು ಕರ್ನಾಟಕದ ಶಿಲಾಯುಗ ಸಂಸ್ಕೃತಿಯನ್ನು ಮೊದಲಬಾರಿಗೆ ಸಂಶೋಧಿಸಿದ ವ್ಯಕ್ತಿಯಾಗಿದ್ದಾನೆ. ಅವನು ಕ್ರಿ.ಶ. ೧೮೭೩ ರಲ್ಲಿ ಇಂದಿನ ಬಾಗಲಕೋಟ ಜಿಲ್ಲೆಯ ಬಾದಾಮಿ ತಾಲೂಕಿನ ಖ್ಯಾಡ, ಮೆಣಸಗಿ ಹಾಗೂ ಡಾಣಕಶಿರೂರ ಗ್ರಾಮಗಳಲ್ಲಿ ಹಳೆ ಶಿಲಾಯುಗದ ಆಯುಧೋಪಕರಣಗಳನ್ನು ಕಂಡು ಹಿಡಿದು ವರದಿಮಾಡಿದನು. ನಂತರ ಭಾರತೀಯ ಮತ್ತು ಕರ್ನಾಟಕದ ಪುರಾತತ್ವ ಸಂಶೋಧಕರು ಶಿಲಾಯುಗದ ಹಲವಾರು ನೆಲೆಗಳನ್ನು ಬೆಳಕಿಗೆ ತಂದರು.[೧೩]

ಇವನ ನಂತರ ಇದೇ ಪ್ರದೇಶದಲ್ಲಿ ಕ್ರಿ.ಶ. ೧೯೩೫ ರ ಸುಮಾರಿನಲ್ಲಿ ಲಿಯೋನಾರ್ಡಮನ್ ಅವರು ಹಿರೇಬೆನಕಲ್ (ಗಂಗಾವತಿ ತಾಲುಕ)ಗುಡ್ಡಗಳಲ್ಲಿ ಸ್ವಾರಸ್ಯಕರವಾದ ಶಿಲಾಬಂಡೆ ಚಿತ್ರಗಳನ್ನು ಹೆದ್ರಾಬಾದ ಸಂಸ್ತಾನದ ಪುರಾತತ್ವ ಸರ್ವೇಕ್ಷಣೆಯ ಇಲಾಖೆಯವರು ಕುಟ್ಟಿದ ಶಿಲಾಬಂಡೆ ಚಿತ್ರಗಳನ್ನು ಶೋಧಿಸಿದರು.[೧೪] ಅದರಂತೆ ತಾವರಗೇರಾ, ಕೊಪ್ಪಳ, ಆನೆಗುಂದಿ, ಮಲ್ಲಾಪುರ, ಚಿಕ್ಕಬೆನಕಲ್ಲ, ಇಂದರ್ಗಿ, ಶಿವಪೂರ, ಮುಂತಾದ ಕಡೆ ಶೋಧಿಸಲ್ಪಟ್ಟ ಬಂಡೆಗಲ್ಲು ಗವಿವರ್ಣದ ಚಿತ್ರಗಳ ನೆಲೆಗಳನ್ನು ನಮ್ಮ ಕ್ಷೇತ್ರಕಾರ್ಯದಲ್ಲಿ ಅಧ್ಯಯನ ಮಾಡಲಾಯಿತು. ಅದರಂತೆ ಕರ್ನಾಟಕದ ವಿಶ್ವವಿದ್ಯಾಲಯದ ಅ.ಸುಂದರ ಅವರು ಗಂಗಾವತಿ ತಾಲೂಕಿನಲ್ಲಿ ತಮ್ಮ ಅನ್ವೇಷಣಾಕಾರ್ಯ ಕೈಕೊಂಡು ಅನೇಕ ಚಿತ್ರ, ಗಿರು-ಕುಟ್ಟು-ಚಿತ್ರಗಳಿರುವ ನೆಲೆಗಳನ್ನು ಬೆಳಕಿಗೆ ತಂದು ''ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಕಲೆ'' ಎಂಬ ಹೊತ್ತಿಗೆಯಲ್ಲಿ ಪ್ರಕಟಿಸಿದರು.[೧೫]

## ೩. ಶಿಲಾಯುಗದ ಜನರ ಜೀವನ ಸಂಸ್ಕೃತಿ

### ಅ) ಹಳೆಶಿಲಾಯುಗ ಸಂಸ್ಕೃತಿ (Palaeolithic Culture)

ಕೊಪ್ಪಳ ಜಿಲ್ಲೆಯಲ್ಲಿ ಅತ್ಯಂತ ಪ್ರಾಚೀನ ಮಾನವನ ವಸತಿಯ ನೆಲೆಯು ಹಳೆ ಶಿಲಾಯುಗ ಹಂತದಿಂದ ಬಂದಿದ್ದರೂ,ಅದರ ಪ್ರಭಾವ ವಿಜಾಪುರ, ಬಾಗಲಕೋಟ ಜಿಲ್ಲೆಗಳಲ್ಲಿ ಕಂಡುಬರುವಷ್ಟು ಇಲ್ಲ. ಇಲ್ಲಿ ಸೂಕ್ಷ್ಮ ಶಿಲಾಯುಗ, ನೂತನಶಿಲಾಯುಗ, ತಾಮ್ರಶಿಲಾಯುಗ, ಬೃಹತಶಿಲಾಯುಗ ಮತ್ತು ಇತಿಹಾಸ ಆರಂಭ ಕಾಲದ ಪ್ರಭಾವವೇ ಹೆಚ್ಚಾಗಿದೆ.

ಜಿಲ್ಲೆಯ ಹಳೆ ಶಿಲಾಯುಗದ ನೆಲೆಯನ್ನು ಡಾ. ರವಿ ಕೋರಿಶೆಟ್ಟರ ಅವರು ಕ್ರಿ.ಶ. ೧೯೭೫-೭೬ ರ ಸುಮಾರಿಗೆ ಬೆಳಕಿಗೆ ತಂದಿದ್ದು ಅದು ಕುಷ್ಟಗಿ ತಾಲೂಕಿನ ಹನುಮಸಾಗರ ಗ್ರಾಮದಲ್ಲಿ ಕಂಡುಬರುತ್ತದೆ.[೧೬] ಹೀಗಾಗಿ ಈ ಜಿಲ್ಲೆಯ ಇತಿಹಾಸವು ಹಳೆಯ ಶಿಲಾಯುಗದ ಮೊದಲ ಹಂತದಿಂದ ಪ್ರಾರಂಭವಾಗುತ್ತದೆ.



**ಛಾ.ಚಿ. ೧. ಹಳೆ ಶಿಲಾಯುಗದ ಕೈಕೊಡಲಿ ಉಪಕರಣಗಳು, ಹನುಮಸಾಗರ (ಕು.ತಾ.)**

ಈ ಹಳೆಶಿಲಾಯುಗದ ಮೊದಲ ಹಂತದ ಉಪಕರಣಗಳು ಹೆಚ್ಚಾಗಿ ಅಶ್ಯೂಲಿಯನ್ ದ್ವಿಮುಖ ಉಪಕರಣಗಳಾದ ಕೈಕೊಡಲಿ, ಸೀಳುಗತ್ತಿ, ಮಚ್ಚುಗತ್ತಿ, ದುಂಡಾದ ಚಕ್ರದಂತಹ ಉಪಕರಣ ಮೊದಲಾದವುಗಳಾಗಿದ್ದು ಹನುಮಸಾಗರದ ಉತ್ತರಕ್ಕಿರುವ ಬೆಟ್ಟದ ಸಾಲಿನ ಮೇಲೆ ದೊರಕುವ ಸಾಧ್ಯತೆಗಳು ಕಂಡುಬಂದಿವೆ. ಇವುಗಳಲ್ಲಿ ಅತ್ಯಂತ ವೈಶಿಷ್ಟ್ಯ ಪೂರ್ಣವಾದುದೆಂದರೆ ಕೈಕೊಡಲಿ ಹನುಮಸಾಗರ ಪ್ರದೇಶದ ಬೆಟ್ಟ ಕೆಂಪುಮರಳು ಕಲ್ಲನ್ನು ಹೊಂದಿರುವದರಿಂದ ಮಳೆ ಗಾಳಿ ಬಿಸಿಲಿಗೆ ಸಿಲುಕಿ ಕರಗುತ್ತದೆಯಾದ್ದರಿಂದ, ಇಲ್ಲಿ ದೊರೆತ ಹಳೆಶಿಲಾಯುಗದ ಕೈಕೊಡಲಿ ಉಪಕರಣಗಳು ಸಹ ತಮ್ಮ ಮೊದಲಿನ ರೂಪ ಕಳೆದು ಕೊಂಡಿವೆ. ಕರ್ನಾಟಕದ ಹಲವು ನೆಲೆಗಳ ಸಮಕಾಲಿಗೆ ಹನುಮಸಾಗರದ ಹಳೆಶಿಲಾಯುಗ ಸೇರುವದರಿಂದ ಕಾಲ ನಿರ್ಣಯ ಮಾಡುವುದು ಸುಲಭವಾಗುತ್ತದೆ. ಈ ಅಶ್ಯೂಲಿಯನ್ ಮಾದರಿಯ ಹಳೆಶಿಲಾಯುಗ ಸಂಸ್ಕೃತಿಯು ಇಂದಿಗೆ ಒಂದು ಲಕ್ಷದಿಂದ ನಾಲ್ಕು ಲಕ್ಷ ವರ್ಷಗಳಷ್ಟು ಹಿಂದೆ ಇದ್ದಿರಬಹುದೆಂದು ತರ್ಕಿಸಲಾಗಿದೆ.[೧೭]

ಈ ಯುಗಕ್ಕೆ ಸಂಬಂಧಿಸಿದಂತೆ ಸಸ್ಯಗಳ ಅವಶೇಷಗಳು ದೊರೆತಿಲ್ಲವಾದರೂ, ಅಂದಿನ ಮನುಷ್ಯ ಕಾಡು ಸಸ್ಯಗಳನ್ನು ಕಲೆಹಾಕುವದು ಮತ್ತು ಕಾಡು ಪ್ರಾಣಿಗಳನ್ನು ಬೇಟೆಯಾಡಿ ಜೀವನ ನಡೆಸುತ್ತಿದ್ದನೆಂದು ಮಾತ್ರ ಹೇಳಲು ಅವಕಾಶವಿದೆ. ಕರ್ನಾಟಕದ ಹಳೆ ಶಿಲಾಯುಗದ ನೆಲೆಗಳಾದ ಹುಣಸಗಿ-ಬೈಚಬಾಳ ಕೊಳ್ಳ, ಘಟಪ್ರಭಾ ಕೊಳ್ಳ, ತುಂಗಭದ್ರಾ ಕೊಳ್ಳದ ನಿಟ್ಟೂರು, ಕೃಷ್ಣಾ ಕೊಳ್ಳಗಳಲ್ಲಿ ಅಶ್ಯೂಲಿಯನ್ ಸಂಸ್ಕೃತಿಯ ಹಂತದ ಪ್ರಾಣಿಯ ಪಳಿಯುಳಿಕೆಗಳು ದೊರೆತಿವೆ. ಅವು ಎಮ್ಮೆ, ಕಾಡುದನ, ಆನೆ, ಕಾಡುಕತ್ತೆಯವುಗಳೆಂದು ಗುರುತಿಸಲಾಗಿದೆ.[೧೮]

## ಆ) ಸೂಕ್ಷ್ಮ ಶಿಲಾಯುಗ ಸಂಸ್ಕೃತಿ (Mesolithic Culture)

ಸೂಕ್ಷ್ಮ ಶಿಲಾಯುಗವು ಹಳೆಯ ಶಿಲಾಯುಗ ಮತ್ತು ನೂತನ ಶಿಲಾಯುಗಗಳ ನಡುವಿನ ಸಾಂಸ್ಕೃತಿಕ ಹಂತದ ಕಾಲ. ಈ ಯುಗದ ಅವಧಿ ಅಲ್ಪವಾದರೂ ಸಾಂಸ್ಕೃತಿಕ ಮುನ್ನಡೆಯಲ್ಲಿ ಇದರ ಪಾತ್ರ ಪ್ರಮುಖವಾಗಿದೆ. ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಗಳ ಅಧ್ಯಯನದಿಂದ ಅಂದಿನ ಜನರ ಆಹಾರ ಸಂಗ್ರಹಣಾ ರೀತಿ ಮತ್ತು ವಸತಿ-ಕ್ರಮ, ಶವಸಂಸ್ಕಾರ ಪದ್ಧತಿ ಮುಂತಾದ ಅಂಶಗಳನ್ನು ತಿಳಿಯಲು ಸಾಧ್ಯವಾಗಿದೆ. ಅಂದಿನ ಕಾಲದ ಬಂಡೆಯ ವರ್ಣಚಿತ್ರಗಳು ಅವರ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಪದ್ಧತಿ ಮತ್ತು ನಂಬಿಕೆ ಕಲೆಗಾರಿಕೆಗಳ ಕುರಿತು ಮಾಹಿತಿ ನೀಡುತ್ತವೆ.[೧೯]

ಜಿಲ್ಲೆಗೆ ಸಂಬಂಧಿಸಿದಂತೆ ಸೂಕ್ಷ ಶಿಲಾಯುಗದ ಎರಡು ನೆಲೆಗಳು ಆನೆಗುಂದಿ ಮತ್ತು ಮಲ್ಲಾಪುರಗಳಲ್ಲಿ (ಗಂಗಾವತಿ ತಾಲೂಕ) ಕಂಡು ಬರುತ್ತವೆ. ಶಿಲಾಉಪಕರಣಗಳು ಕಿರುದಾಗುವಿಕೆಯೇ ಸೂಕ್ಷ್ಮಶಿಲಾಯುಗದ ವೈಶಿಷ್ಟ್ಯವಾಗಿದ್ದು ನೀಳಚಕ್ಕೆ, ಹೆರೆಚಕ್ಕೆ, ಮೊನೆ, ಬಾಣದಮೊನೆ, ಕೊರಗ, ಕೊರೆಯೂಳಿ, ಅರ್ಧಚಂದ್ರಾಕೃತಿ, ದಬ್ಬಳ ಮುಂತಾದ ಉಪಕರಣಗಳು ನಿರ್ಮಾಣ ಮಾಡಲ್ಪಟ್ಟವು, ಇವುಗಳಲ್ಲಿ ಕೆಲವು ಮಾತ್ರ ಮೇಲಿನ ಎರಡು ನೆಲೆಗಳ ಶಿಲಾಶ್ರಯದಲ್ಲಿ ಕಂಡುಬರುತ್ತವೆ.

ಸೂಕ್ಷ್ಮ ಶಿಲಾಯುಗದ ನೆಲೆಗಳು ಬಯಲು ಪ್ರದೇಶ, ಜಲಾನಯನ ಪ್ರದೇಶ, ಉತ್ಪಾದನಾ ಸ್ಥಳ, ಬೆಟ್ಟಗಳ ಸಮತಟ್ಟು, ಭೂಮಿಯ ಇಳುಕಲು ಪ್ರದೇಶ, ಗವಿ-ಕಲ್ಲಾಸರೆ ಮತ್ತು ಸಮತಲ ಭೂಮಿಯಲ್ಲಿ ಕಂಡುಬರುತ್ತವೆ.[೨೦] ಈ ಐದಾರು ಮಾದರಿಯ ನಿವೇಶನಗಳಲ್ಲಿ ಕೊಪ್ಪಳ ಜಿಲ್ಲೆಯ ಮಲ್ಲಾಪುರ ಸೂಕ್ಷ್ಮಶಿಲಾಯುಗದ ನೆಲೆಯು ಬೆಟ್ಟದ ಮೇಲಿನ ಕಲ್ಲಾಸರೆಯಗವಿ ಮತ್ತು ಬೆಟ್ಟದ ಇಳುಕಲಿನಲ್ಲಿ ಹರಡಿಕೊಂಡಿದೆ. ಆನೆಗುಂದಿ(ಚಿಕ್ಕರಾಂಪುರ) ನೆಲೆಯು ಸಹ ಕಲ್ಲಾಸರೆ ಮತ್ತು ಬೆಟ್ಟದ ಇಳಿಜಾರಿನಲ್ಲಿದೆ.

### ಉಪಕರಣಗಳು

ಮೇಲಿನ ಎರಡು ನೆಲೆಗಳಲ್ಲಿ ದೊರೆತ ವಸ್ತುಗಳು ಗಾತ್ರದಲ್ಲಿ ಅತೀ ಚಿಕ್ಕವು. ಅದಕ್ಕಾಗಿ ಈ ಸಂಸ್ಕೃತಿಯನ್ನು ಸೂಕ್ಷ್ಮಶಿಲಾಯುಗವೆಂದು ಗುರುತಿಸಿರುವರು. ಉಪಕರಣಗಳನ್ನು ತಯಾರಿಸಲು ಸಿಲಿಕಾಕಲ್ಲಿನ ಹಾಲುಬಣ್ಣದ ಕ್ವಾರ್ಟ್ಜ್, ಚಾಲ್ಸಿಡೊನಿ, ಚರ್ಟ, ಅಗೇಟ, ಮುಂತಾದ ಬಗೆಯ ಕಲ್ಲುಗಳನ್ನು ಬಳಸಿರುವರು.[೨೧] ಇವುಗಳಿಂದ ನೀಳಚಕ್ಕೆ, ಹೆರೆಚಕ್ಕೆ, ಮೊನೆ, ಕೋರೆಗ, ಕೊರೆಯುಳಿ, ಅರ್ಧ ಚಂದ್ರಾಕೃತಿ ದಬ್ಬಳದಂತಹ ಉಪಕರಣಗಳನ್ನು ತಯಾರಿಸಿರುವರು.[೨೨]

### ಕಾಲಮಾನ

ಭಾರತದ ಇತರ ಭಾಗದಲ್ಲಿರುವ ಸೂಕ್ಷ್ಮಶಿಲಾಯುಗದ ನೆಲೆಗಳಲ್ಲಿ ಸಿಗುವ ವಸ್ತುಗಳನ್ನು ಇಂಗಾಲಗಳ ವಿಧಾನದಿಂದ ಗೊತ್ತು ಪಡಿಸಿದಂತೆ ಈ ಸಂಸ್ಕೃತಿಯು ಇಂದಿಗೆ ೨,೫೦೦ ವರ್ಷಗಳಿಂದ ೧೦,೦೦೦ ವರ್ಷಗಳಷ್ಟು ಪೂರ್ವದಲ್ಲಿ ಇತ್ತು ಎಂದು ಗೊತ್ತಾಗುತ್ತದೆ.[೨೩]

## ಇ) ನವ ಶಿಲಾಯುಗ ಸಂಸ್ಕೃತಿ (Neolithic Culture)

ನವ ಶಿಲಾಯುಗ ಸಂಸ್ಕೃತಿಯು ಮಾನವನ ಪರಿವರ್ತನಶೀಲ ಬದುಕಿಗೆ ತಿರುವು ನೀಡಿದಂತಹ ಕಾಲ. ನವ ಶಿಲಾಯುಗದ ನಿವೇಶನಗಳ ಅಭ್ಯಾಸದಿಂದ ಕರ್ನಾಟಕದಲ್ಲಿ ಈ ಯುಗವು ಬಹಳ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ತಿಳಿದು ಬರುತ್ತದೆ. ಮುಖ್ಯವಾಗಿ ಉಜ್ಜಿಮಾಡಿದ ನಯವಾದ ಶಿಲಾಕೈಕೊಡಲಿ, ಕೈಭಾಚಿಗಳು, ಉಳಿಗಳು, ಮಣ್ಣಿನ ಪಾತ್ರೆ ಶವಸಂಸ್ಕಾರ ಪದ್ಧತಿ, ಕಲೆಗಾರಿಕೆಗಳು ಈ ಯುಗದ ವೈಶಿಷ್ಟ್ಯ. ಅಲ್ಲದೆ ಜನರು ಹಳ್ಳ, ಕೊಳ್ಳ, ಬೆಟ್ಟ, ನದಿದಡಗಳ ಮೇಲೆ ನಿವೇಶನ ಕಟ್ಟಿಕೊಂಡು; ಅಲ್ಲಿರುವ ಫಲವತ್ತಾದ ಭೂಮಿಯಲ್ಲಿ ಉತ್ತು-ಬಿತ್ತಿ ಬೆಳೆಯನ್ನು ತೆಗೆಯುವದನ್ನು ಕಲಿತರು. ಪ್ರಾಣಿಗಳನ್ನು ಸಾಕಿಕೊಂಡು ಪಶುಸಂಗೋಪನೆಯ ಉದ್ಯೋಗ ನಡೆಸಿರುವದನ್ನು ನೋಡಿದರೆ, ಸಂಘಟಿತ ಸಮಾಜ ವ್ಯವಸ್ಥೆ ನೂತನ ಯುಗದಲ್ಲಿ ಜಾರಿಗೆ ಬಂದಿತ್ತೆಂದು ಹೇಳಬಹುದಾಗಿದೆ.

### ನಿವೇಶನಗಳ ಸ್ವರೂಪ

ಈ ಕೊಪ್ಪಳ ಜಿಲ್ಲೆಯ ನವ ಶಿಲಾಯುಗದ ಜನರು ಹೆಚ್ಚಾಗಿ ಬೆಟ್ಟ, ನದಿದಡ, ಬಯಲು ಹಾಗೂ ಹಳ್ಳಗಳ ದಡದ ಮೇಲೆಯು ಜೀವನ ನಡೆಸಿರುವದು ಕಂಡುಬರುತ್ತದೆ. ಉದಾ: ಆನೆಗುಂದಿಯು ನದಿ ಮತ್ತು ದೊಡ್ಡ



**ಛಾ.ಚಿ. ೨. ನವಶಿಲಾ-ತಾಮ್ರಶಿಲಾಯುಗದ ಬೂದಿದಿಬ್ಬ ನಿವೇಶನ, ಇಂದರ್ಗಿ (ಕೊ.ತಾ.)**

ಬಂಡೆಗಳಿಂದ ಕೂಡಿದ ಬೆಟ್ಟ ಪ್ರದೇಶದಲ್ಲಿದ್ದರೆ, ಕಕ್ಕರಗೋಳ, ಕುಂಟೋಜಿ, ರಾಮದುರ್ಗ, ಹೆಬ್ಬಾಳು, ಹೊಸಕೇರ, ತಿಪ್ಪನಾಳ, ಅರಳಹಳ್ಳಿಗಳ ನಿವೇಶನಗಳು ನದಿ ಮತ್ತು ಅದರ ಉಪನದಿಗಳಾದ ದೊಡ್ಡ ಸಣ್ಣ ಹಳ್ಳಗಳ ಮೇಲೆ ಕಂಡುಬರುವವು. ಅರಹಾಳ, ಇಂದರ್ಗಿ, ಕೊಪ್ಪಳ, ಕಾತರಾಳ, ಗೋನಾಳ, ಚಿಕ್ಕರಾಂಪುರ,

ತಾವರಗೇರ, ಬಂಡಿಹರ್ಲಾಪುರ, ಮಲ್ಲಾಪುರ, ರಾಂಪುರ, ವೆಂಕಟಾಪುರ, ಹಿರೇಬೆನಕಲ್, ಚಿಕ್ಕ ಬೆನಕಲ್‌ಗಳು ಬೆಟ್ಟದ ಮೇಲೆ ಹಾಗೂ ಬೆಟ್ಟದ ಸಮತಟ್ಟು ಮತ್ತು ಬೆಟ್ಟಗಳ ಮಧ್ಯದ ಕಣಿವೆಯಲ್ಲಿ ಹರಡಿಕೊಂಡಿವೆ.

**ಶಿಲಾಉಪಕರಣಗಳು**

ನವ ಶಿಲಾಯುಗದಲ್ಲಿ ಕಲ್ಲಿನಿಂದ ಮಾಡಿದ ಉಪಕರಣಗಳಲ್ಲಿ ವೈವಿಧ್ಯತೆಯಿರುವದು. ಕೊಡಲಿ, ಬಾಚಿ, ಉಳಿ, ಸುತ್ತಿಗೆ, ಕೆತ್ತುವ ಉಳಿ, ಅರೆಯುವ ಕಲ್ಲು, ಕವಣೆ ಕಲ್ಲು ಮತ್ತು ಉಂಗುರದಂತಹ ಆಯುದೋಪಕರಣಗಳು ನಿರ್ಮಿಸಲ್ಪಟ್ಟವು. ಇವುಗಳನ್ನು ನಾಲ್ಕು ರೀತಿಯಲ್ಲಿ ತಯಾರಿಸಲಾಗುತ್ತಿತ್ತು. ಹೇಗೆಂದರೆ ಕಲ್ಲಿನಲ್ಲಿ ಚಕ್ಕೆ ಎಬ್ಬಿಸುವುದು, ನಂತರ ಉಬ್ಬಿದ ಭಾಗವನ್ನು ಕುಟ್ಟಿ, ನಂತರ ಇನ್ನೊಂದು ಕಲ್ಲಿಗೆ ಉಜ್ಜುವುದು ಮತ್ತು ಹೊಳಪು ನೀಡುವದಾಗಿತ್ತು. ಇದನ್ನು ಹೆಚ್ಚಾಗಿ ಡಾಲರೈಟ್, ಕಣಶಿಲೆಗಳಿಂದ ತಯಾರಿಸಲಾಗಿದೆ. ನಮ್ಮ ಅಧ್ಯಯನದ ಕ್ಷೇತ್ರಕಾರ್ಯದಲ್ಲಿಬರುವ ತಾವರಗೇರ, ಇಂದರ್ಗಿ, ಮಲ್ಲಾಪುರ, ತಿಪ್ಪನಹಾಳ ನಿವೇಶನಗಳಲ್ಲಿ ಕೈ ಕೊಡಲಿ, ಉಜ್ಜು ಕಲ್ಲು, ಸುತ್ತಿಗೆ, ಇತ್ಯಾದಿಗಳು ದೊರೆತಿವೆ.



**ಛಾ.ಚಿ. ೩. ನವಶಿಲಾ-ತಾಮ್ರಶಿಲಾಯುಗದ ಉಪಕರಣಗಳು, ತಾವರಗೇರ (ಕು.ತಾ.)**

ಈ ಶಿಲಾಯುಗದ ಮತ್ತೊಂದು ವಿಶೇಷವೆಂದರೆ ಕೈಯಿಂದ ಅಥವಾ ಚಕ್ರದ ಮೇಲೆ ಮಣ್ಣಿನಿಂದ ಮಾಡಿದ ಕೆಂಪು, ಬೂದು, ಕಂದು ಹಾಗೂ ಕಪ್ಪು ಲೇಪನದ ಮಡಿಕೆಗಳು. ಇವುಗಳಲ್ಲಿ ಕೆಲವನ್ನು ಬೆಂಕಿಯಲ್ಲಿ ಸುಟ್ಟಿದ್ದರೆ, ಕೆಲವನ್ನು ಬಿಸಿಲಿಗೆ ಇಟ್ಟು ಒಣಗಿಸಿ ತಯಾರಿಸಿರುವದನ್ನು ಕಾಣುತ್ತೇವೆ. ಇವುಗಳನ್ನು ಹಲವು ಮಾದರಿಗಳಲ್ಲಿ ತಯಾರಿಸಿದ್ದು ತೆಳ್ಳನೆಯ ಮೃತ್‌ಪಾತ್ರೆ, ಬಟ್ಟಲುಗಳು, ಬೋಗುಣಿ, ಅಗಲ ತಳದ ಎತ್ತರದ

ಬೋಗುಣಿ, ಹಿಡಿಕೆಯುಳ್ಳ ಮುಚ್ಚಳ, ಚಿಕ್ಕ ದೊಡ್ಡ ಕೊಡಗಳು, ಹೂಜಿಗಳು, ತಳದಲ್ಲಿ ರಂಧ್ರವುಳ್ಳ ಮಡಿಕೆ ಪಾತ್ರೆಗಳು ತಯಾರಿಸಿರುವುದು ಈಗ ಕಂಡು ಬಂದ ಜಿಲ್ಲೆಯ ಹಲವಾರು ನವ ಶಿಲಾಯುಗದ ನಿವೇಶನಗಳಲ್ಲಿ ಕಂಡುಬರುತ್ತವೆ.

ತಾವರಗೇರ ನಿವೇಶನದಲ್ಲಿ ಕೆಂಪು, ಕಂದು ಬಣ್ಣದ ಮಡಿಕೆಚೂರುಗಳು ಕಂಡುಬಂದರೆ, ಶಿವಪುರದ ನಿವೇಶನದಲ್ಲಿ ಕೆಂಪು, ಕಂದು, ಕಪ್ಪು ಮಡಿಕೆ ಚೂರುಗಳು ದೊರಕಿವೆ. ಅದೇ ರೀತಿ ಮಲ್ಲಾಪುರ ನಿವೇಶನದಲ್ಲಿಯು ಸಹ ಕೆಂಪು, ಕಪ್ಪು ಮಡಿಕೆ ಚೂರುಗಳು ಸಿಗುತ್ತವೆ. ತಿಪ್ಪನಹಾಳದಲ್ಲಿ ಕೆಂಪು ಮಡಿಕೆ, ಇಂದರ್ಗಿಯಲ್ಲಿ ಬೂದು ಬಣ್ಣದ ಮಡಿಕೆ, ಹಿರೇಬೆನಕಲ್‌ದಲ್ಲಿ ಕೆಂಪು ಮಡಿಕೆ ಚೂರುಗಳು ದೊರಕುತ್ತವೆ.[೨೪]

## ಆಹಾರ ಉತ್ಪಾದನೆ ಮತ್ತು ಉದ್ಯೋಗ

ಈ ಯುಗದ ವರ್ಷಗಳಲ್ಲಿ ಮಾನವನು ಬೇಟೆಗಾರಿಕೆ ಮತ್ತು ಆಹಾರ ಸಂಗ್ರಹಣೆಗಳನ್ನು ಬಿಟ್ಟು ಒಂದೆಡೆ ನೆಲೆನಿಂತು ಕೃಷಿ ವ್ಯವಸಾಯ ವೃತ್ತಿಯನ್ನು ಕೈಕೊಂಡನು. ಉರಳಿ,ನವಣೆ ಇವು ಪ್ರಥಮ ಬಾರಿಗೆ ನವ ಶಿಲಾಯುಗದ ಮಾನವನು ವ್ಯವಸಾಯದ ಮೂಲಕ ಬೆಳೆದ ದವಸ ಧಾನ್ಯಗಳಾಗಿವೆ. ವ್ಯವಸಾಯದ ಜೊತೆಯಲ್ಲಿ ಪ್ರಾಣಿ ಸಾಕಾಣಿಕೆಯನ್ನು ಜನರು ತಮ್ಮ ಉದ್ಯೋಗವನ್ನಾಗಿಸಿಕೊಂಡಿದ್ದರು. ಪ್ರಾಣಿ ಸಾಕಾಣಿಕೆ ಮತ್ತು ವ್ಯವಸಾಯಗಳ ಪರಿಣಾಮವು ಆರ್ಥಿಕ ಬೆಳವಣಿಗೆಗೆ ಪ್ರಚೋದನೆ ನೀಡಿತು. [೨೫]

## ಕಾಲಮಾನ

ದನಕರುಗಳನ್ನೇ ಅಲಂಬಿಸಿ ಆರಂಭಗೊಂಡ ನವಶಿಲಾಯುಗ ಸಂಸ್ಕೃತಿಯು ಖನಿಜಗಳಿಂದ, ಉತ್ಪಾದಿತ ಲೋಹಗಳಿಂದ ಉಪಲಬ್ಧವಾದ ಪೂರ್ಣ ಪ್ರಮಾಣದ ಬೇಸಾಯದ ಮಟ್ಟವನ್ನು ಮುಟ್ಟುವ ನವಶಿಲಾಯುಗದ ಬೆಳವಣಿಗೆಯಲ್ಲಿ ಮೂರು ಪ್ರಮುಖ ಘಟ್ಟಗಳಿವೆ. ನವಶಿಲಾಯುಗದ ಮೊದಲ ಘಟ್ಟದ ನೆಲೆಗಳು ಡೆಕ್ಕನ ಪ್ರದೇಶದ ಕೊಡೆಕಲ್ಲು, ಪಿಕ್ಲಿಹಾಳ, ಇತ್ಯಾದಿ ಬರುತ್ತಿದ್ದು,ಇವು ಕ್ರಿ.ಪೂ. ೩೦೦೦ ದಿಂದ ಕ್ರಿ.ಪೂ. ೧೬೦೦ ನಡುವಿನ ಅವಧಿಗೆ ಸೇರುತ್ತವೆ. ಮಧ್ಯದ ಘಟ್ಟಕ್ಕೆ ಸೇರುವ ಸಂಗನಕಲ್ಲು, ತೆಕ್ಕಲಕೋಟೆ, ಹಳ್ಳೂರಗಳು ಕ್ರಿ.ಪೂ. ೧೮೦೦ ರಿಂದ ಕ್ರಿ.ಪೂ. ೧೨೦೦ ವರ್ಷಗಳು. ಈ ಘಟ್ಟದಲ್ಲಿ ತಾಮ್ರದ ಬಳಕೆಯು ಬಳಕೆಯಾಯಿತು. ನವಶಿಲಾಯುಗವು ಕಬ್ಬಿಣಯುಗಕ್ಕೆ ಪರಿವರ್ತನೆಯಾಗುವ ಹಂತದ ಕೊನೆಯ ಘಟ್ಟವು ಸಂಗನಕಲ್ಲು , ಬ್ರಹ್ಮಗಿರಿ, ಹಳ್ಳೂರಗಳ ನಿವೇಶನಗಳಿಂದ ತಿಳಿದುಬರುತ್ತದೆ. ಇವುಗಳ ಕಾಲ ಕ್ರಿ.ಪೂ. ೧೪೦೦ ರಿಂದ ೯೦೦ ಎಂದು ತಿಳಿಯಲಾಗಿದೆ. [೨೬] ಪ್ರಸ್ತುತ ಜಿಲ್ಲೆಯ ನವಶಿಲಾಯುಗದ ನಿವೇಶನಗಳು ಮೇಲಿನ ನಿವೇಶನಗಳ ಹತ್ತಿರದಲ್ಲಿಯೇ ಇರುವದರಿಂದ ಅವುಗಳ ಮಧ್ಯ ಸಾಂಸ್ಕೃತಿಕ ಸಂಬಂಧವೇರ್ಪಟ್ಟಿರಲೇಬೇಕು. ಹೀಗಾಗಿ ಮೇಲಿನ ಮೂರು ಘಟ್ಟದ ಕಾಲಮಾನವು ಇಲ್ಲಿಯ ನೆಲೆಗಳಿಗೂ ಅನ್ವಯವಾಗುತ್ತದೆ.



## ಈ) ನವಶಿಲಾ-ತಾಮ್ರ ಶಿಲಾಯುಗ ಸಂಸ್ಕೃತಿ (Neolithic-Chalcolithic-Culture)

ನವ ಶಿಲಾಯುಗ ಕ್ರಮೇಣ ಅವನತಿ ಹೊಂದುತ್ತಾ ನಡೆದಂತೆ ತಾಮ್ರದ ಅದಿರು ಹಾಗೂ ಲೋಹ ತಯಾರಿಕೆಯ ಚಟುವಟಿಕೆಗಳು ಪ್ರಾರಂಭವಾದವು. ಈ ತಾಮ್ರಶಿಲಾಯುಗದಲ್ಲಿ ಇಬ್ಬದಿ ತೆಗೆದ ನೀಳಚಕ್ಕೆ ಕಲ್ಲು ಕತ್ತಿಗಳು, ವಿವಿಧ ಬಣ್ಣದ ಸುಟ್ಟ ಜಿಗುಟು ಮಣ್ಣಿನ ಪಾತ್ರೆಗಳ ತಯಾರಿಕೆ, ಕೃಷಿ ವಸ್ತು ವಿನಿಮಯ, ದೂರದ ವ್ಯಾಪಾರ ಹಾಗೂ ಮನೆ ಕಟ್ಟುವಲ್ಲಿ ಸುಟ್ಟ ಹಾಗೂ ಒಣಗಿಸಿದ ಇಟ್ಟಿಗೆಗಳ ಉಪಯೋಗಗಳು ಬಳಕೆಗೆ ಬಂದವು. ಗವಿ ಕಲ್ಲಾಸರೆಯ ಬಂಡೆಯ ಮೇಲೆ ಮತ್ತು ಮಡಿಕೆಗಳ ಮೇಲೆ ವರ್ಣಚಿತ್ರ ಬಿಡಿಸುವ ಪದ್ಧತಿ ಪ್ರಾರಂಭವಾದದ್ದು ಮತ್ತೊಂದು ವಿಶೇಷವಾಗಿದೆ.

### ನಿವೇಶನಗಳ ಸ್ವರೂಪ

ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೨೫ ತಾಮ್ರ ಶಿಲಾಯುಗದ ನಿವೇಶನಗಳು ಕಂಡುಬರುತ್ತಿದ್ದು ಅವು ಬೆಟ್ಟದ ಕಲ್ಲಾಸರೆ, ಬೆಟ್ಟದ ಮೇಲಿನ ಬಯಲು ಹಾಗೂ ಬೆಟ್ಟದ ಬದಿಗೆ ಮತ್ತು ನದಿ ಹಳ್ಳ ಇಲ್ಲವೆ ಬಯಲು ಪ್ರದೇಶದಲ್ಲಿಯು ಕಂಡು ಬರುವವು. ಇವು ಹೆಚ್ಚಾಗಿ ನೂತನ ಶಿಲಾಯುಗದ ನೆಲೆಗಳ ನಿವೇಶನಗಳಲ್ಲಿಯೇ ಮುಂದುವರೆದಿವೆಯಲ್ಲದೆ, ಕೆಲವು ಸ್ವತಂತ್ರವಾಗಿ ಬೆಳೆದು ಬಂದಿವೆ. ಉದಾ : ಕನಕಗಿರಿ, ಕೆರೆಹಳ್ಳ, ಅರಹಾಳ, ಕೆಸರಟ್ಟಿ, ಜರಕುಂಟಿ, ಇತ್ಯಾದಿಗಳು ಸ್ವತಂತ್ರವಾಗಿ ಬೆಳೆದು ಬಂದಿವೆ. ಈ ಕಾಲದ ನೆಲೆಗಳು ಸಹ ಬೆಟ್ಟ ನದಿ, ಹಳ್ಳ , ಬಯಲು ಪ್ರದೇಶಗಳಲ್ಲಿ ಬೆಳೆದು ಬಂದಿವೆ. ಕಾರಣ ಕೃಷಿ-ವ್ಯವಸಾಯಕ್ಕೆ ಬೇಕಾದ ಫಲವತ್ತಾದ ಭೂಮಿ



**ಛಾ.ಚಿ. ೪. ನವಶಿಲಾ-ತಾಮ್ರಶಿಲಾಯುಗದ ಶಿಲಾ ಉಪಕರಣ ಮತ್ತು ಮಡಿಕೆಗಳು, ಇಂದರ್ಗಿ (ಕೊ.ತಾ.)**

ಮತ್ತು ಹತ್ತಿರದಲ್ಲಿಯೇ ದನಕರುಗಳಿಗೆ ಬೇಕಾಗುವ ಹುಲ್ಲುಗಾವಲು ದೊರಕುವದರಿಂದ ಇಂತಹ ಸ್ಥಳಗಳನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಬೆಟ್ಟ ಗುಡ್ಡಗಳ ನೆಲೆಗಳಿಗೆ ತಾವರಗೇರ, ಶಿವಪುರ, ಇಂದರ್ಗಿ ಮೊದಲಾದವು

ಉತ್ತಮ ನಿದರ್ಶನಗಳಾಗಿವೆ. ಜಿಲ್ಲೆಯ ತಾಮ್ರಶಿಲಾಯುಗದ ನೆಲೆಗಳು ಸ್ವಾಭಾವಿಕವಾಗಿ ನಿಸರ್ಗದತ್ತವಾಗಿದ್ದು ನೀರಿನ ಅನುಕೂಲತೆ, ಪ್ರಾಣಿಗಳ ಬೇಟೆ, ತಪ್ಪಲು ಪ್ರದೇಶಗಳು ಹೆಚ್ಚಾಗಿ ಬೆಟ್ಟ ನದಿ ಕೊಳ್ಳಗಳಲ್ಲಿ ಇರುವದರಿಂದ ಆ ಜನರು ಇಂತಹ ನಿಸರ್ಗದತ್ತ ಸ್ಥಳಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ.[೨೭]



**ಛಾ.ಚಿ. ೫. ನವಶಿಲಾ-ತಾಮ್ರಶಿಲಾಯುಗದ ಶಿಲಾ ಉಪಕರಣ ಮತ್ತು ಮಡಿಕೆಗಳು, ಮಲ್ಲಾಪುರ (ಗಂ.ತಾ.)**

## ಶಿಲಾ ಉಪಕರಣಗಳು

ಶಿಲಾ ತಾಮ್ರಯುಗದ ಜನರು ತಮ್ಮ ನಿತ್ಯ ಜೀವನ ಉಪಯೋಗಕ್ಕಾಗಿ ಮತ್ತು ಹುಲ್ಲು ಇತ್ಯಾದಿ ಕತ್ತರಿಸಲು, ಸೀಳಲು, ಕೊರೆಯಲು ಕಲ್ಲಿನ ಉಪಕರಣಗಳನ್ನು ಉಪಯೋಗಿಸುತ್ತಿದ್ದರು. ಜೊತೆಗೆ ತ್ರಿಕೋನಾಕಾರದ ಕೊಡಲಿ, ಬಾಚಿ, ಚೀಣಿ, ಉಳಿಗಳಂತಹ ಸಣ್ಣಪುಟ್ಟ ಗಿಡಮರಗಳನ್ನು ಕತ್ತರಿಸಲು, ಮರಗೆಲಸ ಹಾಗೂ ಕೃಷಿ ಕೆಲಸಕ್ಕೆಂದು ಬಳಸುತ್ತಿದ್ದರು. ಇವುಗಳನ್ನು ಡೊಲರೈಟ್ (ಕರಿಕಲ್ಲು ಅಥವಾ ವಜ್ರದುಂಡಿ) ಕಲ್ಲಿನಲ್ಲಿ ತಯಾರಿಸುತ್ತಿದ್ದರು. ಇವು ನೂತನ ಶಿಲಾಯುಗದಿಂದಲೆ ಮುಂದುವರೆದು ಈ ಯುಗದಲ್ಲಿಯು ಬಳಕೆಯಲ್ಲಿದ್ದವು. ದೊಡ್ಡ ಕಲ್ಲಿನ ಉಪಕರಣಗಳಲ್ಲದೆ ಅತೀ ಸೂಕ್ಷ್ಮ ಚಕ್ಕೆ ಕಲ್ಲಿನ ಉಪಕರಣಗಳು, ದ್ವಿಮುಖ ಅಲಗಿನ ನೀಳ ತೆಳು ಚಕ್ಕೆಗಳನ್ನು ಸಹ ಉತ್ತಮ ಜಾತಿಯ ಚಾಲ್ಸಿಡಾನಿ, ಕಾರ್ನೇಲಿಯನ್, ಅಗೇಟ್, ಚರ್ಟ, ಜಾಸ್ಪರ್ ಮೊದಲಾದ ಕಲ್ಲುಗಳಿಂದ ತಯಾರಿಸಿ ಬಳಕೆ ಮಾಡಿಕೊಂಡಿದ್ದರು.[೨೮] ಇಂತಹ ಉಪಕರಣಗಳೆಲ್ಲ ಜಿಲ್ಲೆಯ ೨೫ ನೆಲೆಗಳಲ್ಲಿ ದೊರಕುತ್ತವೆ.

## ಮಣ್ಣಿನ ಪಾತ್ರೆಗಳು

ತಾಮ್ರ ಶಿಲಾಯುಗದ ಜನರು ಕಲಾಭಿರುಚಿಯುಳ್ಳವರಾಗಿದ್ದರು. ಆದಕ್ಕಾಗಿಯೇ ದಿನ ನಿತ್ಯದ ಅವರ ಬದುಕಿನಲ್ಲಿ ಪ್ರಮುಖ ಪಾತ್ರವಹಿಸುವ ಮಣ್ಣಿನ ಪಾತ್ರೆಗಳ ತಯಾರಿಕೆಗೆ ಹೆಚ್ಚಿನ ಒತ್ತು ಕೊಟ್ಟು ಅವುಗಳನ್ನು ತಯಾರಿಸಿದ್ದಾರೆ. ಇವರು ವಿವಿಧ ನಮೂನೆಯ ಪಾತ್ರೆಗಳನ್ನು ಕೈಯಿಂದ ಮತ್ತು ಚಕ್ರದ ಮೇಲೆ ತಯಾರಿಸಿ



**ಛಾ.ಚಿ. ೬. ನವಶಿಲಾ-ತಾಮ್ರಶಿಲಾಯುಗದ ಶಿಲಾ ಉಪಕರಣ ಮತ್ತು ಮಡಿಕೆಗಳು, ತಿಪ್ಪನಹಾಳ (ಗಂ.ತಾ.)**

ಭಟ್ಟಿಯಲ್ಲಿ ಹದವಾಗಿ ಸುಡುತ್ತಿದ್ದರು. ಎತ್ತರ ಕಂಠದ ಜಾಡಿ, ನೀರಿನ ಕೊಳವೆಯುಳ್ಳ ಪಾತ್ರೆ, ಒಳಬಾಗಿದ ಬದಿಗಳುಳ್ಳ ಬಟ್ಟಲುಗಳು, ಒಳಲೆಯಾಕಾರದ ಸಣ್ಣ ಸಣ್ಣ ಬಟ್ಟಲುಗಳು, ಗೋಲಾಕೃತಿಯ ಬುಡಗಳುಳ್ಳ ಪಾತ್ರೆಗಳನ್ನು ತಯಾರಿಸಿದ್ದರು. ಕೆಲವು ಪಾತ್ರೆಗಳ ಹೊರಮೈ ಮೇಲೆ ನೇರಳೆ ಬಣ್ಣದ ವಿವಿಧ ರೇಖಾಚಿತ್ರಗಳಲ್ಲದೆ, ಬಿಳಿಬಣ್ಣದ ರೇಖಾಚಿತ್ರಗಳನ್ನು ಬಿಡಿಸಿರುವುದನ್ನು ಕಾಣುತ್ತೇವೆ. ಮುಖ್ಯವಾಗಿ ಕೆಂಪು-ಕಪ್ಪು-ಕಂದು ಬಣ್ಣದ ಮಣ್ಣಿನ ಮಡಿಕೆ ಪಾತ್ರೆಗಳನ್ನು ತಯಾರಿಸಿದ್ದು ಮೃತ ಪಾತ್ರೆ ಈ ಕಾಲದ ವಿಶಿಷ್ಟ ಪಾತ್ರೆಯಾಗಿದೆ. ಈ ಪಾತ್ರೆಯ ಮೇಲೆಯೇ ಹೆಚ್ಚಾಗಿ ರೇಖಾಚಿತ್ರ, ಮೀನು, ಮನುಷ್ಯ, ಪ್ರಾಣಿ ಚಿತ್ರಗಳನ್ನು ಬಿಡಿಸಲಾಗಿದೆ. ಕೊಪ್ಪಳ ಜಿಲ್ಲೆಯ ಈ ೨೫ ನೆಲೆಗಳಲ್ಲಿ ಹೆಚ್ಚಾಗಿ ಕೆಂಪು,ಕಂದು,ಕಪ್ಪು,ಬೂದು ವರ್ಣದ ಮಡಿಕೆ ಪಾತ್ರೆ ಚೂರುಗಳು ದೊರೆತ್ತಿದ್ದು,ಕೆಲವು ವರ್ಣದ ಮಡಿಕೆಯ ಮೇಲೆ ಬಿಳಿ ರೇಖಾ ಗೆರೆಗಳಿರುವ ಮಡಿಕೆಗಳು ಹಿರೇಬೆನಕಲ್, ಶಿವಪುರ ಹಾಗೂ ಮಲ್ಲಾಪುರ ಗ್ರಾಮಗಳ ನಿವೇಶನಗಳಲ್ಲಿ ನಮಗೆ ದೊರೆತಿವೆ.[೨೯] ಉಳಿದ ನಿವೇಶನಗಳಲ್ಲಿ ಕಂದು-ಕೆಂಪು ಪಾತ್ರೆಗಳ ಚೂರುಗಳು ದೊರಕಿವೆ.

## ಶಿಲಾಶ್ರಯ ವರ್ಣಚಿತ್ರಗಳು

ಈ ಯುಗದ ಜನರ ಸೌಂದರ್ಯ ಪ್ರಜ್ಞೆ, ಕಲಾಭಿರುಚಿಗಳು,ಅವರ ಮಣ್ಣಿನ ಗೊಂಬೆ ಹಾಗೂ ನಿವೇಶನಗಳ ಪ್ರದೇಶದಲ್ಲಿರುವ ಬೆಟ್ಟಗಳ ಗವಿ-ಕಲ್ಲಾಸರೆಯ ಬಂಡೆಗಳ ಮೇಲಿರುವ ವರ್ಣ ಚಿತ್ರಗಳಲ್ಲಿ ವ್ಯಕ್ತವಾಗಿವೆ. ಜಿಲ್ಲೆಯ ತಾಮ್ರ ಶಿಲಾಯುಗದ ನೆಲೆಗಳಲ್ಲಿ ಮಣ್ಣಿನ ಗೊಂಬೆಗಳು ದೊರೆಯದಿದ್ದರೂ



**ಛಾ.ಚಿ. ೭ ತಾಮ್ರಶಿಲಾ-ಬೃಹತ್ ಶಿಲಾಯುಗದ ಶಿಲಾಶ್ರಯವರ್ಣ ಚಿತ್ರಗಳು, ಹಿರೇಬೆನಕಲ್ (ಗಂ.ತಾ.)**

ಗವಿ-ಕಲ್ಲಾಸರೆಯ ಬಂಡೆಯ ಮೇಲಿನ ಚಿತ್ರಗಳು ಚಿತ್ರಿಸಲ್ಪಟ್ಟಿವೆ. ಸಾಮಾನ್ಯವಾಗಿ ಇವು ಕೆಮ್ಮಣ್ಣಿನ ಬಣ್ಣದಿಂದ ಮೂಡಿದ ಚಿತ್ರಗಳು. ಇವಲ್ಲದೆ ಬಯಲಿನಲ್ಲಿರುವ ಬಂಡೆಗಳ ಮೇಲೆ ಕಲ್ಲಿನಿಂದ ಕುಟ್ಟಿದ ಮತ್ತು ಲೋಹದ ಉಳಿಯಿಂದ ಕ್ರಮಬದ್ಧವಾಗಿ ಗೀರಿ ತೆಗೆದ ರೇಖಾಚಿತ್ರಗಳು ಒಂದೆರಡು ನಿವೇಶನಗಳಲ್ಲಿ ದೊರಕುತ್ತವೆ. ಆದರೆ ಇವುಗಳ ಕಾಲಮಾನ ನಿರ್ಧರಿಸುವುದು ಸುಲಭವಲ್ಲ. ಇಂತ ಚಿತ್ರಗಳಿರುವ ಸನ್ನಿವೇಶ, ಸಮೀಪದಲ್ಲಿಯ ಪ್ರಾಚೀನ ನೆಲೆಗಳು ಹಾಗೂ ಅಲ್ಲಿ ದೊರಕುವ ಮೃತ ಪಾತ್ರೆಗಳ ಮೇಲಿನ ಚಿತ್ರಗಳಿಗೆ ಹೋಲಿಕೆ ಮಾಡಿ, ಆ ಚಿತ್ರಗಳಲ್ಲಿಯ ಪ್ರಾಣಿ, ಪಶು,ಪಕ್ಷಿ, ಮನುಷ್ಯರ ರೂಪ ಇತ್ಯಾದಿ ಶೈಲಿಗಳನ್ನು ಪರಸ್ಪರ ಹೋಲಿಸಿ ನೋಡಿ ಅವುಗಳ ಕಾಲಮಾನವನ್ನು ನಿರ್ಧರಿಸುವ ಪ್ರಯತ್ನ ವಿದ್ವಾಂಸರು ಮಾಡಿರುವರು.[೩೦]



**ಛಾ.ಚಿ. ೮ ತಾಮ್ರಶಿಲಾ-ಬೃಹತ್ ಶಿಲಾಯುಗದ ಶಿಲಾಶ್ರಯವರ್ಣ ಚಿತ್ರಗಳು, ಹಿರೇಬೆನಕಲ್ (ಗಂ.ತಾ.)**

ಜಿಲ್ಲೆಯ ತಾಮ್ರಶಿಲಾಯುಗದ ವರ್ಣಕಲೆ ಇರುವ ನೆಲೆಗಳೆಂದರೆ ತಾವರಗೇರ,[೩೧] ಆನೆಗುಂದಿ,[೩೨] ಇಂದರ್ಗಿ,[೩೩] ಚಿಕ್ಕರಾಂಪುರ,[೩೪] ತಿಮ್ಮಲಾಪುರ,[೩೫] ಬಂಡಿಹರ್ಲಾಪುರ,[೩೬] ಮಲ್ಲಾಪುರ,[೩೭] ಹಿರೇಬೆನಕಲ್,[೩೮] ಶಿವಪುರ,[೩೯] ಅಂಜನಹಳ್ಳಿ ( ಆನೆಗುಂದಿ) ಮತ್ತು ಕೊಪ್ಪಳ ಗ್ರಾಮಗಳಾಗಿವೆ.[೪೦] ಶಿವಪುರದ ಈಶಾನ್ಯ ದಿಕ್ಕಿಗೆ ಇರುವ ದೊಡ್ಡ ಗುಡ್ಡದ ಮೇಲೆ ತಾಮ್ರಶಿಲಾಯುಗ, ಬೃಹತ ಶಿಲಾಯುಗದ ನೆಲೆ ಹರಡಿಕೊಂಡಿದ್ದು,ಆದರ ಮೇಲಕ್ಕೆ ಇರುವ ಗುಡ್ಡದ ಮೇಲೆ ತಾಮ್ರ ಶಿಲಾಯುಗಕ್ಕೆ ಸೇರಿದ ಕೆಮ್ಮಣ್ಣಿನ ಬಣ್ಣದಿಂದ ಮಾಡಿದ ವರ್ಣ ಕಲೆ ಕಂಡುಬರುತ್ತದೆ. ದೊಡ್ಡದಾದ ಬಂಡೆಯ ಮೇಲೆ ಮನುಷ್ಯನ ಚಿತ್ರವಿದೆ. ಮತ್ತೊಂದು ಬಂಡೆಯ ಸಂದಿಯ ಮೇಲಿನ ಬಂಡೆಯ ಮೇಲೆ ಮಲ್ಲಾಪುರ, ಹಿರೆಬೆನಕಲ್ಲ, ವೆಂಕಟಪುರ ಹಾಗೂ ಇತರ ನಿವೇಶಗಳಲ್ಲಿರುವಂತೆ ಮನುಷ್ಯರ ಸಾಲು ಕುಣಿತ, ಕೈಯಲ್ಲಿ ಆಯುಧಗಳನ್ನು ಹಿಡಿತ ಪುರುಷರು, ಎತ್ತು ಹಾಗೂ ಇತರ ಪ್ರಾಣಿವರ್ಗದ ಚಿತ್ರಗಳಿವೆ. ಕೆಲವು ಅಳಿಸಿ ಹೋಗಿದ್ದು ಉಳಿದವು ಸ್ವಚ್ಛವಾಗಿ ಕಂಡುಬರುತ್ತವೆ.



**ಛಾ.ಚಿ. ೯ ತಾಮ್ರಶಿಲಾ-ಬೃಹತ್ ಶಿಲಾಯುಗದ ಶಿಲಾಶ್ರಯವರ್ಣ ಚಿತ್ರಗಳು, ಶಿವಪುರ (ಕೊ.ತಾ.)**

ಚಿಕ್ಕರಾಂಪುರದಲ್ಲಿ ಎರಡು ಕಡೆಯ ಕಲ್ಲಾಸರೆಯಲ್ಲಿ ಈ ವರ್ಣದೃಶ್ಯಗಳಿದ್ದು ಒಂದರಲ್ಲಿ ೨ ಮೀ ಎತ್ತರದ ಕ್ರಮಬದ್ಧವಾಗಿ ಚಿತ್ರಿಸಿದ ಮಾನವನ ಚಿತ್ರವಿದ್ದರೆ, ಮತ್ತೊಂದರಲ್ಲಿ ಗೂಳಿ, ಜಿಂಕೆ, ನವಿಲು, ಈಟಿಯನ್ನು ಅಡ್ಡಹಿಡಿದ ಮನುಷ್ಯ ಹಾಗೂ ಎರಡು ಮಂಡಲಗಳ, ಚುಕ್ಕೆಗಳ ಚಿತ್ರಗಳಿವೆ.[೪೧] ಬಿಳೆಬಾವಿಯ ಗುಹೆಯಲ್ಲಿ ಹರಪ್ಪಾ ಲಿಪಿಯನ್ನು ಹೋಲುವ ಚಿತ್ರವಿದೆ. ಹಿರೇಬೆನಕಲದಲ್ಲಿ ಶಿಲಾತಾಮ್ರ,ಬೃಹತ ಶಿಲಾಯುಗದ ವರ್ಣದೃಶ್ಯಗಳು ಒಟ್ಟು-೧೨ ಗುಹಾ ಬಂಡೆಗಳ ಮೇಲೆ ಚಿತ್ರಿಸಲಾಗಿದೆ. ಮುಖ್ಯವಾಗಿ ಈ ಎಲ್ಲಾ ಗುಹೆಗಳಲ್ಲಿ, ಮನುಷ್ಯರ ಸಾಲು ಕುಣಿತದ ಚಿತ್ರಗಳು, ಚಿಕ್ಕ ಚಿಕ್ಕ ಬಿಡಿಯಾದ ಚಿತ್ರಗಳು, ಗೂಳಿ, ಎತ್ತು, ಕೋಣ, ಕುದುರೆ, ಜಿಂಕೆ, ಹುಲಿ, ಪಕ್ಷಿ, ಇತ್ಯಾದಿ ಚಿತ್ರಗಳನ್ನು ಗುಂಪಾಗಿ, ಬಿಡಿಬಿಡಿಯಾಗಿ ಆಯಾಕಾಲದಲ್ಲಿ ಒಂದರ ಹತ್ತಿರ ಒಂದರಂತೆ ಕೆಮ್ಮಣ್ಣು (ಕೆಂಪು), ಕಂದು ಬಣ್ಣಗಳಿಂದ ಚಿತ್ರಗಳನ್ನು ಬಿಡಿಸಿರುವರು.[೪೨] ಇವುಗಳಂತೆ ಇನ್ನುಳಿದ ಮೇಲಿನ ನೆಲೆಗಳಲ್ಲಿಯು ಸಹ ಕಂಡುಬರುತ್ತವೆ.

**ಆಹಾರ ಉತ್ಪಾದನೆ ಮತ್ತು ಉದ್ಯೋಗ**

ಮುಖ್ಯವಾಗಿ ತಾಮ್ರಶಿಲಾಯುಗದ ಜನರು ಜೀವನಾಧಾರಕ್ಕಾಗಿ ಕೃಷಿ, ಪಶು ಸಂಗೋಪನೆ, ಬೇಟೆಗಾರಿಕೆ, ಮೀನು ಹಿಡಿಯುವುದನ್ನು ಬಲ್ಲವರಾಗಿದ್ದರು, ಗೋಧಿ, ಹುರುಳಿ, ಬಾರ್ಲಿ, ಉದ್ದು, ಹೆಸರು, ಅವರೆಗಳನ್ನು ಕೃಷಿ ಬೇಸಾಯದಲ್ಲಿ ಬೆಳೆಯುತ್ತಿದ್ದರು. ಜಿಂಕೆ, ಹೆಗ್ಗಣ, ಮೀನು, ಆಮೆ, ಪಕ್ಷಿ, ಕಾಡು ಹಂದಿಗಳಂತಹವುಗಳನ್ನು ಬೇಟೆಯಾಡಿ ಹಿಡಿದು ತಿನ್ನುವ ಪದ್ಧತಿಯಿತ್ತು. ಗೂಳಿ, ಎಮ್ಮೆ, ಆಕಳು, ಕುರಿ, ಹೋತ ಮತ್ತು ನಾಯಿಗಳನ್ನು ಸಾಕುತ್ತಿದ್ದರು, ನೂಲುವುದು, ಚಾಪೆಹೆಣೆಯುವುದು, ಮಣ್ಣಿನ ಪಾತ್ರೆ, ಅಲಂಕಾರಿಕ ವಸ್ತುಗಳನ್ನು ತಯಾರಿಸುವುದನ್ನು ಉದ್ಯೋಗವನ್ನಾಗಿಸಿಕೊಂಡಿದ್ದರು.[೪೩]

**ಕಾಲಮಾನ**

ಕರ್ನಾಟಕದ ಬೇರೆ ಬೇರೆ ನೆಲೆಗಳಲ್ಲಿ ದೊರೆತ ವಸ್ತುಗಳನ್ನು ಇಂಗಾ-೧೪ ಎಂಬ ವೈಜ್ಞಾನಿಕ ತಂತ್ರದಿಂದ ತಾಮ್ರಶಿಲಾಯುಗದ ನಿವೇಶನಗಳ ಕಾಲಮಾನವನ್ನು ಗುರುತಿಸಲಾಗಿದೆ. ಅದರಲ್ಲಿ ತುಂಗಭದ್ರಾ ನದಿ ಪ್ರದೇಶದ ನಿವೇಶನಗಳ ಕಾಲಮಾನವು ಸುಮಾರು ಕ್ರಿ.ಪೂ. ೧೩೦೦ ರಿಂದ ಕ್ರಿ.ಪೂ. ೮೦೦ ಎಂದು ತಿಳಿದು ಬರುತ್ತದೆ.[೪೪] ತುಂಗಭದ್ರಾ ನದಿ ಪ್ರದೇಶಕ್ಕೆ ಕೊಪ್ಪಳ ಜಿಲ್ಲೆಯು ಹೊಂದಿಕೊಂಡಿದ್ದರಿಂದ ಮೇಲಿನ ಕಾಲಮಾನವು ಇಲ್ಲಿಯ ನೆಲೆಗಳಿಗೆ ಅನ್ವಯಿಸುತ್ತದೆ.



**ಛಾ.ಚಿ. ೧೦ ತಾಮ್ರಶಿಲಾ-ಬೃಹತ್ ಶಿಲಾಯುಗದ ಕುಟ್ಟುಚಿತ್ರ, ತಾವರಗೇರ (ಕು.ತಾ.)**

## ಉ) ಬೃಹತ್‌ಶಿಲಾಯುಗ ಸಂಸ್ಕೃತಿ (Megalithic Culture)

ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ವಿವಿಧ ಮಾದರಿಯ ಬೃಹತ್‌ಕಲ್ಗೋರಿಗಳನ್ನು ನಿರ್ಮಾಣಮಾಡಿದ್ದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಯುಗ ಸಂಸ್ಕೃತಿಯೆಂದು ಕರೆಯಲಾಗಿದೆ. ಈ

ಯುಗದ ಜನರು ಜೀವಿಸುತ್ತಿದ್ದ ಪ್ರದೇಶವನ್ನು ವಾಸದ ನೆಲೆಗಳೆಂದು ಹಾಗೂ ಶವ ಸಂಸ್ಕಾರ ಮಾಡುವ ಸ್ಥಳವನ್ನು ಗೋರಿ ನೆಲೆಗಳೆಂದು ಎರಡು ಬಗೆಯಾಗಿ ವಿಂಗಡಿಸಲಾಗಿದೆ.

## ನಿವೇಶನಗಳ ಸ್ವರೂಪ

ಸಹಜವಾಗಿ ಗುಡ್ಡ ಬೆಟ್ಟಗಳಲ್ಲಿ ದೊರೆಯುವ ದೊಡ್ಡ ಪ್ರಮಾಣದ ಕಲ್ಲು ಚಪ್ಪಡಿಗಳ ಗುಂಡುಗಳು ದೊರೆಯುವ ನಿಸರ್ಗದತ್ತ ಸ್ಥಳದಲ್ಲಿ ಬೃಹತಶಿಲಾಯುಗದ ನೆಲೆಗಳಿವೆ. ಬೆಟ್ಟ ಗುಡ್ಡಗಳ ಸಮತಟ್ಟು, ಇವುಗಳ



ಛಾ.ಚಿ. ೧೧ ಬೃಹತ್ ಶಿಲಾಯುಗದ ಮೊರೇರ ಮನೆಗಳು (ಗೋರಿಗಳು), ಹಿರೇಬೆನಕಲ್ (ಗಂ.ತಾ.)

ತಪ್ಪಲು ಪ್ರದೇಶ ಅಥವಾ ಹೆಚ್ಚು ಶಿಲಾವೃತವಾದ ಬರಡು ಭೂಮಿಗಳನ್ನು ಕಲ್ಗೋರಿಗಳ ನಿರ್ಮಾಣಕ್ಕೆ ಬಳಸಿರುವರು. ಉದಾ : ಚಿಕ್ಕಬೆನಕಲ್, ಹಿರೇಬೆನಕಲ್ಲ, ಅಗೋಲಿ, ಆನೆಗುಂದಿ, ಇಂದರ್ಗಿ, ಕೊಪ್ಪಳ,



ಛಾ.ಚಿ. ೧೨ ಬೃಹತ್ ಶಿಲಾಯುಗದ ಕಿಂಡಿಕೋಣೆ ಗೋರಿ, ಹಿರೇಬೆನಕಲ್ (ಗಂ.ತಾ.)

ಚಿಕ್ಕರಾಂಪುರ, ಹೇಮಗುಡ್ಡ, ಮಲ್ಲಾಪುರ, ಬಿಳೇಬಾವಿ, ಬಂಡರಹಾಳ, ತಾವರಗೇರ, ಶಿವಪುರ ಇತ್ಯಾದಿಗಳು ಬೃಹತ ಶಿಲಾಯುಗದ ವಾಸ್ತವ್ಯ ಮತ್ತು ಕಲ್ಗೋರಿಗಳ ನಿವೇಶನ ಸ್ಥಳಗಳಾಗಿವೆ. ಹೆಚ್ಚಾಗಿ ಈ ಜನರು ಶವಗಳನ್ನು ಹುಳುವದಕ್ಕಾಗಿ, ರಕ್ಷಿಸಿ ಇಡುವದಕ್ಕಾಗಿ ಮಾಡಿದ ವಿವಿಧ ರೀತಿಯ ಕಲ್ಗೋರಿಗಳು ಮಾತ್ರ ನಮಗೆ ಕಂಡುಬರುತ್ತವೆ ಹೊರತು,ಅವರು ನೆಲೆಸಿದ ವಾಸದ ಸ್ಥಳಗಳಲ್ಲಿ ಅವರು ತಮ್ಮ ವಾಸಕ್ಕಾಗಿ ಕಟ್ಟಿಕೊಂಡ ಮನೆಗಳ ಗುರುತು ಮಾತ್ರ ಎಲ್ಲಿಯೂ ದೊರೆಯುವದಿಲ್ಲ. ಮತ್ತು ಹೆಚ್ಚಾಗಿ ಬೃಹತ್‌ಶಿಲಾಯುಗ ಜನರು ವಾಸಿಸಿದ ನೆಲೆಗಳಲ್ಲಿ ವಾಸ ಮಾಡಿದ ಕುರುಹುಗಳು ಮಾತ್ರ ನಮಗೆ ದೊರೆಯುತ್ತವೆ. ಹೀಗಾಗಿ ಈ ಜನರು ಸ್ವತಂತ್ರವಾದ ವಾಸ್ತವ್ಯ ಸ್ಥಾಪಿಸಿಕೊಳ್ಳದೆ ಹಿಂದಿನ ಶಿಲಾಯುಗದ ಜನರಂತೆ ಗುಡಿಸಲು ಇಲ್ಲವೇ, ಕಲ್ಲಾಸರೆಯ ಗುಹೆಗಳಲ್ಲಿ ಜೀವನ ನಡೆಸಿರಬೇಕು.

## ಆಹಾರ ಉತ್ಪಾದನೆ ಮತ್ತು ಉದ್ಯೋಗ

ಪಶು ಸಂಗೋಪನೆ, ಬೇಟೆಯಾಡುವುದು, ಸುಧಾರಿತ ಬೇಸಾಯಕ್ರಮ ಇವು ಬೃಹತಶಿಲಾಯುಗದ ಮುಖ್ಯ ಉದ್ಯೋಗ ಅಥವಾ ಕಸುಬುಗಳಾಗಿದ್ದವು. ಇವರು ತಯಾರು ಮಾಡಿದ ಕಬ್ಬಿಣ ಮತ್ತು ಉಕ್ಕಿನ ನೇಗಿಲು, ಕುಡಗೋಲು, ಯುದ್ಧೋಪಕರಣಗಳಾದ ಈಟಿ, ಭರ್ಚಿ, ಕತ್ತಿ, ಬಾಣದ ಮೊನೆಗಳು ಇವರ ಕಸುಬುಗಳನ್ನು ಸೂಚಿಸುತ್ತಿದ್ದು ಹಿರೇಬೆನಕಲ್ ಗುಡ್ಡಗಳ ಗವಿಗಳ ವರ್ಣಚಿತ್ರಗಳಲ್ಲಿ ನಾನಾ ವಿಧದ ಕಬ್ಬಿಣದ ಆಯುಧಗಳನ್ನು ಹಿಡಿದಿರುವ ಮನುಷ್ಯರು ಪ್ರಾಣಿಗಳನ್ನು ಬೇಟೆಯಾಡುವ ದೃಶ್ಯಗಳು ಇವರ ಕಸುಬುಗಳನ್ನು ಸೂಚಿಸುತ್ತವೆ.

ಇವರು ಕುರಿ, ಆಡು, ಎತ್ತು, ಗೂಳಿ, ಕುದುರೆ ಪ್ರಾಣಿಗಳನ್ನು ಸಾಕಿಕೊಂಡಿದ್ದರೆಂಬುದು ಹಿರೇಬೆನಕಲ್, ಇಂದರ್ಗಿ, ತಾವರಗೇರ, ಹೇಮಗುಡ್ಡ, ಇತ್ಯಾದಿ ನೆಲೆಗಳ ಗವಿವರ್ಣ ಚಿತ್ರಗಳಿಂದ ತಿಳಿದುಬರುತ್ತದೆ. ಇವರ ದೊಡ್ಡ ಪ್ರಮಾಣದ ಉದ್ಯೋಗವೆಂದರೆ ಕಬ್ಬಿಣದ ಅದಿರಿನಿಂದ ಲೋಹವನ್ನು ತಯಾರಿಮಾಡುವುದು ಹಾಗೂ ಕಮ್ಮಾರಿಕೆಯಿಂದ ಬೇಕಾದ ವಿವಿಧ ಸಲಕರಣೆ ಮತ್ತು ಆಯುಧಗಳನ್ನು ತಯಾರಿಸುತ್ತಿದ್ದರು. ಮುಖ್ಯವಾಗಿ ಗೃಹಉಪಯೋಗಿ ಉಪಕರಣಗಳಾದ ಅಡ್ಡಣಿಗೆ, ಕೈನೆಗಿಲಕುಳ, ಕುಡಗೋಲು, ಚಾಕು, ಕತ್ತಿ, ಈಟಿ, ಚಪ್ಪಟೆಯಾಕಾರದ ಕೊಡಲಿ, ಬಿಲ್ಲು-ಬಾಣದ ಮೊನೆಗಳನ್ನು ತಯಾರಿಸುತ್ತಿದ್ದರು.[೪೫] ಇವುಗಳಾವವು ಜಿಲ್ಲೆಯ ನೆಲೆಗಳಲ್ಲಿ ಕಂಡು ಬರದಿದ್ದರೂ ವರ್ಣಚಿತ್ರಗಳಿಂದ ಅವುಗಳ ಕುರಿತು ತಿಳಿದುಕೊಳ್ಳಲು ಅವಕಾಶವಿದೆ.

## ಮಣ್ಣಿನ ಪಾತ್ರೆಗಳು

ಬೃಹತ್‌ಶಿಲಾಯುಗದ ಜನರು ದಿನನಿತ್ಯದ ಬದುಕಿನಲ್ಲಿ ಬಳಕೆ ಮಾಡಿದ ವಸ್ತುಗಳಲ್ಲಿ ಮಣ್ಣಿನಿಂದ ಮಾಡಿದ ಮಡಿಕೆ ಪಾತ್ರೆಗಳು ಹೆಚ್ಚು ಪ್ರಾಮುಖ್ಯತೆ ಪಡೆದಿವೆ. ಈ ಕಾಲದ ಮಡಿಕೆ ಪಾತ್ರೆಗಳ ಹಲವುಬಗೆಗಳಿವೆ. ಲೇಪನವುಳ್ಳ, ತೆಳ್ಳನೆಯ ಲೇಪನವುಳ್ಳ ಮತ್ತು ಹೊಳಪು ರಹಿತ ಪಾತ್ರೆಗಳೆಂಬ ಪ್ರಕಾರದಲ್ಲಿ ಕಂಡುಬರುತ್ತವೆ. ಲೇಪನವುಳ್ಳ ಪಾತ್ರೆಗಳು ಪ್ರಮಾಣದಲ್ಲಿ ಚಿಕ್ಕವು ಅತೀ ಚಿಕ್ಕವು. ಲೇಪನರಹಿತ ಮಡಿಕೆಗಳು ಪ್ರಮಾಣದಲ್ಲಿ



ಛಾ.ಚಿ. ೧೩ ತಾಮ್ರಶಿಲಾ-ಬೃಹತ್ ಶಿಲಾಯುಗದ ಮಡಿಕೆಗಳು, ಹಿರೇಬೆನಕಲ್ (ಗಂ.ತಾ.)

ದೊಡ್ಡವು. ಸಣ್ಣ ಪ್ರಮಾಣದ ಮಡಿಕೆಗಳನ್ನು ಚಕ್ರದ ಸಹಾಯದಿಂದ ತಯಾರಿಸಿದರೆ, ದೊಡ್ಡ ಮಡಿಕೆಗಳನ್ನು ಕೈಯಿಂದ ತಯಾರಿಸಲಾಗಿದೆ. ಇವುಗಳನ್ನು ಹೆಚ್ಚಾಗಿ ಕೆಂಪು, ತೆಳುಕೆಂಪು, ಮುಸುಕು ಕೆಂಪು, ಹೊಳಪುಳ್ಳ ಕೆಂಪು, ಪೂರ್ಣಕಪ್ಪು, ಕಪ್ಪು ಕೆಂಪು ಎರಡು ಬಣ್ಣದ ಲೇಪನ ವಿರುವಂತೆ ತಯಾರಿಸಲಾಗಿದೆ. ಇವನ್ನು ಉತ್ತಮ ಜೇಡಿ ಮಣ್ಣಿನಿಂದ ತಯಾರಿಸಿದ್ದು ಜಿಲ್ಲೆಯ ಆನೆಗುಂದಿ, ಕೊಪ್ಪಳ, ಹಿರೇಬೆನಕಲ್, ಚಿಕ್ಕಬೆನಕಲ್, ಚಿಕ್ಕರಾಂಪುರ, ಮಲ್ಲಾಪುರ, ಶಿವಪುರ, ಇಂದರ್ಗಿ, ತಾವರಗೇರ, ಬಿಳೇಭಾವಿ, ಹೇಮಗುಡ್ಡ, ಮರಕುಂಬಿ ಇತ್ಯಾದಿ ಕಡೆ ಒಟ್ಟು ೨೫ ನಿವೇಶನಗಳಲ್ಲಿ ಮೇಲಿನ ಮಾದರಿಯ ಮಡಿಕೆ ಪಾತ್ರೆಗಳ ತುಣುಕುಗಳು ನಮಗೆ ದೊರಕುತ್ತದೆ.



ಛಾ.ಚಿ. ೧೪ ಬೃಹತ್ ಶಿಲಾಯುಗದ ಮಡಿಕೆಗಳು, ಚಿಕ್ಕಬೆನಕಲ್ ಮತ್ತು ಹೇಮಗುಡ್ಡ (ಗಂ.ತಾ.)

## ಶಿಲಾಶ್ರಯ ವರ್ಣಚಿತ್ರಗಳು

ಬೃಹತ್ ಶಿಲಾಯುಗದ ಜನರು ಸಹ ತಾಮ್ರಶಿಲಾಯುಗದ ಜನರಂತೆ ಕಲಾ ಪ್ರಜ್ಞೆಯುಳ್ಳವರಾಗಿದ್ದರೆಂಬುದನ್ನು ಜಿಲ್ಲೆಯ ಕೆಲವು ನಿವೇಶನಗಳ ಕಲ್ಲುಬಂಡೆಗವಿಗಳಲ್ಲಿ ಕಂಡುಬರುವ ವರ್ಣಚಿತ್ರಗಳಿಂದ ತಿಳಿದುಬರುತ್ತದೆ. ಇಂತಹ

ನೆಲೆಗಳಲ್ಲಿ ಬಿಳೇಬಾವಿ, ಮರಕುಂಬಿ, ಹೇಮಗುಡ್ಡ(ಯಮ್ಮಿಗುಡ್ಡ),[೪೬] ಹಿರೇಬೆನಕಲ್, ಕೊಪ್ಪಳ, ಚಿಕ್ಕರಾಂಪುರ, ಮಲ್ಲಾಪುರ, ಆನೆಗುಂದಿ,[೪೭] ಗ್ರಾಮಗಳ ನೆಲೆಗಳು ಪ್ರಮುಖವಾದವುಗಳು.



**ಛಾ.ಚಿ. ೧೫ ಬೃಹತ್ ಶಿಲಾಯುಗದ ಕಲ್ಲಾಸರೆ ವರ್ಣಚಿತ್ರ, ಹೇಮಗುಡ್ಡ (ಗಂ.ತಾ.)**

ಗವಿ ಕಲ್ಲಾಸರೆಯಲ್ಲಿ ಚಿತ್ರಿಸಲ್ಪಟ್ಟ ವರ್ಣದೃಶ್ಯಗಳು ಅವರ ಕಲಾವಂತಿಕೆಯ ಕುರುಹು ಎದ್ದು ಕಾಣುತ್ತಿದ್ದರೂ ಬಹಳಷ್ಟು ಧಾರ್ಮಿಕ ವಿಧಿಗಳಿಗೆ ಸಂಬಂಧಿಸಿದವುಗಳಾಗಿವೆ. ಚಿಕ್ಕರಾಂಪುರದ ಒಂದು ಗವಿಯಲ್ಲಿ ಅತ್ಯಂತ ಅಪರೂಪದ ಬೃಹತ್ ಶಿಲಾಸಂಸ್ಕೃತಿಯ ಕಲ್ಲುಗುಂಡು ಗೋರಿಯ ವೃತ್ತದ ಶವ ಸಂಸ್ಕಾರದ ಚಿತ್ರವಿದೆ. ಒಂದರ ಪಕ್ಕದಲ್ಲಿ ಒಂದರಂತೆ ವೃತ್ತಾಕಾರದಲ್ಲಿ ಕಲ್ಲುಗುಂಡುಗಳಿದ್ದು ಒಳಭಾಗವನ್ನು ಎರಡು ಉಪಭಾಗಗಳನ್ನಾಗಿ ವಿಂಗಡಿಸಲಾಗಿದೆ. ಒಂದರಲ್ಲಿ ಮನುಷ್ಯ ಮತ್ತು ಮಣ್ಣಿನ ಪಾತ್ರೆಗಳ ಚಿತ್ರಗಳಿವೆ. ಇನ್ನೊಂದರಲ್ಲಿ ನೀರಿನ ಅಲೆಯನ್ನು ಸೂಚಿಸುವ ರೇಖೆಗಳಿವೆ. ಹೀಗೆ ಇಡೀ ಚಿತ್ರವು ಸಾವಿರಾರು ಕಲ್ಗೋರಿಗಳಿಂದ ತಿಳಿಯಲಾಗದ ಕೆಲವು ಹೊಸ ವಿಷಯವನ್ನು ಈ ವರ್ಣಚಿತ್ರದಿಂದ ತಿಳಿದುಕೊಳ್ಳಲು ಸಾಧ್ಯವಾಗಿದೆ.[೪೮]

ಮಲ್ಲಾಪುರದ ಗವಿ ವರ್ಣಚಿತ್ರದಲ್ಲಿ ಎರಡು ಕಾಲುಗಳನ್ನು ಅಗಲಿಸಿ ಕುಗ್ಗಿನಿಂತ ಭಂಗಿಯ ನಗ್ನ ಪುರುಷನ ೨ ಮೀ. ಎತ್ತರದ ಚಿತ್ರ ರೇಖಾಚಿತ್ರವಾಗಿದ್ದು ಧಾರ್ಮಿಕ ವಿಧಿಯ ನೃತ್ಯದಲ್ಲಿ ತೊಡಿದಂತೆ ಕಾಣುತ್ತದೆ. ವರ್ಣಕಲೆಗೆ ಹಿರೇಬೆನಕಲ್ ಪ್ರಖ್ಯಾತಿಯನ್ನು ಪಡೆದಿದೆ. ಇಲ್ಲಿ ಒಟ್ಟು ೧೨ ಗವಿಗಳಿದ್ದು ಅವುಗಳ ವರ್ಣ ಚಿತ್ರಗಳು ತಾಮ್ರ ಶಿಲಾಯುಗ ಮತ್ತು ಬೃಹತ ಶಿಲಾಯುಗಕ್ಕೆ ಸೇರಿದವುಗಳಾಗಿವೆ. ಹಿರೇ ಬೆನಕಲ್ ಗವಿಯಲ್ಲಿ ಮನುಷ್ಯ, ಪ್ರಾಣಿ, ಪಕ್ಷಿ, ಕುದುರೆ ಸವಾರಿ, ಸಾಮೂಹಿಕ ನೃತ್ಯ, ಮಂಡಲ, ಯುದ್ಧದ, ಬೇಟೆಯಂತಹ ಹತ್ತು ಹಲವಾರು ವಿಷಯಗಳ ವರ್ಣಚಿತ್ರಗಳನ್ನು ಬಿಡಿಸಲಾಗಿದ್ದು,[೪೯] ಅವುಗಳಿಗೆ ಬಳಸಿದ ಬಣ್ಣ ಕೆಂಪು (ಕೆಮ್ಮಣ್ಣು), ಕಂದು ಬಣ್ಣವಾಗಿದೆ.

## ಕಲ್ಗೋರಿ ಅಥವಾ ಶವಸಂಸ್ಕಾರ ಪದ್ಧತಿ

ಬೃಹತ್ ಶಿಲಾಯುಗ ಸಂಸ್ಕೃತಿಯು ಬಹು ವಿಸ್ತಾರವಾಗಿ ಹರಡಿಕೊಂಡ ಕಾಲ. ಕರ್ನಾಟಕ ಒಂದರಲ್ಲೆ ಉತ್ತರ ಕನ್ನಡ (ಕಾರವಾರ) ಹೊರತುಪಡಿಸಿ ೬೮೦ ಬೃಹತ್ ಶಿಲಾಯುಗದ ಸಂಸ್ಕೃತಿಯ ನೆಲೆಗಳು, ೪೫೦ ಕಲ್ಗೋರಿ ನೆಲೆಗಳು ಇವೆ ಎಂದು ಸಮೀಕ್ಷೆಯಿಂದ ತಿಳಿದು ಬರುತ್ತದೆ.[೫೦] ಕಲ್ಗೋರಿಗಳ ವಿನ್ಯಾಸವನ್ನು ಗುರುತಿಸುವಲ್ಲಿ ಪ್ರಾದೇಶಿಕ ಭಿನ್ನತೆಯ ಜೊತೆಗೆ ಅಲ್ಲಿಯ ಭೌಗೋಳಿಕ ಸನ್ನಿವೇಶ ದೊಡ್ಡ ಪ್ರಮಾಣದಲ್ಲಿ ದೊರೆಯುವ ಶಿಲಾಬಂಡೆ, ಲೋಹದ ನಿಕ್ಷೇಪಗಳ ಮೇಲಿಂದ ನಿರ್ಧರಿಸಲಾಗಿದೆ. ಇವುಗಳಲ್ಲಿ ಹಲವು ಬಗೆಯ ಮಾದರಿಗಳು ಕಂಡುಬರುತ್ತವೆ.



**ಛಾ.ಚಿ. ೧೬ ಬೃಹತ್ ಶಿಲಾಯುಗದ ಕಿಂಡಿಕೋಣೆಗೋರಿ, ಚಿಕ್ಕಬೆನಕಲ್ (ಗಂ.ತಾ.)**

೧) ಕೋಣೆ, ಹಾದಿಕೋಣೆ, ಕಿಂಡಿ(ಖಂಡಿ)ಕೋಣೆ, ೨) ಆಯತಾಕಾರದ ಅಂತರ್ಗತ ಶವಪೆಟ್ಟಿಗೆ, ೩) ಕೋಣೆಯಿಲ್ಲದ ಗೋರಿ ಕಲ್ಗುಪ್ಪೆ, ೪) ಶಿಲಾವೃತ, ೫) ಬಂಡೆಗಳಿಂದಾವೃತವಾದ ಚೌಕಾಕಾರದ ನಿಲುಬಂಡೆಗೋರಿಗಳಲ್ಲಿವೆ. ಶವಕುಣಿ, ಅಸ್ಥಿಪಾತ್ರೆ, ಸಮಾಧಿಗೋರಿ ಮಾದರಿಗಳು ವಿಸ್ತಾರ ಪ್ರದೇಶದಲ್ಲಿ ಬೇರೆ ಬೇರೆ ರೀತಿಯಲ್ಲಿ ಕಂಡುಬರುವವು.[೫೧]

ಜಿಲ್ಲೆಯಲ್ಲಿ ದೊರೆಯುವ ಸುಮಾರು ೨೫ ಬೃಹತ ಶಿಲಾಯುಗ ನಿವೇಶನಗಳಲ್ಲಿ ಕೊಪ್ಪಳ, ಅರಳಹಳ್ಳಿ, ಅಗೋಲಿ, ಗಡ್ಡಿ, ಗುಡೂರು, ಚಿಕ್ಕರಾಂಪುರ, ಚಿಕ್ಕ ಬೆನಕಲ್, ಜಂಗಮರಕಲ್ಗುಡಿ, ತಾವರಗೇರ, ತಿಮ್ಮಾಪುರ, ಬಂಡರಹಾಳ, ಬಸರಿಹಾಳ, ಬಿಳೇಬಾವಿ, ಮರಕುಂಬಿ, ವೆಂಕಟಾಪುರ, ಸಾಣಾಪುರ ಮತ್ತು ಹಿರೇಬೆನಕಲ್ ಗ್ರಾಮಗಳಲ್ಲಿ ಕೋಣೆ, ಕಿಂಡಿಕೋಣೆ, ಕಲ್ಗುಪ್ಪೆ, ಶವಕುಣಿ, ಚೌಕಗೋರಿಗಳು ಕಂಡುಬರುತ್ತವೆ. ಇವುಗಳಲ್ಲಿ ಹಿರೇಬೆನಕಲ್ ಮತ್ತು ಚಿಕ್ಕ ಬೆನಕಲ್, ಚಿಕ್ಕರಾಂಪುರ, ಅರಳಿಹಳ್ಳಿ, ಕೊಪ್ಪಳ ಗ್ರಾಮಗಳ ನಿವೇಶನಗಳು ಪ್ರಮುಖವಾಗಿದ್ದು ಹಿರೇಬೆನಕಲ್ಲ ಒಂದರಲ್ಲೇ ನೂರಾರು ಕಿಂಡಿಕೋಣೆ, ಕೋಣೆ ಗೋರಿಗಳು ನಮಗೆ ಇಂದಿಗೂ ದೊರಕುತ್ತವೆ.

**ಕಾಲಮಾನ**

ಬೃಹತ್‌ಶಿಲಾ ಸಂಸ್ಕೃತಿಯ ಮಾನವನು ಬದುಕಿದ ಕಾಲಮಾನವನ್ನು ಎರಡು ಕ್ರಮದಲ್ಲಿ ನಿರ್ಧರಿಸಲಾಗಿದೆ. ಒಂದು ಸಾಂಸ್ಕೃತಿಕ ಸ್ತರ ಪದ್ಧತಿಯಾದರೆ, ಎರಡನೆಯದು ವೈಜ್ಞಾನಿಕ ತಂತ್ರಗಳ ಪದ್ಧತಿಯಾಗಿದೆ. ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದಂತೆ ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲಮಾನ ಕ್ರಿ.ಪೂ. ೧೦೦೦-೬೦೦ ರಿಂದ ಕ್ರಿ.ಪೂ ೨೦೦ ಎಂದು ವೈಜ್ಞಾನಿಕ ತಂತ್ರ ಪದ್ಧತಿಯಿಂದ ತಿಳಿಯಲಾಗಿದೆ.[೫೨]

## ಊ) ಇತಿಹಾಸ ಆರಂಭಕಾಲದ ಸಂಸ್ಕೃತಿ (ಮೌರ್ಯ-ಶಾತವಾಹನ)

ಮಾನವನು ವಿವಿಧ ಶಿಲಾಯುಗ ಹಂತಗಳನ್ನು ದಾಟ ಲಿಪಿಯ ಬಳಕೆಗೆ ಬಂದು ನಿಂತ ಕಾಲವನ್ನು ಇತಿಹಾಸ ಆರಂಭ ಕಾಲವೆಂದು ಗುರುತಿಸಲಾಗಿದೆ. ನವಶಿಲಾಯುಗದ ಕೊನೆಯ ಹಂತದಲ್ಲಿ ಸ್ಥಿರವಾಗಿ ನೆಲೆಗೊಂಡ ಅನೇಕ ನಿವೇಶಗಳು ತಾಮ್ರಶಿಲಾಯುಗ, ಬೃಹತ್‌ಶಿಲಾಯುಗ ಹಂತಗಳನ್ನು ದಾಟಿ ಇತಿಹಾಸ



**ಛಾ.ಚಿ. ೧೭ ತಾಮ್ರಶಿಲಾ-ಬೃಹತ್ ಶಿಲಾಯುಗ, ಶಾತವಾಹನ ಕಾಲದ ಮಡಿಕೆ ಉಪಕರಣಗಳು ಶಿವಪುರ (ಕೊ.ತಾ.)**

ಆರಂಭ ಕಾಲದಲ್ಲಿಯೂ ಅಷ್ಟೇ ಸ್ಥಿರತೆಯನ್ನು ಕಾಯ್ದುಕೊಂಡು ಬಂದಿದ್ದರಿಂದ ಕೆಲವು ಪ್ರಮುಖ ನೆಲೆಗಳು ಎಲ್ಲಾ ಯುಗದ ಸಂಸ್ಕೃತಿಯ ಉಪಕರಣಗಳನ್ನು (ಲಕ್ಷಣ) ಹೊಂದಿದವುಗಳಾಗಿ ಕಂಡು ಬರುತ್ತವೆ. ಉದಾ : ಜಿಲ್ಲೆಯ ಇಂದರ್ಗಿ, ಹಿರೇಬೆನಕಲ್, ಮಲ್ಲಾಪುರ, ಶಿವಪುರ, ಚಿಕ್ಕರಾಂಪುರ, ಕೊಪ್ಪಳ ಇತ್ಯಾದಿ. ಶಿಲಾಯುಗ ಸಂಸ್ಕೃತಿಯು ಹಂತ ಹಂತವಾಗಿ ಬೆಳೆದು ಬೃಹತ ಶಿಲಾಯುಗದ ಹೊತ್ತಿಗೆ ಅದು ಬಹು ವಿಸ್ತಾರ ಪಡೆದುಕೊಂಡಿತು. ಈ ಹೊತ್ತಿಗೆ ಜನರು ಭೂಮಿಯ ಮೇಲೆ ತಮ್ಮ ಒಡೆತನ ಸಾಧಿಸಲು ಮುಂದಾದರಲ್ಲದೆ ಸಾಮ್ರಾಜ್ಯ ನಿರ್ಮಾಣಕ್ಕೂ ಪ್ರಯತ್ನಿಸಿದರು. ಆದರ ಪ್ರಯತ್ನವೇ ಬೃಹತ್‌ಶಿಲಾಯುಗದ ಕೊನೆಯಲ್ಲಿ

ಉದ್ಭವಿಸಿದ ಉತ್ತರ ಭಾರತದ ಮೌರ್ಯ ಸಾಮ್ರಾಜ್ಯ ಮತ್ತು ಇತರ ಅರಸು ಮನೆತನಗಳು, ಮೌರ್ಯರು ಉತ್ತರ ಭಾರತವನ್ನೊಳಗೊಂಡು ದಕ್ಷಿಣದ ಮೇಲೆಯು ತಮ್ಮ ಹಿಡಿತವನ್ನು ಸಾಧಿಸಿದರು.[೫೩] ನಂತರ ಇವರ ಸಾಮ್ರಾಜ್ಯದ ದಕ್ಷಿಣ ಭಾಗಕ್ಕೆ ಸಾಮಂತರಾಗಿ ಶಾತವಾಹನರು ಆಡಳಿತ ನಡೆಸಿರುವರು.[೫೪] ಈ ಎರಡು ಸಾಮ್ರಾಜ್ಯಗಳ ಆಡಳಿತ ವ್ಯಾಪ್ತಿಗೆ ಸೇರಿದ ಈ ಪ್ರದೇಶದಲ್ಲಿ ಅವರ ಕಾಲದ ಅನೇಕ ಜನವಸತಿಯ ಸುಮಾರು ೩೭ ನೆಲೆಗಳು ನಮ್ಮ ಅಧ್ಯಯನದಲ್ಲಿ ಕಾಣಿಸಿಕೊಳ್ಳುತ್ತವೆ.



**ಛಾ.ಚಿ. ೧೮ ಮೌರ್ಯ- ಶಾತವಾಹನ ಕಾಲದ ಮಡಿಕೆ ಉಪಕರಣಗಳು, ಕೊಪ್ಪಳ (ಗವಿಮಠ) (ಕೊ.ತಾ.)**

## ನಿವೇಶನಗಳ ಸ್ವರೂಪ

ಶಿಲಾಯುಗದ ನೆಲೆಗಳು ಸಂಪನ್ಮೂಲಗಳು ದೊರೆಯುವ ಸ್ಥಳದಲ್ಲಿ ಹೆಚ್ಚು ನೆಲೆಗೊಂಡಿದ್ದವು. ಇತಿಹಾಸ ಆರಂಭದ ನೆಲೆಗಳು ಆ ನೆಲೆಗಳಲ್ಲಿ ಕಂಡುಬಂದರೂ ಇತಿಹಾಸ ಆರಂಭ ಕಾಲಕ್ಕಾಗಲೇ ಬಹು ವಿಸ್ತಾರ ಪ್ರದೇಶದಲ್ಲಿ ಹರಿದು ಹಂಚಿ ಹೋಗಿರುವುದನ್ನು ಕಾಣುತ್ತೇವೆ. ಇದಕ್ಕೆ ಕಾರಣ, ಸಂಕೀರ್ಣ ಸಮಾಜ ವ್ಯವಸ್ಥೆಯಿಂದ ಬಿಡುಗಡೆ, ಸಂಪನ್ಮೂಲದ ಕೊರತೆ, ಖನಿಜ ನಿಕ್ಷೇಪಗಳ ಶೋಧ, ಪರಸ್ಪರ ಸಂಪರ್ಕದಿಂದ ಮೂಲ ನೆಲೆಯನ್ನು ತೊರೆದು ಹೊಸ ನೆಲೆಯತ್ತ ಮನುಷ್ಯ ನಡೆದನು. ಹೀಗಾಗಿ ಈ ಮೊದಲಿನ ಬೆಟ್ಟಗುಡ್ಡ, ನದಿಕೊಳ್ಳ ಪ್ರದೇಶಗಳ ಜೊತೆಗೆ ಬಯಲು ಪ್ರದೇಶದಲ್ಲಿ ನೆಲೆಯನ್ನು ಕಟ್ಟಿಕೊಂಡು ಜೀವನ ನಡೆಸಿದರು. ಹೀಗಾಗಿ ಇತಿಹಾಸ ಆರಂಭ ಅವಧಿಯ ನೆಲೆಗಳು ಸಾಕಷ್ಟು ಪ್ರಮಾಣದಲ್ಲಿ ಬೆಟ್ಟ, ಬೆಟ್ಟದ ಸಮತಟ್ಟು, ತಗ್ಗು

ಪ್ರದೇಶ, ನದಿದಡ, ಅವುಗಳ ಉಪನದಿಗಳಾದ ಹಳ್ಳಗಳ ಹಾಗೂ ವಿಸ್ತಾರವಾಗಿರುವ ಬಯಲು ಪ್ರದೇಶದಲ್ಲಿ ಹರಡಿಕೊಂಡಿದ್ದನ್ನು ಕಾಣುತ್ತೇವೆ. ನೀರಿನ ಜೂರಿ, ನೀರಿನ ಹೆಚ್ಚು ಲಭ್ಯತೆ ಇರುವಲ್ಲಿಯೇ ವಾಸಕ್ಕೆ ನೆಲೆ ಹುಡಿಕಿಕೊಂಡಿರುವರು.

## ಜೀವನ ರೀತಿ

ಐತಿಹಾಸಿಕ ಕಾಲದ ಆರಂಭದ ಅವಧಿಗೆ ಸೇರಿದ ನೆಲೆಗಳು ಮೈದಾನ ಪ್ರದೇಶದಲ್ಲಿ ಹೆಚ್ಚಿನ ಸಾಂದ್ರತೆಯನ್ನು ಹೊಂದಿದವು. ಉದ್ಯಮ (ವಾಣಿಜ್ಯ) ಹಾಗೂ ವ್ಯಾಪಾರಗಳಲ್ಲಿ ನೈಸರ್ಗಿಕ ಸಂಪನ್ಮೂಲಗಳನ್ನು ಹಿಡಿತದಲ್ಲಿಟ್ಟುಕೊಳ್ಳುತ್ತಿದ್ದ ನಗರ ಚಟುವಟಿಕೆಯ ಕೇಂದ್ರಗಳಾಗಿಯೂ, ಪ್ರಾಂತಿಯ ಕೇಂದ್ರಗಳಾಗಿಯೂ ಮಾರ್ಪಟ್ಟವು. ವ್ಯಾಪಾರವು ನಗರ ಮತ್ತು ಹಳ್ಳಿಗಳ ನಡುವಿನ ವಿನ್ಯಾಸದಲ್ಲಿ ಗಣನೀಯ ಬದಲಾವಣೆ ತಂದಿತು. ಸಮೃದ್ಧ ಬೆಳೆಗಳನ್ನು ಮೆಳೆಯುವ ಬೇಸಾಯ ಪ್ರದೇಶ, ಎರೆಮಣ್ಣಿನ ಭೂಮಿಯ ಹತ್ತಿರ ಹಾಗೂ ಖನಿಜ ಲೋಹ ನಿಕ್ಷೇಪಗಳ ಹತ್ತಿರ ಹೆಚ್ಚಾಗಿ ನಗರಗಳು ಬೆಳೆದು ಬಂದವು.[೫೫] ಉದಾ : ಕೊಪ್ಪಳ, ಅಂದು ಇದೊಂದು ವಾಣಿಜ್ಯ ಕೇಂದ್ರ. ಇದಕ್ಕೆ ಮಸ್ಕಿ, ಸನ್ನತಿ, ಬನವಾಸಿಗಳು ಒಂದೇ ಉತ್ತರ ದಕ್ಷಿಣ ರೇಖೆಯಲ್ಲಿ ಸಂಧಿಸಿವೆ.

ಈ ಕಾಲದಲ್ಲಿ ವಿಶಿಷ್ಟ ತರಹದ ಮಣ್ಣಿನ ಪಾತ್ರೆಗಳನ್ನು ಜನರು ತಯಾರಿಸಿ ಬಳಕೆ ಮಾಡಿದ್ದರು. ಇವು ಜಿಲ್ಲೆಯ ಎಲ್ಲಾ ನೆಲೆಗಳಲ್ಲಿ ದೊರಕುತ್ತವೆ. ಈ ಪಾತ್ರೆ ಬೃಹತ್ ಶಿಲಾಯುಗ ಪರಂಪರೆಯಿಂದ ಬಂದ ಮಣ್ಣಿನ ಪಾತ್ರೆ. ಇದರ ಉಪ ಪ್ರಕಾರಗಳು ಸಾಕಷ್ಟಿವೆ. ಈ ಮಣ್ಣಿನ ಪಾತ್ರೆ ಮತ್ತು ಅದರ ಪ್ರಕಾರಗಳು ಕೆಂಪು, ಕಪ್ಪು, ಕೆಂಪುಕಪ್ಪು, ಕಂದು ಬಣ್ಣದ ಲೇಪನ -ಲೇಪನ ರಹಿತ ಸಾದಾ ರೀತಿಯಲ್ಲಿಯೂ ಕಂಡುಬರುತ್ತವೆ. ಇಂತಹ ಮಡಿಕೆ ಚೂರುಗಳು ಹೆಚ್ಚಾಗಿ ಕೊಪ್ಪಳ, ಗುಮ್ಮಗೇರ, ಕಂದಕೂರ, ಗೋನಾಳ, ತಾವರಗೇರ, ಲಿಂಗನಬಂಡಿ, ಹಿರೇಬೆನಕಲ್‌ಗಳಲ್ಲದೆ ಇತರ ಗ್ರಾಮ ನಿವೇಶನಗಳಲ್ಲಿಯೂ ಕಂಡುಬರುತ್ತವೆ.

### ಅಡಿಟಿಪ್ಪಣಿಗಳು

೧. ಪಪ್ಪು, ಆರ್. ಎಸ್., ೧೯೯೭, ಪ್ರಾಚೀನತಮ ಮಾನವ ಸಂಸ್ಕೃತಿಗಳ : ವಿಕನಸದ ಹಂತಗಳು, *ಕರ್ನಾಟಕ ಚರಿತ್ರೆ ಸಂಪುಟ-೧*, (ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು-೧೦೬-೧೦೭, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೨. ರವಿ ಕೋರಿಶೆಟ್ಟರ, ಮತ್ತು ಗಿರಿಜಿ ಆರ್. ಎಮ್, ೧೯೯೭, ಪರಿಸರ ಮತ್ತು ಸಂಸ್ಕೃತಿ, *ಕರ್ನಾಟಕ ಚರಿತ್ರೆ ಸಂಪುಟ-೧*, (ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು-೩೨, ೩೩, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೩. ಅದೇ,

೪. ಚಂದ್ರಶೇಖರ, ಟಿ. ಆರ್. (ಸಂಯೋಜಕರು)೧೯೯೯, ಜಿಲ್ಲಾ ಅಭಿವೃದ್ಧಿ ಅಧ್ಯಯನ ಕೊಪ್ಪಳ, ಪು-೨೫, ಹಂಪಿ, ಕನ್ನಡ ವಿಶ್ವವಿದ್ಯಾಲಯ ಮತ್ತು
ಪಿ. ಎಸ್. ಅಶ್ವಥ, ೨೦೦೧, *ಕೊಪ್ಪಳ : ಒಂದು ಸಾಂಸ್ಕೃತಿಕ ಅಧ್ಯಯನ*, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪು-೨೮, ಹಂಪಿ, ಕ.ವಿ.ವಿ.

೫. ರವಿ ಕೋರಿಶೆಟ್ಟರ ಮತ್ತು ಗಿರಿಜ, ಆರ್. ಎಮ್. ೧೯೯೭, ಪರಿಸರ ಮತ್ತು ಸಂಸ್ಕೃತಿ, *ಕರ್ನಾಟಕ ಚರಿತ್ರೆ ಸಂಪುಟ-೧*, (ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು. ೩೫-೩೬,೪೪, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೬. ೧೯೯೬-೯೭, ರಾಯಚೂರು ಮತ್ತು ಕೊಪ್ಪಳ ಜಿಲ್ಲಾ ಅಂಕಿ ಅಂಶಗಳ ನೋಟ, ಪು.೭, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ ರಾಯಚೂರ.

೭. *Gazeteer of India, Maysore State* (Raichur Distric) ಪು-೧೭-೧೮-೨೦, Government of India, Bangalore,

೮. ಪಪ್ಪು, ಆರ್. ಎಸ್., ೧೯೯೭, ಪ್ರಾಚೀನತಮ ಮಾನವ ಸಂಸ್ಕೃತಿಗಳ : ವಿಕನಸದ ಹಂತಗಳು, *ಕರ್ನಾಟಕ ಚರಿತ್ರೆ ಸಂಪುಟ-೧*, (ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು-೯೫, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೯. ಅದೇ,

೧೦. ಶಿವತಾರಕ, ಕೆ.ಬಿ., ೨೦೦೧, *ಕರ್ನಾಟಕದ ಪುರಾತತ್ವ ನೆಲೆಗಳು*, ಪು-೧೬-೧೮, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೧೧. Sankalia, H.D., 1956, Animal Fossils and Palaeolithic Industries the Pravar Basin at Nevasa District, pp.35-53, *Ahamadnagar, Ancient India*, Vol-XII,

೧೨. Murthy, M.L.K., 1968, Blade and Burean Industries at Renigunta on the South East Coast of India, pp. 83-101, *Procedings of Pre-historic Society*, Vol-XXVIII,

೧೩. ಸುಭಾಸ ರಾ. ಚಿಂಚೋಳಿ, ೧೯೯೯, ಪ್ರಾಕ್ತನಶಾಸ್ತ್ರದ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆಯಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ವಾಸ್ತು ಮತ್ತು ಶಿಲ್ಪಕಲೆಯ ಅಧ್ಯಯನ, ಪಿಎಚ್.ಡಿ. (ಅಪ್ರಕಟಿತ) ಮಹಾಪ್ರಬಂಧ, ಪು-೧೯-೨೦, ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ.

೧೪. ಸುಂದರ. ಅ., ೧೯೯೭, ಪ್ರಾಗಿತಿಹಾಸ ಕಾಲದ ನಿರ್ಮಿತಿ ಮತ್ತು ಚಿತ್ರಕಲೆ, *ಕರ್ನಾಟಕ ಚರಿತ್ರೆ ಸಂಪುಟ-೧*, ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು-೨೪೨-೨೪೪, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೧೫. ಸುಂದರ, ಅ., ೧೯೯೪, *ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಕಲೆ*, ಪು- ೧೬-೬೬, ಕರ್ನಾಟಕ ಲಲಿತ ಅಕಾಡೆಮಿ, ಬೆಂಗಳೂರ.

೧೬. Ravi Korisettar., 1975-76, B.K. Tapar (Ed), *Indian Archaeology A Review*, p. 19-22, Archaeological Survey of India, New Delhi, 1979.

೧೭. ಪಪ್ಪು, ಆರ್. ಎಸ್., ೧೯೯೭, ಪ್ರಾಚೀನತಮ ಮಾನವ ಸಂಸ್ಕೃತಿಗಳ : ವಿಕನಸದ ಹಂತಗಳು, *ಕರ್ನಾಟಕ ಚರಿತ್ರೆ ಸಂಪುಟ-೧*, (ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು-೧೦೮, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೧೮. ಅದೇ, ಪು-೧೦೭.

೧೯. ಶಿವತಾರಕ, ಕೆ.ಬಿ., ೨೦೦೧, *ಕರ್ನಾಟಕದ ಪುರಾತತ್ವ ನೆಲೆಗಳು*, ಪು-೧೫, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೨೦. ಪಪ್ಪು, ಆರ್. ಎಸ್., ೧೯೯೭, *ಪ್ರಾಚೀನತಮ ಮಾನವ ಸಂಸ್ಕೃತಿಗಳ: ವಿಕಸನದ ಹಂತಗಳು*, ಕರ್ನಾಟಕ ಚರಿತ್ರೆ ಸಂಪುಟ-೧, (ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು-೧೨೪, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೨೧. ಅದೇ, ಪು-೧೨೮.

೨೨. ಶಿವತಾರಕ, ಕೆ.ಬಿ., ೨೦೦೧, *ಕರ್ನಾಟಕದ ಪುರಾತತ್ವ ನೆಲೆಗಳು*, ಪು-೧೫, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೨೩. ಅದೇ, ಪು-೧೫.

೨೪. ಜಿಲ್ಲೆಯ ಹಲವಾರು ನೂತನ ಶಿಲಾಯುಗದ ನಿವೇಶನಗಳಲ್ಲಿ ಸಹ ಕೆಂಪು, ಕಂದು, ಬೂದು, ತಿಳಿಕೆಂಪು ಲೇಪನದ ಮಡಿಕೆಗಳು ನಮ್ಮ ಕ್ಷೇತ್ರಕಾರ್ಯದ ಅವಧಿಯಲ್ಲಿ ಕಂಡುಬಂದಿವೆ.

೨೫. ರವಿ ಕೋರಿಶೆಟ್ಟರ., ೨೦೦೧, ಪ್ರಾಗೈತಿಹಾಸಿಕ ಜಗತ್ತು-೧, (ತಂಬಡ ವಿಜಯ ಪೂಣಚ್ಚ (ಸಂ), ಕನ್ನಡ ವಿಶ್ವವಿದ್ಯಾಲಯ ಕೋಶ-೪, *ಚರಿತ್ರೆ*, ಪು-೭೩-೭೯, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೨೬. ರವಿ ಕೋರಿಶೆಟ್ಟರ, ಮತ್ತು ಗಿರಿಜಿ, ಆರ್. ಎಮ್. ೧೯೯೭, ಪರಿಸರ ಮತ್ತು ಸಂಸ್ಕೃತಿ, ಕರ್ನಾಟಕ ಚರಿತ್ರೆ *ಸಂಪುಟ-೧*, (ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು ೭೦-೭೧, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೨೭. ಅದೇ, ಪು-೧೫೨

೨೮. ಅದೇ, ಪು. ೧೫೬-೧೫೭

೨೯. ದಿನಾಂಕ ೧೯ ರಿಂದ ೨೯-೧೧-೨೦೦೨ ರಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಕೈಗೊಂಡ ಅಧ್ಯಯನದ ಕ್ಷೇತ್ರಕಾರ್ಯ ಅವಧಿಯಲ್ಲಿ ದೊರಕಿವೆ.

೩೦. ಸುಂದರ. ಅ., ೧೯೯೭, ಪ್ರಾಗಿತಿಹಾಸ ಕಾಲದ ನಿರ್ಮಿತಿ ಮತ್ತು ಚಿತ್ರಕಲೆ, ಕರ್ನಾಟಕ ಚರಿತ್ರೆ *ಸಂಪುಟ-೧*, ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು-೨೪೨-೨೪೬, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೩೧. *Indian Archaeology A Review*, 1961-66, p. 32-33

೩೨. *Indian Archaeology A Review*, 1961-62, 1962-63, pp-102, 16,

೩೩. ಸುಂದರ, ಅ. : ೧೯೯೪, *ಕರ್ನಾಟಕ ಪ್ರಾಗಿತಿಹಾಸಿಕ ಕಾಲದ ಕಲೆ*, ಪಿ. ಆರ್. ತಿಪ್ಪೆಸ್ವಾಮಿ, (ಪ್ರ.ಸಂ) ಪು-೬೭-೬೯, ಕರ್ನಾಟಕ ಲಲಿತಾ ಕಲಾ ಅಕಾಡೆಮಿ ಬೆಂಗಳೂರ,

೩೪. *Indian Archaeology A Review*, 1977-78, p-27

೩೫. ಶಂಭುಲಿಂಗಪ್ಪ, ಟಿ., ೧೯೯೩, ಪ್ರಾಗಿತಿಹಾಸಿಕ ಸ್ಥಳ-ಗವಿಮಠ, *ಇತಿಹಾಸ ದರ್ಶನ ಸಂ-೮*, ಪು-೧೦-೧೧, ಸೂರ್ಯನಾಥ ಕಾಮತ (ಸಂ), ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರ.

೩೬. ಸುಂದರ, ಅ., *ಕರ್ನಾಟಕ ಪ್ರಾಗತಿಹಾಸಿಕ ಕಾಲದ ಕಲೆ*, ಲಲಿತ ಅಕಾಡೆಮಿ ಬೆಂಗಳೂರ, ಪು-೬೭-೬೯,

೩೭. ಶಂಭುಲಿಂಗಪ್ಪ, ಟಿ., ೧೯೯೩, ಪ್ರಾಗಿತಿಹಾಸಿಕ ಸ್ಥಳ-ಗವಿಮಠ, *ಇತಿಹಾಸ ದರ್ಶನ ಸಂ-೮*, ಪು-೧೦-೧೧, ಸೂರ್ಯನಾಥ ಕಾಮತ (ಸಂ), ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರ ಮತ್ತು ಇಂ. ಆ. ರಿ. ೧೯೭೭-೭೮, ಪು-೨೪-೩೦.

೩೮. ಅದೇ,

೩೯. ಕ್ಷೇತ್ರ ಕಾರ್ಯದ ಸಮಯದಲ್ಲಿ ನಮಗೆ ಶಿವಪುರದ ಬೆಟ್ಟದ ಮೇಲ್ಗಡೆ ಇರುವ ಕೋಟೆಯ ಹಿಂಭಾಗದ ಕಲ್ಲುಸರೆ ಹಾಗೂ ಅದರ ಹತ್ತಿರದ ದೊಡ್ಡ ಗುಂಡಿನ ಮೇಲೆ ಈ ತಾಮ್ರ ಶಿಲಾಯುಗದ ವರ್ಣ ಚಿತ್ರಗಳು ನಮಗೆ ಕಂಡು ಬಂದಿವೆ.

೪೦. ಶಂಭುಲಿಂಗಪ್ಪ, ಟಿ., ೧೯೯೩, ಪ್ರಾಗಿತಿಹಾಸಿಕ ಸ್ಥಳ-ಗವಿಮಠ, ಇತಿಹಾಸ ದರ್ಶನ ಸಂ-೮, ಪು-೧೦-೧೧, ಸೂರ್ಯನಾಥ ಕಾಮತ (ಸಂ), ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರ.

೪೧. ಸುಂದರ, ಅ., ೧೯೯೪, ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪು-೫೦, ಪಿ. ಆರ್. ತಿಪ್ಪೇಸ್ವಾಮಿ (ಪ್ರ.ಸಂ), ಕರ್ನಾಟಕ ಲಲಿತ ಕಲಾ ಅಕಾಡೆಮಿ ಬೆಂಗಳೂರ.

೪೨. ಅದೇ, ಪು-೫೦-೫೧

೪೩. ಸುಂದರ, ಅ, ಮತ್ತು ಮುಧೋಳ, ಎಮ್. ಎಸ್. ೧೯೯೭, ಪೂರ್ವಭಾಪಿ ಇತಿಹಾಸ ಹಂತದ ಸಂಸ್ಕೃತಿಗಳು, ಕರ್ನಾಟಕ ಚರಿತ್ರೆ, ಸಂ-೧, ಪು-೧೬೨ (ಷೇಕಅಲಿ, ಬಿ. ಸುಂದರ, ಅ (ಸಂ), ಹಂಪಿ, ಕನ್ನಡ ವಿಶ್ವವಿದ್ಯಾಲಯ.

೪೪. ಅದೇ, ಪು-೧೭೦.

೪೫. ಅದೇ, ಪು. ೧೭೫.

೪೬. ಶಂಭುಲಿಂಗಪ್ಪ, ಟಿ. ೧೯೯೩, ಪ್ರಾಗಿತಿಹಾಸಿಕ ಸ್ಥಳ-ಗವಿಮಠ, ಇತಿಹಾಸದರ್ಶನ, ಸಂ-೮, ಪು-೧೦-೧೧, ಸೂರ್ಯನಾಥ ಕಾಮತ (ಸಂ), ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರ.

೪೭. ಸುಂದರ. ಅ., ೧೯೯೭, ಪ್ರಾಗಿತಿಹಾಸ ಕಾಲದ ನಿರ್ಮಿತಿ ಮತ್ತು ಚಿತ್ರಕಲೆ, ಕರ್ನಾಟಕ ಚರಿತ್ರೆ ಸಂಪುಟ-೧, ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು-೨೪೩, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೪೮. ಡಾ. ಸುಂದರ. ಅ. ಮತ್ತು ಮುಧೋಳ, ಎಮ್. ಎಸ್. ೧೯೯೭, ಪೂರ್ವಭಾವಿ ಇತಿಹಾಸ ಹಂತದ ಸಂಸ್ಕೃತಿಗಳು, ಕರ್ನಾಟಕ ಚರಿತ್ರೆ, ಸಂ-೧, ಪು-೧೭೮, (ಷೇಕಅಲಿ, ಬಿ. ಸುಂದರ, ಅ (ಸಂ) ಹಂಪಿ, ಕನ್ನಡ ವಿಶ್ವವಿದ್ಯಾಲಯ.

೪೯. ಅದೇ,

೫೦. ಅದೇ, ಪು-೧೭೧.

೫೧ ಡಾ. ಸುಂದರ. ಅ. ಮತ್ತು ಮುಧೋಳ, ಎಮ್. ಎಸ್. ೧೯೯೭, ಪೂರ್ವಭಾವಿ ಇತಿಹಾಸ ಹಂತದ ಸಂಸ್ಕೃತಿಗಳು, ಕರ್ನಾಟಕ ಚರಿತ್ರೆ, ಸಂ-೧, ಪು. ೧೮೦, (ಷೇಕ ಅಲಿ, ಬಿ. ಸುಂದರ, ಅ (ಸಂ), ಹಂಪಿ, ಕನ್ನಡ ವಿಶ್ವವಿದ್ಯಾಲಯ.

೫೨. ಅದೇ, ಪು-೧೮೨.

೫೩. ಗೋಪಾಲ, ಬಾ.ರ., ಮತ್ತು ಎ.ವ್ಹಿ. ನರಸಿಂಹಮೂರ್ತಿ., ೧೯೯೭, ಸಾಮ್ರಾಜ್ಯ ಪ್ರಭಾವ:ಮೌರ್ಯರು ಕರ್ನಾಟಕ ಚರಿತ್ರೆ, ಸಂ-೧, ಪು-೨೮೫-೩೦೦, (ಷೇಕ ಅಲಿ, ಬಿ. ಸುಂದರ, ಅ (ಸಂ), ಹಂಪಿ, ಕನ್ನಡ ವಿಶ್ವವಿದ್ಯಾಲಯ.

೫೪. ಪ್ರೊ. ಸುಂದರ, ಅ., ಮತ್ತು ಎಸ್. ವ್ಹಿ. ಪಾಡಿಗಾರ ಮತ್ತಿತರರು, ೧೯೯೭, ಸಾಮ್ರಾಜ್ಯ ಉದಯ : ಶಾತವಾಹನರು, ಕರ್ನಾಟಕ ಚರಿತ್ರೆ ಸಂ-೧, ಪು. ೩೦೧-೩೧೧, (ಷೇಕ ಅಲಿ, ಬಿ. ಸುಂದರ, ಅ (ಸಂ), ಹಂಪಿ, ಕನ್ನಡ ವಿಶ್ವವಿದ್ಯಾಲಯ .

೫೫. ಡಾ. ರವಿ ಕೋರಿಶೆಟ್ಟರ, ಮತ್ತು ಗಿರಿಜೆ, ಆರ್. ಎಮ್. ೧೯೯೭, ಪರಿಸರ ಮತ್ತು ಸಂಸ್ಕೃತಿ, ಕರ್ನಾಟಕ ಚರಿತ್ರೆ, ಸಂಪುಟ-೧, (ಷೇಕಅಲಿ, ಬಿ. ಮತ್ತು ಸುಂದರ, ಅ (ಸಂ), ಪು- ೮೦, ಹಂಪಿ, ಕನ್ನಡ ವಿಶ್ವವಿದ್ಯಾಲಯ.



## ಪುರವಣಿ - ೧
## (ಹಳೆ ಶಿಲಾಯುಗ)

| ಅ.ಸಂ. | ಗ್ರಾಮ | ತಾಲೂಕು | ಸ್ಥಳ | ಸಾಂಸ್ಕೃತಿಕ ಉಪಕರಣಗಳು | ಆಕರ |
|---|---|---|---|---|---|
| ೧. | ಹನುಮಸಾಗರ | ಕುಷ್ಟಗಿ | ಬೆಟ್ಟ ಪ್ರದೇಶ | ಕೈಗೊಡಲಿ ಇತರ | **ಇಂ. ಆ. ರಿ.** ೧೯೬೫-೬, ಪು-೨೨. |

## ಪುರವಣಿ - ೨
## (ಸೂಕ್ಷ್ಮ ಶಿಲಾಯುಗ)

| ಅ.ಸಂ. | ಗ್ರಾಮ | ತಾಲೂಕು | ಸ್ಥಳ | ಸಾಂಸ್ಕೃತಿಕ ಉಪಕರಣಗಳು | ಆಕರ |
|---|---|---|---|---|---|
| ೧. | ಆನೆಗುಂದಿ | ಗಂಗಾವತಿ | ತುಂಗಭದ್ರಾ ನದಿದಡ | ಗವಿಯಲ್ಲಿ ಚಕ್ಕೆ ತಗೆದ ಉಪಕರಣಗಳು ದೊರೆಯುತ್ತವೆ. | **ಇಂ. ಆ. ರಿ.** ೧೯೬೧-೨, ೧೯೬೨-೩ ಪು.೧೦೨, ಪು-೧೬ |
| ೨. | ಮಲ್ಲಾಪುರ | ಗಂಗಾವತಿ | ಬೆಟ್ಟ ಪ್ರದೇಶ | ಗವಿಯಲ್ಲಿ ಸೂಕ್ಷ್ಮ ಉಪಕರಣ ಹಾಗೂ ವರ್ಣಚಿತ್ರ ದೃಶ್ಯಗಳು | **ಆ.ಸ್ವ.** ಸಂ.೨, ಪು-೧೭೯. |

## ಪುರವಣಿ - ೩
## (ನವ ಶಿಲಾಯುಗ)

| ಅ.ಸಂ. | ಗ್ರಾಮ | ತಾಲೂಕು | ಸ್ಥಳ | ಸಾಂಸ್ಕೃತಿಕ ಉಪಕರಣಗಳು | ಆಕರ |
|---|---|---|---|---|---|
| ೧. | ಅರಳಿಹಳ್ಳಿ | ಗಂಗಾವತಿ | ಹಳ್ಳದ ಮೇಲೆ | ಹಾಳು ಮಣ್ಣು, ಮಡಿಕೆ ಚೂರು ಮತ್ತು ಕಲ್ಲಿನ ಆಯುಧಗಳು | **ಇಂ. ಆ.** ರಿ ೧೯೭೨-೩, ಪು-೬೦. |
| ೨. | ಅರನಾಳ | ಗಂಗಾವತಿ | ಬೆಟ್ಟ ಪ್ರದೇಶ | ಬೂದಿ ಮಣ್ಣು, ಮಡಿಕೆ ಚೂರುಗಳು | **ಇಂ. ಆ.** ರಿ ೧೯೭೦-೭೧, ಪು-೬೮ |
| ೩. | ಆನೆಗುಂದಿ | ಗಂಗಾವತಿ | ತುಂಗಭದ್ರಾನದಿ ದಡ,ಬೆಟ್ಟದ ಮೇಲೆ | ಬೂದಿ ಮಣ್ಣು, ಕೈಕೊಡಲಿ, ಮಡಿಕೆ ಚೂರುಗಳು | ೧೯೫೮-೫೯, ೧೯೬೧-೬೨, ೧೯೬೨-೬೩, ೧೯೭೭-೭೮, ಪುಟಗಳು ೧೦೨, ೧೬, ೨೫, ೧೦. |

| | | | | | |
|---|---|---|---|---|---|
| ೪. | ಇಂದರ್ಗಿ | ಕೊಪ್ಪಳ | ಬೆಟ್ಟದ ಮೇಲೆ ಕೆಳಗೆ | ಬೂದಿದಿಬ್ಬ, ಬೂದಿಮಣ್ಣು ಕೈಗೊಡಲಿ, ಮಡಿಕೆ ಚೂರು ಕಂಡು ಬರುವವು | ಇಂ. ಆ. ರಿ. ೧೯೭೮-೭೯, ಪುಟ-೧೧, |
| ೫. | ಕಕ್ಕರಗೋಳ | ಗಂಗಾವತಿ | ತುಂಗಾಭದ್ರಾನದಿ ಎಡದಂಡೆ ಮೆಲ್ಗಡೆ | ಬೂದಿ ಮಣ್ಣು, ಕೈಕೊಡಲಿ ಮಡಿಕೆ ಚೂರುಗಳು | ಇಂ. ಆ. ರಿ. ೧೯೬೨-೬೩, ಪು-೧೬. |
| ೬. | ಕಾತರಾಳ | ಯಲಬುರ್ಗ | ಬೆಟ್ಟ ಪ್ರದೇಶ | ಬೂದಿಮಣ್ಣು, ಮಡಿಕೆಚೂರು ಕಲ್ಲಿನ ಉಪಕರಣ | ಹೈ.ಆ.ಡಿ. ಆ್ಯರಿ ೧೯೩೫-೩೬, ಪುರವಣಿ-ಎ. |
| ೭. | ಕುಂಟೋಜಿ | ಗಂಗಾವತಿ | ತುಂಗಭದ್ರ ನದಿ ಎಡದಂಡೆ | ಕಲ್ಲಿನ ಉಪಕರಣ, ಕೆಂಪು, ಕಂದು ಬಣ್ಣದ ಮಡಿಕೆಚುರುಗಳು | ಇಂ. ಆ. ರಿ. ೧೯೭೦-೭೧, ಪು-೬೮. |
| ೮. | ಕೊಪ್ಪಳ | ಕೊಪ್ಪಳ | ಬೆಟ್ಟದ ಬಯಲು | ಮಡಿಕೆ ಚೂರು, ಕಲ್ಲಿನ ಉಪಕರಣ ಇತರೆ | ಇಂ. ಆ. ರಿ. ೧೯೬೮-೬೯, ಪು-೬೮. |
| ೯. | ಗೋನಾಳ | ಗಂಗಾವತಿ | ಬೆಟ್ಟದ ಪ್ರದೇಶ | ಬೂದಿ ಮಣ್ಣು, ಕೆಲವು, ಕಂದು ಮಡಿಕೆಚೂರುಗಳು ಕಲ್ಲಿನ ಉಪಕರಣಗಳು | ಇಂ. ಆ. ರಿ. ೧೯೭೦-೭೧, ಪು-೬೮. |
| ೧೦. | ಚಿಕ್ಕರಾಂಪುರ | ಗಂಗಾವತಿ | ಬೆಟ್ಟದ ಪ್ರದೇಶ | ಬೂದಿ ಮಣ್ಣು, ಕೆಲವು ಕಂದು ಮಡಿಕೆಚೂರುಗಳು ಕಲ್ಲಿನ ಉಪಕರಣಗಳು | ಇಂ. ಆ. ರಿ. ೧೯೭೧-೭೨, ಪು-೧೦೨. |
| ೧೧. | ಜರಕುಂಟಿ | ಯಲಬುರ್ಗ | ಬಯಲು | ಹಾಳುಮಣ್ಣು, ಮಡಿಕೆಚೂರು ಕಲ್ಲಿನ ಉಪಕರಣಗಳು | ನಿ. ಕ್ಯಾ.ಕೀ. ಸೌ. ಇಂ. ೧೯೬೩, ಪು-೬೦-೬೭. |
| ೧೨. | ತಾವರಗೇರ | ಕುಷ್ಟಗಿ | ಬೆಟ್ಟಪ್ರದೇಶ | ಬೂದಿಮಣ್ಣು, ಕಲ್ಲಿನ ಉಪಕರಣ, ಕೆಂಪು-ಕಂದು ಮಡಿಕೆಚೂರುಗಳು ಸಿಗುತ್ತವೆ. | ಇಂ. ಆ. ರಿ. ೧೯೬೫-೬೬, ಪು-೩೨. |
| ೧೩. | ತಿಪ್ಪನಹಾಳ | ಗಂಗಾವತಿ | ಹಳ್ಳದ ಮೇಲೆ | ಹಾಳು ಮಣ್ಣು, ಕೆಂಪು-ಕಂದು ಮಡಿಕೆಚೂರು, ಕಲ್ಲಿನ ಉಪಕರಣಗಳು ದೊರೆಯುತ್ತವೆ. | ಇಂ. ಆ. ರಿ. ೧೯೭೦-೭೧, ಪು-೬೮. |
| ೧೪. | ಬಂಡಿ ಹರ್ಲಾಪೂರ | ಕೊಪ್ಪಳ | ಬೆಟ್ಟಪ್ರದೇಶ | ಹಾಳು ಮಣ್ಣು, ಕೆಂಪು ಕಂದು ಮಡಿಕೆಚೂರು, ಕಲ್ಲಿನ ಉಪಕರಣ | ಆ.ಸ್ಪ. ಸಂ.೩, ಪುಟ-೧೭೦. |
| ೧೫. | ಮಲ್ಲಾಪುರ | ಗಂಗಾವತಿ | ಬೆಟ್ಟದ ಮೇಲೆ | ಹಾಳುಮಣ್ಣು, ಕೆಂಪು ಕಂದು ಮಡಿಕೆ ಚೂರು | ಇಂ. ಆ. ರಿ. ೧೯೬೫-೬೬, ಪು-೩೭. |
| ೧೬. | ಮುಸಲಾಪುರ | ಗಂಗಾವತಿ | ಬಯಲು | ಬೂದಮಣ್ಣು, ಮಡಿಕೆ ಕೆಂಪು ಕಂದು ಕಲ್ಲಿನ ಆಯುಧ | ಹೈ. ಆ. ಡಿ. ಆ್ಯ. ರಿ ೧೯೩೭-೩೮, ಪುಟ-೭. |

| | | | | | |
|---|---|---|---|---|---|
| ೧೭. | ರಾಂಪುರ | ಗಂಗಾವತಿ | ಬೆಟ್ಟಪ್ರದೇಶ | ಬೂದಿಮಣ್ಣು, ಕೆಂಪು ಕಂದು ಮಡಿಕೆ, ಕಲ್ಲಿನ ಸಲಕರಣೆ | ಇಂ. ಆ. ರಿ. ೧೯೮೧-೮೨ ಪು-೯೩. |
| ೧೮. | ರಾಮದುರ್ಗ | ಗಂಗಾವತಿ | ತುಂಗಭದ್ರ ನದಿ ಎಡದಂಡೆ ಮೇಲೆ | ಬೂದಿ ಮಣ್ಣು, ಮಡಿಕೆ ಹಾಗೂ ಕಲ್ಲಿನ ಉಪಕರಣಗಳು | ಇಂ. ಆ. ರಿ. ೧೯೭೭-೭೮, ಪು-೩೦. |
| ೧೯. | ವೆಂಕಟಾಪುರ | ಗಂಗಾವತಿ | ಬೆಟ್ಟ ಪ್ರದೇಶ | ಬೂದಿಮಣ್ಣು, ಮಡಿಕೆಚೂರು | **ಕ.ಪ್ರಾ.ಕಾ.ಕ.** ಪು-೬೭-೯. |
| ೨೦. | ಹಿರೇಬೆಣಕಲ್ | ಗಂಗಾವತಿ | ಬೆಟ್ಟಪ್ರದೇಶ | ಬೂದಿಮಣ್ಣು ಕೆಂಪು ಕಂದು ಮಡಿಕೆ ಚೂರುಗಳು ಗವಿಯಲ್ಲಿ ವರ್ಣಚಿತ್ರ | ಇಂ. ಆ. ರಿ. ೧೯೬೮-೬೯, ಪು-೬೭-೮. |
| ೨೧. | ಹಿರೇಬೆಂತಕಲ್ | ಗಂಗಾವತಿ | ಬೆಟ್ಟಪ್ರದೇಶ | ಬೂದಿಮಣ್ಣು, ದೃಶ್ಯಗಳಿವೆ ಮಡಿಕೆ ಚೂರು ಕಲ್ಲಿನ ಉಪಕರಣ | ಇಂ. ಆ. ರಿ. ೧೯೭೦-೭೧, ಪು-೬೮. |
| ೨೨. | ಹೆಬ್ಬಾಳ | ಗಂಗಾವತಿ | ಹಳ್ಳದ ಮೇಲೆ | ಬೂದಿಮಣ್ಣು, ಮಡಿಕೆಚೂರು ಕಲ್ಲಿನ ಉಪಕರಣ | ಇಂ. ಆ. ರಿ. ೧೯೭೦-೭೧, ಪು-೬೮. |
| ೨೩. | ಹೆರೂರ | ಗಂಗಾವತಿ | ಕಡಿದಾದ ದಿನ್ನೆ ಬಯಲು | ಬೂದಿಮಣ್ಣು, ಮಡಿಕೆ ಚೂರು, ಕಲ್ಲಿನ ಉಪಕರಣ | ಇಂ. ಆ. ರಿ. ೧೯೭೦-೭೧, ಪು-೬೮. |
| ೨೪. | ಹೊಸಕೇರ | ಗಂಗಾವತಿ | ಹಳ್ಳದ ಮೇಲೆ | ಬೂದಿಮಣ್ಣು ಕೆಂಪು ಕಂದು ಮಡಿಕೆ ಕಲ್ಲಿನ ಸಲಕರಣೆ | ಇಂ. ಆ. ರಿ. ೧೯೭೦-೭೧, ಪು-೬೮. |

## ಪುರವಣಿ - ೪
## (ತಾಮ್ರ ಶಿಲಾಯುಗ)

| ಅ.ಸಂ. | ಗ್ರಾಮ | ತಾಲೂಕು | ಸ್ಥಳ | ಸಾಂಸ್ಕೃತಿಕ ಉಪಕರಣಗಳು | ಆಕರ |
|---|---|---|---|---|---|
| ೧. | ಅಂಜನಹಳ್ಳಿ | ಗಂಗಾವತಿ | ಬೆಟ್ಟ ಪ್ರದೇಶ | ಬೂದಿಮಣ್ಣು, ಕೆಂಪು, ಕಂದು ಮಡಿಕೆ ಚೂರು ಗವಿ ಕಲ್ಲಾಸರೆ, ವರ್ಣ ಚಿತ್ರ ದೃಶ್ಯಗಳಿವೆ | **ಕ.ಪ್ರಾ.ಕಾ.ಕ.**ಪು-೬೭-೯. |
| ೨. | ಅರಹಾಳ | ಗಂಗಾವತಿ | ಬೆಟ್ಟಪ್ರದೇಶ | ಬೂದಿಮಣ್ಣು, ಕೆಂಪು ಕಂದು ಮಡಿಕೆ ಕಲ್ಲಿನ ಚಿಕ್ಕ ಉಪಕರಣಗಳು | **ಕ.ಭಾ.ಸಂ.**-೬, ಸಂ.೧, ಪು-೬೪-೬೫. |
| ೩. | ಅರಳಿಹಳ್ಳಿ | ಗಂಗಾವತಿ | ಹಳ್ಳದ ಮೇಲೆ | ಬೂದಿಹಾಳು ಮಣ್ಣು, ಮಡಿಕೆಚೂರು ಚಿಕ್ಕ ಕಲ್ಲಿನ ಉಪಕರಣ | **ಕ.ಭಾ.ಸಂ.**-೬, ಸಂ.೧, ಪು-೬೪-೬೫. |

| | | | | | |
|---|---|---|---|---|---|
| ೪. | ಆನೆಗುಂದಿ | ಗಂಗಾವತಿ | ತುಂಬಾಭದ್ರಾನದಿ ಎಡದಂಡೆ | ಬೂದಿಮಣ್ಣು, ಕೆಂಪು ಕಂದು ಮಡಿಕೆ ಚೂರು ಕಲ್ಲಿನ ಸಲಕರಣೆ ಗವಿ ಬಂಡೆ ಚಿತ್ರಗಳು | ಇಂ. ಆ. ರಿ. ೧೯೭೮-೭೯, ಪು-೧೦. |
| ೫. | ಇಂದರ್ಗಿ | ಕೊಪ್ಪಳ | ಬೆಟ್ಟಪ್ರದೇಶ | ಬೂದಿದಿಬ್ಬ, ಗವಿ ವರ್ಣ ಚಿತ್ರ ಕೆಂಪು ಕಂದು ಮಡಿಕೆ ಚೂರು ದೊರೆತಿವೆ | ಇಂ. ಆ. ರಿ. ೧೯೭೮-೭೯, ಪು-೧೦. |
| ೬. | ಕನಕಗಿರಿ | ಗಂಗಾವತಿ | ಹಳ್ಳದ ಮೇಲೆ | ಬೂದಿಮಣ್ಣು, ಕೆಂಪು, ಕಂದು ಮಡಿಕೆ ಚೂರುಗಳು | ಇ.ನಿ.ಕ. ಶೊ.ದೊ.ಆ.ಸೌ. ಇಂ. ೧೯೭೩, ಚಿತ್ರ ೨೯. |
| ೭. | ಕುಂಟೋಜಿ | ಗಂಗಾವತಿ | ತುಂಗಭದ್ರಾ ನದಿ ದಡ | ಬೂದಿಮಣ್ಣು, ಮಡಿಕೆಚೂರು | ಇಂ. ಆ. ರಿ. ೧೯೭೦-೭೧, ಪು-೬೮. |
| ೮. | ಕೆರೆಹಳ್ಳಿ | ಯಲಬುರ್ಗ | ಬಯಲುನಾಡು | ಹಾಳುಮಣ್ಣು ಕೆಂಪು, ಕಂದು ಮಡಿಕೆ ಚುರುಗಳು | ಹೈ. ಆ. ಡಿ. ಆ್ಯ. ರಿ. ೧೯೩೫-೩೬, ಪು-೩೨. |
| ೯. | ಕೆಸರಟ್ಟಿ | ಗಂಗಾವತಿ | ಬೆಟ್ಟದ ಬಯಲು | ಹಾಳುಮಣ್ಣು, ಕೆಂಪು, ಕಂದು ಮಡಿಕೆ ಚುರುಗಳು | ಕ. ಭಾ. ಸಂ. ೬, ಸಂ-೧, ಪುಟ-೬೪-೬೫. |
| ೧೦. | ಗೋನಾಳ | ಗಂಗಾವತಿ | ಡಿನ್ನೆ ಬಯಲು | ಹಾಳು ಮಣ್ಣು, ಕೆಂಪು, ಕಂದು ಮಡಿಕೆ ಚುರುಗಳು | ಇಂ. ಆ. ರಿ. ೧೯೭೦-೭೧, ಪುಟ-೬೮. |
| ೧೧. | ಚಿಕ್ಕರಾಂಪುರ | ಗಂಗಾವತಿ | ಬೆಟ್ಟಪ್ರದೇಶ | ಹಾಳುಮಣ್ಣು ಕೆಂಪು, ಕಂದು, ಮಡಿಕೆ ಗವಿವರ್ಣ ಚಿತ್ರಗಳ ದೃಶ್ಯಗಳಿವೆ | ಇಂ. ಆ. ರಿ. ೧೯೭೭-೭೮, ಪು-೨೫. |
| ೧೨. | ತಾವರಗೇರ | ಕುಷ್ಟಗಿ | ಬೆಟ್ಟಪ್ರದೇಶ | ಬೂದಿಮಣ್ಣು, ಕೆಂಪು,ಕಂದು ಮಡಿಕೆ ಕುಟ್ಟು ಗೀರುಚಿತ್ರ | ಇಂ. ಆ. ರಿ. ೧೯೬೫-೬೬, ಪು--೩೨-೩೩. |
| ೧೩. | ತಿಮ್ಮಾಪುರ | ಗಂಗಾವತಿ | ಬಯಲುನಾಡು | ಹಾಳು ಮಣ್ಣು ಮಡಿಕೆ ಚೂರು | ಇ.ದ. ಸಂ. ೮ ಪು-೧೦-೧೧. |
| ೧೪. | ತಿಪ್ಪನಹಾಳ | ಗಂಗಾವತಿ | ದೊಡ್ಡಹಳ್ಳ | ಹಾಳು ಮಣ್ಣು, ಕೆಂಪು, ಕಂದು, ಕಪ್ಪು ಮಡಿಕೆ ಕಲ್ಲಿನ ಆಯುಧ | ಇಂ. ಆ. ರಿ. ೧೯೭೦-೭೧, ಪು-೬೮. |
| ೧೫. | ತಿಪ್ಪನಹಾಳ | ಯಲಬುರ್ಗ | ಬಯಲು | ಹಾಳುಮಣ್ಣು, ಕಂದು, ಕೆಂಪು, ಮಡಿಕೆ ಚೂರುಗಳು | ಇಂ. ಆ. ರಿ. ೧೯೭೦-೭೧, ಪು-೮. |
| ೧೬. | ನಂದಿಹಾಳ | ಗಂಗಾವತಿ | ತುಂಗಭದ್ರನದಿ ಎಡದಂಡೆ | ಬೂದು ಮಣ್ಣು ಮಡಿಕೆ ಚೂರು ಕಲ್ಲಿನ ಸಲಕರಣೆ | ಇಂ. ಆ. ರಿ. ೧೯೬೨-೬೩, ಪು-೧೬. |
| ೧೭. | ಪನ್ನಾಪುರ | ಗಂಗಾವತಿ | ಬಯಲುನಾಡು | ಹಾಳುಮಣ್ಣು, ಕಂದು, ಕೆಂಪು ಮಡಿಕೆ ಚೂರುಗಳು | ಕ. ಭಾ. ಸಂ. ೬, ಸಂ-೧, ಪು-೬೪-೭೫. |
| | ಬೆವಿನಹಾಳ | ಕೊಪ್ಪಳ | ಬೆಟ್ಟಪ್ರದೇಶ | ಹಾಳುಮಣ್ಣು, ಮಡಿಕೆಚೂರುಗಳು | ಕ. ಭಾ. ಸಂ-೬, ಸಂ-೧, ಪು-೬೪-೭೫. |
| | ಮಲ್ಲಾಪುರ | ಗಂಗಾವತಿ | ಬೆಟ್ಟಪ್ರದೇಶ | ಬೂದಿಮಣ್ಣು, ಕಂದು, ಕೆಂಪು ಮಡಿಕೆಚೂರು ಗವಿ ವರ್ಣಚಿತ್ರದೃಶ್ಯಗಳಿವೆ | ಇಂ. ಆ. ರಿ. ೧೯೭೭-೭೮, ಪು-೩೦. |



| | | | | | |
|---|---|---|---|---|---|
| ೨೦. | ಶಿವಪುರ | ಕೊಪ್ಪಳ | ಬೆಟ್ಟಪ್ರದೇಶ | ಹಾಳುಬೂದಿ ಮಣ್ಣು, ಕಂದು ಕೆಂಪು ಮಡಿಕೆ ಚೂರು ಗವಿವರ್ಣ ಚಿತ್ರದೃಶ್ಯಗಳಿವೆ | ನಿ. ಕ್ಯಾ. ಕೀ. ಸೌ. ಇಂ. ಪು.೫೮-೫೯ ★-ಅನ್ವೇಷಣೆಯಲ್ಲಿ. |
| ೨೧. | ಸಿಂಗನಾಳ | ಗಂಗಾವತಿ | ಬಯಲುನಾಡು | ಹಾಳು ಮಣ್ಣು ಮಡಿಕೆ ಚೂರುಗಳು | ಹೈ. ಆ. ಡಿ. ಆ್ಯ. ರಿ ೧೯೩೫-೩೬, ಪು-೩೦. |
| ೨೨. | ಹಿರೇಬೆನಕಲ್ | ಗಂಗಾವತಿ | ಬೆಟ್ಟಪ್ರದೇಶ | ಗವಿವರ್ಣದೃಶ್ಯ ಬೂದು ಮಣ್ಣು, ಕಂದು ಕೆಂಪು ಮಡಿಕೆಚೂರುಗಳು | ಹೈ. ಆ. ಡಿ. ಆ್ಯ. ರಿ. ೧೯೩೫-೩೬, ಪು-೩೦. |
| ೨೩. | ಹಿರೇಜಂತಕಲ್ | ಗಂಗಾವತಿ | ಬೆಟ್ಟಪ್ರದೇಶ | ಹಾಳುಮಣ್ಣು, ಮಡಿಕೆ ಚೂರುಗಳು | ಇಂ. ಆ. ರಿ. ೧೯೭೦-೭೧, ಪು-೬೮. |
| ೨೪. | ಹೆಬ್ಬಾಳ | ಗಂಗಾವತಿ | ತುಂಗಭದ್ರನದಿ ಉಪನದಿ ಹಳ್ಳ | ಹಾಳು ಮಣ್ಣು, ಕಂದು, ಕೆಂಪು ಮಡಿಕೆ ಚೂರುಗಳು | ಇಂ. ಆ.ರಿ.೧೯೬೨-೬೩, ೧೯೭೦-೭೧ಪು-೧೬,೬೮. |
| ೨೫. | ಹೆರೂರ | ಗಂಗಾವತಿ | ಕಡಿದಾದ ದಿನ್ನೆ ಬಯಲು | ಹಾಳು ಮಣ್ಣು, ಕಂದು ಕೆಂಪು ಮಡಿಕೆ ಚೂರುಗಳು | ಇಂ. ಆ. ರಿ. ೧೯೬೭-೬೮ ಪು- |

## ಪುರವಣಿ - ೫
## (ಬೃಹತ ಶಿಲಾಯುಗ)

| ಅ.ಸಂ. | ಗ್ರಾಮ | ತಾಲೂಕು | ಸ್ಥಳ | ಸಾಂಸ್ಕೃತಿಕ ಉಪಕರಣಗಳು | ಆಕರ |
|---|---|---|---|---|---|
| ೧. | ಅರಳಿಹಳ್ಳಿ | ಗಂಗಾವತಿ | ಹಳ್ಳದ ಮೇಲೆ | ಹಾಳುಮಣ್ಣು, ಶಿಲಾಗೋರಿ, ಶಿಲಾವೃತ್ತಗಳು ಕೆಂಪು, ಕಪ್ಪು, ಮಡಿಕೆ ಚೂರುಗಳು. | ಕ. ಭಾ.ಸಂ.-೬,ಸಂ.೧, ಪು.೬೪-೭೫. |
| ೨. | ಅಗೋಲಿ | ಗಂಗಾವತಿ | ಬೆಟ್ಟ ಪ್ರದೇಶ | ಹಾಳು ಮಣ್ಣು, ಕಿಂಡಿಕೋಣೆ ಗೋರಿಗಳು ಕೆಂಪು, ಕಪ್ಪು, ಕಂದು ಮಡಿಕೆ ಚೂರುಗಳು. | ಏ.ಇಂ. ಸಂ-೪, ೧೯೪೭-೪೮, ಪು. ೩೮. |
| ೩. | ಆನೆಗುಂದಿ | ಗಂಗಾವತಿ | ಬೆಟ್ಟ ಪ್ರದೇಶ | ಬೂದು ಮಣ್ಣು, ಕೆಂಪು, ಕಪ್ಪು, ಕಂದು ಬಣ್ಣದ ಮಡಿಕೆ ಚೂರುಗಳು,ಗವಿವರ್ಣ ಚಿತ್ರ ದೃಶ್ಯಗಳು | ಇ.ದ., ಸಂ.-೮, ೧೯೯೩, ಪು. ೧೦-೧೪. |
| ೪. | ಇಂದರ್ಗಿ | ಕೊಪ್ಪಳ | ಬೆಟ್ಟ ಪ್ರದೇಶ | ಹಾಳು ಬೂದಿದಿಬ್ಬ, ಕಪ್ಪು, ಕೆಂಪು, ಮಡಿಕೆ ಚೂರು, ಗವಿಯಲ್ಲಿ ವರ್ಣಚಿತ್ರ ದೃಶ್ಯಗಳು. | ಅನ್ವೇಷಣೆಯಲ್ಲಿ, ಇಂ.ಆ.ರಿ.೧೯೭೮-೭೯,ಪು.೧೦. |
| ೫. | ಕೊಪ್ಪಳ | ಕೊಪ್ಪಳ | ಬೆಟ್ಟ ಪ್ರದೇಶ | ಕಿಂಡಿಕೋಣೆ ಗೋರಿ, ಕಪ್ಪು , ಕೆಂಪು ಮಡಿಕೆ ಚೂರುಗಳು. ಗವಿವರ್ಣ ದೃಶ್ಯಗಳು. | ಇಂ.ಆ.ರಿ. ೧೯೮೮-೮೯. ಪು. ೬೮. |
| ೬. | ಗಡ್ಡಿ | ಗಂಗಾವತಿ | ಬೆಟ್ಟ ಪ್ರದೇಶ | ಕಲ್ಲು ಬಂಡೆ ಗೋರಿಗಳು | ಕ. ಭಾ.ಸಂ-೬, ಸಂ. -೧, ಪು . ೬೪-೭೫. |

| | | | | | |
|---|---|---|---|---|---|
| ೭. | ಗುಡೂರು | ಗಂಗಾವತಿ | ಹಳ್ಳದ ಮೇಲೆ | ಕಲ್ಲು ಗೋರಿ, ಕಲ್ಲು ವೃತ್ತಗಳು | **ಕ. ಭಾ.** ಸಂ-೬, ಸಂ. -೧, ಪು. ೬೪-೭೫. |
| ೮. | ಚಿಕ್ಕರಾಂಪುರ | ಗಂಗಾವತಿ | ಬೆಟ್ಟ ಪ್ರದೇಶ | ಹಾಳು ಮಣ್ಣು ಗವಿ ವರ್ಣ ಚಿತ್ರ ದೃಶ್ಯಗಳು, ಕಲ್ಗೋರಿಗಳು. | **ಇಂ. ಆ. ರಿ.** ೧೯೭೭-೭೮. ಪು. ೨೫. |
| ೯. | ಚಿಕ್ಕ ಬೆನಕಲ್ | ಗಂಗಾವತಿ | ಬೆಟ್ಟ ಪ್ರದೇಶ | ಹಾಳುಮಣ್ಣು, ಕಿಂಡಿ ಕೋಣೆಗೋರಿಗಳು, ಕೆಂಪು, ಕಪ್ಪು ಮಡಿಕೆ ಚೂರು | **ಸಿ. ಕ್ಯಾ. ಕೀ. ಸೌ. ಇಂ.**, ಪು. ೫೮. |
| ೧೦. | ಜದುವಾಲ | ಯಲಬುರ್ಗ | ಬಯಲುನಾಡು | ಕೆಂಪು , ಕಪ್ಪು ಮಡಿಕೆ ಚೂರು ಹಾಳು ಮಣ್ಣು | **ಇಂ. ಆ. ರಿ.** ೧೯೭೦-೭೧. ಪು. ೬೮. |
| ೧೧. | ಜಂಗಮರ ಕಲ್ಗುಡಿ | ಗಂಗಾವತಿ | ಹಳ್ಳದ ಸಮೀಪ ಬಯಲು | ಹಾಳು ಮಣ್ಣು, ಶವಕುಣಿಗಳು | **ಕ. ಭಾ.** ಸಂ-೬, ಸಂ. -೧, ಪು. ೬೪-೭೫. |
| ೧೨. | ತಾವರಗೇರ | ಕುಷ್ಟಗಿ | ಬೆಟ್ಟ ಪ್ರದೇಶ | ಕಲ್ಲಗೋರಿ, ಕಲ್ಲಕುಪ್ಪೆ, ಕಪ್ಪು, ಕೆಂಪು ಮಡಿಕೆಚೂರುಗಳು | **ಅ. ಚೆ. ಟೊ. ಸೌ. ಇಂ.**, ಪು. ೬೬-೬೭. |
| ೧೩. | ತಿಪ್ಪನ ಹಾಳ | ಯಲಬುರ್ಗ | ಬಯಲುನಾಡು | ಹಾಳು ಮಣ್ಣು, ಮಡಿಕೆ ಚೂರುಗಳು | **ಕ. ಭಾ.** ಸಂ-೬, ಸಂ. -೧, ಪು. ೬೪-೭೫. |
| ೧೪. | ತಿಮ್ಮಾಪುರ | ಗಂಗಾವತಿ | ಬಯಲು ನಾಡು | ಕಲ್ಲಗೋರಿ, ಶಿಲಾವೃತ್ತಗಳು | **ಜ. ಜಿ. ಸ. ಹೈ.**, ಸಂ-೩, ಸಂ.-೧, ಪು. ೭೬-೮೨. |
| ೧೫. | ಬಂಡರಹಾಳ | ಗಂಗಾವತಿ | ಬೆಟ್ಟದ ಬಯಲು | ಕಲ್ಲಗೋರಿ, ಹಾಳುಮಣ್ಣು, ಮಡಿಕೆ ಚೂರು | **ಕ. ಭಾ.** ಸಂ-೬, ಸಂ. -೧, ಪು. ೬೪-೭೫. |
| ೧೬. | ಬಸರಿಹಾಳ | ಗಂಗಾವತಿ | ಹಳ್ಳದ ಮೇಲ್ಗಡೆ | ಕಲ್ಲಿನ ಶವಕುಣಿಗಳು | **ಕ. ಭಾ.** ಸಂ-೬, ಸಂ. -೧, ಪು. ೬೪-೭೫. |
| ೧೭. | ಬಿಳೇಬಾವಿ | ಕೊಪ್ಪಳ | ಬೆಟ್ಟ ಪ್ರದೇಶ | ವರ್ಣಚಿತ್ರ, ಕಲ್ಗೋರಿ ಅವಶೇಷ | **ಅ. ಚೆ. ಟೊ. ಸೌ. ಇಂ.** ಪು. ೧೨. |
| ೧೮. | ಮಲ್ಲಾಪೂರ | ಗಂಗಾವತಿ | ಬೆಟ್ಟದಮೇಲೆ | ಹಾಳುಮಣ್ಣು, ಕೆಂಪು, ಕಪ್ಪು ಮಡಿಕೆ ಚೂರುಗಳು | **ಅ. ಚೆ. ಟೊ. ಸೌ. ಇಂ.** ಪು. ೧೨. |
| ೧೯. | ಮರಕುಂಬಿ | ಗಂಗಾವತಿ | ಹಳ್ಳದ ಮೇಲೆ | ಕಲ್ಲಗೋರಿ ಅವಶೇಷ ಗವಿ ವರ್ಣಚಿತ್ರ ದೃಶ್ಯಗಳು | ೧೯೭೭-೭೮, ಪು. ೨೫. **ಇ. ದ.** ಸಂ.-೮, ಪು. ೧೦-೧೧. |
| ೨೦. | ಯಮ್ಮಿಗುಡ್ಡ (ಹೇಮಗುಡ್ಡ) | ಗಂಗಾವತಿ | ಬೆಟ್ಟ ಪ್ರದೇಶ | ಹಾಳು ಮಣ್ಣು, ಕೆಂಪು, ಕಪ್ಪು ಮಡಿಕೆ ಚೂರುಗಳು ಗವಿವರ್ಣ ಚಿತ್ರ ದೃಶ್ಯಗಳಿವೆ. | **ಎ. ಇಂ.**, ಸಂ. - ೪, ಪು. ೩೦೮. |
| ೨೧. | ವೆಂಕಟಗಿರಿ (ವೆಂಕಟಪುರ) | ಗಂಗಾವತಿ | ಬೆಟ್ಟ ಪ್ರದೇಶ | ಕೆಂಪು ಕಪ್ಪು ಮಡಿಕೆ ಚೂರು ಗವಿವರ್ಣ ಚಿತ್ರಗಳು | **ಕ. ಪ್ರಾ. ಕಾ. ಕ.**, ಪು. ೬೭-೬೯. |
| ೨೨. | ವೆಂಕಟಾಪುರ | ಕುಷ್ಟಗಿ | ಬೆಟ್ಟ ಪ್ರದೇಶ | ಕಲ್ಲಗೋರಿಗಳು | **ಹೈ. ಆ. ಡಿ. ಆ. ರಿ.**, ೧೯೩೬-೩೭, ಪು.೮, ೬೭-೬೯. |

| | | | | | |
|---|---|---|---|---|---|
| ೨೩. | ಶಿವಪುರ | ಕೊಪ್ಪಳ | ಬೆಟ್ಟ ಪ್ರದೇಶ | ಹಾಳು ಮಣ್ಣು ಕೆಂಪು ಕಪ್ಪು ಮಡಿಕೆ ಚೂರುಗಳು | **ನಿ.ಕ್ಯಾ.ಕೀ.ಸೌ.ಇಂ.**, ಪು. ೫೮-೫೯. |
| ೨೪. | ಸಾಣಾಪುರ | ಗಂಗಾವತಿ | ತುಂಗಭದ್ರ ನದಿ ದಂಡೆ | ಕಲ್ಲುಗುಪ್ಪೆಗಳು | **ಇಂ.ಆ. ರಿ.**, ೧೯೬೨-೬೩, ಪು.೧೬. |
| ೨೫. | ಹಿರೇ ಬೆನಕಲ್ | ಗಂಗಾವತಿ | ಬೆಟ್ಟ ಪ್ರದೇಶ | ಕಿಂಡಿಕೋಣೆ, ಬಂಡೆಗೋರಿ, ಬೂದಿಮಣ್ಣು ಕೆಂಪು, ಕಪ್ಪು, ಮಡಿಕೆ ಚೂರುಗಳು. | **ನಿ.ಕ್ಯಾ.ಕೀ.ಸೌ.ಇಂ.**, ಪು. ೫೮. |

## ಪುರವಣಿ - ೬
## (ಮೌರ್ಯ-ಶಾತವಾಹನ ಮತ್ತು ನಂತರ ಕಾಲ)

| ಅ.ಸಂ. | ಗ್ರಾಮ | ತಾಲೂಕು | ಸ್ಥಳ | ಸಾಂಸ್ಕೃತಿಕ ಉಪಕರಣಗಳು | ಆಕರ |
|---|---|---|---|---|---|
| ೧. | ಅಡೂರ | ಯಲಬುರ್ಗ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | ಅನ್ವೇಷಣೆಯಲ್ಲಿ |
| ೨. | ಇಮ್ಲಾಪುರ | ಕುಷ್ಟಗಿ | ದಿನ್ನೆಬಯಲು ಪ್ರದೇಶ | ಹಾಳುಮಣ್ಣು, ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.**, ಪು. ೧೫-೬೩. |
| ೩. | ಉಳೇನೂರ | ಗಂಗಾವತಿ | ತುಂಗಭದ್ರ ನದಿ ದಂಡೆ | ಬೂದಿಹಾಳುಮಣ್ಣು, ಕೆಂಪು ,ಕಪು, ಕಂದು ಮಡಿಕೆ ಚೂರುಗಳು | **ಇಂ.ಆ.ರಿ.**, ೧೯೬೨-೬೩, ಪು -೧೬. |
| ೪. | ಕಂದಕೂರ | ಕುಷ್ಟಗಿ | ಬಯಲು ನಾಡು | ಹಾಳುಸ್ಥಳ, ಕೆಂಪು, ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.**, ಪು. ೧೫-೬೩. |
| ೫. | ಕಕ್ಕರ ಗೋಳ | ಗಂಗಾವತಿ | ತುಂಗಭದ್ರ ನದಿ ದಂಡೆ | ಬೂದಿ ಮಣ್ಣು, ಕೆಂಪು ಮಣ್ಣು ಮಡಿಕೆ ಚೂರುಗಳು | **ಇಂ.ಆ.ರಿ.**, ೧೯೬೨-೬೩, ೧೯೭೭-೭೮, ಪು. ೧೬,೩೦. |
| ೬. | ಕೆಸರೂರ | ಕುಷ್ಟಗಿ | ಹಳ್ಳದ ಮೇಲ್ಗಡೆ | ಕೆಂಪು ಮಡಿಕೆಚೂರು, ಹಾಳು ಮಣ್ಣು | **ಕು.ಲಿ.ಪ್ರ.ಪ್ರಾ.ಅ.**, ಪು. ೧೫-೬೩. |
| ೭. | ಕೊಪ್ಪಳ | ಕೊಪ್ಪಳ | ಬೆಟ್ಟ ಪ್ರದೇಶ | ಹಾಳು ಮಣ್ಣು, ಇಟ್ಟಂಗಿ, ನಾಣ್ಯ, ಇತ್ಯಾದಿ ವಸ್ತುಗಳು ದೊರೆತಿವೆ | ಮಾಹಿತಿ, ಭಾರತೀಯ ಪುರಾತತ್ವ ಇಲಾಖೆ, ಧಾರವಾಡ, ೧೯೯೮,ಕ.ಪ್ರಾ.ಕಾ.ಕ.,ಪು.೬೭-೬೯. |
| ೮. | ಗುಮ್ಮಗೇರ | ಕುಷ್ಟಗಿ | ಬಯಲು ನಾಡು | ಹಾಳು ಮಣ್ಣು,ಕೆಂಪು ,ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.**, ಪು. ೧೫-೬೩. |
| ೯. | ಗೋತಗಿ | ಕುಷ್ಟಗಿ | ಬಯಲು ನಾಡು | ಹಾಳು ಮಣ್ಣು,ಕೆಂಪು ,ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.**, ಪು. ೧೫-೬೩. |
| ೧೦. | ಗೋನಾಳ (ಗ್ವಾನಾಳ) | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.**, ಪು. ೧೫-೬೩. |

| | | | | | |
|---|---|---|---|---|---|
| ೧೧. | ಚಿಕ್ಕ ತಿಮ್ಮನಾಳ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೧೨. | ಜಾಲಿಹಾಳ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೧೩. | ಜುಮ್ಲಾಪುರ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೧೪. | ಜಟ್ಲಾಪುರ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೧೫. | ಟಕ್ಕಳಕಿ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೧೬. | ತಾವರೆಗೆರೆ | ಕುಷ್ಟಗಿ | ಬೆಟ್ಟ ಪ್ರದೇಶ | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪುರವಣಿ ಮತ್ತು ಅನ್ವೇಷಣೆಯಲ್ಲಿ |
| ೧೭. | ತೆಗ್ಗಿನ ಹಾಳ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೧೮. | ದೊಬಿಹಾಳ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೧೯. | ನವಿಲಹಳ್ಳಿ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೨೦. | ನಾಗರಾಳ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೨೧. | ಪುರ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೨೨. | ಬೀಚಗಲ್ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೨೩. | ಬಿನಾಪುರ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೨೪. | ಮುಸ್ತಾಪುರ (ಮುಸ್ತೂರ) | ಗಂಗಾವತಿ | ತುಂಗಭದ್ರ ನದಿ ದಂಡೆ | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಇಂ.ಆ.ರಿ.,** ೧೯೬೨-೬೩, ಪು. ೧೬. |
| ೨೫. | ಮೇಗೂರ | ಕುಷ್ಟಗಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೨೬. | ಮುದೇನೂರ | ಕುಷ್ಟಗಿ | ಬಯಲುನಾಡು | ಕೆಂಪು ಮಡಿಕೆ ಚೂರುಗಳು, ಹಾಳುಮಣ್ಣು | **ಕು.ಲಿ.ಪ್ರ.ಪ್ರಾ.ಅ.,** ಪು. ೧೫-೬೩. |
| ೨೭. | ಲಿಂಗನಬಂಡಿ | ಯಲಬುರ್ಗ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕ.ಪ್ರಾ.ಕಾ.ಕ.** ಪು.೭೮. |
| ೨೮. | ಶಂಕರಗೋಳ | ಗಂಗಾವತಿ | ಬಯಲುನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಇಂ.ಆ.ರಿ.,** ೧೯೬೨-೬೩, ಪು. ೧೬. |
| ೨೯. | ಶ್ಯಾಡಲಗೇರಿ | ಕುಷ್ಟಗಿ | ಬೆಟ್ಟ ಪ್ರದೇಶ | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | ಭಗೀರಥ ಸಂಕಲ್ಪ, ಪು. |
| ೩೦. | ಸಿರಿವಾರ | ಗಂಗಾವತಿ | ಬಯಲು ನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಇಂ.ಆ.ರಿ.,** ೧೯೬೩-೬೪, ಪು. ೧೬. |

| | | | | | |
|---|---|---|---|---|---|
| ೩೧. | ಸೋಮನಾಳ | ಗಂಗಾವತಿ | ಹಳ್ಳದ ಮೇಲೆ | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕ. ಭಾ.** ಸಂ. ೬, ಸಂ.-೧, ಪು. ೬೪-೭೫. |
| ೩೨. | ಹಿರೇಮನ್ನಾಪುರ | ಕುಷ್ಟಗಿ | ಬಯಲು ನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು. ಲಿ. ಪ್ರ. ಪ್ರಾ. ಅ.,** ಪು. ೧೫-೬೩. |
| ೩೩. | ಹಿರೇ ತಮ್ಮನಾಳ | ಕುಷ್ಟಗಿ | ಬಯಲು ನಾಡು | ಹಾಳುಮಣ್ಣು, ಕೆಂಪು ಕಪ್ಪು ಮಡಿಕೆ ಚೂರುಗಳು | **ಕು. ಲಿ. ಪ್ರ. ಪ್ರಾ. ಅ.,** ಪು. ೧೫-೬೩. |
| ೩೪. | ಹಿರೇಬೆನಕಲ್ | ಗಂಗಾವತಿ | ಬೆಟ್ಟ ಪ್ರದೇಶ | ಹಾಳು ಮಣ್ಣು ಕೆಂಪು ಕಪ್ಪು ಮಡಿಕೆ ಚೂರುಗಳು | **ಅ. ಚೆ. ಟೊ. ಸೌ. ಇಂ.,** ಪು. ೭೨-೭,ಪು.೧೮೦-೧೮೬. |
| ೩೫. | ಹೆರೂರ | ಗಂಗಾವತಿ | ಹಳ್ಳದ ದಡದ ಮೇಲೆ | ಹಾಳು ಮಣ್ಣು ಕೆಂಪು ಕಪ್ಪು ಮಡಿಕೆ ಚೂರುಗಳು | **ಕ. ಭಾ.** ಸಂ.- ೬, ಸಂ.-೧, ಪು.-೬೪-೭೫. |
| ೩೬. | ಹೊಸೂರ | ಕುಷ್ಟಗಿ | ಬಯಲು ಪ್ರದೇಶ | ಹಾಳು ಮಣ್ಣು ಕೆಂಪು ಕಪ್ಪು ಮಡಿಕೆ ಚೂರುಗಳು | **ಕು. ಲಿ. ಪ್ರ. ಪ್ರಾ. ಅ.,** ಪು.-೧೫-೬೩. |
| ೩೭. | ಹೊಸಕೇರ | ಗಂಗಾವತಿ | ಹಳ್ಳದ ಮೇಲೆ | ಹಾಳು ಮಣ್ಣು ಕೆಂಪು ಕಪ್ಪು ಮಡಿಕೆ ಚೂರುಗಳು | **ಕ. ಭಾ.** ಸಂ.- ೬, ಸಂ.-೧, ಪು.-೬೪-೭೫. |





Chapter-3

## ಅಧ್ಯಾಯ - ಮೂರು

# ಕೊಪ್ಪಳ ಜಿಲ್ಲೆಯ ರಾಜಕೀಯ ಇತಿಹಾಸ

ಕೊಪ್ಪಳ ಜಿಲ್ಲೆ ಕರ್ನಾಟಕದ ಒಂದು ಭಾಗವಾಗಿರುವದರಿಂದ ಕರ್ನಾಟಕದ ರಾಜಕೀಯ ಚರಿತ್ರೆಯು ವಿಶಾಲಾರ್ಥದಲ್ಲಿ ಜಿಲ್ಲೆಗೂ ಅನ್ವಯಿಸುತ್ತದೆ. ಅದೇ ರೀತಿ ಜಿಲ್ಲೆಯ ೧೫೦೦ ವರ್ಷಗಳ ಚರಿತ್ರೆಯಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಪಲ್ಲವರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಯಾದವರು, ಹೊಯ್ಸಳರು, ನೊಳಂಬರಸು ಮನೆತನಗಳ ಸಾರ್ವಭೌಮರು, ಮಹಾಮಂಡಳೇಶ್ವರರು, ಮಹಾಸಾಮಂತ ಮನ್ನೆಯರು ರಾಜಕೀಯ ಆಡಳಿತದ ಭೂಮಿಕೆಯಲ್ಲಿ ಬಂದು ಹೋಗಿದ್ದಾರೆ.

ಪ್ರಾಚೀನ ಕುಂತಳ (ಕರ್ನಾಟಕ)ದ ಒಂದು ಭಾಗವಾದ ಕೊಪ್ಪಳ ಜಿಲ್ಲೆ ಪಂಪನ ತಿರುಳುಗನ್ನಡನಾಡಿಗೆ ಸೇರಿದ್ದಾಗಿದೆ. ಈ ಜಿಲ್ಲೆಯೂ ಮಹಾತ್ವಾಕಾಂಕ್ಷಿಗಳಿಗೆ ನಿರಾಶೆಯುಂಟು ಮಾಡದೆ ರಾಜಕೀಯದಲ್ಲಿ ಅವರು ಸಬಲರಾಗುವಂತೆ ಮಾಡಿ ತನ್ನ ಚರಿತ್ರೆಯನ್ನು ರೂಪಿಸಿಕೊಂಡಿದೆ. ಹೀಗಾಗಿ ರಾಜಕೀಯದ ಈ ಮಹತ್ಕಾರ್ಯದಲ್ಲಿ ಸಾರ್ವಭೌಮರೊಂದಿಗೆ ಜಿಲ್ಲೆಯ ಆಡಳಿತ ನಡೆಸಿಕೊಂಡು ಬಂದ ಮಹಾಮಂಡಳೇಶ್ವರರು, ಮಹಾಸಾಮಂತ ಮನ್ನೆಯರು ಹಾಗೂ ಅಧಿಕಾರಿಗಳ ಪಾತ್ರ ಸಹ ಹಿರಿದಾಗಿದೆ.

### ೧. ನಂದರು ಮತ್ತು ಮೌರ್ಯರು

ಚರಿತ್ರೆಯ ಆರಂಭ ಕಾಲದಿಂದ ಕುಂತಲ (ಕರ್ನಾಟಕ) ವನ್ನು ಆಳುತ್ತ ಬಂದ ರಾಜಮನೆತನಗಳನ್ನು ಶಾಸನಗಳು ಹೆಸರಿಸುತ್ತಿದ್ದು ಅಂತವರಲ್ಲಿ ನಂದರು ಮತ್ತು ಮೌರ್ಯರು ಮೊದಲಿಗಿರಾಗಿದ್ದಾರೆ. ಇವರು ಉತ್ತರ ಭಾರತದಿಂದಲೇ ಕರ್ನಾಟಕದ (ಕುಂತಳ) ಮೇಲೆ ಅಧಿಕಾರ ನಡೆಸಿದವರಾಗಿದ್ದಾರೆ. ನವನಂದರು ಕರ್ನಾಟಕದ ಮೇಲೆ ತಮ್ಮ ಅಧಿಕಾರ ಹೊಂದಿದ್ದ ವಿಷಯ ಕ್ರಿ.ಶ. ೧೨೦೪ ರ ಬಂದಳಿಕೆಯ ಶಾಸನದಿಂದ ತಿಳಿದು ಬರುತ್ತದೆ. ನಂದರ ವಿಷಯಕ್ಕೆ ಇದೊಂದು ಚಾರಿತ್ರಿಕ ದಾಖಲೆಯೆನಿಸಿಕೊಂಡಿದೆ.[೧] ಆದರೆ ಅವರ ಹೆಚ್ಚಿನ ವಿವರಗಳಿಗೆ ಯಾವುದೇ ದಾಖಲೆಗಳು ಲಭ್ಯವಿರುವದಿಲ್ಲ.

ಉತ್ತರ ಭಾರತದಲ್ಲಿ ನಂದರನ್ನು ಪದಚ್ಯುತಿಗೊಳಿಸಿ ಅಧಿಕಾರಕ್ಕೆ ಬಂದವರು ಮೌರ್ಯರು. ಇವರು ಕ್ರಿ.ಪೂ. ೪ ನೇ ಶತಮಾನದಲ್ಲಿ ಉತ್ತರ ಭಾರತದಲ್ಲಿ ರಾಜ್ಯ ಸ್ಥಾಪಿಸಿದರು. ಚಂದ್ರಗುಪ್ತ ಮೌರ್ಯನಿಂದ ಹುಟ್ಟು ಪಡೆದ ಮೌರ್ಯ ಮನೆತನ ಉತ್ತರ ಭಾರತವನ್ನೊಳಗೊಂಡು ದಕ್ಷಿಣ ಭಾರತಕ್ಕೂ ತನ್ನ ಸಾಮ್ರಾಜ್ಯದ ಮೇರೆಯನ್ನು ಪಸರಿಸಿತ್ತು. ಈ ಮೊದಲು ನಂದರ ಅಧೀನಕ್ಕೊಳಪಟ್ಟ ಕನ್ನಡ ಪ್ರದೇಶ ಸಹಜವಾಗಿ ಈಗ ಮೌರ್ಯರಿಗೆ ಹಸ್ತಾಂತರವಾಯಿತು. ಮೌರ್ಯರ ಶ್ರೇಷ್ಠ ದೊರೆ ಅಶೋಕನ ಕಾಲದಲ್ಲಿ ದಕ್ಷಿಣ ಭಾರತ

ಅದರಲ್ಲಿಯೂ ಕರ್ನಾಟಕ ಅವನ ಸಾಮ್ರಾಜ್ಯದ ಭಾಗವಾಗಿತ್ತು.[೨] ಅಶೋಕನ ಉತ್ತರಾಧಿಕಾರಿಗಳು ಅಸಮರ್ಥರಾಗಿದ್ದರಿಂದ ಮೌರ್ಯರ ಮಾಂಡಳಿಕರಾಗಿದ್ದವರು ಸ್ವತಂತ್ರ ಅಸ್ತಿತ್ವ ಪಡೆದುಕೊಂಡರು. ಆದರೂ ಮೌರ್ಯರ ವಂಶಸ್ಥರು ದಕ್ಷಿಣ ಭಾರತದ ಕುಂತಳ ಪ್ರದೇಶದಲ್ಲಿ ಸುಮಾರು ಕ್ರಿ.ಶ. ೭ ನೆಯ ಶತಮಾನದವರೆಗೆ ಆಡಳಿತ ನಡೆಸಿರುವದನ್ನು ಶಾಸನವೊಂದರಿಂದ ತಿಳಿದು ಬರುತ್ತದೆ.[೩] ಕೊಪ್ಪಳ ಪ್ರದೇಶ ಮೌರ್ಯರ ಆಡಳಿತಕ್ಕೆ ಒಳಪಟ್ಟಿತೆಂಬುದನ್ನು ಕೊಪ್ಪಳದಲ್ಲಿ ದೊರೆತ ಪಾಲ್ಕಿಗುಂಡು[೪] ಹಾಗೂ ಗವಿಮಠ[೫] ಶಾಸನಗಳು ಮುಖ್ಯ ಸಾಕ್ಷಿಗಳಾಗಿವೆ. ಈ ಎರಡು ಶಾಸನಗಳ ಪಾಠ - ವಿಷಯ ಒಂದೇಯಾಗಿದೆ. ಈ ಶಾಸನಗಳಲ್ಲಿ ಅಶೋಕನು ತನ್ನ ಜನರು ಆಚರಿಸಬೇಕಾದ ಧರ್ಮದ ಕುರಿತು ಈ ರೀತಿಯಾಗಿ ಹೇಳುತ್ತಾನೆ.

''ದೇವಾನಾಂಪಿಯೆ ಆಹಾ ಸಾತೆರೇಖಾಣ ಅಡತಿಯಾಣಿ ಪಸಾಣಿ ಯಮಾ ಉಪಾಸಕೆಣೋ ಚುಕೋ ಬಾಡಮ್ ಪಕಂತೆ ಸಂವಛರೇ ಸಾತಿರೇಕೆ ಯಮ್ ಮೇ ಸಂಘೆ ಉಪೇತಿ ಭಾಡಂ ಚಮೇ ಪಕಂತೇ ಸೇ ಇಮಾಯಮ್ ಮೊಲಾಯಮ್ ಜಂಬುದ್ವೀಪಸಿ ಅಮಿಸಾದೇವಾ ಸಮಾಣಾ...''

**ಶಾತವಾಹನರು**

ಮೌರ್ಯ ಸಾಮ್ರಾಜ್ಯ ಅವನತಿಯತ್ತ ನಡೆದ ಸಮಯದಲ್ಲಿ ದಖ್ಖನ ಪ್ರದೇಶದಲ್ಲಿ ಅವರ ಮಾಂಡಳಿಕರಾಗಿ ಆಳ್ವಿಕೆ ಮಾಡುತ್ತಿದ್ದ ಶಾತವಾಹನರು ಸ್ವತಂತ್ರ ರಾಜ್ಯವನ್ನು ಸ್ಥಾಪನೆ ಮಾಡಿದರು. ಶಾತವಾಹನರ ರಾಜ್ಯವು ಅಂದಿನ ಕುಂತಳ ಪ್ರದೇಶವನ್ನೊಳಗೊಂಡಿತ್ತು. ಅಂದರೆ ಇಂದಿನ ದಕ್ಷಿಣ ಕರ್ನಾಟಕದವರೆಗೆ ರಾಜ್ಯವಿಸ್ತರಣೆಯಾಗಿತ್ತು.[೬] ದಖ್ಖನ್‌ದಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದ ಶಾತವಾಹನರು ಸುಮಾರು ೪೦೦ ವರ್ಷಗಳಿಗಿಂತಲೂ ಹೆಚ್ಚು ಕಾಲದವರೆಗೆ ಆಡಳಿತ ನಡೆಸಿದರು. ಕುಂತಳ ಪ್ರದೇಶದ ಮೇಲೆ ಅಧಿಕಾರ ನಡೆಸಿದ್ದೆವೆಂದು ತಿಳಿಸುವ ಸಲುವಾಗಿ ಎಂಬಂತೆ ತಮ್ಮನ್ನು 'ಕುಂತಳ ಶಾತಕರ್ಣಿ'ಗಳೆಂದು ಶಾಸನಗಳಲ್ಲಿ ಕರೆದುಕೊಂಡಿದ್ದಾರೆ.[೭] ಆದರೆ ಇವರ ಚರಿತ್ರೆಗೆ ಸಂಬಂಧಿಸಿದ ದಾಖಲೆಗಳು ಜಿಲ್ಲೆಯ ಕೊಪ್ಪಳವನ್ನೊಳಗೊಂಡು ಅವರ ಸಂಸ್ಕೃತಿಯನ್ನು ಬಿಂಬಿಸುವ ಹಲವಾರು ವಾಸದ ನೆಲೆಗಳು ಶೋಧಗೊಂಡಿವೆ. ಇತ್ತೀಚಿಗೆ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಧಾರವಾಡ ಇವರು ಕ್ರಿ. ಶ. ೧೯೯೯-೨೦೦೦ ನೆ ಸಾಲಿನಲ್ಲಿ ಕೊಪ್ಪಳ ಸಿಂದೊಗಿಯಲ್ಲಿ ಉತ್ಖನನ ನಡೆಸಿದಾಗ ಈ ನೆಲೆಗಳಲ್ಲಿ ಮಡಿಕೆ-ಕುಡಿಕೆ ಚೂರುಗಳು, ಮಣಿ, ಶಂಖದಿಂದ ಮಾಡಿದ ಬಳೆ ಚೂರುಗಳು, ಇಟ್ಟಂಗಿಗಳು, ಸೀಸದ ನಾಣ್ಯಗಳು ದೊರಕಿವೆ.[೮]

**೩. ಬನವಾಸಿ ಕದಂಬರು**

ಶಾತವಾಹನರ ತರುವಾಯ ದಖ್ಖನದ ಮೇಲೆ ಕದಂಬರು ಆಳ್ವಿಕೆ ನಡೆಸಿದ್ದು ಚರಿತ್ರೆಯಲ್ಲಿ ಬನವಾಸಿ ಕದಂಬರೆಂದು ಪ್ರಖ್ಯಾತಿಗೇರಿದ್ದಾರೆ. ಕನ್ನಡನಾಡಿನ (ಕರ್ನಾಟಕ) ಪ್ರಥಮ ಕನ್ನಡ ರಾಜಮನೆತನವೆಂದು ಕರೆಯಿಸಿಕೊಂಡ ಕದಂಬ ಮನೆತನವನ್ನು ಮಯೂರಶರ್ಮನು ಹುಟ್ಟು ಹಾಕಿದನೆಂದು ತಾಳಗುಂದ ಶಾಸನ

ಉಲ್ಲೇಖನ ಮಾಡುತ್ತದೆ.[೯] ಈ ಮಯೂರವರ್ಮನಿಂದ ಆರಂಭಗೊಂಡ ಕದಂಬ ಮನೆತನವು ಸುಮಾರು ೨೦೦ ವರ್ಷಗಳ ಕಾಲ ರಾಜ್ಯಭಾರ ಮಾಡಿದೆ. ಜಿಲ್ಲೆಯು ಕದಂಬರ ಆಡಳಿತ ವ್ಯಾಪ್ತಿಗೊಳಪಟ್ಟಿರುವದಾದರೂ ಅದನ್ನು ಸಮರ್ಥಿಸುವ ದಾಖಲೆಗಳು ಲಭ್ಯವಾಗಿಲ್ಲ. ಆದರೆ, ಮಯೂರವರ್ಮ ಪುನರ್ ವಿಮರ್ಶಿತ ಚಂದ್ರವಳ್ಳಿ ಶಾಸನದಲ್ಲಿ[೧೦] 'ಕುಪಣದ ಚಾಮನ' ಉಲ್ಲೇಖವಿರುವದನ್ನು ಗಮನಿಸಿದರೆ ಜಿಲ್ಲೆಯು ಅವರ ಅಧಿಕಾರ ವ್ಯಾಪ್ತಿಗೊಳಪಟ್ಟಿರುವುದು ಸ್ಪಷ್ಟವಾಗುತ್ತದೆ. ಇದಲ್ಲದೆ ಜಿಲ್ಲೆಯ ಪುರ ಗ್ರಾಮದ ಕ್ರಿ.ಶ. ೧೨ ನೆಯ ಶತಮಾನದ ಶಾಸನವು ಕದಂಬ ವಂಶಕ್ಕೆ ಸೇರಿದ ವೀರ ಬಾಚಿದೇವನನ್ನು ಹೆಸರಿಸುತ್ತದೆಯಲ್ಲದೆ ಮಹಾಮಂಡಳೇಶ್ವರನೆಂದು ಕರೆಯುತ್ತದೆ.[೧೧]

## ೪. ಬಾದಾಮಿ ಚಾಲುಕ್ಯರು

ಜಿಲ್ಲೆಯ ನಿಶ್ಚಿತ ರಾಜಕೀಯ ಚರಿತ್ರೆಯು ಬಾದಾಮಿ ಚಾಲುಕ್ಯರಿಂದ ಪ್ರಾರಂಭವಾಗುತ್ತದೆ. ಬನವಾಸಿ ಕದಂಬರನ್ನು ಸೋಲಿಸಿ ವಾತಾಪಿಯಲ್ಲಿ (ಬಾದಾಮಿ) ತಮ್ಮ ರಾಜ್ಯವನ್ನು ಕಟ್ಟಿದ ಚಾಲುಕ್ಯರು ಚರಿತ್ರೆಯಲ್ಲಿ ಪ್ರಾಚೀನ ಚಾಲುಕ್ಯರೆಂದು, ಬಾದಾಮಿ ಚಾಲುಕ್ಯರೆಂದು ಪ್ರಖ್ಯಾತಿಗೇರಿದರು. ಜಯಸಿಂಹ-ರಣರಂಗದಿಂದ ಆರಂಭವಾದ ಚಾಲುಕ್ಯ ಮನೆತನ, ಒಂದನೆ ಪುಲಕೇಶಿಯಿಂದ ಸ್ವತಂತ್ರಗೊಂಡು ಎರಡನೆ ಪುಲಕೇಶಿ, ಒಂದನೆ ವಿಕ್ರಮಾದಿತ್ಯ, ಎರಡನೆ ವಿಕ್ರಮಾದಿತ್ಯರ ಕಾಲದಲ್ಲಿ ವಿಸ್ತಾರವಾಗಿ ಹರಡಿ ಸಾಮ್ರಾಜ್ಯವಾಗಿ ಮಾರ್ಪಟ್ಟಿತು. ಕ್ರಿ.ಶ. ೫೪೦ ರಿಂದ ಕ್ರಿ.ಶ. ೭೫೭ ರವರೆಗೆ ಸುಮಾರು ೨೦೦ ವರ್ಷಗಳ ಕಾಲ ರಾಜ್ಯಭಾರ ಮಾಡಿದ ಈ ಚಾಲುಕ್ಯರು ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಹಾಗೂ ಕಲೆ ವಾಸ್ತು ಶಿಲ್ಪ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ. ಚಾಲುಕ್ಯ ಚರಿತ್ರೆಗೆ ಸಂಬಂಧಿಸಿದಂತೆ ಕೊಪ್ಪಳ ಜಿಲ್ಲೆಯ ಹಲಗೇರಿ, ಇಟಗಿ ಮತ್ತು ಕುಕನೂರಗಳಲ್ಲಿ ಶಾಸನಗಳು ದೊರೆಯುತ್ತವೆ. ಹಲಗೇಲಿ ಶಾಸನವು ವಿಜಯಾದಿತ್ಯನನ್ನು ಹೆಸರಿಸಿ ಕೊಪ್ಪಳದ ಮೂರು ಜಾತಿ, ಗುತ್ತಿಯ ಮುಖ್ಯಸ್ಥ ಗರೋಜನನ್ನು ಹೆಸರಿಸಿದರೆ[೧೨] ಇಟಗಿ ಶಾಸನವು ಯುದ್ಧಮಲ್ಲ ಸತ್ಯಾಶ್ರಯನ ಕಾಲಕ್ಕೆ ಸೇರಿದೆ. ಅದು ಆತನನ್ನು ''ಸ್ವಸ್ತಿಯುದ್ಧಮಲ್ಲ ಸತ್ಯಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕ (ಪ್ರವ)ರ್ಧಮಾನ ವಿಜಯರಾಜ್ಯ (ದುಳ್ ವಾ)ಗಣ ಸೋಮಯಾಜಿ (ಗೆ) ಪಟದು ಇಟ್ಟಿಗೆಯಂ (ಬಿ)ಟ್ಟಾರ್'' ಅಂದರೆ ಸತ್ಯಾಶ್ರಯ ಬಿರುದು ಪಡೆದ ಯುದ್ಧ ಮಲ್ಲನು ನಾಗಣಸೋಮಯಾಜಿಗೆಂದು ಇಟ್ಟಗೆ ಗ್ರಾಮವನ್ನು ಪಡೆದು ದಾನ ಬಿಟ್ಟನೆಂದು ಹೇಳುತ್ತದೆ.[೧೩]

## ೪. ತಲಕಾಡಿನ ಗಂಗರು

ಕನ್ನಡ ನಾಡಿನ ರಾಜಕೀಯ ಚರಿತ್ರೆಯಲ್ಲಿ ಗಂಗವಂಶಕ್ಕೆ ವಿಶಿಷ್ಟವಾದ ಸ್ಥಾನವಿದೆ. ಗಂಗವಂಶಸ್ಥರು ಕನ್ನಡ ಚರಿತ್ರೆಗೆ ಸುಮಾರು ೭ ಶತಮಾನಗಳ ಕಾಲ ಸುಭದ್ರವಾದ ಆಡಳಿತವನ್ನು ಒದಗಿಸಿದ್ದರಷ್ಟೆಯಲ್ಲದೆ ಶಿವಮಾರ, ೨ ನೇ ಭೂತುಗ, ೨ ನೇ ಮಾರಸಿಂಹ, ೪ ನೆಯ ರಾಚಮಲ್ಲರಂತಹ ಪ್ರಮುಖ ಅರಸರನ್ನು

ಚಾವುಂಡರಾಯ ನಂತಹ ಮಂತ್ರಿಶ್ರೇಷ್ಠರನ್ನು, ಆದಿಗುಣವರ್ಮ ನಂತಹ ಕವಿಯನ್ನು ನೀಡಿ ಮುಂದಿನ ರಾಜಮನೆತಗಳಿಗೆ ಆದರ್ಶಪ್ರಾಯವಾಗಿದೆ. [೧೪]

ಗಂಗರು ಸಾರ್ವಭೌಮರಲ್ಲದಿದ್ದರೂ ಪ್ರಖ್ಯಾತ ಸಾಮಂತರ ಮಾಂಡಳಿಕರಾಗಿ ಸ್ವತಂತ್ರರಾಗಿದ್ದರು. ಗಂಗರು ಕುವಳಾಲಪುರ (ಕೋಲಾರ), ತಲಕಾಡುಗಳನ್ನು ತಮ್ಮ ರಾಜಧಾನಿಗಳನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದ್ದಾರೆ. ಗಂಗರ ಆಧೀನಕ್ಕೊಳಪಟ್ಟ ಪ್ರದೇಶವನ್ನು 'ಗಂಗವಾಡಿ- ೯೬೦೦೦' ಸಾವಿರ ವೆಂದೆ ಪ್ರಸಿದ್ಧಿ ಪಡೆದಿದೆ. ರಾಷ್ಟ್ರಕೂಟರ ಕೊನೆಯ ಅರಸರಅವಧಿಯಲ್ಲಿ ಅವರ ಜೊತೆಗೆ ಒಳ್ಳೆಯ ಸಂಬಂಧವಿಟ್ಟು ಕೊಂಡಿದ್ದರಿಂದ ತುಂಗಭದ್ರಾ ನದಿಯ ಎಡ ದೊರೆ ನಾಡಿನ ಪ್ರದೇಶದ ಮೇಲೆ ಅಧಿಕಾರ ದೊರೆಯಿತು. ಇದನ್ನು ಕುಕನೂರ, ಹೆಬ್ಬಾಳ, ಇಟಗಿ, ಕೊಪ್ಪಳಗಳಲ್ಲಿ ದೊರೆಯು ಶಾಸನಗಳು ವಿಸ್ತೃತವಾಗಿ ಉಲ್ಲೇಖಿನ ಮಾಡುವವು.

ಕ್ರಿ.ಶ. ೯೩೯ ರ ೨ ನೆಯ ಭೂತುಗನ ಶಾಸನವು ೩ ನೇ ಕೃಷ್ಣನಿಗೆ ಭೂತುಗನು ಮಾಡಿದ ಸಹಾಯವನ್ನು ಮೆಚ್ಚಿ ಆತನಿಗೆ ತುಂಗಭದ್ರಾ ನದಿಯ ಉತ್ತರ ಭಾಗದ ಎಡದೊರೆ-೨೦೦೦, ಬೆಳ್ವಲ-೩೦೦, ಮಾಸವಾಡಿ-೧೪೦, ಕುಕನೂರ-೩೦, ಕೆಳವಡಿ-೩೦೦ ಗಳಲ್ಲದೆ ಇನ್ನೂ ಅನೇಕ ಪ್ರದೇಶಗಳನ್ನು ಬಳುವಳಿಯಾಗಿ ನೀಡಿದನೆಂದು ಮಾಹಿತಿ ನೀಡುತ್ತದೆ. [೧೫] ಅಂದರೆ ಭೂತುಗ ತಕ್ಕೊಳಂ ಯುದ್ಧದಲ್ಲಿ ಚೋಳ ರಾಜಾದಿತ್ಯನನ್ನು ಕೊಂದು ೩ ನೆ ಕೃಷ್ಣನಿಗೆ ಜಯವನ್ನು ತಂದಿತ್ತ ಪ್ರಯುಕ್ತ ಹಾಗೂ ಈ ಹಿಂದೆ ಅಮೋಘವರ್ಷನ ಮಗಳಾದ ರೇವಕ ನಿರ್ಮಡಿಯನ್ನು ಭೂತುಗನು ಮದುವೆಯಾಗಿದ್ದರಿಂದ ಕೃಷ್ಣನು ಮೇಲಿನ ಪ್ರದೇಶಗಳನ್ನು ಬಳುವಳಿಯಾಗಿ ನೀಡಿದನೆಂದು ಹೇಳುವದು.

ಕುಕನೂರ ಗ್ರಾಮದ ತಾಮ್ರಪಟ ಶಾಸನವು ಗಂಗರ ಮೂಲ ಪುರುಷನಿಂದ ಮಾರಸಿಂಹನವರೆಗೆ ಅವರ ವಂಶಾವಳಿಯನ್ನು ನೀಡುತ್ತದೆ. ಅಲ್ಲದೆ ಇಮ್ಮಡಿ ಮಾರಸಿಂಹನ ಬಿರುದಾವಳಿ, ಅವನ ಶಕ್ತಿ ಸಾಮರ್ಥ್ಯದ ಕುರಿತು ವರ್ಣಿಸುವದರ ಜೊತೆಯಲ್ಲಿ ಮಾರಸಿಂಹನ ಅಕ್ಕ ಕುಂದಗಿನಾಮಿಯನ್ನು ಹೊಗಳುತ್ತಾ ಆಕೆಕಾಳಪಾರ್ಯನೆಂಬ ಬ್ರಾಹ್ಮಣನಿಗೆ ಅಡ್ಡವುರಿಗೆ ಗ್ರಾಮವನ್ನು ದಾನಮಾಡಿದಳೆಂದು ವಿವರವಾಗಿ ತಿಳಿಸುತ್ತದೆ. ಶಾಸನ ಉಲ್ಲೇಖಿಸುವ ಗಂಗರ ವಂಶಾವಳಿ ಇಂತಿದೆ. [೧೬]

ಕೊಂಗಣಿ ವರ್ಮ (ಮಾಧವ)






ಸತ್ಯ ವಾಕ್ಯ ಕೊಂಗಣಿವರ್ಮರಾಜಮಲ್ಲ-೧ ನ ನಂತರ ನೀತಿಮಾರ್ಗ-೧ ಪಟ್ಟಕ್ಕೆ ಬಂದನು. ಆದರೆ ಇವನು ಯಾರ ಮಗನೆಂಬುದನ್ನು ಹೇಳುವದಿಲ್ಲ. ಮುಂದುವರೆದು ಶಾಸನವು ರಾಜಮಲ್ಲ -೨ ಮತ್ತು ಭೂತುಗ-೧ ರ ನಂತರ ರಾಜಮಲ್ಲ -೩ ಮತ್ತು ಎರೆಯಪ್ಪರು ಸಿಂಹಸಾನವೇರಿದರು. ಇವರ ಬಳಿಕ ಸತ್ಯವಾಕ್ಯ ನರಸಿಂಹ -೧ ಇವನ ತಮ್ಮ ರಾಜಮಲ್ಲ -೪ ರಾಜಮಲ್ಲನ ನಂತರ ಭೂತುಗ ಪಟ್ಟಕ್ಕೆ ಬಂದನು.




ಈ ವಂಶಾವಳಿ ಸತ್ಯವಾಕ್ಯ ಕೊಂಗಣಿವರ್ಮ ರಾಜಮಲ್ಲನವರೆಗೆ ಯಾವುದೇ ತಡೆಯಿಲ್ಲದೆ ಒಬ್ಬರ ನಂತರ ತಂದೆ-ಮಕ್ಕಳು-ಸಹೋದರರನ್ನು ಹೆಸರಿಸುತ್ತದೆ. ಆದರೆ ಇವನ ನಂತರ ಪಟ್ಟಕ್ಕೆ ಬಂದ ನೀತಿಮಾರ್ಗ ಹಾಗೂ ರಾಜಮಲ್ಲರ ನಡುವಿನ ಸಂಬಂಧವನ್ನು ಸ್ಪಷ್ಟಪಡಿಸುವುದಿಲ್ಲ.

ಅದೇ ರೀತಿ ನೀತಿಮಾರ್ಗ ಇವನ ಮಕ್ಕಳಾದ ಸತ್ಯವಾಕ್ಯ ಕೊಂಗಣಿವರ್ಮ, ರಾಜಮಲ್ಲ-೨ ಮತ್ತು ಭೂತುಗರನ್ನು ಹೆಸರಿಸುತ್ತದೆ. ನಂತರ ಇವರಿಬ್ಬರಿಗೂ ಮತ್ತು ಇವರ ನಂತರ ಗಂಗ ಸಿಂಹಾಸನಕ್ಕೆ ಬಂದ ರಾಜಮಲ್ಲ -೩ ಮತ್ತು ಎರೆಯಪ್ಪರು ಕ್ರಮವಾಗಿ ಸಿಂಹಾಸನ ವೇರಿದರು. ಆದರೆ ರಾಜಮಲ್ಲ-೨ ಭೂತುಗ ಮತ್ತು ರಾಜಮಲ್ಲ-೩ ಹಾಗೂ ಎರೆಯಪ್ಪರ ಮಧ್ಯದ ಸಂಬಂಧವೆನಿತ್ತೆಂಬುದನ್ನು ಹೇಳುವದಿಲ್ಲ. ಅದರಂತೆಯೇ ರಾಜಮಲ್ಲ -೩ ಮತ್ತು ಎರೆಯಪ್ಪರ ನಂತರ ಬಂದ ಸತ್ಯವಾಕ್ಯ ನರಸಿಂಹ ಇವನ ತಮ್ಮ ರಾಜಮಲ್ಲ-೪ ರ ಮಧ್ಯದ ಸಂಬಂಧದ ಕುರಿತು ಸಹ ಏನನ್ನು ಹೇಳುವದಿಲ್ಲ. ರಾಜಮಲ್ಲ- ಎರೆಯಪ್ಪರ ನಂತರ ಗಂಗ ಸಿಂಹಾಸನಕ್ಕೆ ಬಂದ ನರಸಿಂಹ (ಮಾರಸಿಂಹ-೧) ರಾಜಮಲ್ಲ-೪ ರು ಕ್ರಮವಾಗಿ ಸಿಂಹಾಸನವೇರಿದರು. ಆದರೆ ಇವರ ನಂತರ ಭೂತುಗ -೨ ಪಟ್ಟಕ್ಕೆ ಬಂದನು. ೪ ನೇ ರಾಜಮಲ್ಲ ಹಾಗೂ ೨ ನೇ ಭೂತುಗರ ಮಧ್ಯದ ಸಂಬಂಧದ ಕುರಿತು ಶಾಸನ ಏನನ್ನು ಹೇಳುವದಿಲ್ಲ. ೨ ನೇ ಭೂತುಗನ ನಂತರ ಅವನ ಮಕ್ಕಳಾದ ೨ ನೇ ನೀತಿಮಾರ್ಗ ಮತ್ತು ೨ ನೇ ಮಾರಸಿಂಹರು ರಾಜ್ಯವಾಳಿದರು. ಇಲ್ಲಿಗೆ ಇವರ ಸಿಂಹಾಸನಕ್ಕೆ ವಾರಸುದಾರರಿರದೆ ಕೃಷ್ಣನ ಮಗನಾದ ಇಂದ್ರನನ್ನು ಗಂಗ ಸಿಂಹಾಸನದ ಮೇಲೆ ಕುಳ್ಳಿರಿಸಲಾಯಿತ್ತೆಂದು ಶಾಸನ ಸವಿಸ್ತಾರವಾಗಿ ಹೇಳುತ್ತದೆ. ಇವಲ್ಲದೆ ಇನ್ನೂ ಹಲವಾರು ಗಂಗರ ಕಾಲದ ನಿಶಿಧಿ ಶಾಸನಗಳು ಕೊಪ್ಪಳದಲ್ಲಿ ದೊರೆತಿದ್ದು ಅವೆಲ್ಲವು ಗಂಗರು ಹಾಗೂ ಗಂಗರಸರ ರಾಣಿಯರು ಕೊಪ್ಪಳಕ್ಕೆ ಬಂದ ವಿಷಯ ಅವರು ಮರಣ ಹೊಂದಿದ ಹಾಗೂ ಗಂಗರು ಮತ್ತು ಕೊಪ್ಪಳದ ಮಧ್ಯವಿರುವ ಮಧುರ ಬಾಂಧವ್ಯದ ಕುರಿತು ವರ್ಣಿಸುತ್ತವೆ.

## ೬. ಮಾನ್ಯಖೇಟದ ರಾಷ್ಟ್ರಕೂಟರು

ಬಾದಾಮಿ ಚಾಲುಕ್ಯರ ಮಾಂಡಳಿಕನಾಗಿದ್ದ ದಂತಿದುರ್ಗನು ಕೀರ್ತಿವರ್ಮನನ್ನು ಕ್ರಿ.ಶ. ೭೫೩ ರಲ್ಲಿ ಸೋಲಿಸಿ ಸ್ವತಂತ್ರ ರಾಷ್ಟ್ರಕೂಟ ಮನೆತನಕ್ಕೆ ಆಸ್ತಿ ಭಾರ ಹಾಕಿದನು. ಕ್ರಿ.ಶ. ೭೫೭ರಲ್ಲಿ ಒಂದನೇ ಕೃಷ್ಣನು ಕೀರ್ತಿವರ್ಮನನ್ನು ಮತ್ತೊಮ್ಮೆ ಸೋಲಿಸಿ ಚಾಲುಕ್ಯ ಮನೆತನಕ್ಕೆ ಕೊನೆ ಹಾಡಿದನಲ್ಲದೆ ಚಾಲುಕ್ಯ ಸಾಮ್ರಾಜ್ಯದ ಮೇಲೆ ಅಧಿಕಾರ ಸ್ಥಾಪಿಸಿದನು. ಸ್ವತಂತ್ರ ರಾಜ್ಯಸತ್ತೆಯನ್ನು ನಿರ್ಮಿಸಿ ವಿಶಾಲ ಸಾಮ್ರಾಜ್ಯದ ಮೇಲೆ ಅಧಿಪತಿಗಳಾದ ರಾಷ್ಟ್ರಕೂಟರು ಕನ್ನಡಿಗರ ಯಶೋದುಂಬಿಯನ್ನು ಮೊಳಗಿಸಿ ಪ್ರಾಚೀನ ಮತ್ತು ಮಧ್ಯಕಾಲಿನ ಭಾರತದ ಚರಿತ್ರೆಯಲ್ಲಿ ಚಿರಸ್ಮರಣಿಯರಾಗಿದ್ದಾರೆ. ದಂತಿದುರ್ಗನಿಂದ ಬೆಳಕಿಗೆ ಬಂದ ರಾಷ್ಟ್ರಕೂಟ ಮನೆತನ ಧ್ರುವ, ೩ ನೇ ಗೋವಿಂದ, ಮೊದಲನೆಯ ಅಮೋಘವರ್ಷ ಹಾಗೂ ೩ ನೇ ಕೃಷ್ಣರ ಕಾಲದಲ್ಲಿ ವಿಸ್ತಾರಗೊಂಡು ಬಲಿಷ್ಟ ಸಾಮ್ರಾಜ್ಯವಾಗಿ ದಖ್ಖಿನ್ ಪ್ರದೇಶದಲ್ಲಿ ಕ್ರಿ.ಶ. ೭೫೭ ರಿಂದ ೯೭೩ ರವರೆಗೆ ಅಸ್ತಿತ್ವ ಪಡೆದಿತ್ತು. ಇಂತಹ ಮಹಾನ ಸಾಮ್ರಾಜ್ಯದ ರೂವಾರಿಗಳಾದ ರಾಷ್ಟ್ರಕೂಟರ ಚರಿತ್ರೆಯನ್ನರಿಯಲು ಜಿಲ್ಲೆಯ ಕೊಪ್ಪಳ, ಇಟಗಿ, ಅರಕೇರಿ, ಸಂಕನೂರ, ಆಳವಂಡಿ, ಉಪ್ಪಿನಬೇಟಗೇರಿ ಗ್ರಾಮಗಳಲ್ಲಿ ದೊರಕುವ ವಿಪುಲ ಶಾಸನ ಸಾಮಗ್ರಿಗಳು ಪ್ರಮಾಣಭೂತ ದಾಖಲೆಗಳಾಗಿವೆ.

ಕ್ರಿ.ಶ. ೮೮೩ ರ ಕೊಪ್ಪಳ ಶಾಸನ ಇಂದ್ರನ ಆಳ್ವಿಕೆಯ ಅವಧಿಗೆ ಸೇರಿದ್ದು ಅದು ಕುಪಣದ ದಂಡನಾಯಕ ಮಾಮರಸನು ಕುಪಣಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಸಾಮಂತ ದಡಿಯಮರಸ ಕಟ್ಟಿಸಿದ ಬಸದಿಯೊಂದಕ್ಕೆ ದಾನವನ್ನು ಕೊಟ್ಟ ಕುರಿತು ಹೇಳುವುದು [೧೭] ಈ ಶಾಸನ ಹೆಸರಿಸುವ ಇಂದ್ರ ಬಹುಶಃ ಕೊಪ್ಪಳ ಪ್ರದೇಶದ ಮೇಲೆ ಯುವರಾಜನಾಗಿ ನಿಯುಕ್ತನಾಗಿರಬೇಕು. ಏಕೆಂದರೆ ಶಾಸನದ ಸಮಯಕ್ಕೆ ಮಾನ್ಯಖೇಟದಲ್ಲಿ ೨ ನೇ ಕೃಷ್ಣನು ಅರಸನಾಗಿ ರಾಜ್ಯವಾಳುತ್ತಿದ್ದನು. ಇಲ್ಲಿಯೇ ದೊರೆತ ಅಮೋಘ ವರ್ಷನ ಕಾಲದ ವೀರಗಲ್ಲು ಶಾಸನ ವೀರನೊಬ್ಬನ ಮರಣವನ್ನು ದಾಖಲಿಸಿದೆ. [೧೮]

೩ ನೇ ಕೃಷ್ಣನ ಕ್ರಿ.ಶ. ೯೩೯ ರ ಇಟಗಿಯ ಶಾಸನವು ತಲಕಾಡಿನ ಗಂಗರ ಮತ್ತು ರಾಷ್ಟ್ರಕೂಟರ ಮಧ್ಯವಿರುವ ಉತ್ತಮ ಬಾಂಧವ್ಯದ ವಿಷಯವನ್ನು ಹೇಳುವದು. ಗಂಗ ಭೂತುಗ ಪೆರ್ಮಾಡಿಯು ಬೆಳ್ವಲ-೩೦೦, ಮಾಸವಾಡಿ- ೧೪೦, ಕುಕನೂರ-೩೦, ಕೆಳವಾಡಿ- ೩೦೦ ಮತ್ತು ಎಡದೊರೆ-೨೦೦೦ ಪ್ರದೇಶಗಳನ್ನು ಕೃಷ್ಣನಿಂದ ಬಳುವಳಿಯಾಗಿ ಪಡೆದು ಅವನ ಸಾಮಂತನಾಗಿ ಆಡಳಿತ ನಡೆಸುತ್ತಿದ್ದನು. ಅದೇ ಸಮಯದಲ್ಲಿ ಭೂತುಗನ ಕೈಕೆಳಗೆ ಭೂತಯ್ಯ ಎಂಬುವವನು ಎಡದೊರೆ-೨೦೦೦ ದ ಮೇಲೆ ಅಧೀನ ಅಧಿಕಾರಿಯಾಗಿ ಅಧಿಕಾರ ನಡೆಸುತ್ತಿದ್ದನೆಂದು ಶಾಸನ ಉಲ್ಲೇಖನ ಮಾಡುತ್ತದೆ. [೧೯] ಅವನ ಮತ್ತೊಂದು ಶಾಸನ ಜಿಲ್ಲೆಯ ಹೊಸಕೇರಿಯಲ್ಲಿದೆ. ಇದು ತ್ರುಟಿತವಾಗಿದ್ದು ಕೃಷ್ಣನನ್ನು ಮಾತ್ರ ಹೆಸರಿಸುತ್ತದೆ. [೨೦]

ಮುಧೋಳದ ಕ್ರಿ.ಶ. ೮೯೭ ರ ಶಾಸನವು ಎರಡನೆ ಕೃಷ್ಣನ ಅವಧಿಗೆ ಸೇರಿದ್ದು ಅದು ''ಶ್ರೀಶುಭತುಂಗದೇವರ ದಯೆಯಿಂ ಮಹಾ ಶ್ರೀಮನ್ತಾವ್ಯೆಳ್ವೊಲ ಮುನ್ನೂಱು ಮಂ ಯಥಾ ಸುಖಮನಾಳುತ್ತಿರೆ'' ಎಂದು ಹೇಳುತ್ತದೆ. [೨೧] ಅಂದರೇ ೨ ನೇ ಕೃಷ್ಣನ ದಯೆಯಿಂದ ಮಹಾಶ್ರೀಮಂತನು ಬೆಳ್ವಲ -೩೦೦ ನ್ನು ಯಥಾವತ್ತು ಸುಖದಿಂದ ಆಳುತ್ತಿದ್ದನೆಂದು ಹೇಳುವದು. ಈ ವೇಳೆಯಲ್ಲಿ ಮುಧುವೊಳದ ಮೇಲೆ ಸಂತಯ ಎಂಬುವ ಮುತ್ತಿಗೆ ಹಾಕಿದ ಊರಳಿವಿನ ಸಂದರ್ಭದಲ್ಲಿ 'ಸಮ್ಮಗಾರಚಂದ' ಹೋರಾಡಿ ಸತ್ತನೆಂದು ಹೇಳುವದು.

ಮೂರನೇ ಕೃಷ್ಣನ ಕ್ರಿ.ಶ. ೯೬೪ ರ ಉಪ್ಪಿನಬೇಟಗೇರಿ ಶಾಸನವು [೨೨] ಕೃಷ್ಣನು (ಕನ್ನರ) ರಾಜ್ಯವಾಳುತ್ತಿದ್ದಾಗ ''ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಮಹಾಸಾಮನ್ತಾಧಿಪತಿ ಜಯಧೀರ ಭುವನೈಕರಾಮನಭಿಮಾನಧವಳಂ ರಟ್ಟರ (ಮೇರು) ರಾಜಭೂರಿಸ್ರವ ವಿದ್ವಿಷ್ಟನಾರಾಯಣ ಸತ್ಯಾರ್ಣ್ಣವಂ ಧರ್ಮ್ಮ ರತ್ನಾಕರಂ ಶ್ರೀಮತ್ ಶಂಕರಗಣ್ಡರಸಂ'' ಎಂದು ಹೊಗಳುತ್ತಾ ಅವನು ಕೊಪ್ಪಳದ ಜಯಧೀರ ಜಿನಾಲಯಕ್ಕೆ ಬಿಟ್ಟದತ್ತಿ ಕುರಿತು ಉಲ್ಲೇಖಿಸುತ್ತದೆ. ಮುಂದುವರೆದು ಶಾಸನವು ಶಂಕರಗಂಡ ಮತ್ತು ಚಾಳುಕ್ಯ ವಂಶದ ಅರಸರ ಎರಡು ವಂಶಾವಳಿಗಳನ್ನು ನೀಡುತ್ತದೆ.

**ಶಂಕರ ಗಂಡನ ವಂಶಾವಳಿ**




**ಚಾಳುಕ್ಯ ವಂಶ**




ರಾಷ್ಟ್ರಕೂಟರ ಕಾಲಕ್ಕೆ ಸೇರಿದ ಕ್ರಿ.ಶ. ೯೬೮ ರ ಕುಕನೂರ ತಾಮ್ರ ಪಟ ಶಾಸನವು ಗಂಗ ಮಾರಸಿಂಹನು ರಾಷ್ಟ್ರಕೂಟ ಸಿಂಹಾಸನಕ್ಕೆ ಕೃಷ್ಣನ ಮಗ ನಾಲ್ಕನೇ ಇಂದ್ರನನ್ನು ಕುಳ್ಳಿರಿಸಿದನೆಂದು ಹೇಳುತ್ತ ಇಡೀ ಗಂಗವಂಶಾವಳಿಯನ್ನು ನೀಡುತ್ತದೆ.[೨೩] ಇಟಗಿಯ ಕ್ರಿ.ಶ. ೯೬೮ ರ ಶಾಸನವು ರಾಷ್ಟ್ರಕೂಟ ಮನೆತನದ ಕೊನೆಯ ಅರಸ ಕೊಟ್ಟಿಗನ ಕಾಲದ್ದಾಗಿದೆ.[೨೪] ಈ ಮೇಲಿನ ಕುಕನೂರ ಶಾಸನ ಕ್ರಿ.ಶ. ೯೬೮ ಕಾಲಮಾನದ ಜೊತೆಗೆ ಗಂಗ ಮಾರಸಿಂಹನು ನಾಲ್ಕನೇ ಇಂದ್ರನನ್ನು ರಾಷ್ಟ್ರಕೂಟ ಸಿಂಹಾಸನಕ್ಕೆ ಕುಳ್ಳಿರಿಸಿದನೆಂದು ಹೇಳಿದರೆ, ಕುಕನೂರ ಶಾಸನದ ಕಾಲಮಾನವನ್ನೆ ಹೊಂದಿದ ಕ್ರಿ.ಶ. ೯೬೮ ರ ಇಟಗಿ ಶಾಸನವು ಕೊಟ್ಟಿಗದೇವನನ್ನು

ಹೆಸರಿಸುತ್ತದೆಯಲ್ಲದೆ ಗಂಗ ಮಾರಸಿಂಹನನ್ನು ವಿಶೇಷ ಬಿರುದುಗಳಿಂದ ಹೊಗಳುತ್ತದೆ. ಒಂದೇ ವರ್ಷಾವಧಿಯಲ್ಲಿ ಇಬ್ಬರ ಸಿಂಹಾಸನದ ವಿಷಯವನ್ನು ಹೇಳುವ ಈ ಎರಡು ಶಾಸನಗಳು ರಾಷ್ಟ್ರಕೂಟ ರಾಜಕೀಯ ಚರಿತ್ರೆಯ ಮಹತ್ವದ ದಾಖಲೆಗಳೆನಿಸಿಕೊಳ್ಳುತ್ತವಲ್ಲದೆ ರಾಷ್ಟ್ರಕೂಟರ ಕೊನೆಯಗಾಲದಲ್ಲಿ ಗಂಗ ಮಾರಸಿಂಹನ ರಾಜಕೀಯ ಚತುರತೆ ಮತ್ತು ರಾಷ್ಟ್ರಕೂಟ ಸಿಂಹಾಸನಕ್ಕಾಗಿ ಅಂತಕಲಹ ನಡೆದ ಸೂಕ್ಷ್ಮ ವಿಷಯಗಳನ್ನು ಹೊರಗೆಡಹುತ್ತವೆ.

## ೭. ಕಲ್ಯಾಣ ಚಾಲುಕ್ಯರು

ರಾಷ್ಟ್ರಕೂಟರ ಉತ್ತರಾಧಿಕಾರಿಗಳಾಗಿ ಬಂದ ಕಲ್ಯಾಣದ ಚಾಲುಕ್ಯರ ವಿಸ್ತೃತ ಆಳ್ವಿಕೆಯಿಂದ ಜಿಲ್ಲೆಯ ಚರಿತ್ರೆಯು ಹೆಚ್ಚು ಸ್ಪಷ್ಟವಾಗಿ ಕಾಣುತ್ತದೆ. ಎರಡನೇ ತೈಲಪ ಚಾಲುಕ್ಯ ರಾಜ್ಯಸತ್ತೆಯನ್ನು ಪುನಃ ಸ್ಥಾಪಿಸುವಲ್ಲಿ ತರ್ದವಾಡಿ ನಾಡಿನ ಪಾತ್ರ [೨೫] ಎಷ್ಟೊಂದು ಹಿರಿದಾಗಿತ್ತೊ, ಅದರಷ್ಟೆ ಹಿರಿಯ ಪಾತ್ರ ಕೊಪ್ಪಳ ಜಿಲ್ಲೆಯದು ಆಗಿತ್ತು. ರಾಷ್ಟ್ರಕೂಟರನ್ನು ಸೋಲಿಸಿ ಚಾಲುಕ್ಯ ಸಿಂಹಾಸನಕ್ಕೆ ಬಂದ ತೈಲಪನು ತನ್ನ ಆರಂಭದ ವರ್ಷದಲ್ಲಿ ತನ್ನ ವಿಜಯದ ಸ್ಮರಣಾರ್ಥವಾಗಿ ಜಿಲ್ಲೆಯ ಮಾದಿನೂರಲ್ಲಿ (ಕೊಪ್ಪಳ -ತಾ) ಕ್ರಿ.ಶ. ೯೭೩ ರ ಸುಮಾರಿಗೆ 'ಬ್ರಹ್ಮಾಂಡ ಕೃತು' ಎಂಬ ಯಾಗವನ್ನು ಮಾಡಿದನೆಂದು ಶಾಸನ ಹೇಳುವದರಿಂದ [೨೬] ಅವನು ಸಾಮ್ರಾಜ್ಯ ನಿರ್ಮಾಣ ಮಾಡುವಲ್ಲಿ ಜಿಲ್ಲೆಯು ವಹಿಸಿದ ಪಾತ್ರದ ಅರಿವು ನಮಗಾಗುತ್ತದೆ. ಶಾಸನವು ತೈಲಪನನ್ನು ''ಚಾಳುಕ್ಯಾಭರಣ, ಪಾಂಚಾಲಮದೇವಭ ಪಂಚಾನನಂ ರಟ್ಟಘರಟ್ಟ ನೂರ್ಮ್ಮಡಿತೇಜ ಆಹವಮಲ್ಲ'' ನೆಂದು ಕರೆಯುವದು.

ಎರಡನೆಯ ತೈಲಪ (ನೂರ್ಮ್ಮಡಿ ತೈಲ) ಮೂಲತಃ ಬಾದಾಮಿ ಚಾಲುಕ್ಯರ ಮನೆತನಕ್ಕೆ ಸೇರಿದವನೆಂಬುದನ್ನು ದಾಖಲೆಗಳು ಸ್ಪಷ್ಟಪಡಿಸುತ್ತವೆ. ಈ ಎರಡು ಮನೆತನಗಳ ಮಧ್ಯದ ಸಂಬಂಧದ ವಂಶವೃಕ್ಷವನ್ನು ಶಾಸನಗಳು ನೀಡಿದಂತೆ ರನ್ನ ತನ್ನ 'ಗದಾಯುದ್ಧ'ದಲ್ಲಿ ಬಾದಾಮಿ ಚಾಲುಕ್ಯ ವಿಜಯಾದಿತ್ಯನಿಂದ ಎರಡನೆಯ ತೈಲಪನವರೆಗಿನ ವಂಶಾವಳಿಯನ್ನು ನೀಡುತ್ತದೆ. 'ವಿಕ್ರಮಾಂಕದೇವಚರಿತ್ರೆ' ಬರೆದ ಕಾಶ್ಮೀರ ಪಂಡಿತ ಕವಿ ಬಿಲ್ಹಣನು ಸಹ ಎರಡು ಮನೆತನದ ಮಧ್ಯದ ವಂಶಾನುಕ್ರಮಣಿಕೆಯನ್ನು ನೀಡುತ್ತಾನೆ. [೨೭] ಇವರು ಸಹ ಬಾದಾಮಿ ಚಾಲುಕ್ಯರು ಧರಿಸಿದ 'ವರಾಹ ಲಾಂಛನ' ವನ್ನೆ ತಮ್ಮ ಮನೆತನದ ಚಿನ್ಹೆಯನ್ನಾಗಿ ಮುಂದುವರೆಸಿಕೊಂಡು ಬಂದಿರುವದು ಗಮನೀಯವಾಗಿದೆ.

ಕ್ರಿ.ಶ. ೯೭೩ ರಲ್ಲಿ ಕಲ್ಯಾಣದ ಸಿಂಹಾಸನವೇರಿದ ಎರಡನೆಯ ತೈಲಪ ನಾಲ್ಕನೆಯ ವಿಕ್ರಮಾದಿತ್ಯನ ಮಗನಾಗಿದ್ದು ರಾಷ್ಟ್ರಕೂಟ ೩ ನೇ ಕೃಷ್ಣನ ಸಾಮಂತನಾಗಿ ಮೇಲ್ಪಾಟಿ (ವಿಜಾಪುರ ಜಿಲ್ಲೆ) ಪ್ರದೇಶದಲ್ಲಿ ಕ್ರಿ.ಶ. ೯೫೭ ರಿಂದ ಕ್ರಿ.ಶ. ೯೭೩ ರವರೆಗೆ ಸಾಮಂತನಾಗಿ ಆಡಳಿತ ನಡೆಸಿದ್ದನು. [೨೮] ಕ್ರಿ.ಶ. ೯೭೩ ರಲ್ಲಿ ರಾಷ್ಟ್ರಕೂಟ ಕರ್ಕರಾಜನನ್ನು ಯುದ್ಧದಲ್ಲಿ ಸೋಲಿಸಿ ಸಾಮಂತತನದಿಂದ ಸ್ವತಂತ್ರನಾಗಿ ಕಲ್ಯಾಣದಲ್ಲಿ ರಾಜ್ಯ ಸ್ಥಾಪಿಸಿ

ಸುಮಾರು ೨೪ ವರ್ಷಗಳ ಕಾಲ ರಾಜ್ಯಭಾರ ಮಾಡಿದನು. ಸಿಂಹಾಸನಕ್ಕೆ ಬಂದ ತಕ್ಷಣ ಸಾಮ್ರಾಜ್ಯ ವಿಸ್ತರಣೆಗೆ ತೊಡಗಿ ಅನೇಕ ಯುದ್ಧಗಳನ್ನು ನಡೆಸಿದನು. ಈತನ ಶಕ್ತಿ ಸಾಮರ್ಥ್ಯಕ್ಕೆ ಹೆದರಿದ ಹಿಂದಿನ ರಾಷ್ಟ್ರಕೂಟರ ಸಾಮಂತರಾಗಿದ್ದ ಸೌಧತ್ತಿ ರಟ್ಟರು, ಶಿಲಾಹಾರರು, ಸೇವುಣರು, ಸಿಂಧರಲ್ಲದೆ ಇನ್ನೂ ಅನೇಕ ಚಿಕ್ಕ ಪುಟ್ಟ ಪ್ರಾಂತೀಯ ಸಾಮಂತರೆಲ್ಲ ತೈಲಪನ ಸಾರ್ವಭೌಮತ್ವವನ್ನು ಒಪ್ಪಿಕೊಂಡರು. ಶಾಸನಗಳಲ್ಲಿ ನೂರ್ಮ್ಮಡಿ ತೈಲ, ಅಹವಮಲ್ಲದೇವ, ತೈಲಪನೆಂದು ಕರೆಯಿಸಿಕೊಂಡಿದ್ದು ತೈಲಪನ ಶಾಸನಗಳು ಜಿಲ್ಲೆಯ ಮಾದಿನೂರ್[೨೯] ಕೊಪ್ಪಳ,[೩೦] ಆನೆಗುಂದಿ[೩೧] ಮತ್ತು ತಳಕಲ್ಲಗಳಲ್ಲಿ[೩೨] ಕಂಡು ಬರುತ್ತವೆ. ತೈಲಪ ಸಿಂಹಾಸನಕ್ಕೆ ಬಂದ ನಂತರ ಅದರ ಸ್ಮರಣಾರ್ಥವಾಗಿ ಮಾದಿನೂರಿನಲ್ಲಿ 'ಬ್ರಹ್ಮಾಂಡ ಕೃತು' ಯಾಗ (ಯಜ್ಞ) ಮಾಡಿದ ವಿಷಯವನ್ನು ಗ್ರಾಮದ ಶಾಸನ ಹೇಳಿದರೆ ಕೊಪ್ಪಳದ ಶಾಸನ ಗಂಗವಂಶದ ವಾಸವನ ಮಗಳಾದ ರಂಬಲದೇವಿಯನ್ನು ಚಾಲುಕ್ಯರ ಅರಸ ಬಕ್ಕಲದೇವನಿಗೆ ಕೊಟ್ಟು ಮದುವೆ ಮಾಡಿರುವದನ್ನು ಹೇಳುತ್ತದೆ. ಆದರೆ ಬಕ್ಕಲದೇವ ಮತ್ತು ತೈಲನ ಮಧ್ಯದ ಸಂಬಂಧದ ಕುರಿತು ಹೇಳುವದಿಲ್ಲ.

ಆನೆಗುಂದಿಯ ಶಾಸನವು ಕ್ರಿ.ಶ. ೯೮೮ ರಲ್ಲಿ ಅಹವಮಲ್ಲದೇವನು (ತೈಲಪ) ತುಂಗಭದ್ರೆಯ ದಕ್ಷಿಣ ತಡಿಯ ಬಿಡಿನಲ್ಲಿದ್ದುದನ್ನು ಹೇಳುತ್ತದೆ. ತಳಕಲ್ಲಿನಲ್ಲಿರುವ ಇವನ ಮತ್ತೊಂದು ಶಾಸನವು ತೈಲನ ಸಾಮಂತನಾಗಿ ಸಾಮಂತ ಸೋಬನರಸನು ಎರಡಾರುನೂರು (ಬೆಳ್ವಲ-ಪುಲಿಗೇರಿ) ಮತ್ತು ಬನವಾಸಿ-೧೨೦೦೦ ಪ್ರದೇಶಗ ಮೇಲೆ ಆಡಳಿತಗಾರನಾಗಿ ಆಳ್ವಿಕೆ ಮಾಡುತ್ತಿದ್ದನೆಂದು ಹಾಗೂ ಸೋಬನರಸನ ಮಾಂಡಳಿಕನಾಗಿ ಸಾವಿಯಯಣ್ಣನು ಕುಕನೂರ -೩೦ ರ ಮೇಲೆ ಅಧಿಕಾರ ನಡೆಸುತ್ತಿರುವ ವಿಷಯವನ್ನು ಹೇಳುವದು.

ಎರಡನೆ ತೈಲಪನ ಮಗ ಸತ್ಯಾಶ್ರಯ ಇರಿವಬೆಡಂಗನು ತಂದೆಯ ನಂತರ ಚಾಲುಕ್ಯ ಸಿಂಹಾಸನಕ್ಕೆ ಬಂದನು. ತಂದೆಯ ಜೊತೆಯಲ್ಲಿ ಅನೇಕ ಯುದ್ಧಗಳಲ್ಲಿ ಭಾಗವಹಿಸಿ ಸಾಕಷ್ಟು ಅನುಭವ ಪಡೆದಿದ್ದನು. ಸಿಂಹಾಸನಕ್ಕೆ ಬಂದ ನಂತರವು ನಿರಂತರ ಯುದ್ಧಗಳಲ್ಲಿ ತೊಡಗಿ ರಾಜ್ಯವನ್ನು ರಕ್ಷಿಸಿದನು. ಅಕಲಂಕಚರಿತ, ಇರಿವಬೆಡಂಗ, ಸತ್ತಿ, ಸತ್ತಿಮ[೩೩] ಅಹವಮಲ್ಲ, ಸಾಹಸಭೀಮ, ಅಕಾಲವರ್ಷವೆಂಬ ಹಲವಾರು ಬಿರುದುಗಳನ್ನು ಪಡೆದ[೩೪] ಸತ್ಯಾಶ್ರಯನ ಶಾಸನಗಳು ಜಿಲ್ಲೆಯ ಹಿರೇಮನ್ನಾಪುರ[೩೫] ಬಳಗೇರಿ[೩೬] ಕಲ್ಲೂರ[೩೭] ಮತ್ತು ಕುಕನೂರಗಳಲ್ಲಿ[೩೮] ಕಂಡು ಬರುತ್ತವೆ. ಹಿರೇಮನ್ನಾಪುರದ ಶಾಸನವು ಚಾರಿತ್ರಿಕ ಅಂಶವನ್ನು ಹೊಂದಿದೆ. ಸತ್ಯಾಶ್ರಯನಿಗೆ ಇಲ್ಲಿಯವರೆಗೆ ಮಕ್ಕಳೆ ಇರಲಿಲ್ಲವೆಂದು ಇತಿಹಾಸಕಾರರು ನಂಬಿದ್ದಾರೆ ಮತ್ತು ಹಾಗೆಯೆ ಬರೆದಿದ್ದಾರೆ. ಆದರೆ ಈ ಶಾಸನವು ಚಿಕ್ಕ ವಂಶಾವಳಿಯನ್ನು ನೀಡುತ್ತಾ ''ತೈಲನರೇನ್ದ್ರಂ॥ ಆತನಗ್ರಸುತಂ ಸತ್ಯಾಶ್ರಯವಲ್ಲಭ ಸತ್ಯಾಶ್ರಯನ ಸುತ ವಿಕ್ರಮಾದಿತ್ಯದೇವ.''

ತೈಲಪನರೇಂದ್ರ
↓
ಸತ್ಯಾಶ್ರಯ
↓
ವಿಕ್ರಮಾದಿತ್ಯದೇವ

ಎಂದು ಹೆಸರಿಸಿ ವಿಕ್ರಮಾದಿತ್ಯ ಸತ್ಯಾಶ್ರಯನ ಸುತ (ಮಗ) ನೆಂದು ಹೇಳಿ ಜಯಸಿಂಹನು ಯಾರ ಮಗನೆಂದು ಹೇಳದೆ ಅವನು ರಾಜ್ಯವಾಳುತ್ತಿದ್ದನೆಂದು ಹೇಳುತ್ತದೆ. ಇದರಲ್ಲಿ ಜಯಸಿಂಹನ ವಿಷಯ ಮುಖ್ಯವಲ್ಲ. ಸತ್ಯಾಶ್ರಯನಿಗೆ ಮಕ್ಕಳಿರಲಿಲ್ಲವೆಂಬ, ಸತ್ಯಾಶ್ರಯನ ಸಹೋದರ ದಶವರ್ಮನ ಮಗ ವಿಕ್ರಮಾದಿತ್ಯ ಸತ್ಯಾಶ್ರಯನ ನಂತರ ಸಿಂಹಾಸನಕ್ಕೆ ಬಂದಿದ್ದ ಅಸತ್ಯವನ್ನು ಈ ಶಾಸನ ತೊಡೆದು ಹಾಕಿ ಸತ್ಯಾಶ್ರನಿಗೆ ವಿಕ್ರಮ ಹೆಸರಿನ ಮಗನಿದ್ದನೆಂಬ ಸತ್ಯವನ್ನು ಮೊದಲ ಬಾರಿಗೆ ಹೊರಗೆಡುಹಿದೆ.

ಕ್ರಿ.ಶ. ೯೯೭ ರ ಹಿರೇಮನ್ನಾಪುರ ಶಾಸನವು ಸತ್ಯಾಶ್ರಯನಿಗೆ ವಿಕ್ರಮ ಎಂಬ ಮಗ ಇದ್ದನೆಂದು ಸಾಧಿಸಿದರೆ, ಕುಕನೂರದ ಕ್ರಿ.ಶ. ೧೦೦೫ ರ ಈ ಶಾಸನವು ಸತ್ಯಾಶ್ರಯನಿಗೆ ವಿಕ್ರಮನ ಜೊತೆಗೆ ಅಯ್ಯಣ ಹಾಗೂ ಜಯಸಿಂಹರೆಂಬ ಮಕ್ಕಳಿದ್ದರೆಂದು ಹೇಳುತ್ತ ಮತ್ತಷ್ಟು ಕುತೂಹಲ ಕೆರಳಿಸಿ ಚರ್ಚೆಗೆ ಗ್ರಾಸ್ ಒದಗಿಸಿಕೊಟ್ಟಿದೆ. ಹಾಗೂ ಸೋಮೇಶ್ವರನ ಮಗ ಜಗದೇಕಮಲ್ಲನೆಂದು ಸಹ ಹೇಳುತ್ತಿದ್ದು ಅವನು ಕುಂತಳ ವಿಷಯದ ಮೇಲೆ ರಾಜ್ಯಭಾರ ಮಾಡಿದ್ದನ್ನು ಹೇಳುವುದು. ಶಾಸನ ಅವನು ಸಾಮಂತನಾಗಿದ್ದನೆಂಬುದನ್ನು ತಿಳಿಸುವದಿಲ್ಲ. ಶಾಸನ ಇರಿವಬೆಡಂಗನ ಕಾಲದ ಕ್ರಿ.ಶ. ೧೦೦೫ ರ ಕಾಲಮಾನವನ್ನು ಹೇಳುತ್ತಿದ್ದರೂ, ಅದು ಜಗದೇಕಮಲ್ಲ ಕುಂತಳದ ಮೇಲೆ ರಾಜ್ಯಭಾರ ಮಾಡುತ್ತಿದ್ದನೆಂದು ಹೇಳುತ್ತದೆ. ಬಹುಶ ಇರಿವಬೆಡಂಗನ ಕಾಲದಲ್ಲಿ ಹಾಕಿಸಿದ ಶಾಸನವನ್ನು ಜಗದೇಕಮಲ್ಲ (ವಿಕ್ರಮಾದಿತ್ಯನ ಸಹೋದರ) ಕುಂತಳದ ಮೇಲೆ ರಾಜ್ಯಭಾರ ಮಾಡುವಾಗ ಮತ್ತೊಮ್ಮೆ ಹಾಕಿಸಿರುವ ಸಾಧ್ಯತೆಯು ಇದೆ.

ಸತ್ಯಾಶ್ರಯನ ನಂತರ ಐದನೆಯ ವಿಕ್ರಮಾದಿತ್ಯನು ಕಲ್ಯಾಣ ಸಿಂಹಾಸನವನ್ನು ಸುಮಾರು ಆರು ವರ್ಷಗಳ ಕಾಲ ರಾಜ್ಯಭಾರ ಮಾಡಿದನು. ಐದನೆಯ ವಿಕ್ರಮಾದಿತ್ಯನ ಕಾಲದಲ್ಲಿ ಒಂದೇ ಒಂದು ಶಾಸನ ಕೊಪ್ಪಳದಲ್ಲಿ ದೊರೆಯುತ್ತದೆ.[೩೯] ವಿಕ್ರಮಾದಿತ್ಯನ ನಂತರ ಅವನ ಸಹೋದರ ಅಯ್ಯಣದೇವನು ಸಿಂಹಾಸನಕ್ಕೆ ಬಂದನಾದರು ಕೇವಲ ಒಂದು ವರ್ಷ ಕಾಲ ರಾಜ್ಯಭಾರ ಮಾಡಿದನು. ಈತನ ಕಾಲದ ಯಾವುದೇ ಶಾಸನಗಳು ಜಿಲ್ಲೆಯಲ್ಲಿ ದೊರೆಯುವದಿಲ್ಲ.

ಅಯ್ಯಣದೇವನ ನಂತರ ಚಾಲುಕ್ಯ ಸಿಂಹಾಸನವೇರಿದ ಇವನ ಸಹೋದರ ಒಂದನೇ ಜಗದೇಕ ಮಲ್ಲ ಜಯಸಿಂಹದೇವನು ಸುಮಾರು ಕ್ರಿ.ಶ. ೧೦೧೫ ರಿಂದ ೧೦೪೪ ರ ವರೆಗೆ ರಾಜ್ಯಭಾರ ಮಾಡಿದನು. ಜಗದೇಕಮಲ್ಲನ ಕಾಲದಲ್ಲಿ ರಾಜ್ಯವು ಯುದ್ಧಗಳಿಂದಲೇ ತುಂಬಿಕೊಂಡಿತ್ತು[೪೦] ಆದರೆ ರಾಜ್ಯದ ಆಡಳಿತ ಮಾತ್ರ ಶಾಂತಿಯುತವಾಗಿತ್ತು. ಸುಮಾರು ೨೦ ವರ್ಷಗಳ ಕಾಲ ಆಡಳಿತ ನಡೆಸಿದ ಜಗದೇಕಮಲ್ಲನು ಧಾರ್ಮಿಕ,

ಸಾಮಾಜಿಕ, ಆರ್ಥಿಕ ಮತ್ತು ವಾಸ್ತುಶಿಲ್ಪಕಲೆಗಳ ಉನ್ನತಿಗೆ ಹೆಚ್ಚು ಒತ್ತು ನೀಡಿದ್ದನ್ನು ಶಾಸನಗಳಿಂದ ಅರಿಯಬಹುದಾಗಿದೆ. ಜಗದೇಕಮಲ್ಲ, ಅಹವಮಲ್ಲನೆಂಬ ಬಿರುದು ಹೊಂದಿದ್ದ ಜಯಸಿಂಹನು ಒಂದೇ ಒಂದು ಶಾಸನ ಜಿಲ್ಲೆಯ ಗೋತಗಿ ಗ್ರಾಮದಲ್ಲಿ ಕಂಡುಬರುತ್ತಿದ್ದು ಅದು ಜಯಸಿಂಹನು ಕಲ್ಯಾಣಪುರದ ನೆಲೆವಿಡಿನಿಂದ ರಾಜ್ಯವಾಳುತ್ತಿದ್ದಾಗ ಅವನ ಮಡದಿ ಪದ್ಮಲದೇವಿ ಕರಡಿಕಲ್ಲು-೩೦೦ರ ಬಳಿಯ ಗೋವಂತಿಗೆಯ ಸ್ವಯಂಭು ಕಲಿದೇವ ಸ್ವಾಮಿಗೆ ದಾನ ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ. [೪೧]

ಜಗದೇಕ ಮಲ್ಲನ ನಂತರ ಅವನ ಮಗನಾದ ಒಂದನೇ ಸೋಮೇಶ್ವರನು ಕ್ರಿ.ಶ. ೧೦೪೪ ರಲ್ಲಿ ಸಿಂಹಾಸನವೇರಿ ಕ್ರಿ.ಶ. ೧೦೬೮ ರವರೆಗೆ ಸು. ೨೪ ವರ್ಷಗಳ ಕಾಲ ರಾಜ್ಯವಾಳಿದನು. ಸೋಮೇಶ್ವರನು ಅಹವಮಲ್ಲ, ತ್ರೈಳೋಕ್ಯಮಲ್ಲ ಎಂಬ ಬಿರುದುಗಳನ್ನು ಧರಿಸಿದ್ದನು. ಈತ ಕಲ್ಯಾಣದಲ್ಲಿ ಕಲ್ಯಾಣನಗರ ಹಾಗೂ ಕೋಟೆಯನ್ನು ಕಟ್ಟಿಸಿದನೆಂದು ಬಿಲ್ಹಣ ತನ್ನ ಗ್ರಂಥದಲ್ಲಿ ಹೇಳಿಕೊಂಡಿದ್ದಾನೆ. [೪೨] ಜಗದೇಕಮಲ್ಲನ ಕಾಲದಲ್ಲಿ ನಡೆದಂತಹ ಯುದ್ಧಗಳು ಸೋಮೇಶ್ವರನ ಕಾಲದಲ್ಲಿ ಹಾಗೆಯೇ ಮುಂದುವರೆದವು. ಈತನು ಯುದ್ಧ ಭೂಮಿಯಲ್ಲಿ ಹೆಚ್ಚು ಸಮಯವನ್ನು ಕಳೆದರು. ರಾಜ್ಯದಲ್ಲಿ ಸಾಂಸ್ಕೃತಿಕ ಕ್ಷೇತ್ರಕ್ಕೆ ಯಾವುದೆ ತೊಂದರೆ ಬರದಂತೆ ನೋಡಿಕೊಂಡು ಹೋದನು. ಸೋಮೇಶ್ವರನ ನಾಲ್ಕು ಶಾಸನಗಳು ಜಿಲ್ಲೆಯ ಗೋತಗಿ[೪೩] ಶಿವಪುರ[೪೪], ವಿಪ್ರ [೪೫] ಅಳವಂಡಿಗಳಲ್ಲಿ [೪೬] ಕಂಡು ಬರುತ್ತವೆ. ಶಿವಪುರ ಶಾಸನವು ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ -೨ ರಲ್ಲಿ ಪ್ರಕಟಗೊಂಡಿದ್ದು. ಶಾಸನ ೧೦೫೩ ಎಂದು ತಪ್ಪಾಗಿ ಮುದ್ರಿತವಾಗಿದೆ. ಅದರ ನಿಜವಾದ ಕಾಲಮಾನ ಕ್ರಿ.ಶ. ೧೦೩೩ ಆಗುತ್ತದೆ. ಶಾಸನವು ಶ್ರೀಮತ್ತ್ರೈಳೋಕ್ಯಮಲ್ಲದೇವನು ಅರಸನಾಗಿ ಆಳುತ್ತಿದ್ದನೆಂದು ಹೇಳುವದರಿಂದ, ಒಂದನೆ ಸೋಮೇಶ್ವರ ಕ್ರಿ.ಶ. ೧೦೪೪ ರಲ್ಲಿ ಸಿಂಹಾಸನಕ್ಕೆ ಬಂದದ್ದನ್ನು ಗಮನಕ್ಕೆ ತೆಗೆದುಕೊಂಡರೆ ಒಂದನೆ ಜಗದೇಕಮಲ್ಲನ ಕಾಲದಲ್ಲಿ ಬಹುಷಃ ಯುವರಾಜನಾಗಿ ಈ ಪ್ರದೇಶದ ಮೇಲೆ ಆಡಳಿತ ನಡೆಸಿರಬೇಕು ಮತ್ತು ತನ್ನ ಹೆಸರಿನಿಂದಲೇ ಶಾಸನ ಬರೆಯಿಸಿರಬೇಕು.

ಒಂದನೇ ಸೋಮೇಶ್ವರನ ನಂತರ ಹಿರಿಯ ಮಗನಾದ ಎರಡನೇ ಸೋಮೇಶ್ವರ ಚಾಲುಕ್ಯ ಸಿಂಹಾಸನವೇರಿದನು. ಮೊದಲ ಸೋಮೇಶ್ವರನಿಗೆ ಮೂರು ಜನ ಮಕ್ಕಳು. ಅವರಲ್ಲಿ ಸೋಮೇಶ್ವರ ಹಿರಿಯವ, ಆರನೆ ವಿಕ್ರಮಾದಿತ್ಯ ಮಧ್ಯದವನು ಮತ್ತು ಜಯಸಿಂಹನು ಕೊನೆಯವನು. ಈ ಭಾಗದ ಶಾಸನಗಳು ಜಯಸಿಂಹನನ್ನು ನೊಳಂಬಪಲ್ಲವ ಪೆರ್ಮ್ಮಾಡಿಜಯಸಿಂಹ, ಜಗದೇಕಮಲ್ಲ ಎಂಬ ಹೆಸರಿನಿಂದ ಕರೆಯುತ್ತವೆ.

ಎರಡನೆಯ ಸೋಮೇಶ್ವರನು 'ಭೂವನೈಕ ಮಲ್ಲ' ನೆಂಬ ಬಿರುದಾಂಕಿತದಿಂದ ಕ್ರಿ.ಶ. ೧೦೬೮ ರಲ್ಲಿ ಸಿಂಹಾಸನವೇರಿದನು. ನಂತರ ಕ್ರಿ.ಶ. ೧೦೭೭ ರವರೆಗೆ ಸುಮಾರು ಎಂಟು ವರ್ಷಗಳ ಕಾಲ ರಾಜ್ಯಬಾರ ಮಾಡಿದ ಸಿಂಹಾಸನಕ್ಕೆ ಬಂದ ತಕ್ಷಣ ಸೋಮೇಶ್ವರ ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಒಂದು ಕಡೆಗೆ ವೈರಿಗಳ ಯುದ್ಧದ ಭೀತಿ, ಮತ್ತೊಂದೆಡೆ ಸಹೋದರ ವಿಕ್ರಮಾದಿತ್ಯನ ದಂಗೆಗಳಿಂದ ಸೋಮೇಶ್ವರನ ರಾಜ್ಯ ಅರಾಜಕತೆಯಿಂದ ಕೂಡಿತ್ತು. ಇಷ್ಟಾದರೂ ಸೋಮೇಶ್ವರ ಧೈರ್ಯಗೆಡದೆ ಬಂದ ಸಮಸ್ಯೆಗಳನ್ನು

ಪರಿಹರಿಸಿಕೊಂಡು ರಾಜ್ಯವಾಳಿದನು.[೪೭] ಆದರೆ, ಸಹೋದರನ ದಂಗೆಯಿಂದ ಕೆಲವೇ ದಿನಗಳಲ್ಲಿ ಸೋಮೇಶ್ವರ ಸಿಂಹಾಸನ ತ್ಯಾಗ ಮಾಡಬೇಕಾಯಿತು. ಇಂತಹ ಪರಿಸ್ಥಿತಿಯನ್ನು ದಿಟ್ಟತನದಿಂದ ಎದುರಿಸಿ ರಾಜ್ಯವಾಳಿದ ಸೋಮೇಶ್ವರನ ಯಾವ ಶಾಸನಗಳು ಜಿಲ್ಲೆಯಲ್ಲಿ ಕಂಡು ಬರುವದಿಲ್ಲ.

ಸಹೋದರ ಎರಡನೇ ಸೋಮೇಶ್ವರನ ವಿರುದ್ಧವಾಗಿ ದಂಗೆ ಎದ್ದು ಅದರಲ್ಲಿ ಯಶಸ್ವಿಯಾದ ಆರನೆ ವಿಕ್ರಮಾದಿತ್ಯನು ಕ್ರಿ.ಶ. ೧೦೭೬ ರಲ್ಲಿ ಕಲ್ಯಾಣದ ಸಿಂಹಾಸನದ ಗದ್ದುಗೆಯೆರಿದನು. ಸಹೋದರನ ಕಾಲದಲ್ಲಿಯೇ ಸಾಮ್ರಾಜ್ಯದ ವಿವಿಧ ಪ್ರಾಂತಗಳ ಮೇಲೆ ಆಡಳಿತ ನಡೆಸಿದ ವಿಕ್ರಮಾದಿತ್ಯನು ತನ್ನ ಸಹೋದರನ ಅಸಮರ್ಥ ಆಡಳಿತದಿದ ಬೇಸತ್ತು ದಂಗೆಯೆದ್ದನು. ಕೆಲವು ಕಾಲ ಸಹೋದರರ ಭಿನ್ನಾಭಿಪ್ರಾಯಗಳು ಕೊನೆಗೊಂಡಿದ್ದವಾದರೂ ಬಹಳ ದಿವಸ ಉಳಿಯಲಿಲ್ಲ. ಹೀಗಾಗಿ ವಿಕ್ರಮಾದಿತ್ಯನು ತನ್ನ ಶಕ್ತಿ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡು ಸಹೋದರನ ವಿರುದ್ಧ ದಂಗೆಯೆದ್ದು ಕ್ರಿ.ಶ. ೧೦೭೬ ರಲ್ಲಿ ಸೋಮೇಶ್ವರನನ್ನು ಸಿಂಹಾಸನದಿಂದ ಕೆಳಗಿಳಿಸಿ ಅಧಿಕಾರ ವಹಿಸಿಕೊಂಡನು [೪೮] ಸಹೋದರನ ವಿರುದ್ಧ ದಂಗೆಯೆದ್ದು ಸಿಂಹಾಸನಕ್ಕೆ ಬಂದ ವಿಕ್ರಮಾದಿತ್ಯನು ಚಾಲುಕ್ಯ ಅರಸರಲ್ಲಿಯೇ ಅತಿ ಶ್ರೇಷ್ಠ ದೊರೆ. ಇವನು ತ್ರಿಭುವನ ಮಲ್ಲ, ವಿಕ್ರಮಾಂಕ, ಪೆರ್ಮ್ಮ, ಪೆರ್ಮ್ಮಾಡಿಯೆಂಬ[೪೯] ಹಲವಾರು ಬಿರುದುಗಳನ್ನು ಧರಿಸಿದ್ದನು.

ವಿಕ್ರಮಾದಿತ್ಯನು ಸಿಂಹಾಸನಕ್ಕೆ ಬಂದ ತಕ್ಷಣವೇ ತನ್ನ ಹೆಸರಿನಲ್ಲಿ 'ಚಾಲುಕ್ಯ ವಿಕ್ರಮಶಕೆ' ಯನ್ನು ಜಾರಿಗೊಳಿಸಿದನು. [೫೦] ನಂತರ ತನ್ನ ವಿರುದ್ಧ ಸಾಮ್ರಾಜ್ಯದಲ್ಲಿ ಬಂಡೆದ್ದ ಮಹಾಮಂಡೇಶ್ವರರನ್ನು, ಸಾಮಂತರನ್ನು ಅವರ ಶಕ್ತಿ ಸಾಮರ್ಥ್ಯಗಳನ್ನು ಸದೆಬಡೆದು ಅವರ ಮೇಲೆ ತನ್ನ ಸಾರ್ವಭೌಮ ಅಧಿಕಾರವನ್ನು ಸ್ಥಾಪಿಸಿ ರಾಜ್ಯದಲ್ಲಿ ಶಾಂತಿ ನೆಲೆಸುವಂತೆ ನೋಡಿಕೊಂಡನು. ಸುಮಾರು ಐವತ್ತು ವರ್ಷಗಳಷ್ಟು ದೀರ್ಘ ಅವಧಿಯವರೆಗೆ ಆಡಳಿತ ನಡೆಸಿದ ವಿಕ್ರಮಾದಿತ್ಯನ ಸಾಮ್ರಾಜ್ಯದ ತುಂಬೆಲ್ಲ ಅಸಂಖ್ಯಾತ ಶಾಸನಗಳು, ದೇವಾಲಯಗಳು ನಿರ್ಮಾಣವಾಗಿ ನಿಂತವು. ಜಿಲ್ಲೆಯಲ್ಲಿಯು ಸುಮಾರು ಒಂಬತ್ತು ಶಾಸನಗಳು ಕಂಡುಬರುತ್ತವೆ. ಬೇರೆ ಜಿಲ್ಲೆಗೆ ಹೋಲಿಸಿದರೆ ವಿಕ್ರಮಾದಿತ್ಯನ ಶಾಸನಗಳು ಕೊಪ್ಪಳ ಜಿಲ್ಲೆಯಲ್ಲಿ ಕಡಿಮೆಯೆಂದೆ ಹೇಳಬೇಕು.

ಜಿಲ್ಲೆಯಲ್ಲಿ ದೊರೆಯುವ ವಿಕ್ರಮಾದಿತ್ಯನ ಮೊದಲ ಶಾಸನ ಕ್ರಿ.ಶ. ೧೦೮೮ರ ಹುಲುಗಿಯದಾದರೆ [೫೧] ಕೊನೆಯ ಶಾಸನ ಕ್ರಿ.ಶ. ೧೧೦೭ರ ಕುಕನೂರದ್ದಾಗಿದೆ. [೫೨] ಸಿಂಹಾಸನಕ್ಕೆ ಬಂದ ಬಳಿಕ ತನ್ನ ವಿರುದ್ಧ ರಾಜ್ಯದಲ್ಲಿ ಕಾಣಿಸಿಕೊಂಡ ದಂಗೆಗಳನ್ನು ಸದೆಬಡಿದು ಸಾಮ್ರಾಜ್ಯದ ತುಂಬೆಲ್ಲ ತಿರುಗಾಡಿ ದುಷ್ಟರನ್ನು ನಿಗ್ರಹಿಸಿ ಶಾಂತಿ ನೆಲೆಸುವಂತೆ ಮಾಡಿರುವದನ್ನು ಜನರು ಸಂತೋಷದಿಂದ ಇರುವುದನ್ನು, ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ಲಲಿತಕಲೆಗಳ ಕ್ಷೇತ್ರಗಳ ಉನ್ನತಿಗೆ ಪ್ರೋತ್ಸಾಹಿಸಿದ ಹಲವಾರು ವಿಷಯಗಳ ಕುರಿತು ಶಾಸನಗಳು ವಿಸ್ತೃತ ಮಾಹಿತಿಯನ್ನೊದಗಿಸುತ್ತವೆ. ಸಾಹಿತ್ಯ ಕ್ಷೇತ್ರಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆತಿದ್ದರಿಂದ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಕವಿಗಳಾದ ವಿಜ್ಞಾನೇಶ್ವರ, ಕಾಶ್ಮೀರ ಪಂಡಿತ ಕವಿ ಬಿಲ್ಹಣರು ಆಶ್ರಯ ಪಡೆದು ಶ್ರೇಷ್ಠಕೃತಿಗಳನ್ನು ರಚಿಸಿದರು. [೫೩]

ವಿಕ್ರಮಾದಿತ್ಯನ ದೀರ್ಘಾವಧಿಯ ಆಡಳಿತದ ನಂತರ ಅವನ ಮಗ ಮೂರನೇ ಸೋಮೇಶ್ವರನು ಕ್ರಿ.ಶ. ೧೧೨೭ ರಲ್ಲಿ ಕಲ್ಯಾಣದ ಸಿಂಹಾಸನವೇರಿದನು. ಸಿಂಹಾಸನಕ್ಕೆ ಬಂದ ತಕ್ಷಣ 'ಭೂಲೋಕಮಲ್ಲ' ಸರ್ವಜ್ಞಚಕ್ರವರ್ತಿ[೫೪] ಎಂಬೆರಡು ಬಿರುದುಗಳನ್ನು ಧರಿಸಿದನು. ಇವನು ಸುಮಾರು ಹನ್ನೆರಡು ವರ್ಷಗಳ ಕಾಲ (ಕ್ರಿ.ಶ. ೧೧೨೭ ರಿಂದ ೧೧೩೮) ರಾಜ್ಯವಾಳಿದನು ಮೂಲತಃ ಶಾಂತಿ ಪ್ರಿಯನಾದ ಸೋಮೇಶ್ವರ ಶ್ರೇಷ್ಠ ಸಾಹಿತಿಯಾಗಿದ್ದನು. ಇವನು ಬರೆದ 'ಮಾನಸೋಲ್ಲಾಸ ಅಥವಾ ಅಭಿಲಾಷಿತಾರ್ಥ ಚಿಂಚಾಮಣಿ' ಕೃತಿಯು[೫೫] ಲಲಿತ ಕಲೆಗಳ ಮೇಲಿನ ಒಂದು ಲಾಕ್ಷಣಿಕ ಗ್ರಂಥವಾಗಿದ್ದು ವಿಶ್ವಕೋಶವೆಂತಲು ಅದನ್ನು ಕರೆಯಲಾಗುತ್ತದೆ. ಇತನ ಕಾಲಕ್ಕೆ ಸಂಬಂಧಿಸಿದ ಜಿಲ್ಲೆಯ ಕಲ್ಲೂರ, [೫೬] ಮಾದಿನೂರ, [೫೭] ಕುಕನೂರ [೫೮] ಶಾಸನಗಳು ಸಹ ಇವನನ್ನು ಸರ್ವಜ್ಞ ಚಕ್ರವರ್ತಿ, ಭೂಲೋಕಮಲ್ಲ ಹೆಸರಿನಿಂದಲೇ ಕರೆಯುತ್ತವೆ.

ಮೂರನೇ ಸೋಮೇಶ್ವರ ಮಗನಾದ ಜಯಸಿಂಹ ಅಥವಾ ಎರಡನೇ ಜಗದೇಕಮಲ್ಲ ಕ್ರಿ.ಶ. ೧೧೩೮ ರಲ್ಲಿ ಕಲ್ಯಾಣದ ಸಿಂಹಾಸನಕ್ಕೆ ಬಂದು ಸುಮಾರು ಹತ್ತು ವರ್ಷಗಳ ಕಾಲ ಆಡಳಿತ ನಡೆಸಿದನು. ಇವನ ಅಜ್ಜನಾದ ಆರನೇ ವಿಕ್ರಮಾದಿತ್ಯನ ಕಾಲದಿಂದಲೂ ಆಡಳಿತದಲ್ಲಿ ಭಾಗವಹಿಸಿದ್ದನು. ಶಾಸನಗಳು ಈತನನ್ನು ಪ್ರತಾಪಚಕ್ರವರ್ತಿ, ಪೆರ್ಮ್ಮಾಡಿ, ಜಗದೇಕಮಲ್ಲನೆಂದು ಕರೆದಿವೆ. ಜಗದೇಕಮಲ್ಲನ ಕಾಲದಲ್ಲಿ ಗೋವೆಯ ಕದಂಬರು ಚಾಲುಕ್ಯರ ವಿರುದ್ಧ ಯುದ್ಧ ಸಾರಿದರು.[೫೯] ಸಾಮಂತರೆಲ್ಲರೂ ಸ್ವತಂತ್ರರಾಗಲು ಹವಣಿಸುತ್ತಿದ್ದರು. ರಾಜ್ಯದಲ್ಲಿ ಅನೇಕ ತೊಂದರೆಗಳು ತಲೆದೋರಿದ್ದರು ಜಗದೇಕನ ಆಡಳಿತದ ಕಾಲದಲ್ಲಿ ಸಾಂಸ್ಕೃತಿಕ ಕ್ಷೇತ್ರ ಉನ್ನತಿಯ ಹಾದಿಯಲ್ಲಿತ್ತು. ಜಿಲ್ಲೆಯಲ್ಲಿ ಜಗದೇಕಮಲ್ಲನಿಗೆ ಸಂಬಂಧಿಸಿದ ಎರಡು ಶಾಸನಗಳು ಕುಕನೂರದಲ್ಲಿ ಕಂಡು ಬರುತ್ತವೆ. [೬೦]

ಜಗದೇಕಮಲ್ಲನ ನಂತರ ಕಲ್ಯಾಣ ಸಿಂಹಾಸನಕ್ಕೆ ಬಂದವನು ಸಹೋದರ ಮೂರನೇ ತೈಲಪ. ಇವನು ಕ್ರಿ.ಶ. ೧೧೪೯ ರಲ್ಲಿ ಸಿಂಹಾಸನವೇರಿದ ತಕ್ಷಣ ಸಾಮ್ರಾಜ್ಯದಲ್ಲಿ ತೊಂದರೆಗಳು ಕಾಣಿಸಿಕೊಳ್ಳಹತ್ತಿದವು. ಹೀಗಾಗಿ ತೈಲಪ ಅನೇಕ ಕಷ್ಟ -ನಷ್ಟಗಳನ್ನು ಅನುಭವಿಸಬೇಕಾಯಿತು. ಸಾಮಂತರಾದ ಹೊಯ್ಸಳರು, ಕಾಕತೀಯರು, ಸೇವುಣರು, ಚಾಲುಕ್ಯ ಸಾರ್ವಭೌಮತ್ವವನ್ನು ಹರಿದು ಹಂಚಿಕೊಳ್ಳುವ ಸಲುವಾಗಿ ಕಾಯುತ್ತಿದ್ದರು. ಆದರಂತೆ ಚಾಲುಕ್ಯರ ಸಮೀಪದ ಸಾಮಂತ ಹಾಗೂ ರಕ್ತ ಸಂಬಂಧಿಯಾದ ಕಲಚುರಿ ಬಿಜ್ಜಳನು ಚಾಲುಕ್ಯರ ಅಧಿಕಾರವನ್ನು ಕಿತ್ತುಕೊಳ್ಳಲು ಮುಂದಾದನಲ್ಲದೆ ಕ್ರಿ.ಶ. ೧೧೬೨ ರಲ್ಲಿ ತೈಲಪನನ್ನು ಸೋಲಿಸಿ ಸ್ವತಂತ್ರ ಕಲಚುರಿ ಮನೆತನವನ್ನು ಕಲ್ಯಾಣದಲ್ಲಿ ನೆಲೆಗೊಳಿಸಿದನು. [೬೧] ಇಂತಹ ಕ್ಲಿಷ್ಟ ಪರಿಸ್ಥಿತಿಯಲ್ಲಿ ಆಳ್ವಿಕೆ ಮಾಡಿದ ೩ ನೇ ತೈಲಪ ತ್ರೈಳೋಕ್ಯಮಲ್ಲದೇವ ಎಂಬ ಬಿರುದು ಪಡೆದಿದ್ದನು. ಈತನಿಗೆ ಸಂಬಂಧಿಸಿದ ಶಾಸನಗಳು ಕಲ್ಲೂರ[೬೨], ಮುಧೋಳ[೬೩], ಕುಕನೂರ[೬೪] ಗ್ರಾಮಗಳಲ್ಲಿ ದೊರಕುತ್ತವೆ.

ತೈಲನ ಮಗನಾದ ನಾಲ್ಕನೇ ಸೋಮೇಶ್ವರನು ತಂದೆಯ ನಂತರ ಚಾಲುಕ್ಯ ಸಿಂಹಾಸನಕ್ಕೆ ಬಂದನಾದರು ಈಗಾಗಲೇ ಕಲಚುರಿ ಬಿಜ್ಜಳ ತೈಲಪನನ್ನು ಸೋಲಿಸಿ ರಾಜ್ಯ ಕಸಿದುಕೊಂಡಿದ್ದರಿಂದ ಕ್ರಿ.ಶ. ೧೧೮೩ ರ ವರೆಗೆ

ಸೋಮೇಶ್ವರ ತೆರೆಮರೆಯ ಜೀವನ ನಡೆಸಿ ಹೆಸರಿಗೆ ಮಾತ್ರ ಅರಸನಾಗಿ ಉಳಿದುಕೊಂಡನು. ಸೋಮೇಶ್ವರ ಕಲ್ಯಾಣ ಚಾಲುಕ್ಯ ಮನೆತನದ ಕೊನೆಯ ಶ್ರೇಷ್ಠ ದೊರೆಯಾಗಿದ್ದು ಅವನು ಕಳೆದುಕೊಂಡ ರಾಜ್ಯವನ್ನು ಮರಳಿ ಪಡೆಯುವಲ್ಲಿ ಮಾಡಿದ ಪ್ರಯತ್ನ ಸ್ತುತ್ಯಾರ್ಹವಾಗಿದೆ. ಕ್ರಿ.ಶ. ೧೧೬೨ ರಿಂದ ೧೧೮೩ ರ ವರೆಗೆ ಇಪ್ಪತ್ತು ವರ್ಷಗಳ ಕಾಲ ಚಾಲುಕ್ಯ ಸಾಮ್ರಾಜ್ಯ ರಾಜಕೀಯದಿಂದ ಕಣ್ಮರೆಯಾಗಿ ಸೋಮೇಶ್ವರನ ಸತತ ಪ್ರಯತ್ನದಿಂದ ಕ್ರಿ.ಶ. ೧೧೮೩ ರಲ್ಲಿ ಮತ್ತೆ ಅಧಿಕಾರದಲ್ಲಿ ಮುನ್ನಡೆಯಿತು. ರಾಜ್ಯ ಕಳೆದುಕೊಂಡ ಸೋಮೇಶ್ವರ ೨೦ ವರ್ಷ ಸಾಮಂತರಾದ ನಿಡಗಲ್ಲು ಚೋಳ, ಉಚ್ಚಂಗಿಯ ಪಾಂಡ್ಯ ಮತ್ತು ಸಾಂತಾರರ ರಾಜ್ಯಗಳಲ್ಲಿ ತೆರೆಮರೆಯ ಜೀವನ ಸಾಗಿಸುತ್ತ ರಾಜ್ಯಪಡೆಯುವ ಯತ್ನದಲ್ಲಿ ತೊಡಗಿದ್ದನು.[೬೫]

ನಂತರ ಕಲಚುರಿ ಅರಸರ ಅಸಮರ್ಥತೆಯನ್ನರಿತು ಕ್ರಿ.ಶ. ೧೧೮೩ ರಲ್ಲಿ ಮೇಲಿನ ಸಾಮಂತರ ಸಹಾಯವನ್ನು ಪಡೆದುಕೊಂಡು ಮತ್ತೆ ಚಾಲುಕ್ಯ ರಾಜ್ಯವನ್ನು ಪಡೆಯುವಲ್ಲಿ ಯಶಸ್ವಿಯಾದನು.[೬೬] ಆದರೆ, ಈಗಾಗಲೇ ಚಾಲುಕ್ಯ ಸಾಮಂತರಾಗಿದ್ದ ಸೇವುಣರು, ಕಾಕತೀಯರು ಹಾಗೂ ಹೊಯ್ಸಳರು ಬಲಿಷ್ಠರಾಗಿದ್ದರು. ಅಂತವರಲ್ಲಿ ಸೇವುಣ ಬಿಲ್ಲಮನು ಕ್ರಿ.ಶ. ೧೧೮೬ ರಲ್ಲಿ ಕಲ್ಯಾಣವನ್ನು ಮುತ್ತಿದನಲ್ಲದೆ ಸೋಮೇಶ್ವರನನ್ನು ಸೋಲಿಸಿ ಕಲ್ಯಾಣವನ್ನು ಹಿಡಿದುಕೊಂಡನು. ಭೀಲ್ಲಮನಿಂದ ಸೋತು ಮತ್ತೆ ಸಿಂಹಾಸನ ಕಳೆದುಕೊಂಡ ಸೋಮೇಶ್ವರ ಕ್ರಿ.ಶ. ೧೧೯೮ ರ ವರೆಗೆ ಗೋವೆಯ ಕದಂಬರಸರಲ್ಲಿ ಆಶ್ರಯ ಪಡೆದನು.[೬೭] ಇಲ್ಲಿಗೆ ಸುಮಾರು ೨೦೦ ವರ್ಷಗಳ ಕಾಲ ಸಾಮ್ರಾಜ್ಯ ಕಟ್ಟಿ ಆಳ್ವಿಕೆ ನಡೆಸಿದ ಕಲ್ಯಾಣ ಚಾಲುಕ್ಯ ಮನೆತನ ಕೊನೆಗೊಂಡಿತು. ಸೋಮೇಶ್ವರನ ಕಾಲದ ಮೂರು ಶಾಸನಗಳು ಜಿಲ್ಲೆಯ ಕಲ್ಲೂರ[೬೮] ಮತ್ತು ಮಾದಿನೂರ ಗ್ರಾಮಗಳಲ್ಲಿ ದೊರಕುತ್ತವೆ.

**ಕಲಚುರಿಗಳು**

ಕಲ್ಯಾಣ ಚಾಲುಕ್ಯ ಆರನೆ ವಿಕ್ರಮಾದಿತ್ಯನ ಸುಖ ಸಮೃದ್ಧಿಯ ಸುದೀರ್ಘ ಆಳ್ವಿಕೆಯ ನಂತರ ಮೂರನೆ ಸೋಮೇಶ್ವರ ಮತ್ತು ಎರಡನೇ ಜಗದೇಕಮಲ್ಲರ ಆಳ್ವಿಕೆಯು ಯಾವುದೇ ವಿಶೇಷ ಘಟನೆಗಳಿರದೆ ಕೊನೆಗೊಂಡಿತು. ಯಾವಾಗ ಮೂರನೆ ತೈಲಪ ಅಧಿಕಾರಕ್ಕೆ ಬಂದನೋ ಆಗ ಸಾಮಂತ ಕಲಚುರಿ ಬಿಜ್ಜಳನ ಒಳಸಂಚು ಒಮ್ಮೆಲೆ ಕ್ರಾಂತಿರೂಪದಲ್ಲಿ ಸ್ಫೋಟಗೊಂಡಿತಲ್ಲದೆ. ತೈಲಪನ ವಿರುದ್ಧ ದಂಗೆಯೆದ್ದು ಅವನನ್ನು ಸೋಲಿಸಿ ಚಾಲುಕ್ಯರ ಉತ್ತರಾಧಿಕಾರತ್ವ ಪಡೆದನು.[೬೯] ಬಿಜ್ಜಳನಿಂದ ಕಲ್ಯಾಣದ ಗದ್ದುಗೆಯೇರಿದ ಕಲಚುರಿಗಳು ಮೂಲತಃ ಚಾಲುಕ್ಯರ ಸಾಮಂತರು, ಇವರು ಕೇವಲ ೨೦ ವರ್ಷಗಳ ಕಾಲ ಸಾರ್ವಭೌಮರಾಗಿ ಆಡಳಿತ ನಡೆಯಿಸಿದರೂ, ದಕ್ಷಿಣ ಭಾರತ (ಕರ್ನಾಟಕ) ಚರಿತ್ರೆಯಲ್ಲಿ ಪ್ರಮುಖ ಸ್ಥಾನ ಪಡೆದುಕೊಂಡಿದ್ದಾರೆ. 'ಪೃಥ್ವೀರಾಜವಿಜಯ' ಗ್ರಂಥವು ಕಲಚುರಿಗಳು ಮೂಲತಃ 'ಹೈಹಯ ಕುಲಕ್ಕೆ' ಸೇರಿದವರೆಂದು ಹೇಳುತ್ತದೆ. ಇವರು ಪ್ರಥಮ ಬಾರಿಗೆ ಭಾರತದ ಬೇರೆ ಬೇರೆ ಭಾಗಗಳಲ್ಲಿ ಸಾಮಂತರಾಗಿ, ಸಾರ್ವಭೌಮರಾಗಿ ಕ್ರಿ.ಶ. ೬ನೇ ಶತಮಾನದಿಂದ ಕ್ರಿ.ಶ. ೧೮ ನೇ ಶತಮಾನದವರೆಗೆ ಆಡಳಿತ ನಡೆಸಿದ ಕೀರ್ತಿಗೆ ಪಾತ್ರರಾಗಿದ್ದಾರೆ.[೭೦]

ಮಧ್ಯ ಭಾರತದ ಕಲಚುರಿ ವಂಶದ ಹೈಹಯಕುಲಕ್ಕೆ ಸೇರಿದ ಈ ಕರ್ನಾಟಕದ ಕಲಚುರಿಗಳು ಹೈಹಯ ರಾಜಧಾನಿಯಾದ ನರ್ಮದಾ ನದಿ ತೀರದ ಮಹಿಷ್ಮತಿಯನ್ನು 'ಮಾಹಿಷ್ಮತಿಪುರವರಾಧೀಶ್ವರ' ರೆಂಬ ಬಿರುದಿನ ಮುಖಾಂತರ ಅಮರರಾಗಿದ್ದಾರೆ. ತಾವು ಉತ್ತರದಿಂದ ಬಂದವರೆಂದು ಹೇಳಿಕೊಳ್ಳಲು 'ಕಾಲಂಜಪುರವರಾಧೀಶ್ವರ' ರೆಂದು ಕರೆದುಕೊಂಡಿರುವರಲ್ಲದೇ, 'ಸುವರ್ಣ ವೃಷಭ'ವನ್ನು ತಮ್ಮ ಮನೆತನದ ಲಾಂಛನವಾಗಿ ಇಟ್ಟುಕೊಂಡಿರುವರು.[೭೧]

ಕರ್ನಾಟಕಕ್ಕೆ ಹೊರಗಿನಿಂದ ಬಂದ ಕಲಚುರಿಗಳು ತರ್ದವಾಡಿ ನಾಡಿನ ಪಶ್ಚಿಮೋತ್ತರದ ಭಾಗಕ್ಕೆ ಹತ್ತಿಕೊಂಡ ತರಿಕಾಡು ನಾಡನ್ನು ನೆಲೆಯನ್ನಾಗಿಸಿ ಕೊಂಡಿದ್ದರಲ್ಲದೆ, ಆ ನೆಲೆಯ ಪಟ್ಟಣವಾದ ಮಂಗಳವೇಡವು ಅವರ ಪರಂಪರಾಗತವಾದ ರಾಜಧಾನಿ ಪಟ್ಟಣವಾಗಿ ಮೆರೆಯಿತು.[೭೨] ಆದರೆ ಚಾಲುಕ್ಯರ ನಂತರ ಅವರ ರಾಜ್ಯದ ಮೇಲೆ ಸಾರ್ವಭೌಮ ಅಧಿಕಾರ ಹೊಂದಿದ್ದರಿಂದ ಕಲ್ಯಾಣವೇ ಅವರ ೨೦ ವರ್ಷದ ಅವಧಿಯಲ್ಲಿ ರಾಜಧಾನಿಯಾಗಿತ್ತು.

ಎರಡನೇ ಬಿಜ್ಜಳನಿಂದ ಸಾರ್ವಭೌಮ ಅಧಿಕಾರ ಪಡೆದು ಆರಂಭಗೊಂಡ ಕಲಚುರಿ ಮನೆತನ ಬಿಜ್ಜಳನ ನಂತರ ಸೋವಿದೇವ, ಸಂಕಮರ ಕಾಲಾವಧಿಯಲ್ಲಿ ಉನ್ನತಿಯನ್ನು ಪಡೆದು ಮುನ್ನಡೆದಿತ್ತು. ಇವರ ನಂತರ ಬಂದ ಅರಸರು ಅಸಮರ್ಥರಾಗಿದ್ದರಿಂದ ಚಾಲುಕ್ಯ ನಾಲ್ಕನೆಯ ಸೋಮೇಶ್ವರ ಕ್ರಿ.ಶ. ೧೧೮೩ ರಲ್ಲಿ ಕಲಚುರಿಗಳನ್ನು ಸೋಲಿಸಿ ಮತ್ತೆ ಚಾಲುಕ್ಯ ಮನೆತನದ ಸಾರ್ವಭೌಮಾಧಿಕಾರವನ್ನು ಸ್ಥಾಪಿಸಿದನು. ಹೀಗಾಗಿ ಕಲಚುರಿಗಳ ೨೦ ವರ್ಷಗಳ ಸಾರ್ವಭೌಮ ಆಡಳಿತವು ಕೊನೆಗೊಂಡಿತು.

ಕೊಪ್ಪಳ ಜಿಲ್ಲೆಯು ಕಲಚುರಿಗಳ ಚರಿತ್ರೆಯಲ್ಲಿ ಮಹತ್ವದ ಪಾತ್ರವಹಿಸಿದೆ. ಒಟ್ಟು ಜಿಲ್ಲೆಯಲ್ಲಿ ಏಳು ಶಾಸನಗಳು ದೊರೆತಿದ್ದು ಅವು ಜಿಲ್ಲೆಯ ಕಲಚುರಿಗಳ ಚರಿತ್ರೆ ರೂಪಿಸುವಲ್ಲಿ ಮಹತ್ವದ ದಾಖಲೆಗಳಾಗಿವೆ.

ಕುಕನೂರಿನ ಕ್ರಿ.ಶ. ೧೧೬೩ ರ ಬಿಜ್ಜಳನ ಶಾಸನವು ವಿಸ್ತೃತ ವಿಷಯವನ್ನು ಪ್ರಸ್ತುತ ಪಡಿಸುತ್ತದೆ. ಬಿಜ್ಜಳ ಕಲ್ಯಾಣದ ನೆಲೆಯಿಂದ ರಾಜ್ಯವಾಳುವಾಗ ಅವನ ಕೈಕೆಳಗೆ ಅಮ್ಮಣರಸ, ಭೋಪ್ಪಣ್ಣನಾಯಕ, ಬೀವರಸ, ಸಾಯಿದೇವ, ವಿಟ್ಟಪಯ್ಯ, ಬಲದೇವ ದಂಡನಾಯಕರಲ್ಲದೆ ಕರಣರಾದ ಮಧುಸುದನ, ಆದಿತ್ಯದೇವ, ಸೋಮರಾಜ, ಬೊಪ್ಪದೇವ ಮತ್ತು ಚಾವುಂಡರು ಕೆಲಸ ನಿರ್ವಹಿಸುತ್ತಿದ್ದರು.[೭೩]

ಬಿಜ್ಜಳನ ನಂತರ ಕಲಚುರಿ ಸಿಂಹಾಸನಕ್ಕೆ ಬಂದ ಅವನ ಹಿರಿಯ ಮಗ ಸೋವಿದೇವ ಇತನಿಗೆ ನಾಲ್ಕು ಜನ ಮಕ್ಕಳು, ಅವರಲ್ಲಿ ಹಿರಿಯವನು ಸೋವಿದೇವ, ಎರಡನೆಯವನು ಸಂಕಮ, ಮೂರನೆಯವನು ಅಹವಮಲ್ಲ, ನಾಲ್ಕನೆಯವನು ಸಿಂಘಣ ಇವರು ಬಿಜ್ಜಳನ ನಂತರ ಕಲಚುರಿ ಸಿಂಹಾಸನಕ್ಕೆ ಒಬ್ಬರ ನಂತರ ಒಬ್ಬರಂತೆ ಅಧಿಕಾರ ನಡೆಸಿದರು.

ಕುಕನೂರದ ಕ್ರಿ.ಶ. ೧೧೭೦ ರ ಶಾಸನವು[೭೪] ರಾಯಮೂರಾರಿ ಭುಜಬಲಮಲ್ಲ ಶ್ರೀಸೋವಿದೇವರಸ' ನೆಂದು ಹೊಗಳುತ್ತದೆ ಮತ್ತು ಅವನು ಮೊದೆನೂರ ಕುಪ್ಪ (ನೆಲವೀಡು) ದೊಳಗೆ ಸುಖಸಂಕಥಾ ವಿನೋದದಿಂದ ರಾಜ್ಯವಾಳುತ್ತಿದ್ದನೆಂದು ಹೇಳುವದು.

ಸೋವಿದೇವನ ಕ್ರಿ.ಶ. ೧೧೭೧-೭೨ ರ ಮತ್ತೊಂದು ಶಾಸನ ಚಳಗೇರಿಯಲ್ಲಿ ದೊರಕಿದೆ. ಅದು ಸೋವಿದೇವನ ಕೈಕೆಳಗೆ ದಾಸಿಗ ಎಂಬುವವನು ಮಂಡಳೇಶ್ವರನಾಗಿ ಕಿಸುಕಾಡು ಎಪ್ಪತ್ತು ನಾಡನ್ನು ಆಳುತ್ತಿದ್ದನೆಂದು ತಿಳಿಸುವದು. ಅಲ್ಲದೆ ದಾಸಿಗನ ಸಂತತಿ ಹಾಗೂ ಕಲ್ಲಂಗೆರೆಯ ಲಕ್ಷ್ಮೀದೇವ ದಂಡನಾಥ ಮತ್ತವನ ಸಹೋದರರನ್ನು, ಅವನ ಪತ್ನಿಯನ್ನು ಹೆಸರಿಸಿ ಅವರೆಲ್ಲರು ದೇವಾಲಯಕ್ಕೆ ದಾನ ನೀಡಿರುವದನ್ನು ತಿಳಿಸುತ್ತದೆ. [೭೫]

ಸೋವಿದೇವನ ನಂತರ ಅವನ ತಮ್ಮ ಸಂಕಮದೇವನು ಕಲಚುರಿ ಸಿಂಹಾಸನಕ್ಕೆ ಬಂದು ಆಡಳಿತ ನಡೆಯಿಸಿದನು. ಈ ವಂಶದ ಕೊನೆಯ ಶ್ರೇಷ್ಠ ದೊರೆಯಾದ ಸಂಕಮ ದೇವನ ಕಾಲದ ಮೂರು ಶಾಸನಗಳು ಜಿಲ್ಲೆಯಲ್ಲಿ ಕಂಡು ಬರುತ್ತವೆ. ಕವಲೂರ ಗ್ರಾಮದ ಶಾಸನವು ಏಳು ಕಾಲಮಾನಗಳನ್ನು ಹೊಂದಿದ್ದು ಅದು ಸೋವಿದೇವ, ಸಂಕಮದೇವ, ನಾಲ್ಕನೆ ಸೋಮೇಶ್ವರರ ಕಾಲಕ್ಕೆ ಹಾಕಿಸಿದ ಒಂದೇ ಶಾಸನವಾಗಿದೆ. ಈ ಶಾಸನ ಒಂದರಲ್ಲೆ ಸಂಕಮನ ಕಾಲಕ್ಕೆ ನಾಲ್ಕು ಬಾರಿ ಶಾಸನ ಹಾಕಿಸಲಾಗಿದೆ. ಅದರ ಕಾಲಮಾನಗಳು ಕ್ರಿ.ಶ. ೧೧೭೯, ೧೧೭೯, ೧೧೭೮, ೧೧೮೦ ಎಂದು ಉಲ್ಲೇಖಿಸುತ್ತದೆ. [೭೬]

ಕುಕನೂರಿನ ಕ್ರಿ.ಶ. ೧೧೭೮ ರ ಸಂಕಮದೇವನ ಮತ್ತೊಂದು ಶಾಸನವು ಸಮುದ್ರ, ಅದರಲ್ಲಿ ಭಾರತ, ಕುಂತಳದೇಶ, ಕುಕನೂರ-ಅಗ್ರಹಾರ ವರ್ಣನೆಯನ್ನು ಮಾಡುತ್ತಾ ನವಲಿಂಗ, ಮಹಾಮಾಯೇ ಜೇಷ್ಠಾ ದೇವಿಯನ್ನು ಕಾವ್ಯಮಯವಾಗಿ ವರ್ಣಿಸುತ್ತದೆ. [೭೭]

ಸಂಕಮದೇವನ ನಂತರ ಅವರ ಇಬ್ಬರು ಸಹೋದರರಾದ ಅಹವಮಲ್ಲ ಮತ್ತು ಸಿಂಘಣರು ಅಸಮರ್ಥರಾದುದರಿಂದ ಅಲ್ಪಾವಧಿಯಲ್ಲಯೇ ಕಲಚುರಿಗಳ ರಾಜ್ಯ ನಾಶ ಹೊಂದಿತು. ಕ್ರಿ.ಶ. ೧೧೮೨ ರ ಶಾಸನವು ಅಹವಮಲ್ಲನು ಹೆಸರಿಸಿದರೆ [೭೮] ಇಟಗಿಯ ಕ್ರಿ.ಶ. ೧೧೮೩ ರ ತಾಮ್ರಪಟವು ಕಲಚುರಿ ಮನೆತನದ ವಂಶಾವಳಿಯನ್ನು ನೀಡುತ್ತದೆ.[೭೯] ಕೊನೆಯ ಅರಸ ಸಿಂಘಣನು ದೈವ ವರವಾಗಿದ್ದು ಕುಕನೂರಿನ ಜೇಷ್ಠಾದೇವಿಗೆ ಬೆಳ್ವಲ-೩೦೦ ರಲ್ಲಿದ್ದ ಕುಕನೂರನ್ನು ಎಲ್ಲಾ ರೀತಿಯ ತೆರಿಗೆಗಳಿಂದ ಮುಕ್ತಗೊಳಿಸಿ ರಾಜನಾಗಲಿ, ಅಧಿಕಾರಿಯಾಗಲಿ ಅಲ್ಲಿಗೆ ಪ್ರವೇಶಿಸದಂತೆ ಊರಿನ ಸಾವಿರ ಮಹಾಜನರ ಕೈಯಲ್ಲಿ ಅಧಿಕಾರ ನೀಡಿದ್ದನ್ನು ವರ್ಣಿಸುತ್ತದೆ.

## ದೇವಗಿರಿಯ ಸೇವೂಣರು

ದೇವಗಿರಿ ಯಾದವ ಅಥವಾ ಸೇವುಣರು ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಪ್ರಾಂತಿಯ ಆಡಳಿತವನ್ನು ನಡೆಸುತ್ತ ೧೨ ನೆ ಶತಮಾನದ ಕೊನೆಯ ಹೊತ್ತಿಗೆ ರಾಜಕೀಯ ಭೂಮಿಕೆಯಲ್ಲಿ ಕಾಣಿಸಿಕೊಳ್ಳಹತ್ತಿದರು. ಮೊದಲು ಸಾಮಂತರಾಗಿ ನಂತರ ಸ್ವತಂತ್ರರಾಗಿ ಮಹಾರಾಷ್ಟ್ರ ಪ್ರದೇಶವನ್ನೊಳಗೊಂಡು ಉತ್ತರ ಕರ್ನಾಟಕದ ಬಹುಭಾಗದ ಮೇಲೆ ಅಧಿಕಾರ ಸ್ಥಾಪಿಸಿದರು.[೮೦] ಸೇವುಣ ಮನೆತನದಲ್ಲಿ ಮೊದಲಬಾರಿಗೆ ಬೆಳಕಿಗೆ ಬಂದವನು ೫ ನೇ ಭೀಲ್ಲಮ ಇವನು ಕ್ರಿ.ಶ. ೧೧೮೬ ರಲ್ಲಿ ಚಾಲಕ್ಯ ೪ ನೇ ಸೋಮೇಶ್ವರನನ್ನು ಸೋಲಿಸಿ ಸ್ವತಂತ್ರ ಸೇವುಣ ಮನೆತನಕ್ಕೆ ಭೂನಾದಿ ಹಾಕಿದ. ದೇವಗಿರಿಯನ್ನು ರಾಜಧಾನಿ ಮಾಡಿಕೊಂಡು ಸಾರ್ವಭೌಮ ಆಡಳಿತ ನಡೆಸಿದ ಸೇವುಣರು ೧೪ ನೆ ಯ ಶತಮಾನದ ಪ್ರಾರಂಭದ ದಶಕದಲ್ಲಿ ಉತ್ತರ ಭಾರತ ಮುಸ್ಲಿಂ ಖಿಲ್ಜಿ ಮನೆತನದ ಅರಸ ಅಲ್ಲಾವುದ್ದಿನ್‌ನ ದಾಳಿಯಿಂದ ತತ್ತರಿಸಿ ನಾಶಹೊಂದಿತು. ಸೇವುಣರ ಚರಿತ್ರೆಯನ್ನರಿಯಲು ಜಿಲ್ಲೆಯ ನಾಲ್ಕು ಶಾಸನಗಳು ಲಭ್ಯವಾಗಿವೆ. ಈ ಶಾಸನಗಳು ಕಲಚುರಿಗಳ ಸಿಂಘಣ ಮತ್ತು ಕನ್ನರದೇವನ ಕಾಲಕ್ಕೆ ಸಂಬಂಧಿಸಿದವುಗಾಳಾಗಿವೇ. ಕೂಕ್ಕನೂರದ ಶಾಸನ ಕ್ರಿ.ಶ. ೧೧೦೭ ರಿಂದ ೧೨೩೨ ರ ವರೆಗೆ ಬೇರೆ ಬೇರೆ ಆಳರಸರ ಕಾಲದಲ್ಲಿ ಹಾಕಿಸಿದ ಒಂದೇ ಶಾಸನವಾಗಿದೆ. ಇದು ಸಿಂಘಣನನ್ನು ''ಸ್ವಸ್ತಿ ಶ್ರೀಮತು ಯಾದವ ನಾರಾಯಣಂ ಪ್ರತಾಪ ಚಕ್ರವರ್ತಿ ಸಿಂಘಣ ದೇವ'' ನೆಂದು ಕರೆಯುತ್ತದೆ.[೮೧]

ಸಂಕನೂರಿನ ಶಾಸನವು ''ಯಾದವ ನಾರಾಯಣ ಭುಜಬಳ ಚಕ್ರವರ್ತಿ ಶ್ರೀ ಸಿಂಘಣ ದೇವ'' ರೆಂದಿದೆ. ಕೊಪ್ಪಳ ಶಾಸನವು ಕ್ರಿ.ಶ. ೧೨೪೦ ಕ್ಕೆ ಸೇರಿದ್ದು ಸಿಂಘಣದೇವನನ್ನು ಹೆಸರಿಸುತ್ತದೆ. ಆದರೆ ಶಾಸನ ತ್ರುಟಿತ ಗೊಂಡಿರುವದರಿಂದ ಹೆಚ್ಚಿನ ವಿಷಯ ತಿಳಿದುಬುರುವದಿಲ್ಲ.[೮೨]

ಕನ್ನರದೇವನ ಕಾಲಕ್ಕೆ ಸೇರಿದ ಅದೇ ಸಂಕನೂರದ ಕ್ರಿ.ಶ. ೧೨೧೨ ರ ಶಾಸನವು ''ಸ್ವಸ್ತಿ ಸಮಧಿಗತ ಪಂಚಮಹಾಶಬ್ಧ ದ್ವಾರಾವತಿಪುರವರಾಧೀಶ್ವರಂ ವಿಷ್ಣು ವಂಶೋದ್ಭವಂ ಸುವರ್ಣ ಗರುಡದ್ವಜಂ ಯಾದವ ಕುಳಕಮಳ ಕಜಕಾವಿಕಾಸ ಭಾಸ್ಕರಂ ಯರಿರಾಯ ಜಗಝಂಪ ಮಾಳವರಾಯ ಮದನತ್ರಿಣೇತ್ರ ಗುರ್ಜ್ಜರರಾಯ ಭಯಂಕರ ತೆಲಂಗರಾಯ ಸ್ಥಾಪನಾಚಾರ್ಯಮಿತ್ಯಾದಿ ನಾಮಾವಳಿ ವಿರಾಜಿತ ವಿಜಯಂ ಪ್ರವುಡ ಭುಜಬಳ ಪ್ರತಾಪ ಚಕ್ರವತಿ ರಾಯ ನಾರಾಯಣ ಶ್ರೀ ಕನ್ನರದೇವ'' ನೆಂದು ಸುದೀರ್ಘವಾಗಿ ವರ್ಣಿಸುತ್ತದೆ.[೮೩]

## ದೊರ ಸಮುದ್ರದ ಹೊಯ್ಸಳರು

ದೊರ ಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೧೦೦೦ ರಿಂದ ಕ್ರಿ.ಶ. ೧೩೪೨ ರವರೆಗೆ ಆಳ್ವಿಕೆ ಮಾಡಿದ ಹೊಯ್ಸಳರು ಪ್ರಾರಂಭದಲ್ಲಿ ಒಂದು ಶತಮಾನ ಕಾಲ ಕಲ್ಯಾಣ ಚಾಲುಕ್ಯರ

ಸಾಮಂತರಾಗಿದ್ದರು. ಚಾಳುಕ್ಯರ ಹಿಡಿತದಿಂದ ತಪ್ಪಿಸಿಕೊಂಡು ಸ್ವತಂತ್ರರಾಗಲು ಹೊಯ್ಸಳ ವಿಷ್ಣುವರ್ಧನ ಕಾಲದಿಂದ ಪ್ರಯತ್ನಿಸಿದರಾದರೂ ಆರನೇ ವಿಕ್ರಮಾದಿತ್ಯನಂತಹ ಬಲಶಾಲಿ ಅರಸನ ಮುಂದೆ ಇವರ ಪ್ರಯತ್ನ ಕೈಗೂಡಲಿಲ್ಲ. ಆದರೆ, ವಿಕ್ರಮಾದಿತ್ಯನ ನಂತರ ವಿಷ್ಣುವರ್ಧನ ಸ್ವತಂತ್ರಗೊಂಡು ಸಾರ್ವಭೌಮನಾಗಿ ಆಳ್ವಿಕೆ ಮಾಡಿದನು. ಕಲ್ಯಾಣ ಚಾಲುಕ್ಯರ ಪತನವು ಯಾದವ, ಕಾಕತೀಯ ಮತ್ತು ಹೊಯ್ಸಳರು ಸೇರಿ ಚಾಲುಕ್ಯ ಪ್ರದೇಶವನ್ನು ಹಂಚಿಕೊಳ್ಳಲು ಅದರ ಮೇಲೆ ತಮ್ಮ ಹಿಡಿತ ಸಾಧಿಸಲು ಪರಸ್ಪರ ಯುದ್ಧ ಕಣಕ್ಕಿಳಿದರು ಹೀಗಾಗಿ ತುಂಗಭದ್ರಾ ನದಿಯು ಯಾದವ ಮತ್ತು ಹೊಯ್ಸಳರ ಮಧ್ಯದ ಯುದ್ಧ ಭೂಮಿಯಾಗಿ ಪರಿಣಮಿಸಿತ್ತು. ಆದಾಗ್ಯೂ ಜಿಲ್ಲೆಯ ರಾಜಕೀಯ ಚರಿತ್ರೆಯಲ್ಲಿ ಹೊಯ್ಸಳರು ಪ್ರಮುಖ ಪಾತ್ರವಹಿಸಿರುವ ಕುರಿತು ಇಲ್ಲಿ ದೊರೆಯುವ ಹೊಯ್ಸಳರ ಶಾಸನಗಳಿಂದ ತಿಳಿದು ಬರುವದು.

ಧಾರ್ಮಿಕವಾಗಿ ಕೊಪ್ಪಳದೊಂದಿಗೆ ಹೊಯ್ಸಳರು ಗಾಢ ಸಂಬಧ ಇಟ್ಟುಕೊಂಡಿದ್ದಕ್ಕೆ ಆಧಾರಗಳಿವೆ. ವಿಷ್ಣುವರ್ಧನನ ಕಾಲದ ಜೈನ ಧರ್ಮದ ಎರಡು ಕಣ್ಣುಗಳಂತಿದ್ದ ಗಂಗರಾಜ-ಶಾಂತಲೆಯರು ಕೊಪ್ಪಳದಲ್ಲಿ ಜೈನಧರ್ಮ ಪ್ರಾಮುಖ್ಯತೆ ಹೊಂದಲು ಕಾರಣರಾಗಿದ್ದರು. ಶಾಂತಲೆಯು ಇಲ್ಲಿ ಜಿನಾಲಯ ಒಂದನ್ನು ನಿರ್ಮಿಸಿದ್ದಳು. ಗಂಗರಾಜ ಮತ್ತು ಅವನ ಅಣ್ಣನ ಮಗ ಏಚಿರಾಜರು ತಮ್ಮ ನಾಡ ಉನ್ನತಿಗೆ ಕೊಪ್ಪಳವನ್ನೇ ಆದರ್ಶವಾಗಿಟ್ಟುಕೊಂಡಿದ್ದರು. ನರಸಿಂಹನ ಮಂತ್ರಿ ಹುಳ್ಳರಾಜ ಕೊಪ್ಪಳದ ಜಿನಮುನಿ ಸಂಘಕ್ಕೆ ಸುವರ್ಣ ದಾನ ನೀಡಿದ್ದುಂಟು [೮೪] ಜಿಲ್ಲೆಯ ಮತ್ತು ಕೊಪ್ಪಳ ಸ್ಥಳದ ಜೊತೆ ಹೊಯ್ಸಳರು ಹೊಂದಿದ ಸಂಬಂಧದ ಕುರಿತು ಸಂಕನೂರ, [೮೫] ಯಲಬುರ್ಗಾ [೮೬] ಶಾಸನಗಳು ಮಾಹಿತಿಯೊದಗಿಸುತ್ತವೆ.

## ಯರಂಬರಿಗೆಯ ಸಿಂಧರು

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವಿವಿಧ ಸಾಮಂತ ಮನೆತನಗಳಲ್ಲಿ ಸಿಂಧ ಮನೆತನವು ಒಂದು. ಕ್ರಿ.ಶ. ೭ ನೆಯ ಶತಮಾನದಿಂದ ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಕಾಣಿಸಿಕೊಳ್ಳುವ ಸಿಂಧರು ಹತ್ತನೆ ಶತಮಾನದ ಇಚೀಗೆ ಪ್ರಬಲರಾಗಿ ರಾಜ್ಯಭಾರ ನಡೆಸಿದರು. ಈ ಹೊತ್ತಿಗಾಗಲೇ ಮೂಲ ಸಿಂಧ ಮನೆತನವು ವಿವಿಧ ಶಾಖೆಗಳಾಗಿ ಅಂದಿನ ರಾಜಕೀಯ ವ್ಯವಸ್ಥೆಗೆ ಸ್ಥಿರತೆಯನ್ನು ಒದಗಿಸಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿದ್ದರು. ದಕ್ಷಿಣ ಭಾರತದ ಮಹಾಮಂಡಳೇಶ್ವರರಲ್ಲಿಯೇ ಪ್ರಮುಖ ಸ್ಥಾನ ಪಡೆದ ಸಿಂಧರು ಚಾಲುಕ್ಯ, ಕಲಚುರಿ, ಯಾದವ ಮನೆತನಗಳ ಕಾಲದಲ್ಲಿ ಅವರಿಂದ ಗೌರವಿಸಲ್ಪಟ್ಟು ಅವರ ಪರವಾಗಿ ಹೋರಾಡಿ ಆ ಮನೆತನಗಳ ರಕ್ಷಣೆಯ ಬೆನ್ನೆಲುಬಾಗಿ ನಿಂತಿದ್ದರು. ಕಲ್ಯಾಣ ಚಾಲುಕ್ಯ ಮನೆತನಕ್ಕಂತು ಸಿಂಧರ ಸೇವೆ ಅಪಾರ. ಇಂತಹ ಸಿಂಧ ವಂಶದ ಮೂಲವನ್ನು ಹುಡುಕುತ್ತಾ ಸಿ.ವಿ. ವೈದ್ಯ ಮೊದಲಾಗಿ ಬಾ.ರಾ.ಗೋಪಾಲರವರೆಗೆ ಅನೇಕ ವಿದ್ವಾಂಸರು ಪ್ರಯತ್ನಿಸಿದ್ದು, ಡಾ. ದಿನಕರ ದೇಸಾಯಿಯವರು ಮಾಡಿದ ಕಾರ್ಯವಿಲ್ಲಿ ಅಭಿನಂದನಾರ್ಹವಾಗಿದೆ. ಅವರು ತಮಗೆ ದೊರೆತ ಉಪಲಬ್ಧ ಸಾಮುಗ್ರಿಗಳನ್ನು ಮುಂದಿಟ್ಟುಕೊಂಡು ಸಿಂಧರ ಕುರಿತು ಸಂಶೋಧನೆ ನಡೆಸಿದ್ದಾರೆ.

'ಸಿಂಧ' ಎಂಬುದು ಇವರ ಮನೆತನದ ಹೆಸರು. ಈ ಸಿಂಧ ಮನೆತನ ಮೂಲತಃ ನಾಗಜನಾಂಗಕ್ಕೆ ಸೇರಿದ್ದು. ಆರಂಭದಲ್ಲಿ ಸಾಮಾನ್ಯ ವೀರರಾಗಿ ಬಾಳಿದ್ದು ಮುಂದೆ ರಾಜಕೀಯ ಸ್ಥಿತಿಗತಿಗಳ ಉಪಯೋಗ ಪಡೆದುಕೊಂಡು ಉನ್ನತಾಧಿಕಾರವನ್ನು ಗಳಿಸಿಕೊಂಡರು. ಈ ವಂಶದ ಮೂಲ ಪುರುಷ 'ನಿಡುದೊಳಸಿಂಧ' ಇವನು ಕದಂಬ ಮಯೂರವರ್ಮನ ಮಗಳಾದ ಲಕ್ಷ್ಮೀಯನ್ನು ಮದುವೆಯಾಗಿದ್ದನು. ಈ ನಿಡುದೊಳಸಿಂಧನಿಂದಲೇ ಮುಂದೆ ಅನೇಕ ಸಿಂಧ ಮನೆತನಗಳು ಬೆಳಕಿಗೆ ಬಂದವು. ಅವುಗಳ ಕುರಿತು ದಿನಕರ ದೇಸಾಯಿ, ಬಾ.ರಾ.ಗೋಪಾಲ, ವೈದ್ಯ, ಶ್ರೀನಿವಾಸರಿತ್ತಿ, ಬಿ. ವ್ಹಿ.ಶಿರೂರರವರು ಸಂಶೋಧಿಸಿದ್ದರಿಂದ ಈ ಸಿಂಧ ಮನೆತನಗಳ ಜೊತೆಗೆ ಹತ್ತು ಸಿಂಧ ಮನೆತನಗಳು ಬೆಳಕಿಗೆ ಬಂದವು. ಇವರಲ್ಲಿ ಬಾಗಡಗೆ ಸಿಂಧರು, ಯಲಬುರ್ಗಿ ಸಿಂಧರು, ಬೆಳಗುತ್ತಿಯ ಸಿಂಧರು, ರಂಜೋಳದ ಸಿಂಧರು, ಮೂಳಗುಂದದ ಸಿಂಧರು. ಪ್ರತ್ಯಂಕದ ಸಿಂಧರು, ಚಕ್ರಕೂಟದ ಸಿಂಧರು, ಕೊಗಳಿನಾಡಿನ ಸಿಂಧರು, ಗುತ್ತಿಯ ಸಿಂಧರು, ನಾಲಗುಂದೆಯ ಸಿಂಧರು ಪ್ರಮುಖರಾಗಿದ್ದು ಕುರುಗೋಡಿನ ಸಿಂಧರ ಕುರಿತು ಹತ್ತರ ಜೊತೆಗೆ ಹನ್ನೊಂದನೆ ಸಿಂಧ ಮನೆತನದ ಕುರಿತು ಚೆನ್ನಬಸವ ಹಿರೇಮಠರವರು ಸಂಶೋಧಿಸಿ ಬೆಳಕಿಗೆ ತಂದರು.[೮೭] ಪ್ರಸ್ತುತ ನಮ್ಮ ಅಧ್ಯಯನ ಕೊಪ್ಪಳ ಜಿಲ್ಲೆಗೆ ಸಂಬಂಧಿಸಿರುವದರಿಂದ ಮೇಲಿನ ಹನ್ನೊಂದು ಸಿಂಧ ಮನೆತನಗಳಲ್ಲಿ ಒಂದಾದ ಯರಂಬರಿಗೆ (ಯಲಬುರ್ಗ)ಯು ಸಿಂಧರ ಕುರಿತು ಮಾತ್ರ ನಾವಿಲ್ಲಿ ಚರ್ಚಿಸಿದ್ದೇವೆ. ಜಿಲ್ಲೆಯಲ್ಲಿ ದೊರೆಯುವ ಸಿಂಧರ ಕುರಿತು ಉಲ್ಲೇಖನ ನೀಡಿದ ಶಾಸನಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ ಮತ್ತು ಸಿಂಧರ ರಾಜಧಾನಿ ಯರಂಬರಿಗೆ ನಮ್ಮ ಅಧ್ಯಯನದ ವ್ಯಾಪ್ತಿಯಲ್ಲಿ ಬರುವದರಿಂದ ಈ ಸಿಂಧರ ಕುರಿತು ಚರ್ಚಿಸಲಾಗಿದೆ.

**ಸಿಂಧರ ವಂಶಾವಳಿ**



## ಒಂದನೆ ಚಾವುಂಡ

ಚಾಲುಕ್ಯ ಸಾಮ್ರಾಜ್ಯದ ಆಧಾರ ಸ್ತಂಭಗಳಲ್ಲಿ ಯಂಬರಿಗೆಯ ಸಿಂಧ ಆಚುಗಿಯು ಒಬ್ಬ. ಆಚರಸನು ಚಾಲುಕ್ಯ ಎರಡನೇಯ ಸೋಮೇಶ್ವರ ಮತ್ತು ಆರನೇಯ ವಿಕ್ರಮಾದಿತ್ಯರ ನಂಬಿಗಸ್ಥ ಭಂಟನಾಗಿದ್ದ. ಇತನಿಗೆ ಬೊಮ್ಮ ಮತ್ತು ಸಿಂಧರೆಂಬ ಮಕ್ಕಳು. ಇವರು ಚಿಕ್ಕವರಾಗಿದ್ದುದರಿಂದ ಆಚುಗಿಯ ಸಹೋದರರಾದ ನಾಕ, ಸಿಂಘ, ದಾಸ, ದೇವಣ, ಒಂದನೇಯ ಚಾವುಂಡ ಮತ್ತು ಚಾವ ರೆಂಬ ಆರು ಜನ ಸಹೋದರರಲ್ಲಿ ಚಾವುಂಡ ಮತ್ತು ಸಿಂಘರು ಆಚುಗಿಯ ನಂತರ ಅವನ ಮಕ್ಕಳ ಪರವಾಗಿ ಆಡಳಿತ ನಡೆಸುತ್ತಿದ್ದರು.[೮೮] ಇವರಲ್ಲಿ ಒಂದನೇಯ ಚಾವುಂಡನು ಒಬ್ಬ. ಈ ಚಾವುಂಡನ ಕುರಿತು ಕಲ್ಲೂರದ ಕ್ರಿ.ಶ. ೧೦೯೮ ರ ಶಾಸನವು ''ಸ್ವಸ್ತಿ ಸಮದಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ ಸಮಸ್ತ ಪ್ರಸಸ್ತಿ ಸಹಿತ ಶ್ರೀಮತಸಿಂಧಚಾವುಂಡ ಭೂಪಾಳನು'' ಆರನೆ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾಗಿ ಕಿಸುಕಾಡು-೭೦ ನ್ನು ತ್ರಿಭೋಗಾಭ್ಯಂತರದಿಂದ ಬೆಳುವಲದೊಳಗಿನ ನರೆಯಂಗಲ್ಲು-೧೨ ಮತ್ತು ಕಲ್ಲೂರ, ಬೆಳ್ಳಂಗೆರೆಯ ಗ್ರಾಮಗಳ ಮೇಲೆ ಪ್ರಭುತ್ವ ಹೊಂದಿ ಆಡಳಿತ ನಡೆಸುತ್ತಿದ್ದನೆಂದು ಹೇಳುವದು. [೮೯]

## ಎರಡನೆ ಆಚುಗಿ

ಎರಡನೆಯ ಆಚುಗಿಯು ಯರಂಬರಿಗೆಯ ಸಿಂಧರಸರಲ್ಲಿಯೇ ಅತ್ಯಂತ ಪ್ರಸಿದ್ಧಿಯನ್ನು ಪಡೆದವನಾಗಿದ್ದ. ಇವನು ಒಂದನೆಯ ಆಚುಗಿಯ ಮಗನಾದ ಎರಡನೆ ಸಿಂಘಣನ ಮಗ. ಒಂದನೆಯ ಆಚುಗಿ ಈ ಸಿಂಧ ಮನೆತನಕ್ಕೆ ಭುನಾದಿ ಹಾಕಿದರೆ, ಅದರ ಮೇಲೆ ಎರಡನೆ ಆಚುಗಿ ಭವ್ಯವಾದ ಸ್ಮಾರಕವನ್ನು ನಿರ್ಮಿಸಿದನು. ಇವನು ಹಿಂದಿನ ಆಚುಗಿ, ಚಾವುಂಡರಂತೆ ಆರನೆ ವಿಕ್ರಮಾದಿತ್ಯನ ರಾಜ್ಯದ ರಕ್ಷಣೆಯ ಹೊಣೆ ಹೊತ್ತು ಕಾರ್ಯಭಾರವನ್ನು ನಿರ್ವಹಿಸುತ್ತಿರವಾಗ ದಕ್ಷಿಣದಿಂದ ಹೊಯ್ಸಳರು, ಪಶ್ಚಿಮದಿಂದ ಗೋವೆಯ ಕದಂಬರು, ಉತ್ತರದಿಂದ ಕರಹಾಡದ ಶಿಲಾಹಾರರು ಮತ್ತು ಉಚ್ಛಂಗಿಯ ಪಾಂಡ್ಯರು ಚಾಲುಕ್ಯ ಸಾಮ್ರಾಜ್ಯದ ಮೇಲೇರಿ ಬರಲು ಪ್ರಯತ್ನಿಸಿದರು. ಆ ಸಂದರ್ಭದಲ್ಲಿ ಎರಡನೆ ಆಚುಗಿ ವಿಕ್ರಮಾದಿತ್ಯನ ಜೊತೆಗೂಡಿ ವೈರಿಗಳ ಜೊತೆಗೆ ಹೋರಾಡಿ ಅವರು ಚಾಲುಕ್ಯ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿದನು. ಇಂತಹ ಸಾಮರ್ಥ್ಯವುಳ್ಳ ಆಚುಗಿಯ ಕುರಿತು ಜಿಲ್ಲೆಯ ಕ್ರಿ.ಶ. ೧೧೧೩ರ ಸಂಕನೂರ ಶಾಸನವು[೯೦] ಆರನೇ ವಿಕ್ರಮಾದಿತ್ಯನ ಮಂಡಳೇಶ್ವರನಾಗಿ ನರೆಯಂಗಲ್ಲದಲ್ಲಿ ತ್ರಿಭೋಗಾಭ್ಯಂತರದಿಂದ ಆಳುತ್ತಿದ್ದ ನೆಂದು ಹೇಳುವದು.

ಆಚುಗಿಯು ಪರಾಕ್ರಮಿಯಾದಂತೆ ಪಾಂಡಿತ್ಯ ಪ್ರಿಯನು, ಮಹಾದಾನಿಯು ಆಗಿದ್ದನು. ಶಾಸನವು ಅವನ ದಾನ ಗುಣವನ್ನು ಒತ್ತಿ ಹೇಳಿದೆ. ಇವನಿಗೆ ಮಹದೇವಿ ಮತ್ತು ಚಂದಲದೇವಿಯರೆಂಬ ಪತ್ನಿಯರಿದ್ದರು. ಮಹದೇವಿಯ ಉದರದಲ್ಲಿ ಪೆರ್ಮ್ಮಾಡಿಯು, ಚಂದಲದೇವಿಯ ಉದರದಲ್ಲಿ ಎರಡನೆ ಚಾವುಂಡರು ಜನಿಸಿದರು.

## ಒಂದನೆ ಪೆರ್ಮ್ಮಾಡಿ

ತಂದೆಯ ನಂತರ ಯರಂಬರಿಗೆಯ ಸಿಂಹಾಸನಕ್ಕೆ ಬಂದ ಪೆರ್ಮ್ಮಾಡಿಯು ತಂದೆಯಂತೆ ಚಾಲುಕ್ಯ ಚಕ್ರವರ್ತಿಗಳಿಗೆ ನಿಷ್ಠನಾಗಿದ್ದನು. ಪೆರ್ಮ್ಮಾಡಿಯು ಮೂರನೆಯ ಸೋಮೇಶ್ವರನ ನಿಷ್ಠಾವಂತ ಮಹಾಮಂಡಳೇಶ್ವರನಾಗಿದ್ದು ಜಿಲ್ಲೆಯ ಕಲ್ಲೂರ ಗ್ರಾಮದ ಕ್ರಿ.ಶ. ೧೧೩೨ ರ ಶಾಸನವು ಇವನನ್ನು ''ಸ್ವಸ್ತಿ ಶ್ರೀಮತುಮಹಾಮಂಡಳೇಶ್ವರ ಆಚರಸನ ಮಗಂ ಸಮಸ್ತ ಪ್ರಸಸ್ತಿ ಸಹಿತಂ ಶ್ರೀಮತು ರಾಯನಾಧಾರಂ ಪೆರ್ಮ್ಮಾಡಿ ದೇವನ ಪ್ರಭುತ್ವ ಕುಕನೂರ ಮೂವತ್ತರೊಳಗಣ ಕಲ್ಲೂರ'' ಎಂದು ಉಲ್ಲೇಖಿಸುತ್ತದೆ. [೧] ಕಲಚುರಿ ಸಂಕಮನ ಕಾಲದಲ್ಲಿ ಇವನು ಮಹಾಮಂಡಳೇಶ್ವರನಾಗಿದ್ದುದನ್ನು ಕ್ರಿ.ಶ. ೧೧೭೮ರ ಕುಕನೂರ ಶಾಸನ ಹೇಳುವದಲ್ಲದೆ. ಎರಡನೆಯ ಆಚುಗಿಯ ಮಗ ಮಲಸಹೋದರ ಎರಡನೆಯ ಚಾವುಂಡನು ಪೆರ್ಮ್ಮಾಡಿಯ ಮಂಡಳೇಶ್ವರನಾಗಿ ಆಳುತ್ತಿದ್ದನೆಂದು ಹೇಳುತ್ತದೆ. [೨] ಪೆರ್ಮ್ಮಾಡಿಯ ಧಾರ್ಮಿಕ ಚಟುವಟಿಕೆಗಳಿಗೆ ಪೋಷಕವಾಗಿ ನಿಂತವರು ಗುರುಗಳಾದ ಕಳೇಶ್ವರ ಸಿದ್ಧಾಂತಿ ರಾಜಗುರು. ಶಾಸನ ಅವರನ್ನು ಸಿಂದಾನ್ವಯದ ಶಿಕ್ಷಾ-ದಿಕ್ಷಾಚಾರ್ಯನೆಂದು ಕರೆಯುವದು. ಪೆರ್ಮ್ಮಾಡಿಗೆ ಮಕ್ಕಳಿರದ ಕಾರಣ ಅವನ ನಂತರ ಎರಡನೆ ಚಾವುಂಡನು ಸಿಂಹಾಸನವೇರಿದನು.

## ಎರಡನೆ ಚಾವುಂಡ

ಮಲಸಹೋದರ ಒಂದನೆಯ ಪೆರ್ಮ್ಮಾಡಿಯ ಕಾಲದಲ್ಲಿ ಅವನ ಮಂಡಳೇಶ್ವರನಾಗಿದ್ದ ಎರಡನೆಯ ಚಾವುಂಡ ನಂತರ ಯರಂಬರಿಗೆಯ ಸಿಂಹಾಸನಕ್ಕೆ ಬಂದನು. ಬಹಳ ಕಾಲದವರೆಗೆ ಅಧಿಕಾರ ಹೊಂದಿದ್ದ ಚಾವುಂಡನನ್ನು ನಾಲ್ಕನೆಯ ಸೋಮೇಶ್ವರನ ಮುಧೋಳ ಶಾಸನವು 'ಪಂಚಮಹಾಶಬ್ದ ಮಹಾಮಂಡಳೇಶ್ವರ' ನೆಂದು ಕರೆದಿದೆ. [೩] ಕ್ರಿ.ಶ. ೧೨೧೨ ರ ಯಾದವ ಕನ್ನರ ದೇವನ ಸಂಕನೂರ ಶಾಸನವು 'ಕನ್ನರ ದೇವನ ಪಾದಪದ್ಮೋಪ ಜೆವಿ ಶ್ರೀ ಮನುಮಹಾ ಪ್ರಧಾನ ಸಾಹಸತುಂಗ ಭುಜಬಳ ಭೀಮ ಕೊಂಕಣ ಭಯಂಕರ ಮಾಸವಾಡಿ ಸುರೆಕಾರ ಕದಂಬ ರಾಜ್ಯಕದಿಷ್ಠಾಯಕ ಮಹಾಮಂಡಳೇಶ್ವರ ಶ್ರೀ ಚಾವುಂಡರಾಜನು ಬೆಳ್ವಲ-೩೦೦, ಮಾಸವಾಡಿ -ನಾಡು, ಕಿಸುಕಾಡ-೭೦, ಬನವಾಸಿ-೧೨೦೦೦ಗಳನ್ನು ಸುಖಸಂಕಥಾ ವಿನೋದದಿಂದ ರಾಜ್ಯವಾಳುತ್ತಿದ್ದನೆಂದು' ಉಲ್ಲೇಖಿಸುತ್ತದೆ. [೪] ಹೀಗಾಗಿ ಎರಡನೆಯ ಚಾವುಂಡನು ಸಂಕಮ, ನಾಲ್ಕನೆಯ ಸೋಮೇಶ್ವರ ಹಾಗೂ ಯಾದವ ಕನ್ನರ ದೇವರ ಕಾಲದಲ್ಲಿ ಮಂಡಳೇಶ್ವರನಾಗಿ ಬಹಳ ದೀರ್ಘಾವಧಿಯ ಆಡಳಿತ ನಡೆಸಿರುವದು ಮತ್ತು ಹಲವಾರು ಪ್ರದೇಶಗಳ ಮೇಲೆ ಅಧಿಕಾರ ಹೊಂದಿರುವದು ಶಾಸನಗಳಿಂದ ತಿಳಿದುಬರುತ್ತದೆ. ಚಾವುಂಡನು ಕಲಚುರಿ ಬಿಜ್ಜಳದೇವನ ತಂಗಿಯರಾದ ಸಿರಿಯಾ ದೇವಿ ಮತ್ತು ಲಕ್ಷ್ಮೀದೇವಿಯರನ್ನು ವಿವಾಹವಾಗಿದ್ದನಲ್ಲದೆ ದೇಮಳದೇವಿ ಎಂಬುವಳನ್ನು ಸಹ ಮದುವೆಯಾಗಿದ್ದನು. ಇವಳು ಅವನ ರಾಣಿಯರಲ್ಲಿ ಹಿರಿಯಳಾಗಿದ್ದಳು. ಈ ದೇಮಳದೇವಿಯ ಉದರದಲ್ಲಿ ಮೂರನೆ ಆಚುಗಿ ಮತ್ತು ಎರಡನೆ ಪೆರ್ಮ್ಮಾಡಿಯರು ಜನಿಸಿದರು. ಸಿರಿಯಾದೇವಿಯ ಉದರದಲ್ಲಿ ವೀರಬಿಜ್ಜಳದೇವ ಮತ್ತು

ವೀರವಿಕ್ರಮಾದಿತ್ಯರು ಜನಿಸಿದರು. ಇವರು ಬೇರೆ ಬೇರೆ ಪ್ರದೇಶಗಳ ಮೇಲೆ ಅಧಿಕಾರ ಹೊಂದಿದಾಗ ಯರಂಬರಿಗೆಯ ರಾಜಧಾನಿಯಲ್ಲಿ ಸಿರಿಯಾದೇವಿಯ ಮಕ್ಕಳು ಬಿಜ್ಜಳ ಮತ್ತು ವಿಕ್ರಮಾದಿತ್ಯರು ಜೊತೆಗೂಡಿಯೇ ರಾಜ್ಯವಾಳುತ್ತಿದ್ದುದನ್ನು ಕ್ರಿ.ಶ. ೧೧೮೫ ರ ಕಲ್ಲೂರ ಶಾಸನದಿಂದ ತಿಳಿದು ಬರುತ್ತದೆ. [೬೫]

## ವೀರ ಬಿಜ್ಜಳ ಮತ್ತು ವೀರ ವಿಕ್ರಮಾದಿತ್ಯರು

ತಂದೆಯ ಕಾಲದಲ್ಲಿಯೇ ಯರಂಬರಗೆಯಲ್ಲಿ ರಾಜ್ಯವಾಳುತ್ತಿದ್ದ ಸಿರಿಯಾದೇವಿಯ ಮಕ್ಕಳಾದ ಇವರಿಬ್ಬರ ಕುರಿತು ಮೇಲಿನ ಕ್ರಿ.ಶ. ೧೧೮೫ ರ ಕಲ್ಲೂರ ಶಾಸನವು ''ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ ಭೋಗಾವತಿಪುರವರಾಧೀಶ್ವರ ಸಿಂಧಾನ್ವಯ ರತ್ನಾಕರ ಸುಧಾಕರ ವಂದಿಪ್ರಿಂದ ಪದ್ಮಾಕರ ಪ್ರಭಾಕರ ಚಾವುಂಡ ಮಂಡಳಿಕ ಶ್ರೀ ಹಲದಯನಂದನ ನಿಜವಿಳಾಸೋಪಸಹಿತ ಶ್ರೀನಂದನ ಮಂಡಳಿಕ ವೀರಬಿಜ್ಜಲದೇವ ಸಹಜಾತ ಬಹು ಕಳಾಕಳಾಪಾಂಭೋಜ ಜಾತರಿಪು ಮದನಿವಾರಣ ಮಂಡಳಿಕ ಮುಖದರ್ಪಣ ವಿದ್ವಜ್ಜಳ ಸಂತರ್ಪಣ ಭುಜಬಳ ಭೀಮ ನಯನಾಭಿರಾಮ ಅನವರತ ದಿವ್ಯ ಪ್ರಸಂಗ ಸಾಹಸೊತ್ತುಂಗ ನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ ಶ್ರೀ ಮನ್ಮಹಾಮಂಡಳೇಶ್ವರಂ ವೀರಬಿಜ್ಜಳ ದೇವರಸರುಂ ವಿಕ್ರಮಾದಿತ್ಯ ದೇವರಸರುಂ ಎರಂಬರವಿಯ ನೆಲೆ ವೀಡಿನಲು ಸುಖ ಸಂಕಥಾ ವಿನೋದದಿಂ ರಾಜ್ಯಕ್ಕೆಯುತ್ತಮಿರೆ'' ಎಂದು ವರ್ಣಿಸುತ್ತದೆ. ಯಲಬುರ್ಗಾ ಶಾಸನವು ''ಸ್ವಸ್ತಿ ಶ್ರೀ ಮನ್ಮಹಾ ಮಂಡಳೇಶ್ವರ ವರ ವಿಕ್ರಮಾದಿತ್ಯ ದೇವ'' ನೆಂದು ವೀರ ವಿಕ್ರಮಾದಿತ್ಯನನ್ನು ಕರೆದರೆ [೬೬] ಕಲ್ಲೂರದ ಕ್ರಿ.ಶ. ೧೧೮೬ ರ ನಾಲ್ಕನೆಯ ಸೋಮೇಶ್ವರನ ಶಾಸನವು 'ಶ್ರೀ ಮನ್ಮಹಾ ಮಂಡಳೇಶ್ವರ ಚಾವುಂಡರಸದೇವನ ಕುಮಾರ ವೀರ ಬಿಜ್ಜಲದೇವರಸ' ನೆಂದು ಕರೆಯುವದು. [೬೭]

## ನೊಳಂಬರು

ನೊಳಂಬರು ಪಾರಂಪರಿಕವಾಗಿ ಬಂದ ನೊಳಂಬವಾಡಿ-೩೨೦೦೦ ವನ್ನು ಆಳುತ್ತಿದ್ದರು. ಇವರು ಆರಂಭದಲ್ಲಿ ಹೇಮಾವತಿಯನ್ನು (ಹೆಂಜೇರು) ರಾಜಧಾನಿಯಾಗಿ ಮಾಡಿಕೊಂಡಿದ್ದರು. ಮುಂದೆ ಕಂಪಿಲೆಯನ್ನು ರಾಜಧಾನಿಯಾಗಿ ಆರಿಸಿಕೊಂಡರು. ಈ ನೊಳಂಬರು ತುಂಗಭದ್ರಾ ನದಿಯನ್ನು ದಾಟಿ ಬಂದು, ಎಂದೂ ಆಡಳಿತ ನಡೆಸಿರುವದಿಲ್ಲ ಆದರೆ ಗಂಗಾವತಿ ತಾಲೂಕಿನ ವಿಪ್ರಗ್ರಾಮವನ್ನು ಕೆಲವು ಕಾಲ ನೆಲೆವಿಡನ್ನಾಗಿ ಮಾಡಿಕೊಂಡಂತೆ ಕಲ್ಕಂಬ ಮತ್ತು ಹಳೆನಲ್ಲುಡಿ ಶಾಸನಗಳಿಂದ ತಿಳಿದುಬರುತ್ತದೆ. ಈ ವಂಶದ ಕೆಲವು ಸ್ತ್ರೀಯರು ಕೊಪ್ಪಳದಲ್ಲಿ ಧಾರ್ಮಿಕ ವಿಧಿಯಿಂದ ಮರಣ ಹೊಂದಿರುವದನ್ನು ಕೊಪ್ಪಳದಲ್ಲಿ ದೊರೆತ ನಿಶಿಧಿ ಶಾಸನಗಳಿಂದ ತಿಳಿದುಬರುತ್ತದೆ. ವಿಪ್ರದ ಶಾಸನವು ಈ ಮನೆತನದ 'ಪಲ್ಲವ ಪೆರ್ಮ್ಮಾಡಿ'ಯನ್ನು ಶ್ರೀಮತ ಮಹಾಮಂಡೇಳೇಶ್ವರ ತ್ರಿಭುವನಮಲ್ಲಪಾಂಡ್ಯ ವೀರ ನೊಳಂಬ ಪಲ್ಲವಪೆರ್ಮ್ಮಾಡಿ ದೇವನು ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾಗಿ ನೊಳಂಬವಾಡಿ ೩೨೦೦೦ ಸಾವಿರವನ್ನು ಆಳುತ್ತಿದ್ದನೆಂದು ಹೇಳುತ್ತದೆ. [೬೮]

**ಕೊಪ್ಪಳ ಜಿಲ್ಲೆಯ ಆಳರಸರು**

ಸಾರ್ವಭೌಮರಸರು ತಮ್ಮ ವಿಶಾಲ ಸಾಮ್ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ದೇಶ, ವಿಷಯ, ನಾಡು, ಕಂಪಣ, ಅಗ್ರಹಾರ, ಊರಾಡಳಿತ, ಗ್ರಾಮಾಡಳಿತಗಳೆಂಬ ಘಟಕಗಳಲ್ಲಿ ವಿಂಗಡಿಸಿದ್ದರು ಮತ್ತು ಅವುಗಳ ಆಡಳಿತ ಸುಗಮಗೊಳ್ಳಲು ಪ್ರತಿಯೊಂದು ಘಟಕಗಳ ಮೇಲೆ ರಾಜಪ್ರತಿನಿಧಿಗಳನ್ನು ಮಂಡಳೇಶ್ವರ, ಸಾಮಂತ, ಮನ್ನೆಯ, ನಾಡಾಧಿಕಾರಿ, ಸುಂಕಾಧಿಕಾರಿಗಳನ್ನು ನೇಮಿಸುತ್ತಿದ್ದರು. ಇವರು ತಂತಮ್ಮ ವಿಭಾಗದ ಸಂಸ್ಕೃತಿಯನ್ನು ಪೋಷಿಸಿ ಜನಜೀವನ ಸುಗಮಗೊಳಿಸಿ ರಾಜರುಗಳಿಗೆ, ರಾಜ್ಯದ ಶಕ್ತಿಗೆ ಸ್ಥಿರತೆಯನ್ನು ಒದಗಿಸುತ್ತಿದ್ದರು.

**೧. ಮಹಾಮಂಡಳೇಶ್ವರರು**

ಆಡಳಿತ ಉಪವಿಭಾಗವಾಗಿ ಮಂಡಳದ ಕಲ್ಪನೆಯು ಋಗ್ವೇದ ಕಾಲದಷ್ಟು ಪ್ರಾಚೀನತೆ ಹೊಂದಿದೆ. ಮಂಡಳ ಇಲ್ಲವೆ ಪ್ರಾಂತದ ಒಡೆಯ ಮಂಡಳೇಶ್ವರನಾಗಿದ್ದು ಅವನನ್ನು ಮಂಡಲಾಧೀಪ, ಮಂಡಳಿಕ, ಮಂಡಳೀಶವೆಂಬ ಪರ್ಯಾಯ ಪದಗಳಿಂದ ಶಾಸನಗಳು ಕರೆದಿವೆ. ಕೊಪ್ಪಳ ಜಿಲ್ಲೆಯ ಆಡಳಿತದಲ್ಲಿ ಮಹಾಮಂಡಳೇಶ್ವರರು ಮುಖ್ಯರಾಗಿದ್ದು ಇವರು ಚಕ್ರವರ್ತಿಯ ಅಧೀನಕ್ಕೊಳಪಟ್ಟು ವಂಶಪಾರಂಪರ್ಯದಿಂದ ಮುಂದುವರೆಯುತ್ತಿದ್ದರು. ಅಷ್ಟೇಯಲ್ಲದೆ ಪರಂಪರಾಗತವಾಗಿ ಬಂದ ಬಿರುದುಬಾವಲಿ, ರಾಜಚಿನ್ಹೆಗಳನ್ನು ಸಹ ಧರಿಸುತ್ತಿದ್ದರು.

**ಅ. ಶ್ರೀಮಂತ**

ಮುಧೋಳದ ಕ್ರಿ.ಶ. ೯೯೭ ರ ರಾಷ್ಟ್ರಕೂಟ ಎರಡನೆ ಕೃಷ್ಣನ ಶಾಸನವು ಜಿಲ್ಲೆಯ ಸಾಮಂತ ಮಂಡಳೇಶ್ವರರನ್ನು ಹೆಸರಿಸುವ ಮೊದಲ ಶಾಸನವಾಗಿದ್ದು ಶ್ರೀಶುಭತುಂಗದೇವನ ದಯೇಯಿಂದ ಶ್ರೀಮಂತನು ಬೆಳ್ವಲ-೩೦೦ ನ್ನು ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ.[೯೯]

**ಆ. ಜಗದೇಕಮಲ್ಲ ಪೆರ್ಮ್ಮಾಡಿ**

ಅಂಟೂರ ಠಾಣಾದ ಕ್ರಿ.ಶ. ೧೦೮೨ ರ ಶಾಸನವು ವಿಕ್ರಮಾದಿತ್ಯನ ಮಂಡಳೇಶ್ವರನನ್ನು ಹೆಸರಿಸುತ್ತದೆ.[೧೦೦] ''ಸ್ವಸ್ತಿ, ಶ್ರೀಮನ್ಮಹಾಮಂಡಳೇಶ್ವರ ಜಗದೇಕಮಲ್ಲ (ಪೆ)ರ್ಮ್ಮಾಡಿ ದೇವರಸರು ಕಿಸುಕಾಡೆಪ್ಪತ್ತುಮಂ ಸುಖಸಂಕಥಾ ವಿನೋದದಿಂದಾಳುತ್ತಮಿರೆ'' ಎಂದು ಹೇಳುವದು. ಇವನ ಮನೆತನದ ಮೂಲದ ಕುರಿತು ಏನನ್ನು ಹೇಳುವದಿಲ್ಲ. ಬಹುಶಃ ಇವರು ನೇರವಾಗಿ ಅರಸನಿಂದ ನಿಯುಕ್ತನಾಗಿದ್ದರಿಂದ ತಮ್ಮ ಮೂಲವನ್ನು ಹೇಳಿಕೊಂಡತ್ತಿಲ್ಲ. ಈ ಶಾಸನದ ಜಗದೇಕಮಲ್ಲ ಪೆರ್ಮ್ಮಾಡಿ ಬಹುಶಃ ೩ ನೇ ಸೋಮೇಶ್ವರನ ಮೊದಲನೆಯ ಮಗನಾಗಿರುವ ಸಾಧ್ಯತೆಯಿದ್ದು, ಬಹುಶಃ ವಿಕ್ರಮಾದಿತ್ಯನ ಕಾಲದಲ್ಲಿ ಯುವರಾಜ ಇಲ್ಲವೆ ಕುಮಾರ ವೃತ್ತಿಯಿಂದ ಕಿಸುಕಾಡೆಪ್ಪತ್ತರ ಮೇಲೆ ಆಡಳಿತ ನಡೆಸಿರಬೇಕು.

### ಇ. ವೀರ ಬಾಚಿದೇವರಸ

ಪುರ ಗ್ರಾಮದ ತೆದಿಯಿಲ್ಲದ ೧೨ ನೇ ಶತಮಾನದ ಶಾಸನವು ವೀರಬಾಚಿದೇವರಸನನ್ನು 'ಸಮಸ್ತ ಪ್ರಸಸ್ತಿ ಸಹಿತ ಚೆನ್ನಮನ್ನೆಯ ಸೂರೆಕಾರ ಕದಂಬ ಕಂಠೀರವ ಶ್ರೀಮನ್ಮ ಮಹಾಮಂಡಳೇಶ್ವರ ವೀರಬಾಚಿದೇವರಸ'ನೆಂದು ಕರೆಯುತ್ತದೆ.[೧೦೧] ಆದರೆ ಯಾವ ವಿಭಾಗವನ್ನು ಆತ ಆಳುತ್ತಿದ್ದನೆಂದು ಮಾತ್ರ ತಿಳಿಸುವದಿಲ್ಲ. ಶಾಸನದಲ್ಲಿ ಬರುವ ಚೆನ್ನಮನ್ನೆಯಕಾರ ಎಂಬುದು ಅವನ ಬಿರುದಾಗಿದ್ದು, ಅವನು ಮನ್ನೆಯರನ್ನು ಸೋಲಿಸಿರುವ ವಿಷಯ ಇದರಿಂದ ತಿಳಿಯುವದು. ಅದೇ ರೀತಿ ಕದಂಬ ಕಂಠೀರವ ಎಂಬುದು ಸಹ ಬಿರುದಾಗಿದು. ಅವನು ಕದಂಬ ವಂಶಕ್ಕೆ ಸೇರಿದವನೆಂಬುದನ್ನು ತಿಳಿಸುತ್ತದೆ. ಕ್ರಿ.ಶ. ೧೧೩೬ ರ ಚಾಲುಕ್ಯ ಮೂರನೇ ಸೋಮೇಶ್ವರನ ಮಾದಿನೂರ ಶಾಸನವು ಮಹಾಮಂಡಳೇಶ್ವರ ಕಲ್ಕೆರೆಯ ವೀರ ಎಂದು ಹೇಳುತ್ತದೆ.[೧೦೨] ಬಹುಶಃ ವೀರ ಎಂಬುದು ಮೇಲಿನ ಶಾಸನದ ಬಾಚಿದೇವರಸನ ಹೆಸರೆ ಆಗಿರಬೇಕು.

### ಈ. ಸೋವಿದೇವರಸ

ಮೇಲಿನ ಮಾದಿನೂರ ಶಾಸನವು ಶ್ರೀ ಮನ್ಮಹಾಮಂಡಳೇಶ್ವರ ಸೋವಿದೇವರಸನನ್ನು ಹೆಸರಿಸುತ್ತಿದ್ದು, ಇವನು ಯಾವ ಮನೆತನಕ್ಕೆ ಸೇರಿದವ ಮತ್ತು ಯಾವ ವಿಭಾಗವನ್ನು ಆಳುತ್ತಿದ್ದನೆಂದು ಮಾತ್ರ ಹೇಳುವದಿಲ್ಲ.

### ಉ. ದಾಸಿಗ

ಚಳಗೇರಿಯ ಕ್ರಿ.ಶ. ೧೧೭೨ ರ ಕಲಚುರಿ ಸೋವಿದೇವನ ಶಾಸನವು ಮಂಡಳೇಶ್ವರ ದಾಸಿಗನನ್ನು ಉಲ್ಲೇಖಿಸುತ್ತಾ ಅವನು ಸೋವಿದೇವನ ಕೈಕೆಳಗೆ ಮಂಡಳೇಶ್ವರನಾಗಿ ಕಿಸುಕಾಡು -೭೦ ನ್ನು ಆಳುತ್ತಿದ್ದನೆಂದು ಹೇಳುತ್ತಾ ವಂಶಾವಳಿ ನೀಡುತ್ತದೆ.[೧೦೩]




ಮುಖ್ಯವಾಗಿ ದಾಸಿಗನು ಯರಂಬರಿಗೆಯ ಸಿಂಧರ ಒಂದನೆ ಆಚುಗಿಯ ಸಹೋದರನಾಗಿರುವನು.

### ಊ. ವೀರ ಬಲ್ಲಾಳದೇವಯ್ಯ

ಕವಲೂರಿನ ಕ್ರಿ.ಶ. ೧೧೮೯ರ ಸಂಕಮನ ಕಾಲದ ಶಾಸನ ವೀರಬಲ್ಲಾಳದೇವಯ್ಯನನ್ನು ಹೆಸರಿಸುತ್ತಾ[೧೦೪] ಮಹಾಮಂಡಳೇಶ್ವರ ದ್ವಾರಾವತಿ ಪುರಾಧೀಶ್ವರ ಯಾದವ ನಾರಾಯಣ ಕಲಿಗಳಾದಿತ್ಯ

ಶ್ರೀಮತು ವೀರಬಲ್ಲಾಳ ದೇವಯ್ಯನ ಕುರಿತು ಹೇಳುವದು. ಇವನು ಆಳ್ವಿಕೆ ಮಾಡಿದ ಪ್ರದೇಶದ ಕುರಿತು ಮಾತ್ರ ಏನನ್ನು ಹೇಳುವದಿಲ್ಲ. ಮೂಲತಃ ವೀರಬಲ್ಲಾಳನು ಹೊಯ್ಸಳ ವೀರಬಲ್ಲಾಳನಾಗಿರುವನು. ಮುಂದುವರೆದು ಶಾಸನವು ಮಹಾಮಂಡಳೇಶ್ವರಾದ ಹಂಪರಸ, ಹೊಲ್ಲರಸ, ಯೋಚಿಮಯ್ಯ ನಾಯಕ, ಮಹಾಮಂಡಳೇಶ್ವರ ಸಿಂಗಟಾಲೂರಿನ ಬಾಚಿದೇವ, ಮಹಾಮಂಡಳೇಶ್ವರ ಮಣಿಯೂರ ಬಾಚರಸ- ದೊಡ್ಡರಸರನ್ನು ಹೇಳುವದು. ಇವರ ಮೂಲಸ್ಥಳದ ಕುರಿತು ಹೇಳಿದರು ಶಾಸನ ಅವರ ಆಡಳಿತ ವ್ಯಾಪ್ತಿಯ ಪ್ರದೇಶಗಳ ಕುರಿತು ಏನನ್ನು ತಿಳಿಸುವದಿಲ್ಲ.

## ೨. ಸಾಮಂತ ಮನ್ನೆಯರು

ರಾಜನ ಅಧೀನತ್ವದ ಸೂಚಿಯಾದ 'ಸಾಮಂತ' ಶಬ್ದ 'ಸಾಮ್ಯವಂತ' ದಿಂದ ಬಂದಿದೆ. ಶಾಸನಗಳಲ್ಲಿ ಸಾಮಂತ, ಮಹಾಸಾಮಂತರೆಂದು ಕರೆದುಕೊಂಡ ಇವರು ಅರಸನಿಂದ ಭೂಮಿಯ ಒಡೆತನ ಪಡೆದುಕೊಂಡು ಆಡಳಿತ ನಡೆಸುತ್ತಿದ್ದರೂ ನಾಡಿನ (ಪ್ರಾಂತೀಯ) ಮಹಾಮಂಡಳೇಶ್ವರ ಮತ್ತು ಕೇಂದ್ರದಿಂದ ಮಹಾಸಾಮಂತಾಧಿಪತಿಗಳಿಗೆ ಅಧೀನರಾಗಿ ಕೆಲಸ ನಿರ್ವಹಿಸಬೇಕಿತ್ತು. ಹೀಗಾಗಿ ಇವರ ಅಧಿಕಾರ ಮಂಡಳೇಶ್ವರ ಮತ್ತು ಮಹಾಮಂಡಳೇಶ್ವರರಿಗಿಂತ ಕಡಿಮೆಯಾಗಿತ್ತು.

ಮಹಾಸಾಮಂತರ ಉಲ್ಲೇಖ ಮೊದಲ ಬಾರಿಗೆ ಕೊಪ್ಪಳ ಜಿಲ್ಲೆಯ ಕ್ರಿ.ಶ. ೮೮೩ ರ ಕೊಪ್ಪಳ ಶಾಸನದಲ್ಲಿ ದೊರೆಯುತ್ತದೆ ಶಾಸನವು[೧೦೫] "ಸಮದಿಗತ ಪಂಚಮಹಾಶಬ್ದ ಮಹಾಸಾಮಂತ ಬನವಾಸಿ ಪುರವರೇಶ್ವರ ಪೆರ್ಮ್ಮಾಡಿದೇವ"ನನ್ನು ಉಲ್ಲೇಖಿಸುತ್ತದೆ. ಪೆರ್ಮ್ಮಾಡಿದೇವ ಬನವಾಸಿ ಕದಂಬ ವಂಶಕ್ಕೆ ಸೇರಿದವನು. ಈ ಶಾಸನವು ಅರಸನನ್ನು ಇಂದ್ರ ಎಂದು ಕರೆಯುತ್ತಿದ್ದು ಶಾಸನದ ಕಾಲಕ್ಕೆ ರಾಷ್ಟ್ರಕೂಟ ೨ ನೇ ಕೃಷ್ಣ ಆಳುತ್ತಿದ್ದನು. ಇಂದ್ರ ಕೃಷ್ಣನ ಮಗನಾಗಿದ್ದು ತಂದೆಯ ಕಾಲದಲ್ಲಿ ಕೊಪ್ಪಳ ಪ್ರದೇಶದಲ್ಲಿ ಯುವರಾಜನಾಗಿ ಆಡಳಿತ ನಡೆಸುವಾಗ ತನ್ನ ಹೆಸರಿನಿಂದಲೆ ಶಾಸನ ಹಾಕಿಸಿರಬೇಕು. ಇಲ್ಲವೆ ಶಾಸನ ಕವಿಯೇ ಆ ಪ್ರಮಾದ ಮಾಡಿರಬೇಕು.

ಉಪ್ಪಿನ ಬೇಟಗೇರಿಯ ಕ್ರಿ.ಶ. ೯೬೪ರ ಶಾಸನವು ಸಾಮಂತ ಶಂಕರಗಂಡನನ್ನು ಹೆಸರಿಸುತ್ತದೆಯಾದರೂ ಅವನು ಕೊಪ್ಪಳದಲ್ಲಿ ಜಯಧೀರ ಜಿನಾಲಯ ಕಟ್ಟಿಸಿ ದಾನಬಿಟ್ಟ ಕುರಿತು ಹೇಳುವುದು ಆದರೆ ಜಿಲ್ಲೆಯ ವ್ಯಾಪ್ತಿಯಲ್ಲಿ ಅವನು ಆಡಳಿತ ಮಾಡಿದ ಕುರಿತು ಹೇಳುವದಿಲ್ಲ. ಅವನು ಬನವಾಸಿ -೧೨೦೦೦ ಪ್ರಾಂತವನ್ನು ಆಳುತ್ತಿದ್ದನೆಂದು ಮಾತ್ರ ಹೇಳುತ್ತದೆ.[೧೦೬] ಶಾಸನವು ಶಂಕರ ಗಂಡನ ವಂಶಾವಳಿಯನ್ನು ನೀಡುತ್ತದೆ. ಕಿರು ಸಾಮಂತನೆಂದು ಹೆಸರು ಪಡೆದು ಸಾವಿಯಣ್ಣನು ಕಲ್ಯಾಣ ಚಾಲುಕ್ಯ ಎರಡನೆಯ ತೈಲಪನ ಸಾಮಂತ ಸೋಭನರಸನ ದಯೆಯಿಂದ ಕುಕನೂರ -೩೦ ನ್ನು ಆಳುತ್ತಿದ್ದನೆಂದು ತಳಕಲ್ಲದ ಕ್ರಿ.ಶ. ೯೯೧ ರ ಶಾಸನದಿಂದ ತಿಳಿದು ಬರುವುದು.[೧೦೭] ಬಳಗೇರಿ ಶಾಸನವು "ಸ್ವಸ್ತಿ ಸಮದಿಗತ ಪಂಚಮಹಾ ಶಬ್ದ ಮಹಾಸಾಮಂತ ಪತ್ಯಕ್ಷ

ಭೂವಿಕ್ರಮಂ ಪುಸಿಯಿಲ್ಲದಾತಂ ನರೆವೊಡೆಗಣ್ಡಂ ಕದನ ಪ್ರಚಣ್ಡ ಕಟಕ ಪ್ರಕಾರಂ ಗಿರಿದುರ್ಗ ಮಲ್ಲಂ ರಣವೀರಂ ಶ್ರೀಮದಾಹವ ಮಲ್ಲದೇವರಪಾದಪಂಕಜ ಭ್ರಮರಂ ಶ್ರೀ ಮತ್ತೋಭನರಸ ಇನ್ತೆನಿಸಿ ಸೋಬನರಸನ ಶ್ರೀ ಬಲ್ಲವರಸರ ಪ್ರಸಾದೋಪತ್ತಲ್ದಯಿಂ ಎರಡಾರುನೂರವಂ ಬನವಾಸಿ ಪನ್ನಿಚ್ಛಾಸಿರಮುಮಂ ನಿರಾಕುಳ ಮಾಳುತ್ತಿರೆ ಎಂದಿದೆ.'' ಅಂದರೆ ಸಾಮಂತ ಸೋಭನರಸನು ಬೆಳ್ವಲ ವುಲಿಗೇರಿ ಹಾಗೂ ಬನವಾಸಿ ಪ್ರಾಂತಗಳ ಮೇಲೆ ಆಡಳಿತ ನಡೆಸುತ್ತಿದ್ದನೆಂದು ತಿಳಿಯುವುದು.[೧೦೮]

ಕಲ್ಲೂರದ ಕ್ರಿ.ಶ. ೧೦೦೨ ರ ಇರಿವಬೆಡಂಗನ ಶಾಸನವು ಮೇಲಿನ ಆಡಳಿತ ವಿಭಾಗಗಳ ಜೊತೆಯಲ್ಲಿ ಕುಕನೂರ-೩೦ ನ್ನು ಆಳುತ್ತಿದ್ದನೆಂದು ಹೇಳಿ - ಅವನ ಪ್ರಶಸ್ತಿನ್ನು ನೀಡುತ್ತದೆ.[೧೦೯] ಕ್ರಿ.ಶ. ೧೦೩೩ ರ ಒಂದನೆ ಜಗದೇಕಮಲ್ಲನ ಕಾಲದ ಅರಕೇರಿ ಶಾಸನವು ಜಗದೇಕಮಲ್ಲನ ಮನ್ನೆಯನಾಗಿ ಚಾವುಂಡರಾಯ ಎಂಬುವವನು ಆಳ್ವಿಕೆಮಾಡುತ್ತಿದ್ದುದನ್ನು ಹೇಳುವುದು.[೧೧೦] ಇದೇ ಕಾಲಮಾನಕ್ಕೆ ಸೇರಿದ ಶಿವಪುರದ ಶಾಸನ ಒಂದನೆ ಸೋಮೇಶ್ವರನನ್ನು ಹೆಸರಿಸುತ್ತಿದ್ದು ಬಹುಶಃ ಸೋಮೇಶ್ವರ ಈ ಭಾಗದ ಮೇಲೆ ಯುವರಾಜನಾಗಿದ್ದು ಆ ಸಮಯದಲ್ಲಿ ಶಾಸನ ತನ್ನ ಹೆಸರಿನಿಂದ ಹೊರಡಿಸಿರಬೇಕು.[೧೧೧] ಈ ಸೋಮೇಶ್ವರನ ಸಾಮಂತನಾಗಿ ಪಂಪರಸನು ಈ ಜಿಲ್ಲೆಯಲ್ಲಿ ಆಳುತ್ತಿದ್ದು ಅವನನ್ನು ''ಶ್ರೀ ಮನ್ಮಹಾಸಾಮಂತ ಪಂಪರಸ'' ನೆಂದು ಶಾಸನ ಕರೆಯುತ್ತದೆ. ಹಿರೆಮನ್ನಾಪುರದ ೨ ನೆ ತೈಲನ ಶಾಸನವು ತೈಲನ ಸಾಮಂತನಾಗಿ ಕದಂಬ ಅಜವರ್ಮ ಎಡದೊರೆನಾಡನ್ನು ಆಳುತ್ತಿದ್ದನೆಂದು ಹೇಳುವುದು.[೧೧೨] ಇದೇ ಗ್ರಾಮದ ತೆದಿಯಿಲ್ಲದ ಶಾಸನವು ಆಜವರ್ಮ ನನ್ನಿಗದಂಬ, ಕದಂಬಾಭರಣ, ಬನವಾಸಿ ಪುರವರಾಧೀಶ್ವರ ಹೆಸರಿನ ಬಿರುದುಗಳೊಂದಿಗೆ ಕೆಳವಾಡಿ ೩೦೦ ನ್ನು ಆಳುತ್ತಿದ್ದನೆಂದು ಹೇಳುವದು. ಎರಡು ಶಾಸನಗಳು ಒಂದೇ ಗ್ರಾಮದಲ್ಲಿರುವುದರಿಂದ ಆಜವರ್ಮ ಎಡದೊರೆ ನಾಡಿನ ಜೊತೆಯಲ್ಲಿ ಕೆಳವಾಡಿ ೩೦೦-ರನ್ನು ಆಳಿರುವದರಲ್ಲಿ ಯಾವುದೆ ಸಂಶಯವಿಲ್ಲ. ಏಕೆಂದರೆ ಕೆಳವಾಡಿ-೩೦೦ ಎಡದೊರೆ ನಾಡಿನ ಒಂದು ವಿಭಾಗವಾಗಿತ್ತು.

ನಮ್ಮ ಅಧ್ಯಯನದ ವ್ಯಾಪ್ತಿಯ ಕೊನೆಯ ಆಡಳಿತಗಾರನೆಂದರೆ ರೇಚಿದೇವನ ಮಗ ಶ್ರೀನಿಧಿ ಮಲ್ಲರಸ. ಇವನು ಕ್ರಿ. ಶ. ೧೧೭೭ ರಲ್ಲಿ ಮಾಸವಾಡಿಯ ಮೇಲೆ ಆಡಳಿತ ನಡೆಸುತ್ತಿದ್ದನೆಂದು ಕವಲೂರ ಶಾಸನದಿಂದ ತಿಳಿದು ಬರುತ್ತದೆ.[೧೧೩]

## ಅಡಿ ಟಿಪ್ಪಣಿಗಳು

೧. *Epigraphic Karnatica*, Vol-7, No. 225, ಬಂದಳಿಕೆ, ಕ್ರಿ.ಶ. ೧೨೦೪.
೨. ದೇಸಾಯಿ, ಪಿ.ಬಿ. (ಸಂ), 1970, *A History of Karnataka*, ಪು-೪೭, Dharwad.
೩. *Indian Autiquary*, Vol-8, ಪುಟ-೨೩೭.
೪. *Hyderabad Archaeological Series*, Vol-11, No. 17, ಪಾಲ್ಕಿಗುಂಡು, ಕ್ರಿ.ಶ. ೩ ನೇ ಶತಮಾನ.
೫. ಅದೇ, Vol-10, ಪು- ೧೫-೧೬, ಗವಿಮಠ, ಕ್ರಿ.ಪೂ. ೩ ನೇ ಶತಮಾನ ಮತ್ತು ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ನಂ-೨೮, ಕೊಪ್ಪಳ, ಪು-೩೭.

೬. ದೇಸಾಯಿ, ಪಿ. ಬಿ. (ಸಂ), *A History of Karnataka,* ಪು- ೪೭.

೭. ಅದೇ, ಪು-೫೫.

೮. *Indian Archeology -A Review*, 1977-78 ಮತ್ತು ಪಾಟೀಲ, ಬಿ.ಸಿ, *ಕೊಪ್ಪಳ : ಸಾಂಸ್ಕೃತಿಕ ಪರಂಪರೆ*, ಪು-೨೦ ಮತ್ತು ಪುರಾತತ್ವ ಇಲಾಖೆಯಿಂದ ಪಡೆದ ಮಾಹಿತಿಯನ್ನೊಳಕೊಂಡಿದೆ.

೯. ಗೋಪಾಲ, ಬಿ. ಆರ್. *Corpus of Kadamba Inscriptions,* ಪು-೧೫.

೧೦. ಪಾಟೀಲ, ಬಿ.ಸಿ., ೧೯೯೮, ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಕೊಪ್ಪಳ, ಪು-೨೦.

೧೧. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨,* ಕೊಪ್ಪಳ ಜಿಲ್ಲೆ ನಂ- ೧೩, ಪುರ, (ಕು.ತಾ), ಕ್ರಿ.ಶ. ೧೨ ನೇ ಶತಮಾನ, ಪು-೨೮೮, ಹಂಪಿ ಕ.ವಿ.ವಿ.

೧೨. ಅದೇ, ನಂ-೨೨, ಹಲಗೇರಿ (ಕೊ.ತಾ), ಕ್ರಿ. ಶ. ೮ ನೇ ಶತಮಾನ, ಪು-೨೯.

೧೩. ಅದೇ, ನಂ- ೬೪, ಇಟಗಿ (ಯ.ತಾ), ಕ್ರಿ.ಶ. ೮ ನೇ ಶತಮಾನ, ಪು-೨೫೬.

೧೪. ಶಿರೂರ, ಬಿ.ವ್ಹಿ., ೧೯೭೬, *ಶ್ರವಣಬೆಳ್ಗೊಳ: ರಾಜಕೀಯ ಸಾಹಿತ್ಯಿಕ, ಸಾಂಸ್ಕೃತಿಕ ಮಹತ್ವ,* ಪು- ೧೮-೧೯ ಧಾರವಾಡ.

೧೫. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨,* ಕೊಪ್ಪಳ. ಜಿಲ್ಲೆ, ನಂ-೬೫, ಇಟಗಿ (ಯ.ತಾ), ಕ್ರಿ.ಶ. ೯೩೬, ಪು-೨೫೭, ಹಂಪಿ.

೧೬. ಅದೇ, ನಂ. ೫೬, ಕುಕನೂರ (ಯ.ತಾ), ಕ್ರಿ.ಶ. ೯೬೮, ಪು-೨೩೮.

೧೭. ಅದೇ, ನಂ-೩೪, ಕೊಪ್ಪಳ (ಕೊ.ತಾ), ಕ್ರಿ.ಶ. ೮೮೩, ಪು-೪೦.

೧೮. ಅದೇ, ನಂ-೩೨, ಕೊಪ್ಪಳ (ಕೊ.ತಾ), ಕ್ರಿ.ಶ. ೮೮೩, ಪು-೩೯.

೧೯. ಅದೇ, ನಂ. ೬೫, ಇಟಗಿ (ಯ.ತಾ), ಕ್ರಿ.ಶ. ೯೩೯, ಪು-೨೫೭.

೨೦. ಅದೇ, ನಂ-೧೧೧, ಹೊಸಕೇರಿ (ಯ.ತಾ), ಪು-೩೯೦.

೨೧. ಅದೇ, ನಂ-೩೦, ಮುಧೋಳ (ಯ.ತಾ), ಕ್ರಿ.ಶ. ೮೯೭, ಪು-೧೮೯.

೨೨. ಅದೇ, ನಂ-೧೧, ಉಪ್ಪಿನಬೇಟಗೇರಿ, (ಕೊ.ತಾ), ಕ್ರಿ.ಶ. ೯೬೪, ಪು-೨೨.

೨೩. ಅದೇ, ನಂ. ೫೬, ಕುಕನೂರ (ಯ.ತಾ), ಕ್ರಿ.ಶ. ೯೬೮, ಪುಟ-೨೩೮.

೨೪. ಅದೇ, ನಂ- ೬೩, ಇಟಗಿ (ಯ.ತಾ), ಕ್ರಿ.ಶ. ೯೬೮, ಪುಟ-೨೫೬.

೨೫. ಕೊಪ್ಪಾ, ಎಸ್. ಕೆ, ೧೯೯೦, *ತರ್ದವಾಡಿ ನಾಡು : ಒಂದು ಅಧ್ಯಯನ,* ಪು-೫೫, ಇಂಡಿ.

೨೬. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨,* ಕೊಪ್ಪಳ ಜಿಲ್ಲೆ ನಂ-೨೬, ಮಾದಿನೂರ, (ಕೊ. ತಾ), ಕ್ರಿ.ಶ. ೯೭೩, ಪು-೩೨, ಹಂಪಿ.

೨೭. ದೇಸಾಯಿ ಪಿ.ಬಿ. (ಸಂ): *A.H.K.*ಪುಟ-೧೫೭-೧೫೮

೨೮. *South Indian Inscription,* ಸಂ- ೧೮, ನಂ- ೨೭.

೨೯. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨,* ಕೊಪ್ಪಳ ಜಿಲ್ಲೆ ನಂ- ೨೬, ಮಾದಿನೂರ, (ಕೊ. ತಾ) ಕ್ರಿ.ಶ. ೯೭೩, ಪು-೩೧, ಹಂಪಿ, ಕ.ವಿ.ವಿ.

೩೦. ಅದೇ, ನಂ. ೮೪, ಕೊಪ್ಪಳ, (ಕೊ.ತಾ), ಕ್ರಿ.ಶ. ೯೮೭, ಪು-೬೯.

೩೧. ಅದೇ, ನಂ. ೫೩, ಆನೆಗುಂದಿ, (ಗ.ತಾ), ಕ್ರಿ.ಶ. ೯೮೮, ಪು-೩೫೩.

೩೨. ಅದೇ, ನಂ. ೫೯, ತಳಕಲ್ಲ, (ಯ.ತಾ), ಕ್ರಿ.ಶ. ೯೯೧, ಪು-೨೫೪.

೩೩. Fleet, J.F., 1988, *The Dynasties of the Canares District of the Bombay Presidency,* ಪು. ೪೨೮-೨೯, New Delhi.

೩೪. ದೇಸಾಯಿ, ಪಿ.ಬಿ. (ಸಂ), *A.H.K.* ಪುಟ- ೧೬೩.

೩೫. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.* ಕೊಪ್ಪಳ ಜಿಲ್ಲೆ, ನಂ-೭, ಹಿರೆಮನ್ನಾಪುರ, (ಕು.ತಾ), ಕ್ರಿ.ಶ. ೯೯೭, ಪು-೨೮೩, ಹಂಪಿ, ಕ.ವಿ.ವಿ.

೩೬. ಅದೇ, ನಂ- ೩೬, ಬಳಗೇರಿ, (ಯ.ತಾ), ಕ್ರಿ.ಶ. ೧೦೦೨, ಪು-೧೯೪.

೩೭. ಅದೇ, ನಂ- ೧೦, ಕಲ್ಲೂರ, (ಯ.ತಾ), ಕ್ರಿ.ಶ. ೧೦೦೨, ಪು-೧೬೪.

೩೮. ಅದೇ, ನಂ-೫೦, ಕುಕನೂರ, (ಯ.ತಾ), ಕ್ರಿ.ಶ. ೧೦೦೫, ಪು-೨೨೩.

೩೯. ಅದೇ, ನಂ- ೬೨, ಕೊಪ್ಪಳ, (ಕೊ.ತಾ), ಕ್ರಿ.ಶ. ೧೦೦೮, ಪು-೫೬.

೪೦. ಬಸವರಾಜ ಕೆ. ಆರ್., *History and Culture of Karnataka*, ಪು-೯೦.

೪೧. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.* ಕೊಪ್ಪಳ ಜಿಲ್ಲೆ, ನಂ-೩, ಗೋತಗಿ, (ಕು. ತಾ), ಕ್ರಿ.ಶ. ೧೦೨೪, ಪು-೨೭೯, ಹಂಪಿ, ಕ.ವಿ.ವಿ.

೪೨. Yazdani, G. (Ed)., *The Early History of the Deccan part-1*, Oriental Books Prints, Corporation, ಪು-೩೩೦, New Delhi.

೪೩. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.* ಕೊಪ್ಪಳ ಜಿಲ್ಲೆ, ನಂ.೪, ಗೊತಗಿ, (ಕು. ತಾ), ಕ್ರಿ.ಶ. ೧೦೪೫, ಪು-೨೮೦, ಹಂಪಿ, ಕ.ವಿ.ವಿ.

೪೪. ಅದೇ, ನಂ-೧೫೯, ಶಿವಪುರ, (ಕೊ.ತಾ), ಕ್ರಿ.ಶ. ೧೦೩೩, ಪು-೧೫೨.

೪೫. ಅದೇ, ನಂ-೨, ವಿಪ್ರ, (ಗ.ತಾ), ಕ್ರಿ.ಶ. ೧೦೫೯, ಪು-೩೧೪.

೪೬. ಅದೇ, ನಂ-೬, ಅಳವಂಡಿ, (ಕೊ.ತಾ), ಕ್ರಿ.ಶ. ೧೦೬೧, ಪು-೧೨.

೪೭. ದೇಸಾಯಿ, ಪಿ. ಬಿ. (ಸಂ), *A.H.K.* ಪು-೧೭೫-೧೮೫.

೪೮. ಅದೇ, ಪು. ೧೭೮.

೪೯. Fleet, J.F. 1988, *The Dynasties of the Canares District of the Bombay Presidency*, ಪು. ೪೪೫-೪೪೬, New Delhi.

೫೦. ದೇಸಾಯಿ ಪಿ. ಬಿ. (ಸಂ), *A.H.K.* ಪು-೧೭೭-೧೭೮.

೫೧. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.* ಕೊಪ್ಪಳ ಜಿಲ್ಲೆ ನಂ- ೧೪೮, ಹುಲಗಿ, (ಕೊ. ತಾ), ಕ್ರಿ.ಶ. ೧೦೮೮, ಪು-೧೪೫, ಹಂಪಿ, ಕ.ವಿ.ವಿ.

೫೨. ಅದೇ, ನಂ- ೩೮, ಕುಕನೂರ, (ಯ.ತಾ), ಕ್ರಿ.ಶ. ೧೧೦೭ ರಿಂದ ೧೧೫೭, ಪು-೧೯೭.

೫೩. ದೇಸಾಯಿ ಪಿ. ಬಿ. (ಸಂ), *A.H.K.* ಪು-೧೮೫.

೫೪. Fleet, J.F. 1988, *The Dynasties of the Canares District of the Bombay Presidency* , ಪು-೪೫೬, New Delhi.

೫೫. ಬಸವರಾಜ ಕೆ. ಆರ್. *H.K.C*, ಪು-೧೦೧.

೫೬. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.* ಕೊಪ್ಪಳ ಜಿಲ್ಲೆ ನಂ-೧೬, ಕಲ್ಲೂರ (ಯ.ತಾ) ಕ್ರಿ.ಶ. ೧೧೩೨, ಪು-೧೭೩, ಹಂಪಿ, ಕ.ವಿ.ವಿ.

೫೭. ಅದೇ, ನಂ-೨೬, ಮಾದಿನೂರ (ಕೊ.ತಾ), ಕ್ರಿ.ಶ. ೧೧೩೬, ಪು-೩೧.

೫೮. ಅದೇ, ನಂ-೫೩, ಕುಕನೂರ (ಯ.ತಾ), ಕ್ರಿ.ಶ. ೧೧೨೯, ನಂ-೩೮, ಕುಕನೂರ ಕ್ರಿ.ಶ. ೧೧೩೨, ಪು-೨೩೬, ೧೯೭.

೫೯. ದೇಸಾಯಿ, ಪಿ.ಬಿ (ಸಂ), *A.H.K.* ಪು-೧೮೮.

೬೦. ದೇವರಕೊಂಡಾರಡ್ಡಿ. (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.* ಕೊಪ್ಪಳ ಜಿಲ್ಲೆ, ನಂ- ೩೯ ಮತ್ತು ನಂ- ೪೭, ಕುಕನೂರ, (ಯ. ತಾ), ಕ್ರಿ.ಶ. ೧೧೪೯, ಕ್ರಿ.ಶ. ೧೧೪೩, ಪುಟ-೨೦೩, ೨೧೮, ಹಂಪಿ, ಕ.ವಿ.ವಿ.

೬೧. ದೇಸಾಯಿ, ಪಿ.ಬಿ. (ಸಂ), *A.H.K.* ಪು- ೧೯೦

೬೨. ದೇವರಕೊಂಡಾರಡ್ಡಿ. (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.* ಕೊಪ್ಪಳ ಜಿಲ್ಲೆ ನಂ-೧೩, ಕಲ್ಲೂರ (ಯ.ತಾ), ಕ್ರಿ.ಶ. ೧೧೫೪, ಪು-೧೬೭.

೬೩. ಅದೇ, ನಂ- ೨೯, ಮುಧೋಳ (ಯ. ತಾ), ಕ್ರಿ.ಶ. ೧೧೫೪, ಪು-೧೮೪.

೬೪. ಅದೇ, ನಂ-೩೮, ಕುಕನೂರ (ಯ. ತಾ), ಕ್ರಿ.ಶ. ೧೧೫೭, ಪು-೧೯೭.

೬೫. ದೇಸಾಯಿ, ಪಿ. ಬಿ. (ಸಂ), *A.H.K.* ಪು-೧೯೦.

೬೬. ಬಸವರಾಜ, ಕೆ. ಆರ್. *H.K.C.* ಪು- ೧೦೪.

೬೭. ದೇಸಾಯಿ, ಪಿ.ಬಿ (ಸಂ), *A.H.K.* ಪು-೧೯೨.

೬೮. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.* ಕೊಪ್ಪಳ ಜಿಲ್ಲೆ, ನಂ-೧೨ ಮತ್ತು ನಂ-೧೩, ಕಲ್ಲೂರ, (ಯ.ತಾ), ಕ್ರಿ.ಶ. ೧೧೮೬, ೧೧೮೫, ಹಂಪಿ, ಕ.ವಿ.ವಿ.

೬೯. ಕೊಪ್ಪಾ , ಎಸ್.ಕೆ., ೧೯೯೦, ತರ್ದವಾಡಿಯ ನಾಡು ಒಂದು ಅಧ್ಯಯನ, ಪು- ೬೬, ಇಂಡಿ.

೭೦. Sharma, R. K., 1980, *The Kalachuries and Their Times*, ಪು-೧.

೭೧. ದೇಸಾಯಿ, ಪಿ. ಬಿ. (ಸಂ), *A.H.K.* ಪು. ೧೯೫.

೭೨. ಕೊಪ್ಪಾ , ಎಸ್.ಕೆ., ೧೯೯೦, ತರ್ದವಾಡಿಯ ನಾಡು ಒಂದು ಅಧ್ಯಯನ, ಪು- ೬೪, ಇಂಡಿ.

೭೩. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.* ಕೊಪ್ಪಳ ಜಿಲ್ಲೆ ನಂ-೪೦, ಕುಕನೂರ (ಯ.ತಾ) ಕ್ರಿ.ಶ. ೧೧೬೩, ಪು-೨೦೫, ಹಂಪಿ, ಕ.ವಿ.ವಿ.

೭೪. ಅದೇ, ನಂ-೪೧, ಕುಕನೂರ (ಯ. ತಾ), ಕ್ರಿ.ಶ. ೧೧೭೦, ಪು-೨೦೯.

೭೫. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ. ೧೧೭೧-೭೨, ಪು-೨೯೮.

೭೬. ಅದೇ, ನಂ-೩, ಕವಲೂರ (ಕೊ.ತಾ), ಕ್ರಿ.ಶ. ೧೧೭೭-೭೮, ಪುಟ-೪.

೭೭. ಅದೇ, ನಂ-೫೨, ಕುಕನೂರ (ಯ.ತಾ), ಕ್ರಿ.ಶ. ೧೧೭೮, ಪುಟ-೨೨೮.

೭೮. ಅದೇ, ನಂ-೯, ಅಳವಂಡಿ (ಕೊ. ತಾ), ಕ್ರಿ.ಶ. ೧೧೮೨, ಪು-೨೦.

೭೯. ಅದೇ, ನಂ- ೬೯, ಇಟಗಿ (ಯ. ತಾ), ಕ್ರಿ.ಶ. ೧೧೮೩, ಪು-೨೬೯.

೮೦. ದೇಸಾಯಿ, ಪಿ.ಬಿ. (ಸಂ), *A.H.K.* ಪು- ೧೦೩.

೮೧. ದೇವರಕೊಂಡಾರಡ್ಡಿ (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨,* ಹಂಪಿ. ಕೊಪ್ಪಳ ಜಿಲ್ಲೆ ನಂ-೩೮, ಕುಕನೂರ (ಯ. ತಾ), ಕ್ರಿ.ಶ. ೧೨೩೧-೩೨, ಪು-೧೯೭, ಹಂಪಿ, ಕ.ವಿ.ವಿ.

೮೨. ಅದೇ, ನಂ-೨೪, ಸಂಕನೂರ (ಯ. ತಾ), ಕ್ರಿ.ಶ. ೧೨೧೨ (೧೩೧೨), ಪು-೧೮೦, ಮತ್ತು ಕೊಪ್ಪಳ ನಂ-೩೮, ಪು-೪೨.

೮೩. ಅದೇ, ನಂ-೨೪, ಸಂಕನೂರ. (ಯ.ತಾ),ಕ್ರಿ.ಶ. ೧೨೧೨, ಪು-೧೮೦.
೮೪. ಬಿ. ವ್ಹಿ. ಶಿರೂರ ., ಕೋಪಣ ನಗರ ಒಂದು ಐತಿಹಾಸಿಕ ಕೇಂದ್ರ, ತಿರುಳುಗನ್ನಡ, ಸಂ-ಎಚ್. ಎಸ್. ಪಾಟೀಲ ಮತ್ತು ಸಂಗಡಿಗರು ೧೯೯೩, ಅಖಿಲ ಭಾರತ ೬೨ ನೇ ಕನ್ನಡ ಸಾಹಿತ್ಯ ಸಮ್ಮೇಳನ ಸಂಚಿಕೆ ಕೊಪ್ಪಳ.
೮೫. ದೇವರಕೊಂಡಾರಡ್ಡಿ (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ ನಂ-೨೪, ಸಂಕನೂರ, (ಯ. ತಾ),ಕ್ರಿ.ಶ. ೧೨೧೭, (೧೩೧೨),ಪು-೧೮೦, ಹಂಪಿ.
೮೬. ಅದೇ, ನಂ- ೬, ಯಲಬುರ್ಗ. (ಯ. ತಾ ),ಕ್ರಿ.ಶ. ೧೩ ನೇ ಶತಮಾನ, ಪು-೧೬೨-೧೬೩.
೮೭. ಚೆನ್ನಬಸವಯ್ಯ ಹಿರೇಮಠ., ೧೯೯೫, ಕುರುಗೋಡಿನ ಸಿಂಧರು, ಪು-೨೯, ಕೊಪ್ಪಳ.
೮೮. ಅದೇ, ಪು-೨೩ ರಿಂದ ೮೨.
೮೯. ದೇವರಕೊಂಡಾರಡ್ಡಿ (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ ,ನಂ-೧೭, ಕಲ್ಲೂರ. (ಯ.ತಾ),ಕ್ರಿ.ಶ. ೧೧೯೮, ಪು-೧೭೪, ಹಂಪಿ, ಕ.ವಿ.ವಿ.
೯೦. ಅದೇ, ನಂ- ೨೭, ಸಂಕನೂರ, (ಯ. ತಾ),ಕ್ರಿ.ಶ. ೧೧೧೩., ಪು-೧೮೨.
೯೧. ಅದೇ, ನಂ- ೧೬, ಕಲ್ಲೂರ (ಯ. ತಾ),ಕ್ರಿ.ಶ. ೧೧೩೨, ಪು-೧೭೩.
೯೨. ಅದೇ, ನಂ-೫೨, ಕುಕನೂರ. (ಯ. ತಾ),ಕ್ರಿ.ಶ. ೧೧೭೮, ಪು-೨೨೮.
೯೩. ಅದೇ, ನಂ- ೩೨, ಮುಧೋಳ (ಯ. ತಾ),ಪು-೧೯೦.
೯೪. ಅದೇ, ನಂ-೨೪, ಸಂಕನೂರ. (ಯ. ತಾ),ಕ್ರಿ.ಶ. ೧೨೧೨, ಪು-೧೮೦.
೯೫. ಅದೇ, ನಂ-೧೩, ಕಲ್ಲೂರ. (ಯ. ತಾ),ಕ್ರಿ.ಶ. ೧೧೮೫, ಪು-೧೬೭.
೯೬. ಅದೇ, ನಂ-೧, ಯಲಬುರ್ಗ. (ಯ. ತಾ ),ಪು-೧೬೦.
೯೭. ಅದೇ, ನಂ-೧೨, ಕಲ್ಲೂರ. (ಯ. ತಾ),ಕ್ರಿ.ಶ. ೧೧೮೬, ಪು-೧೬೭.
೯೮. ಅದೇ, ನಂ-೧, ವಿಪ್ರ (ಗ.ತಾ),ಕ್ರಿ.ಶ. ೧೧೯೪, ಪುಟ-೩೧೩.
೯೯. ಅದೇ, ನಂ-೩೦, ಮುಧೋಳ. (ಯ. ತಾ ),ಕ್ರಿ.ಶ. ೮೯೭, ಪುಟ-೧೮೯.
೧೦೦. ಅದೇ, ನಂ- ೨೭, ಅಂಟೂರಠಾಣಾ. (ಕು. ತಾ),ಕ್ರಿ.ಶ ೧೦೮೨, ಪುಟ-೩೦೬.
೧೦೧. ಅದೇ, ನಂ- ೧೩, ಪುರ. (ಕು.ತಾ),ಕ್ರಿ.ಶ. ೧೨ ನೇ ಶತಮಾನ, ಪುಟ-೨೮೮.
೧೦೨. ಅದೇ, ನಂ-೨೬, ಮಾದಿನೂರ. (ಕೊ. ತಾ),ಕ್ರಿ.ಶ. ೧೧೩೬, ಪು-೩೩.
೧೦೩. ಅದೇ, ನಂ-೨೧, ಚಳಗೇರಿ. (ಕು. ತಾ),ಕ್ರಿ.ಶ. ೧೧೭೨, ಪು-೨೯೮.
೧೦೪. ಅದೇ, ನಂ-೩, ಕವಲೂರ. (ಕೊ.ತಾ),ಕ್ರಿ.ಶ. ೧೧೭೯, ಪು-೪.
೧೦೫. ಅದೇ, ನಂ-೩೪, ಕೊಪ್ಪಳ. (ಕೊ. ತಾ),ಕ್ರಿ.ಶ. ೮೮೩, ಪು-೪೦.
೧೦೬. ಅದೇ, ನಂ-೧೧, ಉಪ್ಪಿನಬೇಟಗೇರಿ. (ಕೊ. ತಾ),ಕ್ರಿ.ಶ. ೯೬೪, ಪು-೨೨.
೧೦೭. ಅದೇ, ನಂ-೫೯, ತಳಕಲ್, (ಯ.ತಾ),ಕ್ರಿ.ಶ. ೯೯೧, ಪು-೨೫೩.
೧೦೮. ಅದೇ, ನಂ- ೩೭, ಬಳಗೇರಿ. (ಯ.ತಾ),ಕ್ರಿ.ಶ. ೧೦೦೨, ಪು-೧೯೬.
೧೦೯. ಅದೇ, ನಂ-೧೦, ಕಲ್ಲೂರ. (ಯ.ತಾ),ಕ್ರಿ.ಶ. ೧೦೦೨, ಪು-೧೬೪.
೧೧೦. ಅದೇ, ನಂ-೩೪, ಅರಕೇರಿ, (ಯ.ತಾ),ಕ್ರಿ.ಶ. ೧೦೩೩, ಪು-೧೯೨.
೧೧೧. ಅದೇ, ನಂ- ೧೫, ಶಿವಪುರ. (ಕು.ತಾ),ಕ್ರಿ.ಶ. ೧೦೩೩, ಪು-೧೫೨.
೧೧೨. ಅದೇ, ನಂ- ೮, ಹಿರೇಮನ್ನಾಪುರ (ಕು.ತಾ),ಕ್ರಿ.ಶ. ೧೧ ನೇ ಶತಮಾನ, ಪು-೨೮೩.
೧೧೩. ಅದೇ, ನಂ-೯, ಹಿರೇಮನ್ನಾಪುರ. (ಕು.ತಾ),ಕ್ರಿ.ಶ. ೧೧ ನೇ ಶತಮಾನ, ಪು-೨೮೪ ಮತ್ತು ಅದೇ, ನಂ-೩, ಕವಲೂರ. (ಕೊ.ತಾ),ಕ್ರಿ.ಶ. ೧೧೨೭, ಪು-೪.



## ಕೊಪ್ಪಳ ಜಿಲ್ಲೆಯ ಐತಿಹಾಸಿಕ ಆಡಳಿತ ವಿಭಾಗಗಳನ್ನು ಹೆಸರಿಸುವ ಶಾಸನೋಕ್ತ ಗ್ರಾಮಗಳು



Chapter-4

ಅಧ್ಯಾಯ- ನಾಲ್ಕು

# ಕೊಪ್ಪಳ ಜಿಲ್ಲೆಯ ಐತಿಹಾಸಿಕ ಆಡಳಿತ ವಿಭಾಗಗಳು

ಪ್ರತಿಯೊಂದು ಜನಾಂಗದ ಜೀವನವು ಆಯಾ ಭೌಗೋಳಿಕ ಪರಿಸರದ ಹಿನ್ನಲೆಗಳಾದ ಬೆಟ್ಟ, ಗುಡ್ಡ, ನದಿ, ತೊರೆ ಮೊದಲಾದ ನೈಸರ್ಗಿಕ ಸಂಪತ್ತನ್ನು ಅವಲಂಬಿಸಿರುತ್ತವೆ. ಆಡಳಿತದ ಅನುಕೂಲಕ್ಕಾಗಿ ವಿಭಾಗಗಳನ್ನು ಮಾಡುವಾಗ ಪ್ರಾಚೀನ ಕಾಲದಿಂದ ಇಂದಿನವರೆಗೂ ಇಂತಹ ಭೂಪರಿಸರ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಇಬ್ಭಾಗಿಸಲಾಗುತ್ತದೆ.[೧] ಭೌಗೋಳಿಕ ಹಿನ್ನೆಲೆಗೆ ಅನುಗುಣವಾಗಿ ವಿಭಾಗಿಸಲ್ಪಟ್ಟ ಪ್ರದೇಶಗಳು ಕೇವಲ ಆಡಳಿತದ ಅನುಕೂಲತೆಯಿಂದಲ್ಲ. ಅಲ್ಲಿಯ ಸಮಾಜ ಜೀವನದ ಅಭಿವೃದ್ಧಿಯ ಹಿತದೃಷ್ಟಿಯಿಂದ ರಾಜರು, ರಾಜ್ಯಸರಕಾರಗಳು ಕಾಲಕಾಲಕ್ಕೆ ಇಂತಹ ಕ್ರಮಗಳನ್ನು ತೆಗೆದುಕೊಳ್ಳುತ್ತ ಬಂದಿರುವರು. ಇದಕ್ಕೆ ಮುಖ್ಯ ಕಾರಣ ವಿಸ್ತಾರವಾದ ಪ್ರದೇಶದ ಮೇಲೆ ಒಬ್ಬ ವ್ಯಕ್ತಿ ಆಡಳಿತ ನಡೆಸುವುದು ಕಷ್ಟಸಾಧ್ಯವಾದ್ದರಿಂದ ರಾಜರುಗಳು ತಮ್ಮ ಸಾಮ್ರಾಜ್ಯ, ರಾಜ್ಯಗಳನ್ನು ಪ್ರಾಚೀನ ಕಾಲದಲ್ಲಿ ಆಹಾರ, ಮಂಡಳ, ಭುಕ್ತಿ, ವಿಷಯ, ದೇಶವೆಂದೂ ಮಧ್ಯಕಾಲದಲ್ಲಿ ಮಂಡಳ, ವಿಷಯ, ದೇಶ, ನಾಡು, ಕಂಪಣಗಳೆಂದು ವಿಭಾಗಿಸಿ ಆಡಳಿತ ನಡೆಸಿರುವರು.[೨] ಆಧುನಿಕ ಕಾಲದಲ್ಲಿ ದೇಶ, ರಾಜ್ಯ, ಜಿಲ್ಲೆ, ತಾಲೂಕು, ಗ್ರಾಮಗಳೆಂದು ವಿಭಾಗಿಸಿ ಆಡಳಿತವನ್ನು ರೂಪಿಸಿದರು.

ಮಧ್ಯ ಕಾಲದಲ್ಲಿ ವಿಭಾಗಿಸಲ್ಪಟ್ಟ ಆಡಳಿತ ವಿಭಾಗಗಳನ್ನು ತಮ್ಮ ಸುಂಕ ವಸೂಲಿಯ ಹಿತದೃಷ್ಟಿಯಿಂದ ಬ್ರಿಟಿಷರು ಕ್ರಿ.ಶ. ೧೭೭೨ ರ ಸುಮಾರಿಗೆ[೩] ನಮ್ಮ ದೇಶವನ್ನು ಮತ್ತೊಮ್ಮೆ ವಿಂಗಡಿಸಿದರು. ಉದಾ : ಮುಂಬಯಿ-ಕರ್ನಾಟಕ, ಹೈದ್ರಾಬಾದ -ಕರ್ನಾಟಕ, ಮದ್ರಾಸ್- ಕರ್ನಾಟಕ ಇತ್ಯಾದಿ. ಹೀಗೆ ಬ್ರಿಟಿಷರ ಕಾಲದಲ್ಲಿ ವಿಭಾಗಿಸಲ್ಪಟ್ಟ ವಿಭಾಗಗಳಲ್ಲಿ ಜಿಲ್ಲೆ, ತಾಲೂಕುಗಳು ರೂಪುಗೊಂಡವು. ವಾಸ್ತವವಾಗಿ ಹಿಂದಿನಿಂದ ಬಂದ ಆಡಳಿತ ಘಟಕಗಳನ್ನಾಧರಿಸಿಯೇ ಬ್ರಿಟೀಷರು ಜಿಲ್ಲೆ ತಾಲೂಕುಗಳನ್ನಾಗಿ ರೂಪಿಸಿ ಆಡಳಿತ ನಡೆಸಿರುವದನ್ನು ಕಾಣುತ್ತೇವೆ.

ನಮ್ಮ ಘನ ಸರಕಾರವು ರಾಜ್ಯದ ಆಡಳಿತ ಹಿತದೃಷ್ಟಿಯಿಂದ ದೊಡ್ಡ ಜಿಲ್ಲೆಗಳನ್ನು ವಿಭಾಗಿಸಿ ಹೊಸ ಜಿಲ್ಲೆಗಳ ರಚನೆಗೆ ಕೈಹಾಕಿತು. ಜಿಲ್ಲೆಗಳ ಗಾತ್ರ ಚಿಕ್ಕದಾಗಿದ್ದರೆ ಅಭಿವೃದ್ಧಿ ಕಾರ್ಯಗಳ ಅನುಷ್ಠಾನ ಮತ್ತು ಆಡಳಿತ ನಿರ್ವಹಣೆ ಸುಲಭವೆಂದು ತಿಳಿದು ೧೯೯೭ ರಲ್ಲಿ ಸುಮಾರು ಏಳು ಹೊಸ ಜಿಲ್ಲೆಗಳನ್ನು ರಚಿಸಿತು. ಅವು ಯಾವುವೆಂದರೆ ಚಾಮರಾಜನಗರ, ಗದಗ, ಹಾವೇರಿ, ದಾವಣಗೇರಿ, ಉಡುಪಿ ಬಾಗಲಕೋಟ ಮತ್ತು ಕೊಪ್ಪಳ ಹೀಗೆ ಆಡಳಿತದ ಅನುಕೂಲತೆಯ ಸಲುವಾಗಿ ರಚನೆಗೊಂಡ ಜಿಲ್ಲೆಗಳ ಚರಿತ್ರೆಯನ್ನೊಮ್ಮೆ ತಿರುವಿದಾಗ ಜಿಲ್ಲೆಗಳ ಇತಿಹಾಸವನ್ನು ಮತ್ತೊಮ್ಮೆ ರಚಿಸುವುದು ಸೂಕ್ತವೆನ್ನುವ ನಿಟ್ಟಿನಲ್ಲಿ ಮುಂದಡಿಯಿಟ್ಟ ಪ್ರಯತ್ನ ಈ ನಮ್ಮ 'ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ.'

ಇಂದು ಹೊಸ ಜಿಲ್ಲೆಯಾಗಿ ರೂಪುಗೊಂಡ ಕೊಪ್ಪಳವು ಹಿಂದೆ ರಾಯಚೂರು ಜಿಲ್ಲೆಯಾಗಿತ್ತು. ಅದಕ್ಕೂ ಹಿಂದಕ್ಕೆ ಹೋದರೆ ಹೈದ್ರಾಬಾದ ನಿಜಾಮನ ಆಡಳಿತದಲ್ಲಿ ಕೊಪ್ಪಳ ಜಿಲ್ಲೆಯಾಗಿ ಮೆರೆದಿತ್ತು. ಅದಕ್ಕೂ ಪ್ರಾಚೀನವಾಗಿ ಕುಪಣ, ಕೋಪಣಾ, ಕೋಪಣ ನಗರವೆಂದು ಪ್ರಸಿದ್ಧಿಗೆ ಬಂದಿತ್ತು. ಕೋಪಣ ತೀರ್ಥವಾಗಿ, ಕೊಪ್ಪಳ ಕವಿರಾಜಮಾರ್ಗಕಾರನ ''ಕಾವೇರಿಯಿಂದ ಮಾ ಗೋ । ದಾವರಿವರಮಿರ್ದ ನಾಡದಾ ಕನ್ನಡದೊಳ್ । ಭಾವಿಸಿದ ಜನಪದಂ ವಸು। ಧಾವಲಯವಿಲೀನ ವಿಶದಿ ವಿಷಯ ವಿಶೇಷಂ । ಅದರೊಳಗಂ ಕಿಸುವೊಳಲಾ । ವಿದಿತ ಮಹಾಕೋಪಣ ನಗರದಾ ಪುಲಿಗೆರಿಯಾ । ಸದಭಿಸ್ತುತಮ ಪ್ಪೊಂಕಂ । ದದ ನಡುವಣ ನಾಡೆ ನಾಡೆ ಕನ್ನಡದ ತಿರಳ್''[೪] ಗನ್ನಡ ಪ್ರದೇಶಕ್ಕೆ ಒಳಪಟ್ಟಿರುವದು. ಇಂತಹ ತಿರುಳುಗನ್ನಡ ಮಧ್ಯವರ್ತಿ ಪ್ರದೇಶವಾದ ಕೊಪ್ಪಳ ಕಾಲಘಟ್ಟದಲ್ಲಿ ಅನೇಕ ತಿರುವುಗಳನ್ನು ಪಡೆದು ಬೇರೆ ಬೇರೆ ಪ್ರದೇಶಗಳ ವ್ಯಾಪ್ತಿಯ ವಿಭಾಗಗಳಲ್ಲಿ ಹರಿದು ಹಂಚಿಹೋಗಿತ್ತು. ಅಂತಹ ಹರಿದು ಹಂಚಿ ಹೋದ ಪ್ರದೇಶವನ್ನು ಒಟ್ಟುಗೂಡಿಸಿ ರಚಿತವಾದ ಕೊಪ್ಪಳ ಜಿಲ್ಲೆಯಲ್ಲಿ ಬರುವ ಪ್ರಾಚೀನ ಆಡಳಿತ ವಿಭಾಗಗಳು ಯಾವವು ಇದ್ದವೆಂಬುದನ್ನಿಲ್ಲಿ ಪರಾಮರ್ಶಿಸಿದ್ದೇವೆ.

## ಎಡದೊರೆ ಇಚ್ಛಾಸಿರ (೨೦೦೦)

ಎಡದೊರೆ ನಾಡು ಎರಡು ಸಾವಿರ ಹಳ್ಳಿಗಳ ಒಂದು ಆಡಳಿತ ವಿಭಾಗ. ಶಾಸನಗಳಲ್ಲಿ ಅದು 'ಎಡದೋರೆಯಿಚ್ಛಾಸಿರ', 'ಎಡದೋರೆ ಇಚ್ಛಾಸಿರ',' ಎಡೆದೊರೆ-೨೦೦೦'ವೆಂದು ಮುಂತಾಗಿ ಕರೆಯಿಸಿಕೊಂಡಿದ್ದು[೫] ಜಿಲ್ಲೆಯ ಇಟಗಿ, ಗೋತಗಿ, ಹಿರೇಮನ್ನಾಪುರ ಮತ್ತು ಮಾದಿನೂರ ಶಾಸನಗಳಲ್ಲಿ ಉಲ್ಲೇಖಗೊಂಡಿರುವದು. ಈ ನಾಡಿನ ಉಲ್ಲೇಖ ಮೊದಲ ಬಾರಿಗೆ ಕ್ರಿ.ಶ. ೮೯೧-೯೨ ರ ಭೋಗವತಿ ಶಾಸನದಲ್ಲಿ ಕಂಡು ಬಂದರೆ,[೬] ಜಿಲ್ಲಾ ವ್ಯಾಪ್ತಿಗೊಳಪಟ್ಟಂತೆ ಪ್ರಾಚೀನ ಉಲ್ಲೇಖವು ಕ್ರಿ.ಶ. ೯೩೯ ರ ರಾಷ್ಟ್ರಕೂಟ ೩ ನೆಯ ಕೃಷ್ಣನ ಇಟಗಿ ಶಾಸನದಲ್ಲಿ ದೊರಕುತ್ತದೆ.[೭] ಕೊನೆಯ ಉಲ್ಲೇಖವು ಕ್ರಿ.ಶ. ೧೧೯೦ ರ ಮಾದಿನೂರ ಶಾಸನದಲ್ಲಿದೆ.[೮]

ಎಡದೊರೆ ನಾಡಿನ ವ್ಯಾಪ್ತಿಯು ಉತ್ತರಕ್ಕೆ ಆಳಂದೆ-೧೦೦೦ ವಿಭಾಗದ ಉಪ ಘಟಕವಾದ ಅತ್ತಿನೂರ-೮೦, ನರಿಯಂಬೊಳ-೭೦ ಗಳ ಮೇರೆ, ವಾಯುವ್ಯದಲ್ಲಿ ತರ್ದವಾಡಿ-೧೦೦೦ ದ ಉಪಘಟಕ ಸಿಂದಿಗೆ-೧೨ ಮೇರೆ, ಪಶ್ಚಿಮದಲ್ಲಿ ಬೆಳ್ವಲನಾಡಿನ ಕುಕನೂರು -೩೦, ಕಿಸುಕಾಡು-೭೦ ಮತ್ತು ಹುನಗುಂದ-೩೦ ಹಾಗೂ ತರ್ದವಾಡಿ ನಾಡಿನ ನಲ್ವತುಂಬಾಡಗಳ ಮೇರೆ, ನೈಋತ್ಯದಲ್ಲಿ ಪುಲಿಗೆರೆ-೩೦೦ ರ ಉಪಘಟಕ ಮಾಸವಾಡಿ-೧೪೦ ಮೇರೆ, ದಕ್ಷಿಣಕ್ಕೆ ಬಲ್ಲಕುಂದೆ ನಾಡಿನ ತೆಕ್ಕೆಕಲ್ಲು -೧೨ ಮತ್ತು ನೆಲ್ಲುಡಿ -೧೨ಗಳು ಮೇರೆ, ಪೂರ್ವದಲ್ಲಿ ಆಯಿಜೆ-೩೦೦ ರ ಮೇರೆಗಳು ಎಡದೊರೆ ನಾಡಿನ ಬಾಹ್ಯ ಮೇರೆಗಳಾಗಿದ್ದವು.[೯] ವಿಶಾಲ ಭೂಪ್ರದೇಶವನ್ನು ವ್ಯಾಪಿಸಿದ ಎಡದೊರೆ ನಾಡು ಇಂದಿನ ಗುಲಬರ್ಗಾ ಜಿಲ್ಲೆಯ ಜೇವರ್ಗಿ, ಸುರುಪುರ, ಶಹಪುರ, ರಾಯಚೂರ ಜಿಲ್ಲೆಯ ರಾಯಚೂರು, ಮಾನ್ವಿ, ದೇವದುರ್ಗ,

ಲಿಂಗಸೂಗೂರು, ಸಿಂಧನೂರ, ಕೊಪ್ಪಳ ಜಿಲ್ಲೆಯ ಯಲಬುರ್ಗ, ಕೊಪ್ಪಳ, ಕುಷ್ಟಗಿ, ಗಂಗಾವತಿ, ಬಾಗಲಕೋಟ ಜಿಲ್ಲೆಯ ಹುನಗುಂದ ತಾಲೂಕುಗಳ ಪ್ರದೇಶಗಳಲ್ಲಿ ಪಸರಿಸಿತ್ತು.

ಪ್ರಾಚೀನ ಕಾಲದಿಂದಲೂ ಆಡಳಿತದ ವಿಭಾಗಗಳನ್ನು ತರ್ದವಾಡಿ, ಆಲಂದೆ, ಬನವಾಸಿ, ಪಲಸಿಗೆ ಇತ್ಯಾದಿ ಮುಖ್ಯ ಸ್ಥಳಗಳ ಹೆಸರಿನಿಂದಲೆ ಕರೆಯಲಾಗುತ್ತಿತ್ತು. ಆದರೆ ಜನಾಂಗವಾಚಿ ಮತ್ತು ಪ್ರಕೃತಿವಾಚಿ ಆಡಳಿತ ವಿಭಾಗಗಳ ಮುಖ್ಯ ಸ್ಥಳಗಳನ್ನು ಶಾಸನಗಳು ನೇರವಾಗಿ ಉಲ್ಲೇಖಿಸುವದಿಲ್ಲ. ಹೀಗಾಗಿ ಪ್ರಕೃತಿವಾಚಿಯಾಗಿ ಬಂದ ಬೆಳ್ವಲ-೩೦೦, ಕಿಸುಕಾಡು-೭೦, ಬೆಣ್ಣೆದರೆ ಇತ್ಯಾದಿಗಳನ್ನು ಗುರುತಿಸುವುದು ಕಷ್ಟಸಾಧ್ಯವಾಗಿದ್ದು, ಎಡದೊರೆ ನಾಡು ಸಹ ಇವುಗಳ ಸಾಲಿಗೆ ಸೇರುತ್ತದೆ. ಈ ಎಡದೊರೆ ನಾಡಿಗೆ ಎಡದೊರೆ ಹೆಸರಿನ ಸ್ಥಳವೇ ರಾಜಧಾನಿಯಾಗಿದ್ದಿತೆ ಎಂಬುದು ಇನ್ನು ಸಿದ್ಧವಾಗಿಲ್ಲವಾದರೂ ಡಾ. ಚನ್ನಬಸವ ಹಿರೇಮಠರವರು ಈ ದಿಸೆಯಲ್ಲಿ ಪ್ರಯತ್ನಿಸಿರುವರು. ಅವರು ಮೈಸೂರು ಜಿಲ್ಲೆಯ ಎಡದೊರೆ-೧೦೦೦ ವಿಭಾಗಕ್ಕೆ ಅದೇ ಹೆಸರಿನ ಗ್ರಾಮವು ರಾಜಧಾನಿಯಾಗಿತ್ತು. ಅದು ಇಂದಿನ ಚಾಮರಾಜನಗರದ ಪ್ರಾಚೀನ ಹೆಸರು ಎಡದೊರೆಯಾಗಿತ್ತು. ಆದ್ದರಿಂದ ರಾಯಚೂರ, ಕೊಪ್ಪಳ, ಗುಲಬರ್ಗ ಜಿಲ್ಲೆಗಳನ್ನೊಳಗೊಂಡ ಎಡದೊರೆ-೨೦೦೦ ಕ್ಕೂ ಅದೇ ಹೆಸರಿನ ಗ್ರಾಮವು ರಾಜಧಾನಿಯಾಗಿರಬೇಕೆಂದು ಹೇಳಿ ಜಿಲ್ಲೆಗಳಲ್ಲಿ ಬರುವ ಎಡೆಯಪುರ, ಎಡೆಯಹಳ್ಳಿಗಳನ್ನು ಉದಾಹರಿಸುತ್ತಾರೆ.[೧೦] ಆದರೆ ಶಾಸನಗಳು ಮಾತ್ರ ಎಡದೊರೆ ನಾಡಿನ ರಾಜಧಾನಿಯ ಸ್ಥಳದ ಕುರಿತು ಮೌನವಹಿಸಿವೆ. ಬೆಳ್ವಲನಾಡಿನ ಹಾಗೆ ಪ್ರಕೃತಿವಾಚಿಯಾಗಿ ಬರುವ ಆಡಳಿತ ವಿಭಾಗಗಳಲ್ಲಿ ಕೆಲವು ಬಾರಿ ಹೆಚ್ಚು ಮುಖ್ಯ ಸ್ಥಳಗಳು ದೊರೆಯುವದಿಲ್ಲ. ಉದಾ: ಕುಂತಳದೇಶ, ಈ ಪ್ರಕೃತಿವಾಚಿಯಾಗಿ ರೂಪು ಪಡೆದ ನಾಡುಗಳಿಗೆ ರಾಜಧಾನಿ ಮುಖ್ಯ ಪಟ್ಟಣಗಳಿರುವುದನ್ನು ಸಹ ಕಾಣುತ್ತೇವೆ. ಉದಾ : ಬೆಳ್ವಲ ನಾಡಿನ ರಾಜಧಾನಿ ನರಗುಂದ ತಾಲೂಕಿನ ಅಣ್ಣಿಗೇರಿ ಅದರ ಮುಖ್ಯ ಕೇಂದ್ರವಾಗಿರುವುದನ್ನು ಶಾಸನಗಳಿಂದ ತಿಳಿದುಬರುವುದು. ಇದನ್ನೆ ಉದಾಹರಣೆಯಾಗಿ ತೆಗೆದುಕೊಂಡರೆ ಮಸ್ಕಿಯ ಮೂರು ಶಾಸನಗಳು ಉಲ್ಲೇಖಿಸುವ 'ರಾಜಧಾನಿ ಪಿರಿಯ ಮೊಸಂಗಿ' ಯನ್ನು ಗಮನಿಸಬೇಕಾಗುತ್ತದೆ.[೧೧] ಮೊಸಂಗಿಯ ಹೈಹಯ ವಂಶದ ಮಹಾಮಂಡಳೇಶ್ವರ ಜೋಯಿಮಯ್ಯನು ರಾಜಧಾನಿ ಮಾಡಿಕೊಂಡು ಆಳುತ್ತಿರುವುದನ್ನು ಶಾಸನ ಹೇಳುತ್ತದೆ. ಅದು ಜೋಯಿಮಯ್ಯರಸನು ರಾಜಧಾನಿ ಪಿರಿಯ ಮೊಸಂಗಿಯ ನೆಲೆವಿಡಿನಿಂದ ಎಡದೊರೆ ನಾಡನ್ನು ಆಳುತ್ತಿದ್ದನೆಂದು ಗುತ್ತಿಯ ಶಾಸನ ಹೇಳುತ್ತದೆ.[೧೨] ಮಸ್ಕಿ ಮತ್ತು ಗುತ್ತಿಯ ಶಾಸನಗಳನ್ನಾಧರಿಸಿ ನೋಡುವದಾದರೆ, ಎಡದೊರೆ, ಅಥವಾ ಎಡೆಯಪುರ- ಎಡೆಯಹಳ್ಳಿಗಳಲ್ಲಿ ಯಾವುದಾದರೂ ಒಂದು ಎಡದೊರೆ ನಾಡಿನ ರಾಜಧಾನಿ ಮುಖ್ಯಪಟ್ಟಣ ಸ್ಥಳವಾಗಿರಬೇಕೆಂದೆನಿಸುತ್ತದೆ. ಕಾಲಾಂತರದಲ್ಲಿ ಕಿಸುಕಾಡು-೭೦ ರ ರಾಜಧಾನಿ ಕಿಸುವೊಳಲ್ (ಪಟ್ಟದಕಲ್ಲ) ವಿಕ್ರಮಪುರ (ಅರಸೀಬೀದಿ) ವಾದಂತೆ ಎಡದೊರೆಯ ಮೂಲ ರಾಜಧಾನಿ ಪಟ್ಟಣವು ಪಿರಿಯ ಮೊಸಂಗಿಗೆ ಸ್ಥಳಾಂತರಗೊಂಡು ಅದುವೆ ಪರಂಪರಾಗತ ಎಡದೊರೆ ನಾಡಿನ ರಾಜಧಾನಿ ಪಟ್ಟಣವಾಗಿ ಮಾರ್ಪಟ್ಟಿರಬೇಕೆಂಬುದನ್ನು ತಳ್ಳಿ ಹಾಕುವಂತಿಲ್ಲ.

## ಎಡದೊರೆ -೨೦೦೦ ದ ಉಪವಿಭಾಗಗಳು

ಎಡದೊರೆ-೨೦೦೦ ನಾಡನ್ನು ಆಡಳಿತದ ಅನುಕೂಲಕ್ಕಾಗಿ ಪ್ರಾಚೀನ ರಾಜ-ಮಹಾರಾಜರು ಹಲವು ಉಪವಿಭಾಗಳನ್ನಾಗಿ ವಿಂಗಡಿಸಿದ್ದರು. ಮುಖ್ಯವಾಗಿ ಎಡದೊರೆಯಲ್ಲಿ ಕರಡಿಕಲ್ಲು-೩೦೦, ಕೆಳವಾಡಿ-೩೦೦, ಅಯ್ಯಣವಾಡಿ-೩೦೦, ಮೊರಟ-೩೦೦, ಮೊಸಳೆ ಕಲ್ಲು-೩೦೦, ಮತ್ತು ಸಗರ-೩೦೦ ವಿಭಾಗಗಳು ಸಮಾವೇಶಗೊಂಡಿವೆ. [೧೩] ಈ ವಿಭಾಗಗಳಲ್ಲಿ ಇನ್ನು ಕೆಲವು ಚಿಕ್ಕ ಚಿಕ್ಕ ಉಪವಿಭಾಗಗಳಿರುವದನ್ನು ಶಾಸನಗಳು ತಿಳಿಸುವವು.

## ಕೊಪ್ಪಳ ಜಿಲ್ಲೆಯ ವ್ಯಾಪ್ತಿಗೊಳಪಡುವ ಉಪವಿಭಾಗಗಳು

### ೧.ಕರಡಿಕಲ್ಲು -ಮೂನ್ನೂರು

ಕರಡಿಕಲ್ಲು ಮೂನ್ನೂರು ಸ್ಥೂಲವಾಗಿ ಲಿಂಗಸುಗೂರು ತಾಲೂಕಿನ ಎಲ್ಲಾ ಹಳ್ಳಿಗಳು, ಕುಷ್ಟಗಿ, ಹುನಗುಂದ, ಮಾನ್ವಿ ಹಾಗೂ ಸಿಂಧನೂರ ತಾಲೂಕಿನ ಕೆಲವು ಹಳ್ಳಿಗಳು ಈ ವಿಭಾಗದಲ್ಲಿ ಸೇರುವವು. ಕರಡಿಕಲ್ಲನಾಡಿನ ರಾಜಧಾನಿ ಪಟ್ಟಣ ಲಿಂಗಸುಗೂರು ತಾಲೂಕಿನ ಕರಡಕಲ್ಲ ಗ್ರಾಮ. ಜಿಲ್ಲೆಯ ಗೋತಗಿಯ ಕ್ರಿ.ಶ. ೧೦೨೪ ರ ಶಾಸನ (ಕುಷ್ಟಗಿ ತಾ)[೧೪] ಕರಡಿಕಲ್ಲು-೩೦೦ ರ ಬಳಿಯ ಗೋತಗಿಯೆಂದು ಆ ಗ್ರಾಮವನ್ನು ಹೆಸರಿಸುವದು. ಅದೇ ಗ್ರಾಮದ ಮತ್ತೊಂದು ಶಾಸನವು ಎಡದೊರೆ ನಾಡಿನ ಕಂಪಣ, ಕರಡಿಕಲ್ಲು, ಮೂನ್ನೂರ ಬಳಿಯ ಗೋವಂತಿಗೆಯೊಂದು ಉಲ್ಲೇಖ ಮಾಡುವದರಿಂದ[೧೫] ಅಂದು ಗೋತಗಿ ಗ್ರಾಮವು ಕರಡಿಕಲ್ಲು-೩೦೦ ರ ಗಡಿಯ ಗ್ರಾಮವಾಗಿತ್ತೆಂದು ಹೇಳಲವಕಾಶವಿದೆ.

### ೨. ಬೆಳ್ವಲ -ಮುನ್ನೂರು

ಇಳೆಯಂಬ ಸತಿಯ ಕುನ್ತಳಕಳಾಪದನ್ತೆಸೆದು ಕುನ್ತಳದೇಶ । ಕ್ಕಳವಟ್ಟ ಚಿನ್ನ ಪುವೆನೆ ಬೆಳಗಿದುದೊಳ್ವಲವೆನಿಪ್ಪ ಬೆಳ್ವೊಲದೇಶಂ ॥ ಎಂಬುದು ಕವಿಯ ಕಲ್ಪನೆಯಾದರು ಪ್ರಾಚೀನ ಕರ್ನಾಟಕದಲ್ಲಿ ಬೆಳ್ವೊಲ ನಾಡು ಗಣ್ಯಸ್ಥಾನ ಪಡೆದುಕೊಂಡಿತ್ತು.[೧೬] ಇದು ಪ್ರಾಚೀನ ಕುಂತಲದ ಮಧ್ಯವರ್ತಿ ಪ್ರದೇಶವಾದ ಧಾರವಾಡ, ಹಾವೇರಿ, ಗದಗ, ಕೊಪ್ಪಳ, ಬಾಗಲಕೋಟ, ಬೆಳಗಾಂವ ಜಿಲ್ಲೆಗಳ ಕೆಲವು ಭಾಗಗಳನ್ನೊಳಗೊಂಡು ರೂಪಿತವಾಗಿತ್ತು. ವಿಶಾಲ ಪ್ರದೇಶವನ್ನಾಕ್ರಮಿಸಿದ ಬೆಳ್ವಲ-೩೦೦ ವಿಭಾಗವು ಬೆಣ್ಣೆದಡಿ-೭೦, ಕೊಳನೂರು-೩೦, ಕುಕನೂರ- ೩೦, ಹುನಗುಂದ- ೩೦, ಕಿಸುಕಾಡು-೭೦, ಚಿಂಚಲ-೫೦, ನರೆಯಂಗಲ್ -೧೨, ಬೆಳವಣಿಕೆ-೧೨, ಮುಳಗುಂದ -೧೨, ಕಿಸುವೊಳಲ್ -೬ ಎಂಬ ಆಡಳಿತದ ಉಪವಿಭಾಗಗಳಿಂದ ರಚಿತವಾಗಿತ್ತು.[೧೭] ಶ್ರೀನಿವಾಸ ರಿತ್ತಿಯವರು ಶಾಸನಗಳನ್ನು ಬಳಸಿಕೊಂಡು ಬೆಳ್ವೊಲನಾಡನ್ನು ರೂಪಿಸಿ ಅದರಲ್ಲಿ ೨೪೪ ಗ್ರಾಮಗಳನ್ನು ಗುರುತಿಸಿ ಇನ್ನುಳಿದ ೫೬ ಗ್ರಾಮಗಳು ತಿಳಿದು ಬರುವದಿಲ್ಲವೆಂದಿದ್ದಾರೆ.[೧೮] ಆದರೆ, ಜೆ. ಎಂ. ನಾಗಯ್ಯನವರು ಕಿಸುವೊಳಲ್ -೬, ಕಿಸುಕಾಡು-೭೦ ಹಾಗೂ ಹುನಗುಂದ -೩೦ ಗಳು ಸಹ ಬೆಳ್ವಲ -೩೦೦ ಕ್ಕೆ ಸೇರಿದ್ದವೆಂದು ಹೇಳುವರು. ರಿತ್ತಿಯವರ ೨೪೪ ಕ್ಕೆ

ನಾಗಯ್ಯನವರು ೧೦೦ ನ್ನು ಸೇರಿಸಿ ಒಟ್ಟು ಬೆಳ್ವಲದ ಗ್ರಾಮಗಳನ್ನು ೩೪೪ ಕ್ಕೆ ಏರಿಸಿರುವರು. ಆದರೆ ಯಾವುದೇ ಶಾಸನಗಳು ಕಿಸುಕಾಡು-೭೦ ವಿಭಾಗ ಬೆಳ್ವಲ -೩೦೦ ರಲ್ಲಿ ಇತ್ತೆಂಬ ಸೂಚನೆ ನೀಡುವದಿಲ್ಲ. ನಾಗಯ್ಯನವರು ಕಲಬುರ್ಗಿಯವರ ಲೇಖನ ಮುಂದಿಟ್ಟುಕೊಂಡು (ಹೇಳಿಕೆ) ಕಿಸುಕಾಡು-೭೦ ವಿಭಾಗಕ್ಕೆ ಹುನಗುಂದ- ೩೦ ಹಾಗೂ ಕಿಸುವೊಳ -೬ ಗಳು ಸಹ ಸೇರಿದ್ದವೆಂದು ಹೇಳುವರು. ಇವನ್ನೊಳಗೊಂಡ ಕಿಸುಕಾಡು-೭೦ನ್ನು ರಿತ್ತಿಯವರ ೨೪೪ ಕ್ಕೆ ಸೇರಿಸಿದರು. ೩೧೪ ಲೆಕ್ಕ ಹೊರಡುವುದು. ಕಲಬುರ್ಗಿಯವರ ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಗ್ರಂಥದಲ್ಲಿ [೧೯] ಬೆಳ್ವಲ ತ್ರಿಶಂಷೆ ಮಧ್ಯ ಪೊನ್ನಗುಂದ -೩೦ ಹಾಗೂ ಕಿಸುವೊಳಲ್ -೬ ಗಳು ಬೆಳ್ವಲ-೩೦೦ ಕ್ಕೆ ಸೇರಿದವುಗಳು ಎಂಬುದನ್ನು ಒಂದಾವರ್ತಿ ಒಪ್ಪಬಹುದಾದರೂ ಕಲಬುರ್ಗಿ ಮತ್ತು ನಾಗಯ್ಯನವರು ಹೇಳುವ ಕಿಸುಕಾಡು-೭೦, ಬೆಳ್ವಲ ನಾಡಿಗೆ (೩೦೦) ಸೇರಿದ್ದವೆಂಬುದನ್ನು ಮಾತ್ರ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಕಿಸುಕಾಡು-ಹುನಗುಂದ ವಿಭಾಗಗಳಲ್ಲಿ ಬರುವ ಶಾಸನಗಳು ಇವೆರಡು ಬೆಳ್ವಲ ನಾಡಿಗೆ ಸೇರಿದ್ದವು ಎಂಬುದನ್ನು ಎಲ್ಲಿಯು ಉಲ್ಲೇಖ ಮಾಡುವದಿಲ್ಲ. ಒಂದು ಬಾರಿ ಕಲಬುರ್ಗಿಯವರ ಅಭಿಪ್ರಾಯ (ಹುನಗುಂದ-೩೦, ಕಿಸುವೊಳಲ್-೬) ಒಪ್ಪಬಹುದಾದರೂ ಕಾಲಾಂತರದಲ್ಲಿ ಉಪವಿಭಾಗದ ಮತ್ತೊಂದು ವಿಭಾಗಕ್ಕೆ ಸ್ಥಳಾಂತರ ಹೊಂದಿರುವ ಸಾಧ್ಯತೆಯನ್ನು ತಳ್ಳಿ ಹಾಕಲಾಗದು. ಹಿಂದಿನ ಕಿಸುವೊಳಲ್ -೬ ಮತ್ತು ಹುನಗುಂದ -೩೦ ಗಳು ಸೇರಿಕೊಂಡ ಸ್ವತಂತ್ರ ಕಿಸುಕಾಡು -೭೦ ವಿಭಾಗ ಮಾರ್ಪಟ್ಟಿತೆಂಬುದಕ್ಕೆ ಯಾವ ತೊಂದರೆಗಳು ನಮಗಿಲ್ಲಿ ಕಾಣಿಸಿಕೊಳ್ಳುವದಿಲ್ಲ. ಈ ಬೆಳ್ವಲ- ೩೦೦ರ ಕುರಿತು ಜಿಲ್ಲೆಯ ಕಲ್ಲೂರ [೨೦], ಇಟಗಿ [೨೧], ಕುಕನೂರ [೨೨], ಸಂಕನೂರ [೨೩] ಶಾಸನಗಳು ಉಲ್ಲೇಖಿಸುತ್ತವೆ. ಇದರ ಉಪವಿಭಾಗಗಳಾದ ಕುಕನೂರ-೩೦ ಮತ್ತು ನರೆಯಂಗಲ್ -೧೨ ಇವುಗಳನ್ನು ಸಹ ಹೆಸರಿಸುತ್ತವೆ.

## ಕುಕನೂರ-ಮೂವತ್ತು

ಕುಕನೂರು -೩೦ ಉಪ ವಿಭಾಗ ಬೆಳ್ವಲನಾಡಿನ ಉಪ ವಿಭಾಗವಾಗಿದ್ದು ಯಲಬುರ್ಗ ತಾಲೂಕಿನ ಕುಕನೂರ ಗ್ರಾಮವು ಇದರ ಮುಖ್ಯ ಕೇಂದ್ರ ಸ್ಥಳ. ಈ ವಿಭಾಗವು ರೋಣ ತಾಲೂಕ, ಗದಗ ತಾಲೂಕ ಮತ್ತು ಯಲಬುರ್ಗ ತಾಲೂಕಗಳ ಕೆಲವು ಗ್ರಾಮಗಳನ್ನೊಳಗೊಂಡು ರಚಿತವಾಗಿತ್ತು. ಕುಕನೂರ-೩೦ ರ ಕುರಿತು ಜಿಲ್ಲೆಯ ಕಲ್ಲೂರ [೨೪], ಇಟಗಿ [೨೫], ಕುಕನೂರ [೨೬], ತಳಕಲ್ಲ [೨೭], ಬಳಗೇರಿ [೨೮] ಮತ್ತು ಉಪ್ಪಿನಬೇಟಗೇರಿ [೨೯] ಶಾಸನಗಳು ಉಲ್ಲೇಖನ ಮಾಡುತ್ತವೆ.

## ನರೆಯಂಗಲ್ -ಪನ್ನೆರಡು

ಗದಗ ಜಿಲ್ಲೆಯ ರೋಣ ತಾಲೂಕಿನ ನರೇಗಲ್ಲ ಗ್ರಾಮ ಹಿಂದಿನ ನರೆಯಂಗಲ್ -ಪನ್ನೆರಡು ವಿಭಾಗದ ಮುಖ್ಯ ಪಟ್ಟಣ ಕೇಂದ್ರ ಸ್ಥಳವಾಗಿತ್ತು. ಬೆಳ್ವಲ ನಾಡಿನ ಚಿಕ್ಕ ಉಪ ವಿಭಾಗವಾದ ನರೇಗಲ್ ಗದಗ ಜಿಲ್ಲೆಯ ರೋಣ ಮತ್ತು ಕೊಪ್ಪಳ ಜಿಲ್ಲೆಯ ಯಲಬುರ್ಗ ತಾಲೂಕುಗಳ ಕೆಲವು ಗ್ರಾಮಗಳನ್ನು ಹೊಂದಿ ರಚಿತವಾಗಿತ್ತು. ಇದರ ಕುರಿತು ಜಿಲ್ಲೆಯ ಕಲ್ಲೂರ [೩೦], ಇಟಗಿ [೩೧] ಮತ್ತು ಹಿರೇಮನ್ನಾಪುರ [೩೨] ಶಾಸನಗಳು

ಉಲ್ಲೇಖಿಸುತ್ತವೆ. ಕಲ್ಲೂರದ ಕ್ರಿ.ಶ. ೧೧೩೨ ರ ಶಾಸನವು ಕುಕನೂರು ಮೂವತ್ತರೊಳಗಣ ಕಲ್ಲೂರ ಎಂದು ಹೇಳುವುದರಿಂದ ಗ್ರಾಮವು ಕುಕನೂರ ವಿಭಾಗಕ್ಕೆ ಸೇರಿದೆಯೆಂಬುದು ತಿಳಿದು ಬರುತ್ತದೆ. ಆದರೆ, ಕ್ರಿ.ಶ. ೧೧೮೫ ರ ಶಾಸನವು ನರೆಯಂಗಲ್ - ಪನ್ನೆರಡರ ಬಳಿಯ ಬಾಡ ಕಲ್ಲೂರ ಎಂದು ಉಲ್ಲೇಖಿಸುವುದು. ಈ ಗ್ರಾಮವು ಮೊದಲು ಕುಕನೂರು ವಿಭಾಗಕ್ಕೆ ಸೇರಿ ನಂತರ ನರೆಯಂಗಲ್ ವಿಭಾಗಕ್ಕೆ ಸೇರಿರುವುದು ಮೇಲಿನ ಎರಡು ಶಾಸನಗಳಿಂದ ತಿಳಿದು ಬರುವದು.

### ೩. ಕಿಸುಕಾಡು - ಎಪ್ಪತ್ತು

ಬಾಗಲಕೋಟ ಜಿಲ್ಲೆಯ ಬಾದಾಮಿ ತಾಲೂಕ ಹುನಗುಂದ ತಾಲೂಕ, ಗದಗ ಜಿಲ್ಲೆಯ ರೋಣ, ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕುಗಳ ಗ್ರಾಮಗಳನ್ನು ಹೊಂದಿಕೊಂಡು ರಚನೆಯಾಗಿತ್ತು. ಹುನಗುಂದ ತಾಲೂಕಿನ ಆರಸಿಬೀದಿಯು ಕಿಸುಕಾಡೆಪ್ಪತ್ತರ ರಾಜಧಾನಿ ವಿಕ್ರಮಪುರವೆಂದು ಹೆಸರು ಪಡೆದುಕೊಂಡಿತ್ತು. ಕಿಸುಕಾಡು-೭೦ ರ ರಾಜಧಾನಿ ವಿಕ್ರಮಪುರವೆಂದು ಹೆಸರು ಪಡೆದ ಆರಸಿಬೀದಿ ಇಂದು ಜನವಸತಿಯಿರದೆ ಸಂಪೂರ್ಣ ಹಾಳಾಗಿ ಹೋಗಿದೆ. ಅಲ್ಲಿ ಕೇವಲ ಜೀರ್ಣಾವಸ್ಥೆಯಲ್ಲಿರುವ ಎರಡು ಜೈನ ಬಸದಿಗಳು ಮಾತ್ರ ಉಳಿದುಕೊಂಡಿವೆ. ಜಿಲ್ಲೆಯ ಆಚನೂರ[೩೩], ಚಳಗೇರಿ[೩೪], ಹನುಮನಾಳ[೩೫], ಅಂಟೂರಠಾಣ[೩೬] ಮತ್ತು ಸಂಕನೂರಗಳಲ್ಲಿರುವ[೩೭] ಸುಮಾರು ಆರು ಶಾಸನಗಳು ಕಿಸುಕಾಡು-೭೦ ರ ವಿಭಾಗವು ಕುಷ್ಟಗಿ ಯಲಬುರ್ಗ ತಾಲೂಕುಗಳಲ್ಲಿ ವಿಸ್ತರಿಸಿತ್ತೆಂದು ಹೇಳುತ್ತವೆ.

### ೪. ಮಾಸವಾಡಿ - ನೂರನಲ್ವತ್ತು

ನೂರನಲ್ವತ್ತು ಗ್ರಾಮಗಳಿಂದ ಕೂಡಿದ ಮಾಸವಾಡಿಯು ಇಂದಿನ ಗದಗ ಜಿಲ್ಲೆಯ ಮುಂಡರಗಿ, ಗದಗ ತಾಲೂಕ, ಕೊಪ್ಪಳ ಜಿಲ್ಲೆಯ ಯಲಬುರ್ಗ ಹಾಗೂ ಕೊಪ್ಪಳ ತಾಲೂಕಗಳ ಗ್ರಾಮಗಳನ್ನು ಹೊಂದಿ ರಚಿತವಾಗಿತ್ತು. ಇದರ ಮುಖ್ಯ ರಾಜಧಾನಿ ಪಟ್ಟಣವು ಡಂಬಳವಾಗಿತ್ತು. ಏಕೆಂದರೆ ಶಾಸನವು 'ಮಾಸೇವಾಡಿ ನಾಡಿಗೆ ಕಟ್ಟಿದ ಪಟ್ಟಮಮಿಟ್ಟ ಬೊಟ್ಟುಮಳವಟ್ಟ ಕಳಶಮುಮಿರ್ಪ್ಪಂತೆ ಧರ್ಮವೊಳಲೆಂಬ ಮಹಾಪಟ್ಟಣಂ ವಿರಾಜಿಸುತಿರ್ಪ್ಪದ' ದೆಂದು ಬಣ್ಣಿಸಿದೆ.[೩೮] ಧರ್ಮವೊಳಲ್ ಎಂಬುದು ಕಾಲಾಂತರದಲ್ಲಿ ಧಮ್ಮವೊಳಲ್, ದಂಬವೊಳ್, ಡಂಬಳವೆಂದು ಬದಲಾಗುತ್ತ ಬಂದಿದೆ. ಮಾಸವಾಡಿಯನ್ನು ಕುರಿತು ಜಿಲ್ಲೆಯ ಕವಲೂರ[೩೯] ಸಂಕನೂರ[೪೦] ಮತ್ತು ಇಟಗಿ[೪೧] ಶಾಸನಗಳು ಉಲ್ಲೇಖಿಸುತ್ತವೆ.

### ಎಕ್ಕಲವಾಡ-೧೪

ಎಕ್ಕಲವಾಡ-೧೪ ಚಿಕ್ಕ ಉಪವಿಭಾಗವನ್ನು ಅಳವಂಡಿ ಶಾಸನವು ಉಲ್ಲೇಖಿಸುತ್ತದೆ.[೪೨] ಇದು ಬಹುಶಃ ಮಾಸವಾಡಿ-೧೪೦ ಕ್ಕೆ ಸೇರಿದ ಘಟಕವಾಗಿರಬೇಕು. ಶಾಸನವು ಎಕ್ಕಲವಾಡ-೧೪ರ ಅಗ್ರಹಾರ ಅಳವಂಡಿಯಾಗಿತ್ತೆಂದು ಉಲ್ಲೇಖಿಸುತ್ತದೆ. ಕೊಪ್ಪಳ ತಾಲೂಕಿನ ಗ್ರಾಮಗಳು ಇದರಲ್ಲಿ ಸೇರಿಕೊಂಡಂತೆ ಆಡಳಿತ ವಿಭಾಗವಾಗಿ ರೂಪಿತವಾಗಿತ್ತು.

### ೫. ಕೆಳವಾಡಿ - ಮೂನ್ನೂರು

ಕೆಳವಾಡಿ ನಾಡು ಇಂದಿನ ಮುಧೋಳ, ಬಾಗಲಕೋಟ ಮತ್ತು ಬಾದಾಮಿ ತಾಲೂಕಿನ ವ್ಯಾಪ್ತಿಯನ್ನು ಹೊಂದಿತ್ತೆಂದು ಡಾ. ಜೆ. ಎಂ. ನಾಗಯ್ಯನವರು[೪೩] ಮತ್ತು ಬಾದಾಮಿ ತಾಲೂಕಿನ ಕೆಳವಾಡಿಯು ಇದರ ಮುಖ್ಯ ಪಟ್ಟಣವಾಗಿತ್ತೆಂದು ಡಾ. ಬಿ. ವ್ಹಿ. ಶಿರೂರ ಅವರು ಊಹಿಸಿದ್ದಾರೆ.[೪೪] ಆದರೆ, ರಾಯಚೂರ ಮತ್ತು ಕೊಪ್ಪಳ ಜಿಲ್ಲೆಗಳ ಶಾಸನಗಳು ಇವರಿಬ್ಬರ ಹೇಳಿಕೆಗಳನ್ನು ಒಪ್ಪುವದಿಲ್ಲ. ಏಕೆಂದರೆ ರಾಯಚೂರ ಜಿಲ್ಲೆಯ ಸಿಂಧನೂರ ತಾಲೂಕಿನ ದೇವರಗುಡಿಯ ಶಾಸನವು[೪೫] ಕೆಳವಾಡಿ ಮೂನ್ನೂರರ ರಾಜಧಾನಿ ಕಲುಕೆಜಿ ಯೆಂದು ಸ್ಪಷ್ಟವಾಗಿ ಹೇಳುವದರಿಂದ ಇಂದಿನ ಗಂಗಾವತಿ ತಾಲೂಕಿನ ಕಲಕೇರಿ ಗ್ರಾಮವೇ ಕೆಳವಾಡಿ-೩೦೦ ವಿಭಾಗದ ಮುಖ್ಯ ಪಟ್ಟಣವಾಗಿತ್ತೆಂದು ತಿಳಿಯುತ್ತದೆ. ಇಂದಿನ ರಾಯಚೂರು ಜಿಲ್ಲೆಯ ಸಿಂಧನೂರ ತಾಲೂಕ, ಕೊಪ್ಪಳ ಜಿಲ್ಲೆಯ ಕೊಪ್ಪಳ, ಕುಷ್ಟಗಿ ಹಾಗೂ ಯಲಬುರ್ಗ ತಾಲೂಕಗಳ ಗ್ರಾಮಗಳನ್ನೊಳಗೊಂಡು ರಚನೆಯಾಗಿತ್ತು. ಇದರ ಉಪವಿಭಾಗಗಳೆಂದರೆ ಕುಡಿಯಹರವಿ-೭೦, ಪರವರಿ-೭೬, ನಿಟ್ಟರವೆ-೭೦ ಮತ್ತು ಸಾಲಗುಂದೆ-೭೦ ಗಳು ಸೇರಿದ್ದವು.[೪೬] ಬಹುಶಃ ಇವುಗಳ ಜೊತೆಗೆ ಬೆಳ್ಳಟ್ಟ-೧೨ ಸಹ ಕೆಳವಾಡಿ-೩೦೦ ಕ್ಕೆ ಸೇರಿದ ಉಪ ವಿಭಾಗವಾಗಿರಬೇಕು. ಇದನ್ನು ಕೊಪ್ಪಳ ತಾಲೂಕಿನ ಹಿರೇಸಿಂದೋಗಿಯ ಕಲ್ಯಾಣ ಚಾಲುಕ್ಯ ಜಗದೇಕಮಲ್ಲನ ಶಾಸನವು ಉಲ್ಲೇಖಿಸಿದೆ.[೪೭]

### ೬. ಬೆಣ್ಣೆಕಲ್ಲು - ಸೀಮೆ

ಜಿಲ್ಲೆಯ ಶಾಸನಗಳು ಮೇಲಿನ ಎಡದೊರೆ ಮತ್ತು ಇತರ ವಿಭಾಗಗಳ ಕುರಿತು ಉಲ್ಲೇಖಿಸಿದಂತೆ ಬೆಣ್ಣೆಕಲ್ಲು ಸೀಮೆಯ ಕುರಿತು ಉಲ್ಲೇಖನ ನೀಡುತ್ತವೆ. ಆದರೆ ಬೆಣ್ಣೆಕಲ್ಲು ಸೀಮೆ ಯಾವುದು ಆಗಿತ್ತೆಂದು ಮಾತ್ರ ಹೇಳುವದಿಲ್ಲ. ಕ್ರಿ.ಶ. ೧೦೧೮ ರ ಚಾಲುಕ್ಯ ಒಂದನೆ ಜಗದೇಕಮಲ್ಲನ ಹಲಗೇರಿ ಶಾಸನ[೪೮] ಮತ್ತು ಒಂದನೆ ಸೋಮೇಶ್ವರನ ಕಾಲದ ವಿಪ್ರದ ಶಾಸನಗಳು[೪೯] ಬೆಣ್ಣೆಕಲ್ಲು ಸೀಮೆಯನ್ನು ಹೆಸರಿಸುತ್ತವೆ. ಬಹುಶಃ ಗಂಗಾವತಿ ಮತ್ತು ಕೊಪ್ಪಳ ತಾಲೂಕಿನ ದಕ್ಷಿಣಕ್ಕೆ ಹತ್ತಿಕೊಂಡು ಹರಿಯುವ ತುಂಗಭದ್ರ ಎಡದಂಡೆ ಗುಂಡ ಮತ್ತು ತಾಲೂಕುಗಳ ಒಳಗಡೆ ವಿಶಾಲವಾಗಿ ಹರಡಿಕೊಂಡ ಹುಲುಗಿಯಿಂದ ಆನೆಗುಂದಿಯವರೆಗಿನ ಬೆಣಚುಕಲ್ಲಿನ ಗುಡ್ಡದ ಸಾಲುಗಳನ್ನೆ ಶಾಸನಗಳು ಬೆಣ್ಣೆಕಲ್ಲು ಸೀಮೆಯೆಂದು ಕರೆದಿರಬೇಕು.

[illegible] ನಾಡುಗಳು

ಬಲ್ಲಕುಂದೆ-೩೦೦ ಕಂಪಣ, ಅದರ ಉಪ ವಿಭಾಗ ಕಂಪಣ ನಿಲ್ವಡಿ-೧೨ ಹಾಗೂ ಇದಕ್ಕೆ ಸೇರಿದ ಬಾಡ ಇಕುಪರವಗಳನ್ನು ಹೆಸರಿಸುವದು[೫೪] ತಳಕಲ್ಲ ಶಾಸನವು ಎರಡಾಜುಸೂರು ಪ್ರದೇಶವನ್ನು ಉಲ್ಲೇಖಿಸಿದ್ದು[೫೫] ಇದು ಬೆಳ್ವಲ-೩೦೦ ಪುಲಿಗೇರಿ-೩೦೦ ಗಳನ್ನು ಒಳಗೊಂಡು ರಚಿತವಾದ ಎರಡಾರುನೂರು ಪ್ರದೇಶವಾಗಿದೆ. ಇವಲ್ಲದೆ ಹಸ್ತಿನಾವತಿವಳಿತ ನಾಡು, ಮೂವಳ್ತಿಳನಾಡು, ಪಡುವಣ ನಾಡುಗಳನ್ನು ಶಾಸನಗಳು ಹೆಸರಿಸುತ್ತವೆ. [೫೬] ಕುಂತಳದೇಶದ ವರ್ಣನೆಯಂತು ಜಿಲ್ಲೆಯ ಹಲವಾರು ಶಾಸನಗಳು ಮನತುಂಬಿ ವರ್ಣಿಸಿವೆ.

## ೮. ರಾಜಧಾನಿ ಪಟ್ಟಣಗಳು

ರಾಜನ ಸಾಮ್ರಾಜ್ಯದ ಕೇಂದ್ರ ಸ್ಥಳವನ್ನು ರಾಜಧಾನಿ ಎಂದು ಕರೆಯಲಾಗುತ್ತಿದ್ದರೂ. ಸ್ಥೂಲವಾಗಿ ಅದೊಂದು ವ್ಯಾಪಾರ -ವಾಣಿಜ್ಯ ಕೈಗಾರಿಕಾ ಚಟುವಟಿಕೆಗಳ ಮುಖ್ಯ ಪಟ್ಟಣವೆಂದೆ ಕರೆಯಬೇಕು. ಸಾಮ್ರಾಜ್ಯಕ್ಕೆ ಕೇಂದ್ರ ಸ್ಥಾನವಾದ ರಾಜಧಾನಿ ಪಟ್ಟಣವಿರುತ್ತಿತ್ತೋ ಅದರಂತೆ ಸಾಮ್ರಾಜ್ಯದ ಆಡಳಿತದ ಪ್ರತಿಯೊಂದು ಉಪ ವಿಭಾಗಗಳಿಗೊಂದು ರಾಜಧಾನಿ ಮುಖ್ಯಪಟ್ಟಣ ಕೇಂದ್ರ ಸ್ಥಳಗಳಿರುತ್ತಿದ್ದವು. ಚಿಕ್ಕಪುಟ್ಟ ಉಪರಾಜಧಾನಿ ಕೇಂದ್ರಗಳನ್ನು ರಾಜಧಾನಿ ಪಟ್ಟಣಗಳೆಂದು ಕರೆಯಲಾಗುವದಿಲ್ಲ. ಕೆಲವು ವಿಭಾಗಗಳಿಗೆ ಕೇಂದ್ರ ಸ್ಥಳಗಳಿರದೆ ಅವು ವ್ಯಕ್ತಿ ವಾಚಿ (ವಂಶ ವಾಚಿ) ಸ್ಥಳವಾಚಿ ಹೆಸರುಗಳಿಂದ ಕರೆಯಲಾಗುತ್ತಿತ್ತು. ಉದಾ: ಗಂಗರು ಆಳುವ ಪ್ರದೇಶ ಗಂಗವಾಡಿ-೯೬,೦೦೦ ವೆಂದು, ಇದನ್ನು ಸಿಂಧರು ಆಳುತ್ತಿದ್ದರಿಂದ ಸಿಂಧುವಾಡಿಯೆಂದು, ನೊಳಂಬರು ಆಳುತ್ತಿದ್ದುದರಿಂದ ನೊಳಂಬವಾಡಿ-೩೨೦೦೦ ವೆಂದು ಕರೆಯಲಾಗಿದೆ. ಇನ್ನು ಕೆಲವು ಸಾರಿ ನೇರವಾಗಿ ರಾಜಧಾನಿ ಪಟ್ಟಣಗಳನ್ನು ಶಾಸನಗಳು ಉಲ್ಲೇಖ ಮಾಡುತ್ತವೆ. ಉದಾಃ ಎರಂಬರಗಿ (ರಾಜಧಾನಿ). ಅಗ್ರಹಾರಗಳು ಸಹ ಅಂದಿನ ಪ್ರಮುಖ ಶಿಕ್ಷಣ ಕೇಂದ್ರಗಳಾಗಿದ್ದಂತೆ ವಾಣಿಜ್ಯ ಪಟ್ಟಣಗಳಾಗಿ ಮಾರ್ಪಟ್ಟಿದ್ದವು.

### ಯರಂಬರಿಗೆ ರಾಜಧಾನಿ

ಕೊಪ್ಪಳ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಯಲಬುರ್ಗ ತಾಲೂಕ ಕೇಂದ್ರ ಸ್ಥಳ ಹಿಂದೊಮ್ಮೆ ರಾಜದಾನಿ, ನೆಲೇವಿಡು ಸಿಂಧ ಮನೆತನದ ಮುಖ್ಯ ರಾಜಕೀಯ ನೆಲೆಯಾಗಿ 'ಯರಂಬರವಿ' ಯೆಂದು ಶಾಸನಗಳಲ್ಲಿ ಕರೆಯಿಸಿಕೊಂಡಿದೆ. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಅನೇಕ ಸಾಮಂತ ಮನೆತನಗಳಲ್ಲಿ ಒಂದಾದ ಸಿಂಧ ವಂಶವು ಮೊದಲು ಬಾಗಡಗೆ ಪ್ರದೇಶದಿಂದ ಛಿದ್ರವಾಗಿ ಹಲವು ಕಡೆಗಳಲ್ಲಿ ಚದುರಿಹೋಗಿ ನೆಲೆನಿಂತಂತೆ ಈ ಯರಂಬರಗಿಯಲ್ಲಿಯೂ ನೆಲೆ ನಿಂತಿತು. ಕಲ್ಯಾಣ ಚಾಲುಕ್ಯ ಮತ್ತು ಕಲಚುರಿ ಯಾದವರಸರ ಕಾಲದಲ್ಲಿ ಪ್ರಖ್ಯಾತಿಯನ್ನು ಪಡೆದ ಯರಂಬರಗಿಯ ಸಿಂಧ ಮನೆತನದ ಅರಸರು ಆಯಾ ಅರಸೊತ್ತಿಗೆಗಳ ಜೊತೆಯಲ್ಲಿ ಒಳ್ಳೆಯ ಸಂಬಂಧವಿರಿಸಿಕೊಂಡು ಹಲವು ಪ್ರದೇಶಗಳ ಮೇಲೆ ಆಡಳಿತ

ನಡೆಸಿದರು. ಯರಂಬರಗಿಯನ್ನು ರಾಜಧಾನಿ ಮಾಡಿಕೊಂಡು, ಇವರು ಬೆಳ್ವಲ, ಪುಲಿಗೇರಿ, ಬನವಾಸಿ, ಮಾಸವಾಡಿ, ಕರಡಿಕಲ್ಲು, ಎಡದೊರೆನಾಡು ಇತ್ಯಾದಿ ಚಿಕ್ಕ ಪುಟ್ಟ ವಿಭಾಗಗಳ ಮೇಲೆ ಆಡಳಿತ ನಡೆಯಿಸಿ ಚರಿತ್ರೆಯಲ್ಲಿ ಮುಖ್ಯ ಸ್ಥಾನ ಪಡೆದುಕೊಂಡಿದ್ದಾರೆ.

ಯಲಬುರ್ಗಿ ಶಾಸನವು 'ಶ್ರೀಮದ್ ರಾಜಧಾನಿ ಪಟ್ಟಣಮ್ ಎರಂಬರಗೆ' ಎಂದು ಕರೆದರೆ [೫೭] ''ಶ್ರೀಮನ್ಮಹಾಮಂಡಳೇಶ್ವರಂ ವೀರಬಿಜ್ಜಳದೇವರಸರಂ ವಿಕ್ರಮಾದಿತ್ಯದೇವರಸರುಂ ಎರಂಬರವಿಯ ನೆಲೆವೀಡಿನಲು ಸುಖ ಸಂಕಥಾ ವಿನೋದದಿಂ ರಾಜ್ಯಕ್ಕೆಯುತ್ತಮಿರೆ''[೫೮] ಎಂದು ಮತ್ತೊಂದು ಶಾಸವು ಉಲ್ಲೇಖ ಮಾಡಿದೆ. ಅಂದರೆ ಸಿಂಧ ಮಹಾಮಂಡಳೇಶ್ವರನಾದ ವೀರಬಿಜ್ಜಳದೇವ ಮತ್ತು ಸಹೋದರ ವಿಕ್ರಮಾದಿತ್ಯರು ಸೇರಿಕೊಂಡು ಜೊತೆಯಾಗಿಯೇ ಯರಂಬರಪಿ ನೆಲೆವಿಡಿನಲ್ಲಿ ಸುಖಸಂತೋಷದಿಂದ ರಾಜ್ಯವಾಳುತ್ತಿದ್ದರು. ನೆಲೆವೀಡು ಎಂಬುದಿಲ್ಲಿ ರಾಜಧಾನಿ ಸ್ಥಳವೇ ಆಗಿದೆ. ಈ ಎರಡು ಶಾಸನಗಳಿಂದ ಯರಂಬರಿಗೆಯು ಸಿಂಧರ ಮೂಲ ರಾಜಧಾನಿಯಾಗಿದ್ದಂತೆ ಅವರ ನೆಲೆವೀಡು ಸಹ ಆಗಿತ್ತೆಂದು ತಿಳಿದುಬರುವುದು.

## ನೆಲೆವೀಡು

ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚುರಿ, ಯಾದವ ಹಾಗೂ ಮಹಾಸಾಮಂತ, ಮಂಡಳೇಶ್ವರರು ತಾವು ಆಡಳಿತ ನೆಡಸುವ ಪ್ರದೇಶಗಳಲ್ಲಿ ರಾಜ್ಯಕಾರ್ಯಾರ್ತವಾಗಿ ಇಲ್ಲವೆ ಯುದ್ಧ ನಿಮಿತ್ಯ ತಮ್ಮ ದಂಡನ್ನು ತೆಗೆದುಕೊಂಡು ನಡೆದಾಗ ಮಾರ್ಗಮಧ್ಯದಲ್ಲಿ ವಿಶ್ರಾಂತಿಗಾಗಿ ಇಲ್ಲವೆ ರಾಜ್ಯಕಾರ್ಯದ ನಿಮಿತ್ಯ ಬೀಡುಬಿಟ್ಟಾಗ ಅಲ್ಲಿ ರಾಜನು ರಾಜಕಾರ್ಯ ನಡೆಸಿದಾಗ ಆ ನೆಲೆಯನ್ನು ಶಾಸನಗಳು ನೆಲೆವಿಡು ಪ್ರದೇಶಗಳೆಂದು ಕರೆದಿವೆ. ಮೂಲರಾಜಧಾನಿಯನ್ನು ಹೊರತುಪಡಿಸಿ ರಾಜ್ಯದ ಯಾವುದೇ ಭಾಗದಲ್ಲಿ ನಿಂತು ರಾಜನು ರಾಜಕಾರ್ಯ ನಡೆಸಲಿ ಅಂತಹ ಸ್ಥಳಗಳು ರಾಜಧಾನಿ ಪಟ್ಟಣಗಳೆನಿಸುವದಿಲ್ಲ. ಬದಲಾಗಿ ರಾಜರು ತಾತ್ಕಾಲಿಕವಾಗಿ ಆಡಳಿತ ನಡೆಸಲು ಬೀಡುಬಿಟ್ಟ ಸ್ಥಳಗಳು ನೆಲವೀಡುಗಳಾಗಿ ಶಾಸನಗಳಲ್ಲಿ ವರ್ಣಿಸಲ್ಪಟ್ಟಿವೆ. ಅಂತಹ ನೆಲೆವೀಡುಗಳಲ್ಲಿ ಜಿಲ್ಲೆಯ ಮಾದಿನೂರು ಸಹ ಒಂದಾಗಿದೆ.

ಕಲ್ಯಾಣ ಚಾಲುಕ್ಯ ೨ ನೆ ತೈಲಪರಸ ಮಾದಿನೂರನ್ನು ಅಗ್ರಹಾರವಾಗಿ ಮಾರ್ಪಡಿಸುವತನಕ ಇದು ನೆಲೆವೀಡಾಗಿರಲಿಲ್ಲ. ಅಗ್ರಹಾರವಾಗಿ ಮಾರ್ಪಟ್ಟ ನಂತರ ಮಾದಿನೂರದ ಮಹತ್ವ ಹೆಚ್ಚಾಯಿತು. ಮಾದಿನೂರದ ಶಾಸನವು ಇದನ್ನು ಮೊಂದೆಯನೂರು, ಮೋದನೂರ, ಅಗ್ರಹಾರ, ಮೊದೆಯನೂರವೆಂದು ಉಲ್ಲೇಖಿಸಿದೆ.[೫೯] ಮಾದಿನೂರಕ್ಕೆ ಸಮೀಪದಲ್ಲಿರುವ ಕವಲೂರ ಒಂದು ಅಗ್ರಹಾರವಾಗಿತ್ತು. ಈ ಗ್ರಾಮದ ಶಾಸನವು ಸಹ ''ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತ ಕಳಚುರಿ ಚಕ್ರವರ್ತಿ ಸಂಕಮದೇವ ಭೂವಲ್ಲಭಂ ಮೊದೆಗನೂರ ನೆಲೆವಿಡಿನೊಳು ಸುಖ- ವಿನೋಧದಿಂ ರಾಜ್ಯಂಗೆಯುತ್ತಿರೆ'' ಎಂದಿರುವದು. ಅಂದರೆ ಕಲಚುರಿ ಸಂಕಮದೇವನು ಕ್ರಿ.ಶ. ೧೧೭೭ ರಲ್ಲಿ ಮಾದಿನೂರ ನೆಲೆಯಿಂದ ರಾಜ್ಯವನ್ನು ಆಳುತ್ತಿದ್ದನು [೬೦]

ಇದೇ ಕಲಚುರಿ ಸಂಕಮನ ಕುಕನೂರ ಶಾಸನವು ಸಹ 'ಚಕ್ರವರ್ತಿ ಸಂಕಮ ದೇವರಸನು ಮೊದೆಗನೂರ ನೆಲೆವಿಡಿನೊಳು ಸುಖ ಸಂಕಥಾ ವಿನೋದದಿಂದ ರಾಜ್ಯಂಗೆಯುತ್ತು ಮಿರೆ' ಯೆಂದು ಹೇಳುವದು [೬೧] ಗೋತಗಿಯ ಶಾಸನವು ಸಹ "ಶ್ರೀ ಮತ್ತ್ರೈಳೋಕ್ಯಮಲ್ಲ ದೇವರ ವಿಜಯರಾಜ್ಯ ಮುತ್ತರೊತ್ತರಾಭಿವೃದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕ ತಾರಂಬರಂ ಸಲ್ಲುತ್ತ ಮಿರೆ ಮೋದನೂರ ಬೀಡಿನೊಳ್ಸುಖಸನ್ತ ಮಿರೆ" ಎಂದು ಹೇಳುತ್ತದೆ. [೬೨] ಕಲ್ಯಾಣ ಚಾಲುಕ್ಯ ಒಂದನೆ ಸೋಮೇಶ್ವರ ಮೊದಿಗನೂರ (ಮೊದಗನೂರ) ಬಿಡಿನಲ್ಲಿ ರಾಜ್ಯವಾಳುತ್ತಿದ್ದನು. ಹೀಗೆ ಹಲವು ಅರಸರ ಪಯಣದ ಮಧ್ಯಂತರ ತಂಗುದಾಣ (ನೆಲೆ) ಗಳಾಗಿ ಅನೇಕ ಸ್ಥಳಗಳು ಪ್ರಾಮುಖ್ಯತೆ ಪಡೆದುಕೊಂಡಿವೆ.

## ಅಡಿ ಟಿಪ್ಪಣಿಗಳು

೧. ಕೊಪ್ಪಾ, ಎಸ್.ಕೆ., ೧೯೯೦, ತರ್ದವಾಡಿ ನಾಡು : ಒಂದು ಅಧ್ಯಯನ, ಪು-೧೫, ಇಂಡಿ.

೨. ನಾಗಯ್ಯ, ಜೆ. ಎಂ., ೧೯೯೨, ಆರನೆ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ, ಪು-೮೭, ಬೆಳಗಾವಿ.

೩. ಚಂದ್ರಶೇಖರ, ಟಿ. ಆರ್. (ಸಂ), ೧೯೯೯, ಜಿಲ್ಲಾ ಅಭಿವೃದ್ಧಿ ಅಧ್ಯಯನ, ಕೊಪ್ಪಳ, ಪು-೩, ಹಂಪಿ.

೪. ಪಾಟೀಲ, ಬಿ.ಸಿ., ೧೯೯೮, ಕೊಪ್ಪಳ: ಸಾಂಸ್ಕೃತಿಕ ಪರಂಪರೆ, ಪು-೯, ಕೊಪ್ಪಳ.

೫. ಹಿರೇಮಠ, ಚನ್ನಬಸವ., ೨೦೦೦, ಎಡೆದೊರೆ ನಾಡು, ಪು. ೧, ಕನ್ನಡ ವಿ.ವಿ. ಹಂಪಿ.

೬. *Annual Report of South Indian Epigraphy*, 1991-92, pp 551.

೭. ದೇವರಕೊಂಡಾರಡ್ಡಿ. (ಸಂ), ಹಾಗೂ ಸಂಗಡಿಗರು , ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ- ೬೫, ಇಟಗಿ (ಯ.ತಾ), ಕ್ರಿ.ಶ. ೯೩೯, ಪುಟ-೨೫೭, ಕನ್ನಡ ವಿ.ವಿ. ಹಂಪಿ.

೮. ಅದೇ, ನಂ- ೨೬, ಮಾದಿನೂರ (ಕೊ.ತಾ), ಕ್ರಿ.ಶ. ೯೭೨.-೧೧೯೦, ಪು-೩.೧.

೯. ಹಿರೇಮಠ ಚನ್ನಬಸವ., ೨೦೦೦, ಎಡೆದೊರೆ ನಾಡು, ಪು-೩., ಕನ್ನಡ ವಿ.ವಿ. ಹಂಪಿ.

೧೦. ಅದೇ,ಪು-೩..

೧೧. *Hydrabad Archeological Series*, Vol- XVIII, p. 2,3,4 A. D. 1010, 1027, 1032.

೧೨. *South Indian Inscriptions*, Vol IX, Part-1, Gutti, A.D. 1085.

೧೩. ಹಿರೇಮಠ ಚನ್ನಬಸವ., ೨೦೦೦, ಎಡೆದೊರೆ ನಾಡು, ಪು-೪, ಕನ್ನಡ ವಿ.ವಿ. ಹಂಪಿ.

೧೪. ದೇವರಕೊಂಡಾರಡ್ಡಿ. (ಸಂ), ಹಾಗೂ ಸಂಗಡಿಗರು , ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೩, ಗೋತಗಿ (ಕು.ತಾ), ಕ್ರಿ.ಶ. ೧೦೨೪, ಪುಟ-೨೭೯, ಹಂಪಿ.

೧೫. ಅದೇ, ನಂ-೪, ಗೋತಗಿ (ಕು.ತಾ), ಕ್ರಿ.ಶ. ೧೦೪೫, ಪು-೨೮೦.

೧೬. ಕರ್ನಾಟಕ ಭಾರತಿ, ಸಂ-೧, ಸಂಚಿಕೆ-೧, ಪು-೮೦.

೧೭. ನಾಗಯ್ಯ, ಜೆ. ವಿ., ೧೯೯೨, ಆರನೆ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ, ಪು-೧೦೪-೧೦೬, ಬೆಳಗಾವಿ.

೧೮. ಕರ್ನಾಟಕ ಭಾರತಿ, ಸಂ-೧, ಸಂಚಿಕೆ-೧, ಪು-೮೬.

೧೯. ಕಲಬುರ್ಗಿ, ಎಂ. ಎಂ., ೧೯೭೩, ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಪು-೪೬, ಕರ್ನಾಟಕ ವಿ.ವಿ. ಧಾರವಾಡ.

೨೦. ದೇವರಕೊಂಡಾರಡ್ಡಿ. (ಸಂ), ಹಾಗೂ ಸಂಗಡಿಗರು , ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೯೮, ಪುಟ-೧೭೪, ಹಂಪಿ.

೨೧. ಅದೇ, ನಂ-೬೫, ಇಟಗಿ, (ಯ.ತಾ), ಕ್ರಿ.ಶ. ೯೩೯, ಪು-೨೫೭.

೨೨. ಅದೇ, ನಂ-೪೧ ಮತ್ತು ನಂ-೫೧, ಕುಕನೂರ (ಯ.ತಾ), ಕ್ರಿ.ಶ. ೧೧೭೦, ಕ್ರಿ.ಶ. ೧೦೦೫, ಪು-೨೦೯-೨೨೪.

೨೩. ಅದೇ, ನಂ-೨೪, ಸಂಕನೂರ (ಯ.ತಾ), ಕ್ರಿ.ಶ. ೧೩೧೨, ಪುಟ-೧೮೦.

೨೪. ಅದೇ, ನಂ- ೧೬ ಮತ್ತು ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೩೨, ಕ್ರಿ.ಶ. ೧೧೯೮, ಪು-೧೭೪.

೨೫. ಅದೇ, ನಂ-೬೫ ಮತ್ತು ನಂ- ೬೭, ಇಟಗಿ (ಯ.ತಾ), ಕ್ರಿ.ಶ. ೯೩೯, ಕ್ರಿ.ಶ. ೧೧೦೮, ಪು-೨೫೭-೨೫೯.

೨೬. ಅದೇ, ನಂ-೪೦ ಮತ್ತು ನಂ-೫೧, ಕುಕನೂರ (ಯ.ತಾ), ಕ್ರಿ.ಶ. ೧೧೬೩, ಕ್ರಿ.ಶ. ೧೧೦೫, ಪು-೨೦೫-೨೨೪.

೨೭. ಅದೇ, ನಂ- ೫೯, ತಳಕಲ್ಲ (ಯ.ತಾ), ಕ್ರಿ.ಶ. ೯೯೧, ಪು-೨೫೩.

೨೮. ಅದೇ, ನಂ- ೩೬, ಬಳಗೇರಿ (ಯ.ತಾ), ಕ್ರಿ.ಶ. ೧೦ ನೇ ಶತಮಾನ, ಪು-೧೯೪.

೨೯. ಅದೇ, ನಂ- ೧೧, ಉಪ್ಪಿನಬೇಟಗೇರಿ (ಕೊ.ತಾ), ಕ್ರಿ.ಶ. ೯೬೪, ಪು-೨೨.

೩೦. ಅದೇ, ನಂ-೧೩ ಮತ್ತು ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೮೫, ಕ್ರಿ.ಶ. ೧೧೯೮ ಪು-೧೬೭-೧೭೪.

೩೧. ಅದೇ, ನಂ- ೬೭, ಇಟಗಿ (ಯ.ತಾ), ಕ್ರಿ.ಶ. ೧೧೦೮, ಪು-೨೫೯.

೩೨. ಅದೇ ನಂ-೮, ಹಿರೆಮನ್ನಾಪುರ (ಕು.ತಾ), ಕ್ರಿ.ಶ. ೧೧ ನೇ ಶತಮಾನ, ಪು-೨೮೩.

೩೩. ಅದೇ ನಂ-೨೩, ಆಚನೂರ (ಕು.ತಾ), ಕ್ರಿ.ಶ. ೧೦-೧೧ ನೇ ಶತಮಾನ, ಪು-೩೦೪.

೩೪. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ. ೧೧೭೨, ಪು-೨೯೮.

೩೫. ಅದೇ ನಂ-೨೨, ಹನುಮನಾಳ (ಕು.ತಾ), ಕ್ರಿ.ಶ. ೧೧೯೯, ಪು-೩೦೨.

೩೬. ಅದೇ, ನಂ- ೨೭, ಅಂಟೂರರಾಣ (ಕು.ತಾ), ಕ್ರಿ.ಶ. ೧೦೮೨, ಪುಟ-೩೦೬.

೩೭. ಅದೇ, ನಂ-೨೪ ಮತ್ತು ನಂ-೨೮, ಸಂಕನೂರ (ಯ.ತಾ), ಕ್ರಿ.ಶ. ೧೩೧೨, ಕ್ರಿ.ಶ. ೧೨೩೮, ಪುಟ-೧೮೩

೩೮. ನಾಗಯ್ಯ ಜೆ. ಎಂ., ೧೯೯೨, ಆರನೆಯ ವಿಕ್ರಮಾದಿತ್ಯನ ಶಾಸನಗಳ ಒಂದು ಅಧ್ಯಯನ, ಪು. ೧೦೮, ಬೆಳಗಾವಿ.

೩೯. ದೇವರಕೊಂಡಾರಡ್ಡಿ. (ಸಂ), ಹಾಗೂ ಸಂಗಡಿಗರು , ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೩, ಕವಲೂರ (ಕೊ.ತಾ), ಕ್ರಿ.ಶ. ೧೧೭೭-೧೧೮೬, ಪು-೪, ಹಂಪಿ.

೪೦. ಅದೇ, ನಂ-೨೪, ಸಂಕನೂರ (ಯ.ತಾ), ಕ್ರಿ.ಶ. ೧೩೧೨, ಪು-೧೮೦.

೪೧. ಅದೇ, ನಂ- ೬೫, ಇಟಗಿ (ಯ.ತಾ) ಕ್ರಿ.ಶ. ೯೩೯, ಪು-೨೫೭.

೪೨. ಅದೇ, ನಂ- ೮, ಅಳವಂಡಿ (ಕೊ.ತಾ), ಕ್ರಿ.ಶ. ೧೧೫೭, ೧೨೬೮, ಪು-೧೬.

೪೩. ನಾಗಯ್ಯ ಜೆ. ಎಂ., ೧೯೯೨, ಆರನೆಯ ವಿಕ್ರಮಾದಿತ್ಯನ ಶಾಸನಗಳ ಒಂದು ಅಧ್ಯಯನ, ಪು. ೧೦೯, ಬೆಳಗಾವಿ.

೪೪. ಶಿರೂರ, ಬಿ.ವ್ಹಿ., ೧೯೭೭, ಯಲಬುರ್ಗಿಯ ಸಿಂಧರು, ಪು- ೩., ಧಾರವಾಡ.

೪೫. *Annual Report on Indian Epigraphy* 1985-86 Vol No.100. Devargudi, A.D. 1203

೪೬. ಹಿರೇಮಠ, ಚನ್ನಬಸವ., ೨೦೦೦, ಎಡೆದೊರೆನಾಡು, ಪು-೫, ೬, ಹಂಪಿ.

೪೭. ದೇವರಕೊಂಡಾರಡ್ಡಿ. (ಸಂ), ಹಾಗೂ ಸಂಗಡಿಗರು , ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೧೨, ಹಿರೇ ಸಿಂದೋಗಿ (ಯ.ತಾ), ಕ್ರಿ.ಶ. ೧೧-೧೨ ಶತಮಾನ, ಪು-೨೩, ಹಂಪಿ.

೪೮. ಅದೇ, ನಂ-೨೧, ಹಲಗೇರಿ (ಕೊ.ತಾ), ಕ್ರಿ.ಶ. ೧೦೧೮, ಪು-೨೮.

೪೯. ಅದೇ, ನಂ-೨, ವಿಪ್ರ (ಗ.ತಾ), ಕ್ರಿ.ಶ. ೧೦೫೯, ಪು-೩೧೫.

೫೦. ಅದೇ, ನಂ- ೨೪, ಸಂಕನೂರ (ಯ.ತಾ), ಕ್ರಿ.ಶ. ೧೩೧೨, ಪು-೧೮೦.

೫೧. ಅದೇ, ನಂ- ೫೯, ತಳಕಲ್ಲ (ಯ.ತಾ), ಕ್ರಿ.ಶ. ೯೯೧, ಪು-೨೫೩..

೫೨. ಅದೇ, ನಂ-೩೬, ಬಳಗೇರಿ (ಯ.ತಾ), ಕ್ರಿ.ಶ. ೧೦ ನೇ ಶತಮಾನ, ಪು-೧೯೪.

೫೩.. ಅದೇ, ನಂ- ೧೭೨, ಕೊಪ್ಪಳ (ಕೊ.ತಾ), ಕ್ರಿ.ಶ. ೧೧೯೬, ಪು-೩೯೭.

೫೪. ಅದೇ, ನಂ-೧, ವಿಪ್ರ (ಗ.ತಾ), ಕ್ರಿ.ಶ. ೧೦೮೭-೧೦೯೪, ಪು-೩೧೨..

೫೫. ಅದೇ, ನಂ- ೫೯, ತಳಕಲ್ಲ (ಯ. ತಾ), ಕ್ರಿ.ಶ. ೯೯೧, ಪು-೨೫೩..

೫೬. ಅದೇ, ಪ್ರಸ್ತಾವನೆ, ಪು-೩೩.

೫೭. ಅದೇ, ನಂ-೫, ಯಲಬುರ್ಗ (ಯ.ತಾ), ಪು-೧೬೨.

೫೮. ಅದೇನಂ- ೧೩, ಕಲ್ಲೂರ (ಯ.ತಾ), ಕ್ರಿ.ಶ. ೧೧೮೫, ಪುಟ-೧೭೭.

೫೯. ಅದೇನಂ- ೨೬, ಮಾದಿನೂರ (ಯ.ತಾ), ಕ್ರಿ.ಶ. ೯೭೩, ಕ್ರಿ.ಶ. ೧೧೩೬, ಕ್ರಿ.ಶ. ೧೧೯೦, ಪುಟ-೩೧.

೬೦. ಅದೇ, ನಂ- ೩, ಕವಲೂರ (ಕೊ.ತಾ), ಕ್ರಿ.ಶ. ೧೧೭೭, ಪು-೪.

೬೧. ಅದೇ, ನಂ- ೫೨, ಕುಕನೂರ (ಯ.ತಾ), ಕ್ರಿ.ಶ. ೧೧೭೮, ಪು-೨೨೮.

೬೨. ಅದೇನಂ- ೪, ಗೋತಗಿ (ಕು.ತಾ), ಕ್ರಿ.ಶ. ೧೦೪೫, ಪು-೨೮೦.




Chapter – 5

## ಅಧ್ಯಾಯ - ಐದು

# ಆಡಳಿತ ವ್ಯವಸ್ಥೆ

ರಾಜತ್ವವೆಂಬ ರಾಜಕೀಯ ಆಡಳಿತ ಸಂಸ್ಥೆಯು ಮೊದಲಾದದ್ದು ಹೇಗೆ ಎಂಬ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಯುದ್ಧದಲ್ಲಿ ಉಂಟಾದ ಸೋಲಿಗೆ ನಾಯಕನಿಲ್ಲದುದೇ ಕಾರಣವೆಂದು ಭಾವಿಸಿದುದರಿಂದ ನಾಯಕನೊಬ್ಬನನ್ನು ಹೊಂದುವದಕ್ಕಾಗಿ ರಾಜತ್ವವು ಪ್ರಾರಂಭವಾಯಿತೆಂದು ಋಗ್ವೇದ ಹೇಳುತ್ತದೆ.[1] ರಾಜತ್ವ ವ್ಯಕ್ತಿಯ ಸಾಮರ್ಥ್ಯದಿಂದ ಮತ್ತು ಜನರ ಸಹಕಾರದಿಂದ ಬಂದುದು, ಆದರೆ ರಾಜಕೀಯ ಆಡಳಿತವು ಜನರು ತಮ್ಮ ವ್ಯವಸ್ಥಿತ ಸಾಂಘಿಕ (ಗುಂಪು) ಜೀವನ ಆರಂಭಿಸಿದಂದಿನಿಂದ ಒಂದಲ್ಲಾ ಒಂದು ರೀತಿಯಲ್ಲಿ ಹುಟ್ಟು ಪಡೆದು ಬೆಳೆದು ಬಂದುದಾಗಿದ್ದು ಅದು ಮುಖ್ಯವಾಗಿ ಹೊನ್ನು, ಹೆಣ್ಣು, ಮಣ್ಣುಗಳಿಂದ ಬಂದಿದೆ. ಅಧಿಕಾರ ಯಾರಲ್ಲಿದೇಯೋ ಅವನು ಈ ಮೂರನ್ನು ಪಡೆಯುತ್ತಿದ್ದನು. ಅಧಿಕಾರವನ್ನು ಯಾರು ಸಂಪಾದನೆ ಮಾಡುತ್ತಿದ್ದರೋ ಅವರು ಆಡಳಿತವನ್ನು ರೂಪಿಸುತ್ತಿದ್ದರು. ಇದು ಇವತ್ತಿನದಲ್ಲ ಪಾಣಿನಿ, ಕೌಟಿಲ್ಯರ ಕಾಲದಿಂದ ನಡೆದು ಬಂದುದಾಗಿದೆ. ಇದಕ್ಕೆ ಮೂಲ ಕುಟುಂಬವೇ ಕಾರಣ ವೆಂದು ಹೇಳಬಹುದು. ಗೃಹಿಣಿಯ ಕಾರ್ಯಕ್ಷೇತ್ರವು ಮನೆಯ ಯಜಮಾನನ ಕಾರ್ಯಕ್ಷೇತ್ರಕ್ಕಿಂತ ಭಿನ್ನವಾಗಿದ್ದು ಇವರಿಬ್ಬರಿಂದ ಕುಟುಂಬದ ಇತರ ಸದಸ್ಯರ ಕೆಲಸಗಳು ಬೇರೆ ಬೇರೆ ಯಾದವು. ಈ ಬಗೆಯಾದ ಅಧಿಕಾರದ ಹಂಚಿಕೆ ಕುಟುಂಬದ ಸೂಸುತ್ರತೆಗೆ ಹೇಗೆ ಅವಶ್ಯವಾಯಿತೋ ಹಾಗೇಯೇ ಆಡಳಿತ ವ್ಯವಸ್ಥೆಗೆ, ಊರು, ರಾಜ್ಯಗಳು ಮೂಲವಾದವು.

ಪ್ರಾಚೀನ ಕಾಲದಿಂದ ನಡೆದು ಬಂದ ಆಡಳಿತ ಪದ್ಧತಿ ಮತ್ತು ಆಡಳಿತಕ್ಕೆ ಸಂಬಂಧಿಸಿದಂತೆ ಪಾರಿಭಾಷಿಕ ಪದಗಳ ಬಳಕೆಯಿಲ್ಲದಿದ್ದರೆ ಸರಿಯಾದ ಅರ್ಥ ಹುಡುಕುವದು ಸಾಧ್ಯವಿಲ್ಲ. ಏಕೆಂದರೆ ಆಡಳಿತದ ವ್ಯಾಪ್ತಿ ವಿಸ್ತೃತವಾದದ್ದು. ಅದಕ್ಕೆ ಶಾಸನಗಳಲ್ಲಿ ಅಧಿಕಾರಿಗಳನ್ನು ಕುರಿತು ' ಆಳುತ್ತಮಿರೆ' ಎಂಬ ಶಬ್ದವನ್ನು ಬಳಸಲಾಗಿದೆ. ಈ ಆಳುತ್ತಮಿರೆ ಎಂಬ ಶಬ್ದ ಎರಡರ್ಥದಲ್ಲಿ ಬಳಕೆಗೊಂಡಿದೆ. ಒಂದು ಪ್ರಭುವಾಗಿ ಆಳುವದು. ಇನ್ನೊಂದು ಅಧಿಕಾರಿಯಾಗಿ ತನ್ನ ಹುದ್ದೆಯ ಆಡಳಿತವನ್ನು ನಿರ್ವಹಿಸುವದಾಗಿತ್ತು.

ಪ್ರಭುವಾಗಿ ವಂಶ ಪಾರಂಪರ್ಯದಿಂದ ಆಡಳಿತ ನಡೆಸಿದವರು ಚಕ್ರವರ್ತಿ, ಮಹಾಮಂಡಳೇಶ್ವರ, ಆಳುವ ಮಹಾ ಸಾಮಂತ, ಪ್ರಭು ಗಾವುಂಡ, ಗಾವುಂಡರು ಮಾತ್ರ. ವಂಶಪಾರಂಪರ್ಯವಾಗಿ ಬಂದ ಆಡಳಿತ ವ್ಯವಸ್ಥೆ ಕೇಂದ್ರಿಕೃತವಾಗಿರದೆ ಅದು ವಿಕೇಂದ್ರಿಕೃತವಾಗಿತ್ತು. ಅಂತೆಯೇ ಒಬ್ಬ ಚಕ್ರವರ್ತಿಯ ಕೆಳಗೆ ಅನೇಕ ಮಹಾ ಮಂಡಳೇಶ್ವರರೂ, ಒಬ್ಬ ಮಹಾ ಮಂಡಳೇಶ್ವರನ ಕೆಳಗೆ ಅನೇಕ ಮಹಾ ಸಾಮಂತರೂ, ಒಬ್ಬ ಮಹಾಸಾಮಂತನ ಕೆಳಗೆ ಕೆಲವು ಪ್ರಭುಗಾವುಂಡರೂ, ಒಬ್ಬ ಪ್ರಭುಗಾವುಂಡನ ಕೆಳಗೆ ಅನೇಕ ಗಾವುಂಡರೂ

ಆಳುತ್ತಿದ್ದರು.[೨] ಇವರೆಲ್ಲರು ವಂಶ ಪಾರಂಪರ್ಯವಾಗಿ ಆಡಳಿತ ನಡೆಸುವ ಹಕ್ಕನ್ನು ಪಡೆದವರು. ಆಡಳಿತ ಸುಗಮಗೊಳ್ಳಲು ಸಹಕಾರಿಯಾದ ಅಧಿಕಾರಿ ವರ್ಗವೆಂದರೆ ಮಹಾ ಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ, ಸುಂಕದ ಮಹಾಸಾಮಂತ, ದಂಡನಾಯಕ, ಪೆರ್ಗ್ಗಡೆಗಳು ಇವರಿಗೆ ವಂಶಪಾರಂಪರ್ಯದ ಅಧಿಕಾರವಿರಲಿಲ್ಲ.

ಆಡಳಿತದ ಅಧಿಕಾರದ ವಂಶ ಪಾರಂಪರ್ಯದ ವ್ಯವಸ್ತೆಯೂ ಹೇಗೆ ಮೇಲಿಂದ ಕೆಳಕ್ಕೆ ಬಂದಿರುವದೊ ಅದೆ ರೀತಿಯಾಗಿ ಏಕಿಕೃತ ಸಾಮ್ರಾಜ್ಯವು ಸಹ ವಿಶಾಲತೆಯಿಂದ ಕಿರಿದಾಗುವೆಡೆಗೆ ಕೇಂದ್ರ, ಪ್ರಾಂತ, ನಾಡು, ಪಟ್ಟಣ, ಊರುಗಳೆಂದು ವಿಭಾಗಿಸಲ್ಪಟ್ಟಿತು. ಈ ವ್ಯವಸ್ಥೆಯು ಬಹಳ ಪ್ರಾಚೀನ ಕಾಲದಿಂದ ನಡೆದುಬಂದದಲ್ಲ. ಮೌರ್ಯ ಮನೆತನದಿಂದ ಪ್ರಾರಂಭವಾಗಿ ಉತ್ತರದ ಗುಪ್ತ ಮತ್ತು ದಕ್ಷಿಣದ ಬಾದಾಮಿ ಚಾಲುಕ್ಯರ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿತು.

**ಆಡಳಿತ ವಿಭಜನೆ ಅಥವಾ ಅಧಿಕಾರ ವಿಭಜನೆ**

### ೧) ಚಕ್ರವರ್ತಿ (ಪ್ರಭು)

ಸಾಮ್ರಾಜ್ಯಕ್ಕೆ ಒಡೆಯನಾದವನಿಗೆ ಚಕ್ರವರ್ತಿ ಎಂದು ಕರೆಯಲಾಗುತ್ತಿತ್ತು. ಮಹಾ ಮಂಡಳೇಶ್ವರ, ಮಹಾ ಪಸಾಯಿತರು ಇವನ ಕೆಳಗಿನ ಅಧಿಕಾರಿಗಳಾಗಿದ್ದರು. ಮಹಾ ರಾಜಾಧಿರಾಜನಾದವನು ಇಡೀ ಸಾಮ್ರಾಜ್ಯಕ್ಕೆ ಒಬ್ಬನೆ ಅಂದರೆ ಅಧಿಕಾರದಲ್ಲಿ ಎಲ್ಲರಿಗಿಂತ ದೊಡ್ಡ ಸ್ಥಾನದಲ್ಲಿರುವವನು. ಅದಕ್ಕಾಗಿ ಆತನಿಗೆ 'ಚಕ್ರವರ್ತಿ' ಯೆಂದು ಕರೆಯುವರು.[೩] ಶಾಸನಗಳು ಇವರನ್ನು 'ಸ್ವಸ್ತಿ ಸಮಸ್ತ ಭೂವನಾಶ್ರಯಂ ಶ್ರೀ ಪೃಥ್ವೀ ವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾ ಭರಣಂ ಶ್ರೀಮತು ಭೂಲೋಕಮಲ್ಲದೇವರ ವಿಜಯರಾಜ್ಯ ಮುತ್ತರೊತ್ತರಾಭಿವೃದ್ಧಿ ಪ್ರವರ್ದ್ಧಮಾನ ಮಾಚಂದ್ರಾರ್ಕ ತಾರಾಂಬರಂ ಸಲ್ಲುತ್ತಮಿರೆ'' ಎಂದು ಕಲ್ಲೂರದ ಶಾಸನವು ಚಕ್ರವರ್ತಿಯ ಅಧಿಕಾರ ಅಂತಸ್ತಿನ ಪರಿಚಯ ನೀಡುತ್ತದೆ.[೪]

### ೨) ಅರಸ (ರಾಜ)

ರೂಢಿಯಲ್ಲಿ ಅರಸ-ರಾಜ ಎಂದು ಸಾಮ್ರಾಜ್ಯದ ಚಕ್ರವರ್ತಿಗೆ ಕರೆಯಲಾಗುತ್ತಿದ್ದರೂ ಅದು ಅವನ ಕೆಳಗಿನ ಅಧಿಕಾರಿಗಳಿಗೆ ಅರಸ-ರಾಜ ಎಂದು ಕರೆಯುವ ವಾಡಿಕೆ ಜಾರಿಗೆ ಬಂದಿದೆ. ಮುಖ್ಯವಾಗಿ 'ಅರಸ-ರಾಜ' ನೆಂಬ ಶಬ್ದಗಳು ಮಹಾಮಂಡಳೇಶ್ವರರಿಗೆ ಮಾತ್ರ ಅನ್ವಯಿಸುತ್ತವೆ. ಇವರು ಚಕ್ರವರ್ತಿಯ ಪಾದಪದ್ಮೋಪಜೀವಿಗಳಾಗಿದ್ದು ಕೆಲವು ದೊಡ್ಡ ವಿಭಾಗಳಿಗೆ ಪ್ರಭುಗಳಾಗಿದ್ದಾರೆ. ಉದಾ : ಆರನೆ ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾಗಿ ನೊಳಂಬ ಪಲ್ಲವ ಪೆರ್ಮ್ಮಾಡಿಯನ್ನು ಶಾಸನವು.

''ತತ್ಪಾದ ಪದ್ಮೋಪಜೀವಿ ಸಮರ್ಧಿಗತ ಪಂಚಮಹಾಶಬ್ದ ಮಹಾ ಪಲ್ಲವಾನ್ವಯಂ ಶ್ರೀ ಪ್ರಥ್ವಿವಲ್ಲಭ ಪಲ್ಲವಕುಳ ತಿಳಕಂನ ಮೋಘ ವಾಕ್ಯಂ ಕಾಂಚಿಪುರವರೇಶ್ವರಂ ರಾಜಿಗಚೋಳ ಮನೋಭಂಗಂ ಶ್ರೀಮತ್ರಿಭುವನಮಲ್ಲದೇವ ಪಾದಬ್ಜಬೃಂಗ ಶ್ರೀಮನ್ ಮಹಾಮಂಡಳೇಶ್ವರಂ ತ್ರಿಭುವನಮಲ್ಲ ಪಾಂಡ್ಯ ವೀರನೊಳಂಬ ಪಲ್ಲವ ಪೆರ್ಮ್ಮನಡಿ ದೇವರು ನೊಳಂಬವಾಡಿ ಮೂವತ್ತಿರ್ಚ್ಛಾಸಿರಮಂ ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯುತ್ತಮಿರೆ'' ಯೆಂದು ಅರಸ ವಿಕ್ರಮಾದಿತ್ಯನ ಪಾದ ಪದ್ಮೋಪಜೀವಿಯಾಗಿ ನೊಳಂಬವಾಡಿ ೩೨000 ಸಾವಿರ ವೆಂಬ ದೊಡ್ಡ ವಿಭಾಗದ ಮೇಲೆ ಅಧಿಕಾರ ನಡೆಸುವದನ್ನು ಹೇಳುತ್ತದೆ.[೫]

## ೩) ಮನ್ನೆಯ (ಸಾಮಂತ್)

ಮಹಾ ಸಾಮಂತ, ಸಾಮಂತರಿಗೆ ಮನ್ನೆಯರೆಂದು ಕರೆಯಲಾಗುತ್ತಿತ್ತು. ಇವರು ಅರಸನಿಗೆ ಅಧಿನರಾಗಿ ಚಿಕ್ಕ ಚಿಕ್ಕ ವಿಭಾಗಗಳ ಆಡಳಿತ ನೋಡಿಕೊಳ್ಳುತ್ತಿದ್ದರು. ಇಂತವರನ್ನು ಜಿಲ್ಲೆಯ ಶಾಸನಗಳು ಸಾಕಷ್ಟು ಜನ ಸಾಮಂತರ ಕುರಿತು ಉಲ್ಲೇಖ ಮಾಡುತ್ತವೆ. ಉದಾ : ಓರೇ ಮನ್ನಾಪುರದ ತ್ರುಟಿತ ಶಾಸನವು ಕದಂಬ ಅಜವರ್ಮ ಕೆಳವಾಡಿ-೩೦೦ದ ಸಾಮಂತನಾಗಿ ಆಳುತ್ತಿರುವದನ್ನು ಹೇಳುತ್ತದೆ. ಅದು ''ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತ ನನ್ನಿಗದಂಬಂ ಕದಂಬರಾಭರಣಂ ಬನವಾಸಿ ಪುರವರಾಧೀಶ್ವರಂ ಶ್ರೀಮದಜವರ್ಮ್ಮರಸರು ಕೆಳವಾಡಿಯಂ ಸುಖ ಸಂಕಥಾ ವಿನೋದದಿಂ ರಾಜ್ಯಾಂಗೆಯ್ಯುತ್ತಮಿರೆ'' ಯೆಂದು ಹೇಳುವುದು.[೬]

## ೪) ಆಳುವ ವರ್ಗ

ಆಳುವ ವರ್ಗದವರ ವಿಷಯವಾಗಿ ತ್ರಿಭೋಗ, ಏಕಭೋಗ, ಉಭಯಸ್ವಾಮ್ಯ, ಬೀಳಾನುವೃತ್ತಿ ಮತ್ತು ಅಣುಗಜೀವಿತವೆಂಬ ಪಾರಿಭಾಷಿಕ ಪದಗಳು ಶಾಸನಗಳಲ್ಲಿ ಪದೆ ಪದೆ ಕಂಡುಬರುತ್ತವೆ. ಇವರ ರಾಜ್ಯಭೋಗದ ಸ್ವರೂಪ ಮತ್ತು ಪರಿಮಿತಿಗಳನ್ನು ಹೇಳುವ ಶಬ್ದಗಳ ಅರ್ಥವನ್ನು ನಾವಿಲ್ಲಿ ಉದಾಹರಣೆ ಸಹಿತ ತಿಳಿದು ಕೊಳ್ಳಬಹುದು.

### ತ್ರಿಭೋಗ

ಶಾಸನಗಳಲ್ಲಿ ಕೆಲವು ಮಂಡಳೇಶ್ವರರು, ಮಹಾ ಸಾಮಂತರು ಇತರರು ತ್ರಿಬೋಗ ಸಿದ್ದಿಯಿಂದ ಆಳುತ್ತಿದ್ದುದು ಕಂಡುಬರುತ್ತದೆ. ಉದಾ : ಆರನೆಯ ವಿಕ್ರಮಾದಿತ್ಯನು ಸಿಂಧ ಭೂಪಾಳ ಚಾಮುಂಡರಸನಿಗೆ ಕೀಸು ಕಾಡು ಎಪ್ಪತ್ತನ್ನು ತ್ರಿಭೋಗ ಸಿದ್ದಿಯಾಗಿ ಆಡಳಿತ ನಡೆಸಲು ಕೊಡುತ್ತಾನೆ. ಅದನ್ನು ಕಲ್ಲೂರದ ೧೧೯೮ ರ ಶಾಸನವು.[೭] ''ಇನ್ತು ಕಿಸುಕಾಡೆಪ್ಪತ್ತುಮಂ, ತ್ರಿಭೋಗಾಭ್ಯಂತರ ಮಾಳುತ್ತಂ ಮತ್ತಂ ಬೆಳವಲ ದೊಳಗುಂ ನರೆಯಂಗಲು ಹನ್ನೆರಡುಮಂ ಕಲ್ಲೂರು ಬಳ್ಳಿಗರೆಯ ಪ್ರಭುತ್ವಮಂ ಪ್ರತಿಪಾಳಿಸುತ್ತಂ ಸುಖಸಂಕಥಾ ವಿನೋದದಿಂ ರಾಜ್ಯಗೆಯ್ಯುತ್ತಮಿರ್ದ್ದು ಶ್ರೀಮನ್ಮಹಾ ಮಂಡಳೇಶ್ವರ ಚಾಮುಂಡರಸಂ

ಕಲ್ಲೂರ ಶ್ರೀ ಸ್ವಯಂಭು ಕಲಿದೇವ ಸ್ವಾಮಿಯಂಗಭೋಗಕ್ಕಂ ತಪೋಧನರಾಹಾರ ದಾನಕ್ಕೆಂದು ಬಿಟ್ಟ ಬೆನತೂರಸೀಮೆ ....ಮತ್ತರು ಐಂ'' ಎಂದು ಚಾಮುಂಡರಸನ ಕುರಿತು ಹೇಳುವದು.

ಅದೇ ರೀತಿ ಸಂಕನೂರಿನ ಕ್ರಿ.ಶ. ೧೧೧೩ ರ ಶಾಸನವು ಸಹ ವಿಕ್ರಮಾದಿತ್ಯನ ಮಂಡಳೇಶ್ವರ ಶ್ರೀಮನ್ಮಹಾ ಮಂಡಳೇಶ್ವರ ಆಚರಸ ನರೆಯಂಗಲ್ಲದಲ್ಲಿ ತ್ರಿಭೋಗಾಭ್ಯಂತರ ದಿಂದ ಆಳುತ್ತಿದ್ದನು.[೮]

ಜೆ. ಎಂ. ನಾಗಯ್ಯ ಅವರು ತ್ರಿಭೋಗಭ್ಯಂತರ ಸಿದ್ಧಿಯನ್ನು ಕುರಿತು ಅದು ತ್ರಿಭೋಗ -ಅಭ್ಯಂತರ-ಸಿದ್ಧಿ ಎಂದು ಮೂರು ಪದಗಳಲ್ಲಿ ವಿಂಗಡಿಸಿ ಚರ್ಚಿಸಿ ತ್ರಿಭೋಗವಾಗಿ ಅಭ್ಯಂತರವಿಲ್ಲದೆ ಸಂಪೂರ್ಣ ಸ್ವಾಮಿತ್ವವನ್ನು ಪಡೆಯುವದಾಗಿದೆ ಎಂಬ ಅರ್ಥ ಸೂಚಿಸುತ್ತದೆಯೆಂದಿದ್ದಾರೆ.[೯]

## ಏಕಭೋಗ

ಏಕ ಭೋಗವೆಂದರೆ ಅಧಿಕಾರ ಪಡೆದ ವ್ಯಕ್ತಿಯು ತಾನು ಜೀವಂತವಾಗಿರುವ ವರೆಗೆ ಮಾತ್ರ ಅನುಭವಿಸುವದಾಗಿದೆ. ಈ ಅಧಿಕಾರವು ಆತನ ವಂಶಸ್ಥರಿಗೆ ಮುಂದುವರಿಯುವದಿಲ್ಲ. ಜಿಲ್ಲೆಯ ಶಾಸನಗಳು ಏಕಭೋಗದ ಕುರಿತು ಏನನ್ನು ಹೇಳುವದಿಲ್ಲವಾದರು ದಂಡನಾಯಕ ಪಸಾಯಿತರ, ಸುಂಕಾಧಿಕಾರಿಗಳ ಅಧಿಕಾರಗಳು ಏಕಬೋಗದಲ್ಲಿಯೇ ಬರುವಂತವುಗಳಾಗಿವೆ. ಏಕೆಂದರೆ ಒಂದು ಮನೆತನದ ಅರಸೊತ್ತಿಗೆಯ ವೇಳೆಯಲ್ಲಿದ್ದ ಅಧಿಕಾರಿಗಳು ಮತ್ತೊಂದು ಅರಸೊತ್ತಿಗೆಯ ಸಮಯದಲ್ಲಿ ಇರುವದು ಬಹಳ ವಿರಳ. ಅದೇ ರೀತಿ ಒಬ್ಬ ಅರಸನ ಕೈಕೆಳಗೆ ಅಧಿಕಾರ ಪಡೆದ ವ್ಯಕ್ತಿ ಮತ್ತೊಬ್ಬ ಅರಸನ ಕಾಲದಲ್ಲಿ ಅದೇ ಅಧಿಕಾರದಲ್ಲಿ ಅದೇ ಸ್ಥಳದಲ್ಲಿ ಇರುತ್ತಿರಲಿಲ್ಲವೆಂಬುದು ಶಾಸನಗಳ ಅಧ್ಯಯನದಿಂದ ಅರಿಯಬಹುದಾಗಿದೆ.

## ಉಭಯ ಸ್ವಾಮ್ಯ, ಬೀಜಾನುವೃತ್ತಿ, ಅಣುಗ ಜೀವಿತ

ಉಭಯಸ್ವಾಮ್ಯ ವೆಂಬ ಶಬ್ದ ಶಾಸನಗಳಲ್ಲಿ ಕಂಡು ಬರುತ್ತದೆ. ಇದರ ಅರ್ಥ 'ಎರಡರ ಒಡೆತನ' ಎಂದಾದರು ಅದು ಇಬ್ಬರಿಂದ ಒಡೆತನದ ಮಾನ್ಯತೆ ಪಡೆದು ಆಳುವುದೆಂದು ತಿಳಿಯಬಹುದು. ಬೀಜಾನುವೃತ್ತಿಯು 'ಸೇವಕ' ಎಂಬಂರ್ಥದಲ್ಲಿ ಬಳಕೆಯಾಗಿದೆ. ನಿಷ್ಠಾವಂತ ಸೇವಕರು, ಗರುಡರಾಗಿದ್ದವರು ಈ ಬೀಜಾನುವೃತ್ತಿಯಿಂದ ಆಳುತ್ತಿದ್ದರು. ಇದು ಸೇವಕನ ನಡತೆ, ನಿಷ್ಠೆ ಮೊದಲಾದ ಗುಣಗಳನ್ನು ಮೆಚ್ಚಿದ ಚಕ್ರವರ್ತಿ ಅಂತವರಿಗೆ ಮಂಡಳೇಶ್ವರರನ್ನಾಗಿ ಇಲ್ಲವೆ, ದಂಡನಾಯಕರನ್ನಾಗಿ ನೇಮಕ ಮಾಡುತ್ತಿದ್ದನು. ಕುಟ್ಟುಂಬಿಟಿ ಮತ್ತು ಅಣುಗ ಜೀವಿತಗಳು ಮೇಲಿನ ಅರ್ಥವನ್ನೆ ನೀಡುತ್ತಿದ್ದರು. ಈ ಶಬ್ದಗಳ ಅರ್ಥ ಪ್ರೀತಿಗೆ ಪಾತ್ರರಾದವರಿಗೆ ಕೊಟ್ಟ ಕೊಡುಗೆ ಎಂದು ಹೇಳಬಹುದು. ಅಣುಗ ಜೀವಿತವು ಪ್ರೀತಿಗೆ ಪಾತ್ರರಾದವರಿಗೆ ನೀಡಿದರೆ. ಕುಟ್ಟುಂಬಿಟಯು ವ್ಯಕ್ತಿಯ ಕುಟುಂಬದ ಜೀವನ ನಿರ್ವಹಣೆಗಾಗಿ ಕೊಟ್ಟ ಕೊಡುಗೆಯಾಗಿದೆ.[೧೦] ಮಹಾ ಪ್ರಧಾನ ಆನೆಯ ಕೇಶಿಮಯ್ಯ ದಂಡಾಧಿನಾಥನು ಬೆಳ್ವಲ-೩೦೦ ನ್ನು ದಂಡನಾಯಕನ ದೆಸೆಯಿಂದ ಆಳುತ್ತಿದ್ದ.[೧೧]

ಜಿಲ್ಲೆಯ ಶಾಸನ ಒಂದರಲ್ಲಿ 'ನಿರಾಕುಳ ' ಎಂಬ ಶಬ್ದ ಬರುತ್ತದೆ. ನೀರಾಕುಳ ಎಂಬುದು ಸಹ ಮೇಲಿನ, ಕುಟ್ಟುಂಬಿಟಿ, ಅಣುಗಜೀವಿತದಂತೆಯೇ ಬರುತ್ತದೆ. ತಳಕಲ್ಲದ ಕ್ರಿ. ಶ. ೯೯೧ ಶಾಸನವು. ''ಮಹಾಸಾಮನ್ತ ಶ್ರೀ ಮತ್ಸೋೞಬನರಸರ ಇನ್ತೆನಿಸಿ ಸೋಬನರಸರ್ ಶ್ರೀ ಬಲ್ಲವರಸರ ಪ್ರಸಾದೋಪಬ್ದಯಿಂ ಎರಡಾರುನೂರುವಂ ಬನವಾಸಿ ಪನ್ನಿಚ್ಛಾಸಿರಮುಮಂ ನಿರಾಕುಳ ಮಾಳುತ್ತಿರೆ''[೨] ಎಂದು ಹೇಳುವುದು.

ಸೋೞಬನರಸ ಮತ್ತು ಬಲ್ಲವರಸರು ಅರಸನ ಪ್ರಸಾಧ ಫಲವೆಂದು ಎರಡು ಪ್ರಾಂತಗಳನ್ನು ನಿರಾಕುಳದಿಂದ ಅಂದರೆ ಎರಡರ ಮೇಲೆ ಇಬ್ಬರು ಅಧಿಕಾರ ಹಂಚಿಕೊಂಡು ಆಡಳಿತ ನಡೆಸುತ್ತಿರಬೇಕು.

ಸಾಮ್ರಾಜ್ಯದ ಸಮರ್ಥ ಆಡಳಿತ ನಡೆಸುವದಗೋಸ್ಕರ ಪ್ರಾಚೀನರು ಅಧಿಕಾರ ವಿಕೇಂದ್ರಿಕರಣ ಮಾಡಿದ್ದರಲ್ಲದೆ , ಅದನ್ನು ಕೇಂದ್ರಾಡಳಿತ, ವಿಭಾಗಾಡಳಿತ, ಊರಾಡಳಿತ, ಅಗ್ರಹಾರ, ಗ್ರಾಮಾಡಳಿತದಲ್ಲಿ ಸಮಾವೇಶ ಗೋಳಿಸಿದ್ದರು. ಹೀಗಾಗಿ ಅಂದು ಸಾಮ್ರಾಜ್ಯದ ತುಂಬ ಒಂದು ಬಗೆಯ ಸಂಕೀರ್ಣ ಆಡಳಿತ ವ್ಯವಸ್ಥೆ ಅಸ್ತಿತ್ವದಲ್ಲಿದ್ದಿತೆಂದು ಹೇಳಬಹುದು.

## ಕೇಂದ್ರಾಡಳಿತ

ಕೇಂದ್ರಾಡಳಿತವೆಂದರೆ ರಾಜ್ಯ ಇಲ್ಲವೆ ಸಾಮ್ರಾಜ್ಯದ ರಾಜಧಾನಿಯು ಆ ರಾಜ್ಯದ ಕೇಂದ್ರ ಸ್ಥಾನವಾಗಿದ್ದು ಅಲ್ಲಿ ರಾಜರು ಕೋಟೆ, ಅರಮನೆಗಳನ್ನು ಕಟ್ಟಿಸಿ ಕೊಂಡು ವಾಸವಾಗಿರುತ್ತ ರಾಜ್ಯದ ಆಡಳಿತ ನಡೆಸುವುದಕ್ಕೆ ಕೇಂದ್ರಾಡಳಿತವೆಂದು ಕರೆಯುವರು. ಇದರಲ್ಲಿ ರಾಜನೊಂದಿಗೆ ರಾಣಿಯರು, ರಾಜಕುಮಾರರು, ಮಂತ್ರಿ ಮಂಡಲ ವಿರುತ್ತಿತ್ತು.

## ೧) ರಾಜ-ರಾಜತ್ವ

ಮನು ರಾಜನನ್ನು ದೇವರು ಜನರ ರಕ್ಷಣೆಗಾಗಿ ಸೃಷ್ಟಿಸಿದನು ಹಾಗೆ ಸೃಷ್ಟಿಸುವಾಗ ಅವನಲ್ಲಿ ಅಷ್ಟದಿಕ್ಪಾಲಕರ ಅಂಶಗಳ್ನು ಸೇರಿಸಿದ ಆದ್ದರಿಂದ ರಾಜನ ಶಕ್ತಿಯು ಅಪಾರ ವಾದುದಾಗಿತ್ತೆಂದು ಹೇಳುತ್ತಾನೆ.[೩] ಹೀಗಾಗಿ ರಾಜ ಅತ್ಯಂತ ಪ್ರಮುಖವಾದ ರಾಜ್ಯದ ಅಂಗ ವೆನಿಸಿಕೊಂಡನು. ಕೌಟಿಲ್ಯ ರಾಜನು ಮುಖ್ಯವಾಗಿ ಉತ್ಸಾಹಶಕ್ತಿ, ಪ್ರಭಾವ ಶಕ್ತಿ ಮತ್ತು ಮಂತ್ರಶಕ್ತಿಗಳೆಂಬ ಮೂರು ಶಕ್ತಿಗಳು ಅವಶ್ಯವಾಗಿ ಇರಬೇಕೆನ್ನುತ್ತಾನೆ.[೪] ಮುಂದುವರೆದು ಸ್ವಾಮಿಸಂಪದವೆನ್ನುವ ಅಭಿಗಾಮಿಕಗುಣ, ಪ್ರಜ್ಞಾಗುಣ, ಉತ್ಸಾಹ ಗುಣಗಲು ಮತ್ತು ರಾಜನು ನಾಲ್ಕು ತರಹದ ತತ್ವಶಾಸ್ತ್ರ ವೇದಾಧ್ಯಯನ, ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರ (ದಂಡನೀತಿ) ವಿದ್ಯೆಗಳಲ್ಲಿ ಪರಿಣಿತಿ ಪಡೆದವನಾಗಿರಬೇಕೆಂದು ಹೇಳುತ್ತಾನೆ. ಏಕೆಂದರೆ ಭೂಪರಿಲ್ಲದ ಇಳೆ, ರಕ್ಷೆಯಿಲ್ಲದ ನೃಪನಾಳ್ಕೆ, ನಾಡಿಲ್ಲದ ಅರಸು ಪಟ್ಟಣವಿಲ್ಲದ ರಾಜ್ಯ, ಸುದತಿಯಿಲ್ಲದ ಓಲಗ ಶೋಭಿಸಲಾರವು[೫] ಎಂಬ ನಯಸೇನನ ಮಾತುಗಳ ಅರ್ಥವನ್ನು ಕೌಟಿಲ್ಯನು ಈ ಹಿಂದಿಯೇ ಗುರಿತಿಸಿ ರಾಜನು ಸರ್ವತಂತ್ರ ವಿದ್ಯೆ-ಬುದ್ಧಿಗಳನ್ನು ಪಡೆದವನಾಗಿರಬೇಕೆಂದು

ಹೇಳಿರುವನು. ಸೋಮದೇವ ತನ್ನ ನೀತಿ ವ್ಯಾಕ್ಯಾಮೃತದಲ್ಲಿ ಪ್ರಜೆಗಳನ್ನು ರಕ್ಷಿಸಿದವನು ರಾಜನೇ ಅಲ್ಲವೆನ್ನುತ್ತಾನೆ.[೧೬] ನಯಸೇನನು ಸಹ ಕಾರುಣ್ಯಮುಂಕೋಂಡು ಉಳ್ಳವನು ಶ್ರೇಷ್ಠ, ನೀತಿಯಿಲ್ಲದ ಅರಸನ ನಾಡು ಅಳಿಯದು, ಹೆಡಿ ಅರಸನ ಮಾತು ಸಂಶಯಾಸ್ಪದ, ನ್ಯಾಯವಿಲ್ಲದ ಅರಸನೂರಿನಲ್ಲಿರುವದು ಮರ್ಯಾದೆಗೆಡೆಂದು ರಾಜನು ಹೇಗಿರಬೇಕು ಹೇಗಿರಬಾರದೆಂದು ಹೇಳುತ್ತಾನೆ.[೧೭]

ಶಾಸ್ತ್ರಕಾರರೆಲ್ಲ ರಾಜ್ಯವಾಳುವ ರಾಜ ಅವನ ವ್ಯಕ್ತಿತ್ವ, ಕಲ್ಯಾಣ ಗುಣ, ವಿದ್ಯೆ ಬುದ್ದಿಗಳ ಕುರಿತು ವಿವರವಾಗಿ ಹೇಳಿರುವರು. ಶಾಸ್ತ್ರಕಾರರಿಂದಲೆ ಹೊಗಳಿಸಿಕೊಂಡ ನಮ್ಮ ಪ್ರಾಚೀನ ಕನ್ನಡ ನಾಡಿನ ರಾಜರು ತಾವು ದೈವಿ ಸಂಭೂತರೆಂದು, ಪ್ರತ್ಯಕ್ಷ ದೇವತೆಯೆಂದು, ಪರಮಭಟ್ಟಾರಕ, ಸತ್ಯಾಶ್ರಯ, ಪರಮೇಶ್ವರ, ಪೃಥ್ವಿವಲ್ಲಭ, ಸಮಸ್ತ ಭುವನಾಶ್ರಯರೆಂದು ಕರೆದುಕೊಂಡಿರುವರು. ಜಿಲ್ಲೆಯ ಶಾಸನಗಳು ಬಹಳ ವಿಸ್ತೃತ ಪ್ರಮಾಣದಲ್ಲಿ ರಾಜರನ್ನು ಸ್ತುತಿಸುತ್ತವೆ. ಮೂಲತಃ ದೈವಿಪುರುಷನೊಬ್ಬನಿಂದ ಇಳಿದು ಬಂದವರೆಂದು ಹೇಳಿಕೊಳ್ಳಲು ಹೆಮ್ಮೆ ಪಟ್ಟಂತೆ ಕಾಣುತ್ತದೆ. ಉದಾ: ಯಾದವ ಕನ್ನರದೇವ ತನ್ನನ್ನು ''ವಿಷ್ಣು ವಂಶೋದ್ಭವ''ನೆಂದು ಕರೆದು ಕೊಂಡಿರುವನು.[೧೮]

ರಾಜನು ರಾಜ್ಯದ ಸರ್ವೋಚ್ಚ ಸ್ಥಾನ ಪಡೆದು ಪ್ರಜೆಗಳಿಗೆ ಪ್ರತ್ಯಕ್ಷ ದೇವರಾಗಿ ಹೊರ ಹೊಮ್ಮಿದ್ದರಿಂದ ಆಡಳಿತದ ಕೇಂದ್ರಬಿಂದುವಿನ ಸ್ಥಾನ ಪಡೆದನು. ಹೀಗಾಗಿ ರಾಜ್ಯದ ಉನ್ನತಿ-ಅವನತಿ ಒಳಿತು ಕೆಡಕುಗಳೆಲ್ಲವು ಅವನನ್ನೆ ಅವಲಂಭಿಸಿದ್ದವು. ರಾಜ್ಯದ ಆಡಳಿತ ನಿರ್ವಹಣೆಯಲ್ಲಿ ರಾಜನು ಸಾರ್ವಭೌಮ ಅಧಿಕಾರ ಹೊಂದಿದ್ದರೂ ಅವನು ಸರ್ವಾಧಿಕಾರಿಯಾಗಿ ನಡೆದು ಕೊಳ್ಳಲು ಬರುವಂತಿರಲಿಲ್ಲ. ಏಕೆಂದರೆ ಅಂದಿನ ರಾಜಕೀಯ ಮತ್ತು ಸಾಮಾಜಿಕ ಪದ್ಧತಿಗಳು, ಧರ್ಮ ಶಾಸ್ತ್ರಗಳು, ಜನರ ಪ್ರೀತಿ ವಿಶ್ವಾಸಗಳು ಅವನ ಅಧಿಕಾರವನ್ನು ನಿಯಂತ್ರಿಸುವ ಸಾಧನಗಳಾಗಿದ್ದವು.

ರಾಜನು ಧರ್ಮಬಾಹಿರ ನಾಗದಂತೆ, ಕರ್ತವ್ಯಭ್ರಷ್ಟನಾಗದಂತೆ ಕುಮಾರ ನಾಗಿರುವಾಗಲೇ ಅವನಿಗೆ ನೈತಿಕ ಶಿಕ್ಷಣದ ಜೋತೆಗೆ ಇನ್ನಿತರ ವಿದ್ಯೆಗಳನ್ನು ನೀಡಲಾಗುತ್ತಿತ್ತು. ಬಾಹ್ಯ ಶತೃಗಳಿಂದ ದೇಶವನ್ನು ರಕ್ಷಿಸುವುದು, ಪ್ರಜೆಗಳ ಉದ್ಧಾರಕ್ಕಾಗಿ ಲೋಕೋಪಯೋಗಿ ಕೆಲಸಗಳನ್ನು ಕೈಕೊಳ್ಳುವದು, ದುಷ್ಟರನ್ನು ನಿಗ್ರಹಿಸಿ, ಶಿಷ್ಟರನ್ನು ಪರಿಪಾಲಿಸುವದು ಅರಸನ ಮುಖ್ಯ ಕರ್ತವ್ಯಗಳಾಗಿದ್ದವು. ಅಂದಿನ ಜನರು ರಾಜನಿಂದ ಏನನ್ನು ಬಯಸುತ್ತಿದ್ದರೆಂಬುದನ್ನು ನಯಸೇನ, ''ಧರೆಯಂ ರಕ್ಷಿಸಿ ದುಷ್ಟರಂ ಜಡಿದು ಸದ್ಧರ್ಮಂಗಳಂ ಕಾದು ಸತ್ಕರರಂ ಬಂಧಿಸಿ ಕಷ್ಟರಂಕಿಡಿಸಿ ದಂಡಂಗೊಂಡು ಮಿಂಡರ್ಕಳಂ ಭರದಿಂಬಗ್ಗಿಸಿ ಶಿಷ್ಟ ರಿಷ್ಟಪದಮಂ ಸಂತೋಷದಿಂ ಕೊಟ್ಟು ಧೂರ್ತರ ಬೇರಂ ನೆರೆಕಿತ್ತು ಪಾಲಿಸುವುದುರ್ವೀ ಚಕ್ರಮಂ ಕ್ಷತ್ರಿಯರ್'' ಎಂದು ಬಹು ಸುಂದರವಾಗಿ ವರ್ಣಿಸಿದ್ದಾನೆ.[೧೯]

**ಯುವರಾಜರು**

ರಾಜತ್ವವು ಅನುವಂಶಿಕವಾಗಿರುವದರಿಂದ ರಾಜಕುಮಾರನು ಪ್ರಾಪ್ತವಯಸ್ಕನಾದ ಮೇಲೆ ಆಡಳಿತ ಸೂತ್ರಗಳನ್ನು ವಹಿಸಿಕೊಳ್ಳುತ್ತಿದ್ದನು. ಯುವರಾಜ ಅರಸನಾಗಬೇಕಾದರೆ ಅವನಿಗೆ ೨೪ ವರ್ಷ ತುಂಬಿರಬೇಕಾಗಿತ್ತು.[೨೦] ರಾಜ ತಾನು ಜೀವಿಸಿದ್ದಾಗಲೇ ತನ್ನ ನಂತರದ ಉತ್ತರಾಧಿಕಾರಿಯಾಗಿ ಯೋಗ್ಯ ರಾಜಕುಮಾರರನ್ನು ಆಯ್ಕೆ ಮಾಡಿ ಅಂತವನನ್ನು ಯುವರಾಜನೆಂದು ಪಟ್ಟಗಟ್ಟುತ್ತಿದ್ದನು. ಯುವರಾಜ ಪದವಿಯು ಸಾಮಾನ್ಯವಾಗಿ ರಾಜನ ಹಿರಿಯಮಗನಿಗೆ ಸಲ್ಲುತ್ತಿತ್ತು. ಆದರೆ ಕೆಲವೊಮ್ಮೆ ರಾಜನ ಎರಡನೆಯ ಮಗ ಇಲ್ಲವೇ ಸಮರ್ಥನಾದ ಮಗ, ರಾಜನಿಗೆ ಮಕ್ಕಳಿರದೆ ಹೊದರೆ ಅವನ ಸಹೋದರನ ಮಕ್ಕಳು ಯುವರಾಜರಾಗಿ ಪಟ್ಟಕಟ್ಟಿಕೊಂಡು ನಂತರ ಸಿಂಹಾಸನಕ್ಕೆ ಬರುತ್ತಿದ್ದರು. ಇಂತಹ ಉದಾಹರಣೆಗಳು ಕದಂಬ, ರಾಷ್ಟ್ರಕೂಟ ಮತ್ತು ಕಲ್ಯಾಣ ಚಾಲುಕ್ಯ ಮನೆತನಗಳ ವಿಷಯದಲ್ಲಿ ಸಾಕಷ್ಟು ಸಿಗುತ್ತವೆ.

ಯುವರಾಜ ಪಟ್ಟಕಟ್ಟಿಕೊಂಡವನಿಗೆ ಉತ್ತಮ ಶಿಕ್ಷಣ ವ್ಯವಸ್ಥೆ ಮಾಡಲಾಗುತ್ತಿತ್ತು. ಉತ್ತಮ ಶಿಕ್ಷಣವನ್ನು ಪಡೆದ ಯುವರಾಜರು ಆಡಳಿತದಲ್ಲಿ ಅನುಭವ ಪಡೆಯಲು ರಾಜ ಪ್ರತಿನಿಧಿಯಾಗಿ ಸಾಮ್ರಾಜ್ಯದ ಪ್ರಮುಖ ಆಡಳಿತ ವಿಭಾಗಗಳನ್ನು ನೋಡಿ ಕೊಳ್ಳುತ್ತಿದ್ದರು. ರಾಜ ಮರಣ ಹೊಂದಿದರೆ ಆಗ ಯುವರಾಜ ಸಿಂಹಾಸನಕ್ಕೆ ಬರುತ್ತಿದ್ದನು. ರಾಜನ ಇತರ ಮಕ್ಕಳು ಸಾಮಂತರಾಗಿ, ಮಹಾಮಂಡಳೇಶ್ವರರಾಗಿ ವಿವಿಧ ಪ್ರಾಂತ-ನಾಡುಗಳ ಮೇಲೆ ನಿಯುಕ್ತರಾಗುತ್ತಿದ್ದರು.

**ರಾಣಿಯರು**

ವಡ್ಡಾರಾಧನೆಯ ಪ್ರಕಾರ ಅಂದು ರಾಜರು ಬಹು ಪತ್ನಿ ವ್ರತಸ್ಥರಾಗಿದ್ದರು.[೨೧] ಬಹುಶಃ ರಾಜ ಬಹು ಪತ್ನಿ ವ್ರತಸ್ಥನಾಗುವುದು ವೈಭದ ಸಂಖೇತಕ್ಕಾಗಿ ಎಂದು ತಿಳಿದು ಬಂದರು ಅದಕ್ಕೆ ಇನ್ನೂ ಹಲವು ಕಾರಣಗಳಿದ್ದವು. ರಾಜನು ದಂಡೆತ್ತಿ ಹೋಗಿ ಪರ ರಾಜನನ್ನು ಸೋಲಿಸಿದಾಗ ಸೊತವನು ಕಪ್ಪ ಕಾಣಿಕೆಯ ಜೋತೆಗೆ ಕುಮಾರಿಯನ್ನು ನೀಡಿ ರಕ್ತ ಸಂಬಂಧ ಬೆಳೆಸುವದು, ಕೆಲವು ವೇಳೆ ವಿಷಯ ಲೋಲುಪನಾದ ರಾಜ ಬಲತ್ಕಾರದಿಂದಲೂ ಸುಂದರ ಸ್ತ್ರೀಯರನ್ನು ಪತ್ನಿಯರನ್ನಾಗಿಸಿ ಕೊಳ್ಳುತ್ತಿದ್ದರು. ಆದಾಗ್ಯೂ ಅಂದು ವಿಧಿಪುರ್ವಕವಾಗಿ ಮದುವೆ ಮಾಡಿಕೊಳ್ಳುವುದು ನಂತರ ಅವರನ್ನು ತಮ್ಮ ರಾಣಿಯರನ್ನಾಗಿ ಪಡೆಯುವ ಪದ್ಧತಿ ರೂಢಿಯಲ್ಲಿತ್ತು. ಆದರೆ ಎಲ್ಲಾ ರಾಣಿಯರಿಗೂ ಸಮಾನ ಸ್ಥಾನಮಾನಗಳಿರಲಿಲ್ಲ. ರಾಜನ ಪದವಿ ದೈವ ಸಂಭೂತ ಮತ್ತು ಅನುವಂಶಿಕವಾಗಿದ್ದರಿಂದ ಕೈಹಿಡಿದ ಮೊದಲ ರಾಣಿ ಪಟ್ಟ ಮಹಿಷಿಯಾಗಿ ಪಟ್ಟಕಟ್ಟಿ ಕೊಳ್ಳುತ್ತಿದ್ದಳು. ಆಗ ಆಕೆಯು ಪ್ರಜೆಗಳ ಗೌರವಕ್ಕೆ ಪಾತ್ರಳಾಗಿ ಅವರಿಗೆ ಮಾತೃ ಸ್ವರೂಪಿಣಿಯಾಗಿ ಹೊರ ಹೊಮ್ಮುತ್ತಿದ್ದಳು.

ವಡ್ಡಾರಾಧನೆಯು ''ಇಷ್ಟ ವಿಷಯ ಕಾಮಭೋಗಂಗಳಂ ಅನುಭವಿಸುತ್ತಮಿರೆ'' ಎಂದು ರಾಜರಾಣಿಯರ ಕುರಿತು ಹೇಳಿದರೆ, ಶಾಸನಗಳು ''ಸುಖಸಂಕಥಾವಿನೋದದಿಂ ರಾಜ್ಯಂಗೆಯುತ್ತಮಿರೆ ಎಂಬ ನುಡಿಗಳು ರಾಜನ ಭೋಗ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ಹೀಗಾಗಿ ರಾಣಿಯರು ರಾಜನ ಭೋಗ ವಸ್ತುಗಳಲ್ಲಿ ಒಬ್ಬಳೆಂದು ಆಗ ತಿಳಿಯಲಾಗಿತ್ತು.''[೨೨]

ಆದಾಗ್ಯೂ ಅಂದು ಕೆಲವು ರಾಣಿಯರು ಅಂದಿನ ಪರಿಸ್ಥಿತಿಗೆ ಅನುಗುಣವಾಗಿ ರಾಜಕೀಯ ಜೀವನದಲ್ಲಿ ಸಹಭಾಗಿತ್ವಳಾದದ್ದು ಜಿಲ್ಲೆಯ ಶಾಸನಗಳಿಂದ ತಿಳಿದುಬರುತ್ತದೆ. ರಾಜನ ರಾಣಿವರ್ಗದಲ್ಲಿ ಹಿರಿಯಳಾದವಳನ್ನು ''ಪಟ್ಟದ ರಾಣಿ,'' 'ಪಟ್ಟ ಮಹಿಷಿ,' 'ಅಗ್ರಮಹಿಷಿ' ಯೆಂದು ಶಾಸನಗಳಲ್ಲಿ ಉಕ್ತಳಾಗಿದ್ದಾಳೆ. ಇವಳು ರಾಜನ ಧಾರ್ಮಿಕ ಕಾರ್ಯ ಕಲಾಪಗಳಲ್ಲಿ ಭಾಗಿಯಾಗುವ ಹಕ್ಕನ್ನು ಪಡೆದುಕೊಂಡಿದ್ದಳು. ಬಹುಪತ್ನಿವ್ರತರಾದ ರಾಜನು ಅವರ ಮಧ್ಯದ ವೀರಸವನ್ನು ತಪ್ಪಿಸುವದ ಗೊಸ್ಕರವಾಗಿ ಹಿರಿಯ ಪಟ್ಟದ ರಾಣಿಯನ್ನು ಹೊರತು ಪಡಿಸಿ ಇಲ್ಲವೆ ಅವಳನ್ನು ಸೇರಿಸಿಯೇ ರಾಜ್ಯದ ವಿವಿಧ ಭಾಗಗಳ ಮೇಲೆ ಆಡಳಿತ ನಡೆಸಲು ನೇಮಕ ಮಾಡುತ್ತಿದ್ದನು. ಇದಕ್ಕೆ ಅವನ ರಾಣಿಯರ ಮಕ್ಕಳು ಹೊರತಾಗಿರದೆ ಅವರು ಆಡಳಿತ ನಡೆಸಲು ನೇಮಕ ಗೊಳ್ಳುತ್ತಿದ್ದರು.

ರಾಜರು ತಮ್ಮ ರಾಣಿಯರ ಉಪಭೋಗಕ್ಕಾಗಿ ಅಂದು ಬಿಟ್ಟು ಕೊಟ್ಟ ಗ್ರಾಮಗಳನ್ನು ಶಾಸನಗಳು 'ಭತ್ತ ಗ್ರಾಮ' ಗಳೆಂದು ಕರೆದಿವೆ. ಭತ್ತ ಗ್ರಾಮಗಳ ಆದಾಯವನ್ನು ಅವರು ತಮಗೆ ಇಷ್ಟ ಬಂದಂತೆ ವ್ಯಯಿಸಬಹುದಾಗಿತ್ತು. ಅವುಗಳ ಮೇಲೆ ಆಡಳಿತ ನಡೆಸುವದು ಬೇಡವಾದರೆ ತಮ್ಮ ಪರವಾಗಿ ಮಂಡಳೇಶ್ವರರನ್ನು ನೇಮಕ ಮಾಡುತ್ತಿದ್ದರು.[೨೩] ಆಡಳಿತದ ಹೊಣೆ ಹೊತ್ತ ರಾಣಿಯರು ಚತುರರು ಹಾಗೂ ಲೋಕಾನುಭವುಳ್ಳವರಾಗಿರುತ್ತಿದ್ದರು. ಯುದ್ಧ ಕೌಶಲ್ಯವು ಅವರಿಗೆ ಹೆಚ್ಚಿನ ಅರ್ಹತೆಯನ್ನು ತಂದು ಕೊಟ್ಟಿತ್ತು. ಇಂತಹ ರಾಜರ ಪತ್ನಿಯರು ಸಾಮಾನ್ಯವಾಗಿ ಮಂಡಳ, ಕಂಪಣ ಇಲ್ಲವೇ ಅಗ್ರಹಾರಗಳನ್ನು ಆಳಿದರೆ, ಮಂಡಳೇಶರ್ವ, ಸಾಮಂತ, ದಂಡನಾಯಕರ ಪತ್ನಿಯರು ಕಂಪಣ, ಪುರ-ಪಟ್ಟಣ, ಊರುಗಳನ್ನು ಆಳುವ ಮೂಲಕ ಆಡಳಿತದಲ್ಲಿ ರಾಜನಿಗೆ, ಅರಸರಿಗೆ ಮಂಡಳ-ಸಾಮಂತರಸರಿಗೆ ಸಹಾಯ ಸಲ್ಲಿಸುತ್ತಿದ್ದರು. ಇಂತವರಲ್ಲಿ ಕೆಲವು ರಾಣಿರಯರು ಜಿಲ್ಲೆಯ ಪ್ರದೇಶದಲ್ಲಿ ಆಡಳಿತ ನಡೆಸಿದ್ದು ಅಂತವರನ್ನು ಶಾಸನಗಳು ಸುಂದರವಾಗಿ ವರ್ಣಿಸುತ್ತವೆ.

### ರೇವಕ ನಿರ್ಮಡಿ

ಜಿಲ್ಲೆಯ ಪ್ರದೇಶಕ್ಕೆ ಒಳಪಟ್ಟಂತೆ ಆಡಳಿತ ನಡೆಸಿದ ಪ್ರಥಮ ಮಹಿಳೆ ರಾಷ್ಟ್ರಕೂಟ ಅಮೋಘವರ್ಷ ನೃಪತುಂಗನ ಮಗಳು ರೇವಕ ನಿರ್ಮಡಿಯಾಗಿದ್ದಾಳೆ. ಇವಳು ಯುವರಾಣಿಯಾಗಿ ತಂದೆಯ ಕಾಲದಲ್ಲಿ ಜಿಲ್ಲೆಯ ವ್ಯಾಪ್ತಿಯ ಎಡದೊರೆ-೨೦೦೦ ವಿಭಾಗದ ಮೇಲೆ ಆಡಳಿತ ನಡೆಸುತ್ತಿದ್ದಳೆಂದು ಹುನಗುಂದ ತಾಲೂಕಿನ ಕೇಸರಬಾವಿಯ ಕ್ರಿ.ಶ. ೮೩೭ ರ ಶಾಸನ ಉಲ್ಲೇಖ ಮಾಡುವದು.[೨೪] ಇದೇ ರೇವಕ ನಿರ್ಮಡಿ

ಗಂಗರಸ ಎರಡನೆ ಭೂತುಗನ ಕೈಹಿಡಿದಾಗ ಅವನ ರಾಣಿಯಾಗಿ ಇದೇ ಎಡದೊರೆ-೨೦೦೦ ವನ್ನು ಗಂಡನ ಪರವಾಗಿ ಆಡಳಿತ ನಡೆಸುತ್ತಿದ್ದಳೆಂದು ಕ್ರಿ.ಶ. ೯೩೯ ರ ಇಟಗಿಯ ಶಾಸನ ಹೇಳುವದು.[೨೫] ತಂದೆಯ ಕಾಲದಲ್ಲಿ ಯುವರಾಣಿಯಾಗಿ, ಗಂಡನ ಕಾಲದಲ್ಲಿ ರಾಣಿಯಾಗಿ ಎಡದೊರೆ ನಾಡಿನ ಮೇಲೆಯೇ ಆಡಳಿತ ನಡೆಸುವದನ್ನು ನೋಡಿದರೆ ಅಂದು ಸ್ತ್ರೀಯರಲ್ಲಿದ್ದ ಆಡಳಿತದ ಕುಶಲತೆ, ಬುದ್ಧಿಮತ್ತೆ, ಕಾರ್ಯನಿರ್ವಹಿಸುವ ಸಾಮರ್ಥದ ಅರಿವುಂಟಾಗುತ್ತದೆ. ಇಟಗಿ ಮತ್ತು ಕೆಸರಬಾವಿಯ ಶಾಸನಗಳ ಮದ್ಯದ ಅವಧಿ ೧೦೨ ವರ್ಷಗಳು. ಇಷ್ಟು ವರ್ಷ ಕಾಲ ಜೀವಿಸಿದ್ದು ಆಡಳಿತ ನಡೆಸಿರುವದು ಅಸಾಧ್ಯವಾದರು ಶಾಸನಗಳು ಕೆಲವೊಮ್ಮೆ ಅವರ ಆಳ್ವಿಕೆ ಮುಗಿದು ಎಷ್ಟೋ ವರ್ಷಗಳು ಸಂದನಂತರವು ಮುಂದಿನವರು ಹಿಂದಿನ ವಿಷಯವನ್ನು ಬರೆಯಿಸುವ ವಾಡಿಕೆಯು ಶಾಸನಗಳಲ್ಲಿದೆ.

## ಪದ್ಮಲದೇವಿ

ಇಮ್ಮಡಿ ಜಯಸಿಂಹ ಅಥವಾ ಒಂದನೆಯ ಜಗದೇಕಮಲ್ಲನ ರಾಣಿ ಪದ್ಮಲದೇವಿಯು ಕರಡಿಕಲ್ಲು-೩೦೦ ರ ಬಳಿಯ ಗೋವಂತಿಗೆ ಗ್ರಾಮದ ಸ್ವಯಂಭು ಕಲಿದೇವಸ್ವಾಮಿಗೆ ಕರಿಯನೆಲ ಮತ್ತು ೫೪ ಕಮ್ಮ ೪೫೦ ತೋಂಟ ಕಮ್ಮ ೪೫೦ ಅನ್ತು ಮತ್ತೆ ೫೫ ಕ್ಕೆ ಮತ್ತದಲು ೧೦ ವೀಸವನ್ನು ದೇವರ ನೈವೇದ್ಯಕ್ಕೆ ನೀಡಿದ ಕುರಿತು ಕ್ರಿ.ಶ. ೧೦೨೪ ರ ಗೊತಗಿ ಶಾಸನ ಹೇಳುವುದು[೨೬] ಶಾಸನವು ಜಗದೇಕಮಲ್ಲ ಕಲ್ಯಾಣದ ನೆಲೆವಿಡಿನಿಂದ ರಾಜ್ಯವಾಳುತ್ತಿದ್ದನೆಂದು ಹೇಳುವದು. ಆಗ ಪದ್ಮಲದೇವಿ ಕರಡಿಕಲ್ಲ ೩೦೦ ರ ಬಳಿಯ ಗೋವಂತಿಗೆ ಗ್ರಾಮದ ಕಲಿದೇವ ಸ್ವಾಮಿಗೆ ದಾನ ನೀಡಿರುವದನ್ನು ಗಮನಿಸಿದರೆ ಬಹುಶಃ ಪದ್ಮಲದೇವಿ ಕರಡಿಕಲ್ಲು ಪ್ರದೇಶದಲ್ಲಿ ಆಡಳಿತ ನಿರ್ವಸುತ್ತಿದ್ದಿರಬೇಕು.

## ರೆಬ್ಬಲದೇವಿ

ಆರನೇ ವಿಕ್ರಮಾದಿತ್ಯನ ರಾಣಿ ರೆಬ್ಬಲದೇವಿಯು ಕ್ರಿ.ಶ. ೧೧೩೬ ರ ಸುಮಾರಿಗೆ ಅಂದರೆ ೩ನೇ ಸೋಮೇಶ್ವರನ ಕಾಲದಲ್ಲಿ ಜಿಲ್ಲೆಯ ಪ್ರದೇಶ ವ್ಯಾಪ್ತಿಯಲ್ಲಿ ಆಡಳಿತ ನಡೆಸುತ್ತಿದ್ದಳು ಆಗ ಮಾದಿನೂರದ ದೇವಾಲಯಕ್ಕೆ ತನ್ನ ಮೆಲಾಳ್ಕೆಯ ಸಿದ್ದಾಯವನ್ನು ದಾನ ಬಿಟ್ಟಿದಳು. ಅದನ್ನು ಶಾಸನವು. ''ಶ್ರೀಮತ್ರಿಭುವನಮಲ್ಲ ದೇವರಸಿ ರೆಬ್ಬಲದೇವಿಯರು ಮೇಲಾಳ್ಕೆಯ ಸಿದ್ಧಾಯ (ದೇವರ ನೈವೇದ್ಯ) ಕ್ಕೆ ಬಿಟ್ಟ ಗದ್ಯಾಣ-೧'' ಉಲ್ಲೇಖಿಸುತ್ತದೆ.[೨೭] ಇಲ್ಲಿ ಮೇಲಾಳ್ಕೆ ಎಂಬುದು ಆಕೆಯು ಜಿಲ್ಲೆಯ ಪ್ರದೇಶ ವ್ಯಾಪಿಯಲ್ಲಿ ಮಂಡಲೇಶ್ವರರ ಮೇಲೆ ಆಡಳಿತ ನಡೆಸಿರುವದನ್ನು ತೋರಿಸುತ್ತದೆ.

## ಮಹಾದೇವಿ

ರಾಜರ ರಾಣಿಯರು ರಾಜ್ಯದ ಆಡಳಿತ ಘಟಕಗಳ ಮೇಲೆ ಆಳ್ವಿಕೆ ನಡೆಸಿದಂತೆ ಅಂದು ಮಂಡಳೇಶ್ವರರ ಮಡದಿಯರು ಸಹ ಆಡಳಿತ ನಡೆಸುತ್ತಿದ್ದುದು ತಿಳಿದುಬರುವದು. ಅಂತವರಲ್ಲಿ

ಮಹಾಮಂಡಳೇಶ್ವರ ಸಿಂಧ ಚಾಮುಂಡರಸನ ರಾಣಿ ಮಹಾದೇವಿಯು ''ಶ್ರೀ ಮನುಮಹಾ ಮಂಡಳೇಶ್ವರಂ ಚಾವುಂಡರಸದೇವ ನರ್ದ್ದಾಂಗಿ ಮಹಾದೇವಿಯರು ಕಲ್ಲೂರ ನಾಳುತ್ತ ಶ್ರೀ ಸ್ವಯಂಭು ಕಲದೇವ ಸ್ವಾಮಿಯ ಪಾದಾರಾಧಕಂ ಮೊಲ್ಲೆಯ ಬಂಮ್ಮಯಂಗೆ ದೇಹಾತ ವ್ರಿತ್ತಿಯಾಗಿ ಕೊಟ್ಟ ಸರ್ವ್ವಮಾನ್ಯ ಬಳಾರಿಯಕೆಯ ಸೀಮೆಯಿಂ ಪತ್ತಿದ ಬಡಗಲು ಮತ್ತರಾರು''ಎಂದು ತನ್ನಾಳಿಕೆಯ ಕಲ್ಲೂರದಲ್ಲಿ ದಾನನೀಡಿದ ಕುರಿತು ಶಾಸನ ತಿಳಿಸುವದು.[೨೮]

ಮೇಲಿನ ಶಾಸನಗಳ ಉಲ್ಲೇಖ ನೋಡಿದರೆ ಕೊಪ್ಪಳ ಜಿಲ್ಲೆಯ ರಾಜಕೀಯ ವ್ಯವಸ್ಥೆಯಲ್ಲಿ ಅಂದು ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಗಂಗ, ಸಿಂಧ, ಮನೆತನದ ರಾಣಿಯರು ವಹಿಸಿದ ಪಾತ್ರ ಮಹತ್ತರವಾಗಿದ್ದು ಜಿಲ್ಲೆಯ ರಾಜಕೀಯ ಚರಿತ್ರೆಯಲ್ಲಿ ಹೊಸದೊಂದು ಅಧ್ಯಾಯವಾಗಿ ತೋರುತ್ತದೆ.

**ಮಂತ್ರಿ ಮಂಡಳ**

ರಾಜನಾದವನು ರಾಜ್ಯದ ಸಾರ್ವಭೌಮನಾದರು ಅವನಿಗೆ ಸಹಾಯ ಮಾಡಲು ಅನೇಕ ಜನ ಮಂತ್ರಿಗಳು ಹಾಗೂ ಅಧಿಕಾರಿವರ್ಗ ಇದ್ದುದನ್ನು ಸೋಮದೇವಸುರಿ ಹೇಳಿದ್ದಾನೆ. ರಾಜನು ರಾಜ್ಯದ ಎಲ್ಲ ವಿಷಯಗಳ ಕುರಿತು ಏಕಾಂಗಿಯಾಗಿ ತಿರ್ಮಾನಗಳನ್ನು ಕೈಕೊಳ್ಳುತ್ತಿರಲಿಲ್ಲ. ಅನೇಕ ವಿಷಯಗಳ ಕುರಿತು ಮಂತ್ರಿಗಳ ಸಲಹೆಗಳನ್ನು ಕೇಳಿ ಅವರ ಸಹಕಾರವನ್ನು ಪಡೆಯುತ್ತಿದ್ದನು. ಪ್ರಾಚೀನ ಭಾರತದ ನೀತಿಜ್ಞರಾದ ಕೌಟಿಲ್ಯ, ಶುಕ್ರ ಮೊದಲಾದವರು ಆಡಳಿತದಲ್ಲಿ ಮಂತ್ರಿಗಳ ಮಹತ್ವದ ಕುರಿತು ಹೇಳಿದಂತೆ ಸೋಮದೇವ ಸೂರಿಯು ಸಹ ತನ್ನ ನೀತಿ ವ್ಯಾಕ್ಯಾಮೃತದಲ್ಲಿ ''ರಾಜನು ತನ್ನ ಸಹಾಯಕ್ಕಾಗಿ ಮಂತ್ರಿಗಳನ್ನು ನೇಮಕ ಮಾಡಿಕೊಳ್ಳುತ್ತಿದ್ದ. ಅದು ಅವಶ್ಯಕತೆಗೆ ಅನುಗುಣವಾಗಿ ಮೂರು, ಐದು, ಏಳುಜನ ಮಂತ್ರಿಗಳನ್ನು ನೇಮಕಮಾಡಿಕೊಳ್ಳ ಬಹುದಾಗಿತ್ತೆಂದು'' ಸಲಹೆ ಮಾಡುತ್ತಾನೆ.[೨೯] ಮುಂದುವರೆದು ಯಾವಾಗಲು ರಾಜನು ಒಬ್ಬನೆ ಮಂತ್ರಿಯನ್ನು ಅವಲಂಭಿಸಬಾರದೆಂದು ಎಚ್ಚರಿಸಿದ್ದಾನೆ.

ಸರ್ವಜ್ಞ ಚಕ್ರವರ್ತಿಯಂದೆ ಹೆಸರು ಪಡೆದ ಕಲ್ಯಾಣ ಚಾಲಕ್ಯ ಅರಸ ಮೂರನೇ ಸೋಮೇಶ್ವರ ತನ್ನ ಮಾನಸೋಲ್ಲಾಸ ದಲ್ಲಿ ಏಳು ಅಥವಾ ಎಂಟು ಜನ ಮಂತ್ರಿಗಳಿರುವ ಮಂತ್ರಿ ಮಂಡಳ ಇರಬೇಕೆಂದು ಸೂಚಿಸಿದ್ದಾನೆ.[೩೦] ಕೌಟಿಲ್ಯ ಸಹ ಉತ್ತಮ ವಂಶ ಸಂಭೂತನೂ ವಿವೇಕಿಯೂ ಧೀರನೂ ಪ್ರಾಮಾಣಿಕನು'' ಮಂತ್ರಿಯಾಗಬೇಕೆಂದಿದ್ದಾನೆ.[೩೧] ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ಮಹಾಭಾರತ ಹಾಗೂ ವಿಷ್ಣುಧರ್ಮೊತ್ತರ ಪುರಾಣ ಗ್ರಂಥಗಳು ಮಂತ್ರಿಯಾಗಲು ಅಥವಾ ಅಮಾತ್ಯನಾಗಲು ಬ್ರಾಹ್ಮಣನು ಮಾತ್ರ ಅರ್ಹನೆಂದು ಹೇಳಿದರೇ, ಅರ್ಥಶಾಸ್ತ್ರ ಹಾಗೂ ಅಗ್ನಿ ಪುರಾಣಗಳು ಯಾವುದೇ ನಿರ್ಭಂಧವನ್ನು ಹಾಕುವದಿಲ್ಲ.

ಪ್ರಾಚೀನ ಕರ್ನಾಟಕದ ಆಡಳಿತ ವ್ಯವಸ್ಥೆಯಲ್ಲಿ ಮಂತ್ರಿಪದವಿಯು ಅನುವಂಶಿಕವಾಗಿತ್ತು. ಆತನು ಮೃತನಾದರೆ ಮಂತ್ರಿಯ ಮಕ್ಕಳು ಅಧಿಕಾರಕ್ಕೆ ಬರುತ್ತಿದ್ದರು. ಒಂದು ವೇಳೆ ಮಂತ್ರಿಯ ಮಕ್ಕಳು ಸಚೀವ ಪದವಿಗೆ ಯೋಗ್ಯರಲ್ಲದಿದ್ದರೆ ರಾಜನು ಬೇರೆಯವರನ್ನು ನೇಮಕ ಮಾಡುತ್ತಿದ್ದನೆಂದು ವಡ್ಡಾರಾಧನೆ ಹೇಳುತ್ತದೆ.[೩೨] ಜಿಲ್ಲೆಯ ಶಾಸನಗಳು ಕೆಲವು ರಾಜರು ತಮ್ಮ ಸಹಾಯಕ್ಕಾಗಿ ತಮ್ಮ ಮಂತ್ರಿ ಮಂಡಳದಲ್ಲಿ ಮಂತ್ರಿ,[೩೩] ಸಂಧಿವಿಗ್ರಹಿ,[೩೪] ಮಹಾಪಸಾಯಿತ,[೩೫] ಧರ್ಮಾದ್ಯಕ್ಷ,[೩೬] ಸೇನಾನಿ,[೩೭] ಮಹಾಪ್ರಧಾನ ಸೇನಾಧಿಪತಿ,[೩೮] ಸ್ಥಳದ ಅಧಿಕಾರಿಗಳನ್ನು, ಸಚಿವರನ್ನು[೩೯] ನೇಮಕ ಮಾಡಿಕೊಂಡಿದ್ದನ್ನು ವಿವರವಾಗಿ ಉಲ್ಲೇಖಿನ ಮಾಡುವವು. ಇವರು ಕೇಂದ್ರಾಡಳಿತದಲ್ಲಿ ರಾಜನೊಂದಿಗೆ ಸಹಾಯ ಸಹಕಾರ ನೀಡುತ್ತಾ ರಾಜನ ಆಜ್ಞೆಯಂತೆ ಕೆಲವುಬಾರಿ ಸಾಮ್ರಾಜ್ಯದ ವಿವಿಧ ಭಾಗಗಳ ಮೇಲೆ ಆಡಳಿತ ಅಧಿಕಾರಿಗಳಾಗಿ ನೇಮಕ ಗೋಳ್ಳುತ್ತಿದ್ದರು.

ಮಂತ್ರಿಮಂಡಳದ ಸದಸ್ಯರಲ್ಲಿ ಯಾರು ಪ್ರಮುಖರು ಎನ್ನುವ ಪ್ರಶ್ನೆ ಕಠಿಣವಾಗಿದೆಯಾದರು ಎಲ್ಲರಿಗಿಂತ ಹೆಚ್ಚಿನವನು ಮಹಾಪ್ರದಾನನೆಂದು ಹೇಳಬಹುದು ಶುಕ್ರನೀತಿಸಾರವು ಸಹ ಅವನನ್ನು 'ಸರ್ವದರ್ಶಿನ' ಎಂದು ಕರೆಯುವದು.[೪೦] ಈ ಸಮಸ್ಯೆಯನ್ನು ಹೊಗಲಾಡಿಸಿದ ಸೋಮದೇವ ಸೂರಿಯು ತನ್ನ ಯಶಸ್ತಿಲಕ ಮತ್ತು ನೀತಿವ್ಯಾಖ್ಯಾಮೃತಗಳಲ್ಲಿ ಮಂತ್ರಿಮಂಡಳದ ಅಧಿಕಾರಿಗಳ ಮತ್ತು ಅವರ ಹುದ್ದೆ-ಕೆಲಸದ ಕುರಿತು ಹೇಳುತ್ತಾನೆ. ಅವನ ಪ್ರಕಾರ ಧೂತ, ಸೇನಾನಿ, ಸಂಧಿವಿಗ್ರಹಿ, ಅಕ್ಷಪಟಲಿಕ (ಲೆಕ್ಕಿಗ) ಮತ್ತು ಸೈನ್ಯಾಧಿಕಾರಿಗಳು ಪ್ರಮುಖರು.[೪೧] ಇವರಲ್ಲಿ ಧೂತನು ರಾಜನ ಸಲಹೆಗಾರನಾಗಿ ಅವನ ಆಜ್ಞೆಗಳನ್ನು ಬೇರೆ ಬೇರೆ ಪ್ರದೇಶಗಳಿಗೆ ಮುಟ್ಟಿಸುವದರ ಜೋತೆಗೆ ಇಬ್ಬರ ಮದ್ಯೆ ಸಂಬಂಧ ಕಲ್ಪಿಸುವ ಕೆಲಸ ಮಾಡುತ್ತಿದ್ದನು. ಹೆಚ್ಚಾಗಿ ರಾಜರು ಬ್ರಾಹ್ಮಣರನ್ನು ಈ ಕೆಲಸಕ್ಕೆ ನೇಮಕಮಾಡುತ್ತಿದ್ದರು. ಸೇನಾನಿಯು ಕೇಂದ್ರ ಸೈನ್ಯದ ಅಂಗಗಳಾದ ರಾಜದಳ, ಅಶ್ವದಳ, ರಥದಳ ಮತ್ತು ಕಾಲ್ದಳಗಳ ಮೇಲೆ ಮುಖ್ಯ ಸೇನಾಧಿಪತಿಯಾಗಿ ಯುದ್ಧಕ್ಕೆ ಸೈನ್ಯವನ್ನು ಸಜ್ಜುಗೊಳಿಸುವದು ಅವನ ಮುಖ್ಯ ಕರ್ತವ್ಯವಾಗಿತ್ತು.

ಸಂಧಿ ವಿಗ್ರಹಿಯ ಕೆಲಸ ಯುದ್ಧ ಮತ್ತು ಶಾಂತಿಯನ್ನು ಸಹಾಯಕ ಅಧಿಕಾರಿಯಾಗಿ (ಕಾರ್ಯದರ್ಶಿ) ಸಾಮ್ರಾಜ್ಯ ಅಥವಾ ರಾಜರ ಮಧ್ಯದಲ್ಲಿ ಯುದ್ಧದ ಕುರಿತು, ಶಾಂತಿಯ ಕುರಿತು ತಿಳುವಳಿಕೆ ನೀಡುವದಾಗಿತ್ತು. ಅಕ್ಷಪಟಲಿಕ ಅಥವಾ ಲೆಕ್ಕ ಪರಿಶೋಧಕನು ಕೇಂದ್ರಸರಕಾರದ ಎಲ್ಲ ರೀತಿಯ ಕರ್ಚುವೆಚ್ಚದ ಲೆಕ್ಕ ಪತ್ರಗಳನ್ನು ನೋಡಿಕೊಳ್ಳುವವನಾಗಿದ್ದ. ಅದೇ ರೀತಿ ರಾಜ್ಯದಲ್ಲಿ ನಡೆಯುವ ರಹಸ್ಯ ವಿಷಯಗಳನ್ನು ತಿಳಿದು ಕೊಂಡು ರಾಜನಿಗೆ ಮುಟ್ಟಿಸುವ ಕೆಲಸ ರಹಸ್ಯಾಧಿಕಾರಿಯದಾಗಿತ್ತು. ಇವರೆಲ್ಲರನ್ನು ಸೇರಿಕೊಂಡು ನಡೆಸುವ ರಾಜನ ಸಭೆಯನ್ನು 'ಮಂತ್ರಾಲೋಚನ ಸಭೆ' ಎಂದು ಕರೆಯಲಾಗಿದೆ.

## ಮಂತ್ರಿಗಳು (ಮಾತ್ಯ-ಪ್ರಧಾನ)

ರಾಜಾಜ್ಞೆಯನ್ನು ಜಾರಿಮಾಡುವ ಕ್ರಮದಲ್ಲಿ ಮಂತ್ರಿಗಳೇ ಪ್ರಥಮ ಪಾತ್ರವನ್ನು ವಹಿಸುತ್ತಿದ್ದರು. ಅವರಲ್ಲಿ ಮುಖ್ಯನಾದವನು ಮುಖ್ಯಮಂತ್ರಿ ಅಥವಾ ಅಮಾತ್ಯನೆಂದು ಕರೆಯಿಸಿಕೊಂಡಿದ್ದಾನೆ. ಶುಕ್ರನೀತಿಸಾರವು ಸಹ ಮಹಾ ಪ್ರಧಾನ ಅಥವಾ ಮಹಾ ಮಾತ್ಯ (ಅಮಾತ್ಯ) ನೆಂದು ಕರೆದಿದೆ.[೪೨]

### ೧) ರೇಚಿ ದೇವ

ಕಲಚುರಿ ಸೋವಿದೇವನ ಮಂತ್ರಿಯಾಗಿ ಕ್ರಿ.ಶ. ೧೧೭೭ ರಲ್ಲಿ ರೇಚಿದೇವ ಕೆಲಸ ನಿರ್ವಸುತ್ತಿದ್ದನು. ನಂತರ ಸಂಕಮನ ಮಂತ್ರಿಯಾಗಿ ಮುಂದುವರೆದಿರುವದನ್ನು ಶಾಸನ ಹೇಳುತ್ತದೆ.[೪೩] ಶಾಸನ ಒಂದೇ ಯಾದರು ಅವರಲ್ಲಿ ಸೋವಿದೇವ ಮತ್ತು ಸಂಕಮರ ಕಾಲದಲ್ಲಿ ಏಳುಬಾರಿ ಹಾಕಿಸಲ್ಪಟ್ಟ ಒಂದೇ ಶಾಸನವಿದಾಗಿದೆ. ಸೋವಿದೇವನ ಶಾಸನದಲ್ಲಿ ರೇಚಿದೇವನನ್ನು 'ಮಂತ್ರೀಶ್ವರ' ಎಂದು ಕರೆದರೆ, ಸಂಕಮನ ಶಾಸನದಲ್ಲಿ ''ತತ್ಪ್ರಧಾನನಪ್ಪ ವಸುಧೈಕಬಾಂಧವ ರೇಚಿದೇವರ'' ಎಂದು ಕರೆಯುವದು.

## ಸೇನಾಪತಿಗಳು (ದಂಡನಾಯಕರು)

ಸೇನಾಪತಿಗಳನ್ನು ಮುಖ್ಯವಾಗಿ ದಂಡನಾಯಕ, ಮಹಾದಂಡನಾಯಕ, ಮಹಾಪ್ರಚಂಡ ದಂಡನಾಯಕ, ಸೇನಾನಿ, ಸೇನಾಪತಿಗಳೆಂಬ ಅನೇಕ ದರ್ಜೆಯ ಹುದ್ದೆಗಳಲ್ಲಿ ಕಾಣುತ್ತೇವೆ. ಇವರು ರಾಜ್ಯದ ಉಪವಿಭಾಗಗಳ ಆಡಳಿತ ನಿರ್ವಹಣೆಯಲ್ಲದೆ ವಿವಿಧ ಸುಂಕಗಳನ್ನು ಆಕರಿಸಲು ದಂಡನಾಯಕರು ನಿಯಮಿಸಲ್ಪಡುತ್ತಿದ್ದರು. ಯುದ್ಧ ಕಾಲದಲ್ಲಿ ಇವರು ಅರಸನಿಗೆ ಬೆಂಬಲವಾಗಿ ನಿಂತು ಹೋರಾಡುತ್ತಿದ್ದರು. ಇಂತಹ ಸೇನಾ ದಂಡನಾಯಕರ ಕುರಿತು ಶಾಸನಗಳು ಉಲ್ಲೇಖಿಸುತ್ತವೆ.

### ೧) ಮಹದೇವ ದಂಡನಾಯಕ

ಆರನೆ ವಿಕ್ರಮಾದಿತ್ಯನ ಪ್ರಖ್ಯಾತ ದಂಡನಾಯಕ ಇಟಗಿಯ ಮಹದೇವ ಅಗ್ರಹಾರ ಇಟಗಿಯ ೪೦೦ ಬ್ರಾಹ್ಮಣ ಮಹಾಜನ ಬ್ರಾಹ್ಮಣರಲ್ಲಿ ಪೋತೆಯಚಾವೇರ ನೆಂಬ ಬ್ರಾಹ್ಮಣನ ವಂಶಕ್ಕೆ ಸೇರಿದವ ಇಟಗಿ ಶಾಸನವು ಮಹಾದೇವನ ವಂಶಾವಳಿಯನ್ನು ಈ ರೀತಿ ನೀಡುತ್ತದೆ.[೪೪]






ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಮಹದೇವ ದಂಡನಾಯಕನಾಗಿ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಅವನ ಮಹಾಪ್ರಧಾನ ಕನ್ನಡ ಸಂಧಿ ವಿಗ್ರಹಿ, ಮನೆವೆರ್ಗ್ಗಡೆ, ದಂಡನಾಯಕ ನಾಗಿ ಮೂರು ಹುದ್ದೆಗಳನ್ನು ಹೊಂದಿದ್ದನು. ಮೂಲ ಬ್ರಾಹ್ಮಣನಾದ ಮಹದೇವ ಇಟಗಿಯಲ್ಲಿ ತನ್ನ ಹೆಸರಿನ ಮಹದೇವ ಹೆಸರಿನ ಶಿವನ ಗುಡಿಯನ್ನು ಕಟ್ಟಿಸಿದನು.

### ೨) ಮಹದೇವಯ್ಯ ದಂಡನಾಯಕ

ಮಹದೇವಯ್ಯನು ಸಹ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಅವನ ದಂಡ ನಾಯಕನಾಗಿ ಕೆಲಸನಿರ್ವಹಿಸುತ್ತಿದ್ದನು. ಶಾಸನವು ''ಸ್ವಸ್ತಿ ಶ್ರೀಮನ್ಮಹಾ ಪ್ರಧಾನ ದಂಡನಾಯಕ ಕನ್ನಡ ಸಂಧಿವಿಗ್ರಹಿ ದಂಡಾಯದಿಷ್ಠಾಯಕ ಮನೆವೆರ್ಗ್ಗಡೆ ಮಹದೇವಯ್ಯಂಗಳ್ ಎರಡಾರುನೂರನ್ನು ಸುಖಸಂಕಥಾ ವಿನೋದದಿಂ'' ಆಳುತ್ತಿದ್ದನೆಂದು ಹೇಳುತ್ತದೆಯಲ್ಲದೆ ಅವನು ಅಗ್ರಹಾರ ಬಾದಾಮಿಯ (ಬಾದಾಮಿ) ಬಮ್ಮದೇವನಾಯಕನ ಪುತ್ರನೆಂದು ಹೇಳುತ್ತದೆ. ಮತ್ತು ಮಹದೇವಯ್ಯ ಎರಡುನೂರರ ಹೆರ್ಜುಂಕವನ್ನು ಹೆಗ್ಗಡೆತನದಿಂದ ಆಳುತ್ತಿದ್ದನೆಂದು ಹೇಳಿದೆ. ಶಾಸನದ ಹೇಳಿಕೆ ನೋಡಿದರೆ ಮಹದೇವಯ್ಯನು ವಿಕ್ರಮಾದಿತ್ಯನ ಕಾಲದಲ್ಲಿ ಕನ್ನಡ ಸಂಧಿವಿಗ್ರಹಿಯಾಗಿ, ಮನೆ ವೆರ್ಗ್ಗಡೆಯಾಗಿ ಹೆರ್ಜುಂಕದ (ಹೆರ್ಗ್ಗಡೆ) ಅಧಿಷ್ಠಾಯಕನಾಗಿ ಆಡಳಿತ ನಡೆಸಿರುವದನ್ನು ಕಾಣುತ್ತೇವೆ.[೪೫]

### ೩) ಆನೆಯ ಕೇಶಿಮಯ್ಯ

ಈತನು ಚಾಲುಕ್ಯ ಎರಡನೇ ಜಗದೇಕಮಲ್ಲನ ಕಾಲದಲ್ಲಿ ಮಹಾಪ್ರಧಾನ ದಂಡಾಧೀಶನಾಗಿ ಬೆಳ್ವಲ-೩೦೦ ರ ಮೇಲೆ ದಂಡನಾಯಕ ತನದಿಂದ ಆಳ್ವಿಕೆ ಮಾಡುತ್ತಿದ್ದನು.[೪೬]

### ೪) ಬಲದೇವಯ್ಯ

ಕಲಚುರಿ ಬಿಜ್ಜಳನ ಕೈಕೆಳಗೆ ಅನೇಕ ದಂಡನಾಯಕರಿದ್ದುದನ್ನು ಕ್ರಿ.ಶ. ೧೧೬೩ ರ ಕುಕನೂರ ಶಾಸನವು ಉಲ್ಲೇಖಿಸುತ್ತದೆ. ಅವರಲ್ಲಿ ಮಹಾಪ್ರಧಾನ ದಂಡನಾಯಕನಾಗಿ ಬಲದೇವಯ್ಯನು

ಕುಕನೂರ-೩೦ ಹಾಗೂ ಹಲವು ಬಾಡಗಳ (ಗ್ರಾಮ) ಮೇಲೆ ಅಧಿಕಾರ ನಡೆಸುತ್ತಿದ್ದನು.[೪೭] ಇವನ ಜೋತೆಗೆ ದಂಡನಾಯಕ ಅಮ್ಮರಸ, ಬೊಪ್ಪಣ ನಾಯಕ, ಬೀವರಸ, ಸಾಯಣ್ಣ, ವಿಟ್ಟಪಯ್ಯರನ್ನು ಹೆಸರಿಸುತ್ತಿದ್ದು ಅವರ ಅಧಿಕಾರದ ವ್ಯಾಪ್ತಿಯ ಪ್ರದೇಶಗಳನ್ನು ಮಾತ್ರ ತಿಳಿಸುವದಿಲ್ಲ.

**೫) ತೇಜಿರಾಜ ದಂಡಾಧೀಶ**

ಈತನು ಕಲಚುರಿ ಸೋವಿದೇವನ ದಂಡಾಧೀಶನಾಗಿದ್ದು ಬೆಳ್ವಲನಾಡಿನ ಮೇಲೆ ಅಧಿಕಾರ ನಡೆಸುತ್ತಿದ್ದನು. ಇವನು ನಂದಿವಾಟಪುರದ ದೇಶಿಕ ಸ್ವಾಮಿಯ ಬಾಸೂರ ಕುಲ ಹಾಗೂ ಅಗಸ್ತ್ಯಕುಲದ ಕಾಜಮಯ್ಯ ನಾಯಕನ ಮಗ ಬಮ್ಮದೇವ ನಾಯಕ ಮತ್ತು ಜಕ್ಕಣವ್ವೆಯರ ಉದರದಲ್ಲಿ ಕಾವಣ ಹಾಗೂ ತೇಜಿರಾಜರು ಹುಟ್ಟಿದರು. ಕಿರಿಯನಾದ ತೇಜಿರಾಜನೆ ಶಾಸನದ ದಂಡನಾಯಕ ತೇಜಿರಾಜ ನಾಗಿರುವನು.[೪೮]




**೬) ಲಕ್ಷ್ಮೀದೇವ ದಂಡನಾಯಕ**

ಇವನು ಸಹ ಕಲಚುರಿ ಸೋವಿ ದೇವನ ಕಾಲದಲ್ಲಿ ದಂಡನಾಯಕನಾಗಿ ಕಿಸುಕಾಡು-೭೦ ರ ಕೆಲ್ಲಂಗೆರೆ ಗ್ರಾಮವನ್ನು ಆಳುತ್ತಿದ್ದುದನ್ನು ಶಾಸನ ಹೇಳುವದಲ್ಲದೆ, ಅವನ ವಂಶಾವಳಿಯನ್ನು ಸಹ ಶಾಸನ ನೀಡುತ್ತದೆ.[೪೯]



**ಕಲಚುರಿ ಸೋವಿದೇವನ ಸಚಿವ ಸಂಪುಟ**

ಕಲಚುರಿ ಸೋವಿದೇವ ತನ್ನ ರಾಜ್ಯದ ಸಚಿವ ಸಂಪುಟದಲ್ಲಿ ಆಯ್ಕೆಮಾಡಿಕೊಂಡ ಸುಮಾರು ಆರು ಜನ ಸಚಿವರ ಕುರಿತು ಕುಕನೂರಿನ ಕ್ರಿ.ಶ. ೧೧೭೦ ರ ಶಾಸನವು ಸುಧೀರ್ಘವಾಗಿ ವರ್ಣಿಸಿದೆ.[೫೦]

೧) ಬೋಪ್ಪಣ ನಾಯಕ

೨) ವಾವಣ ದೇವ

೩) ಮಹಾದೇವ

೪) ಗುಣಿ ಗೋಲ್ವೋಣ ಪಂಡಿತ

೫) ಕಾಳಿಮಯ್ಯ ನಾಯಕ

೬) ಬಮ್ಮಿ ದೇವ

ಆದರೆ, ಈ ಮಂತ್ರಿಗಳ ಅಧಿಕಾರ ಸ್ವರೂಪ ಮತ್ತು ಅಧಿಕಾರ ವ್ಯಾಪ್ತಿಯ ಕುರಿತು ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ವಿಷಯ ತಿಳಿದುಬರುವುದಿಲ್ಲ.

**೧) ಧನ್ಯ ಚಮುಪ**

ಕಲಚುರಿ ಸಂಕಮ ದೇವ ರಾಜ್ಯದಲ್ಲಿ ತಿರುಗಾಡುತ್ತ ಬಂದು ಮೊದೆಗನೂರಿನ ನೆಲೆವಿಡಿನಲ್ಲಿದ್ದಾಗ, ಅವನ ಸೇನಾನಿಯಾದ ಧನ್ಯ ಚಮುಪನು ಜಿಲ್ಲೆಯ ವ್ಯಾಪ್ತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದನು. ಶಾಸನ ಧನ್ಯಚಮುಪ ವಂಶಾವಳಿಯನ್ನು ಸಹ ನೀಡುತ್ತದೆ.[೫೧]



### ೨) ಸೋವರಸ

ಸೋವರಸ ಚಾಲುಕ್ಯ ನಾಲ್ಕನೇ ಸೋಮೇಶ್ವರನ ಕಾಲದಲ್ಲಿ ಸೇನಾಪತಿಯಾಗಿ ಕೆಲಸ ನಿರ್ವಹಿಸಿದ್ದು ಶಾಸನವು ''ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತ ಶ್ರೀ ಮನ್ಮಹಾ ಪ್ರಧಾನ ಸೇನಾಪತಿ ಮಹಾ ಪ್ರಚಂಡ ದಂಡನಾಯಕ ಸೋವರಸ'' ನೆಂದು ಕರೆಯುತ್ತದೆ.[೫೨]

## ಧರ್ಮಾಧ್ಯಕ್ಷರು

ಕೇಂದ್ರಾಡಳಿತದ ಮಂತ್ರಿಮಂಡಳದಲ್ಲಿ ಧಾರ್ಮಿಕ ವಿಷಯಗಳನ್ನು ನೋಡಿಕೊಳ್ಳಲು ಧರ್ಮಾಧಕ್ಷ ಇರುವದನ್ನು ಶಾಸನವೊಂದು ತಿಳಿಸುತ್ತದೆ.

### ೧) ಸೋಮೇಶ್ವರ ಭಟ್ಟೋಪಾಧ್ಯಾಯ

ಸೋಮೇಶ್ವರ ಭಟ್ಟೋಪಾಧ್ಯಾಯನು ತ್ರಿಭುವನ ಮಲ್ಲ ವಿಕ್ರಮಾದಿತ್ಯನ ಆರಾಧ್ಯನಾಗಿ ಮತ್ತು ಶ್ರೀಮನ್ಮಹಾ ಪ್ರಧಾನ ಧರ್ಮಾಧ್ಯಕ್ಷನಾಗಿ ಕೆಲಸನಿರ್ವಸುತ್ತಿದ್ದನು.[೫೩]

## ಸಂಧಿ ವಿಗ್ರಹಿಗಳು

ಜಿಲ್ಲೆಯ ಶಾಸನಗಳಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಅಧಿಕಾರಿ ಯೆಂದರೆ ಸಂಧಿವಿಗ್ರಹಿ. ಈ ಸಂಧಿ ವಿಗ್ರಹಿ ಇಂದಿನ ವಿದೇಶಾಂಗ ಮಂತ್ರಿಯಂತಿದ್ದು, ಸಂಧಿ (ಒಪ್ಪಂದ) ಮತ್ತು ಸಮರ (ಯುದ್ಧ)ಗಳ ವ್ಯವಹಾರ ನೋಡಿಕೊಳ್ಳುತ್ತಿದ್ದನು. ಸೋಮದೇವ ಸೂರಿಯು ಭಾಷಾ ಲಿಪಿಕಾರನಾಗಿದ್ದಂತೆ ಸಂಧಿ ವಿಗ್ರಹಿಯ ಕೆಲಸ ಮಾಡುತ್ತಿದ್ದನು. ಇವನು ಹೊರನಾಡಿನ ಧೂತರನ್ನು ಸ್ವಾಗತಿಸಿ ರಾಜನನ್ನು ಬೇಟಿ ಮಾಡಿಸುವದು ಅವರಿಗಾಗಿ ಕಾಗದ ಪತ್ರಗಳನ್ನು ಸಿದ್ಧಪಡಿಸುವ ಕೆಲಸ ನಿರ್ವಹಿಸುತ್ತಿದ್ದನೆಂದು ಹೇಳುವದು.[೫೪] ಇತನು ಶಾಸನ ಮತ್ತು ದಾನ ಪತ್ರಗಳನ್ನು ಪಾಠವನ್ನು ಸಿದ್ಧಪಡಿಸುವ ಮತ್ತೊಂದು ಕರ್ತವ್ಯವನ್ನು ಸಹ ನಿರ್ವಹಿಸುತ್ತಿದ್ದನು.[೫೫]

### ೧) ಮಹದೇವ

ಕ್ರಿ.ಶ. ೧೧೦೮-೯ ರ ಇಟಗಿ ಶಾಸನವು ವಿಕ್ರಮಾದಿತ್ಯನ ಕನ್ನಡ ಸಂಧಿವಿಗ್ರಹಿಯಾಗಿ ಮಹದೇವ ದಂಡನಾಯಕ, ಮನೆ ವೆರ್ಗ್ಗಡೆ, ಮಹಾ ಪ್ರಧಾನ ಕನ್ನಡ ಸಂಧಿ ವಿಗ್ರಹಿಯಾಗಿದ್ದನೆಂದು ಹೇಳುವದು.[೫೬] ಇದೇ ಮಹದೇವನು ಮಹದೇವಯ್ಯನೆಂದು ಕ್ರಿ.ಶ. ೧೧೨೫ ಕಲ್ಲೂರ ಶಾಸನದಲ್ಲಿ ಉಲ್ಲೇಖಿತನಾಗಿದ್ದು ಶಾಸನವು ಮಹದೇವಯ್ಯನು ಮಹಾ ಪ್ರಧಾನ ದಂಢನಾಯಕನಾಗಿರುವಂತೆ, ಕನ್ನಡ ಸಂಧಿವಿಗ್ರಹಿ ಯಾಗಿರುವದರ ಜೊತೆಯಲ್ಲಿ ದಂಡಾಯದಿಷ್ಠಾಯಕ ಮನೆವೆರ್ಗ್ಗಡೆಯಾಗಿ ಎರಡನೂರನ್ನು ಆಳುತ್ತಿದ್ದನೆಂದು ಹೇಳುವದು.[೫೭]

**ಬಾಹತ್ತರ ನಿಯೋಗಿಗಳು (೭೨ ಅಧಿಕಾರಿಗಳು)**

ಬಾಹತ್ತರ ನಿಯೋಗಿ ಎಂಬ ಮತ್ತೊಂದು ಹುದ್ದೆಯ ಅಧಿಕಾರಿ ಕೇಂದ್ರ ಸರಕಾರದಲ್ಲಿ ಅಂದು ಇದ್ದಂತೆ ತೋರುತ್ತದೆ. ಆ ಕಾಲದಲ್ಲಿ ಪ್ರಚಲಿತದಲ್ಲಿರುವ ಈ ಬಾಹತ್ತರ ನಿಯೋಗಿಗಳ ಉಲ್ಲೇಖ ಜಿಲ್ಲೆಯ ಒಂದೆರಡು ಶಾಸನಗಳಲ್ಲಿ ದೊರೆಯುತ್ತವೆ. ಸಮಕಾಲಿನ ಕನ್ನಡ ಶಾಸನ ಮತ್ತು ಕಾವ್ಯಗಳಲ್ಲಿ ಇವರ ಉಲ್ಲೇಖಗಳು ಹೇರಳವಾಗಿ ದೊರೆಯುತ್ತವೆ. ಆದರೆ ನಿಯೋಗಿ ಎಂಬುದರ ಅರ್ಥ ಮತ್ತು ಅದರ ವ್ಯಾಪ್ತಿ ಮಾತ್ರ ಸ್ಪಷ್ಟವಾಗುವದಿಲ್ಲ. ನಿಯೋಗಿ ಎಂಬ ಪದ 'ದೂತ' ಎನ್ನುವ ಅರ್ಥದಲ್ಲಿ ಶಾಸನಗಳು ಹೇಳುತ್ತವೆಯಾದರು, ಜಿಲ್ಲೆಯ ಶಾಸನಗಳಲ್ಲಿ ಬಾಹತ್ತರ ನಿಯೋಗಾಧಿಪತಿಯ ಹೆಸರುಗಳು ದೊರೆಯುತ್ತವೆ. ಇವು ಎಪ್ಪತ್ತರಡು ನಿಯೋಗಿಗಳ ನಿಯಂತ್ರಣಾಧಿಕಾರ ಹೊಂದಿದ ಶಾಖೆಯ ಮುಖ್ಯಸ್ಥನನ್ನು ಹೇಸರಿಸುತ್ತಿರಬೇಕು. 'ಬಾಹತ್ತರ' ಎಂದರೆ ಎಪ್ಪತ್ತೆರಡು ನೌಕರರನ್ನು ಸೂಚಿಸುತ್ತಿರಬೇಕು. ಬಾಹತ್ತರ ನಿಯೋಗವು ೭೨ ನೌಕರರನ್ನು ಹೊಂದಿದ್ದನ್ನು ನೋಡಿದರೆ ಇದೊಂದು ರಾಜ್ಯಾಂಗದಲ್ಲಿ ಮಹತ್ವದ ಕಾರ್ಯವನ್ನು ನಿರ್ವಹಿಸುವ ಹುದ್ದೆಯಾಗಿರಬೇಕೆಂದೆನಿಸುತ್ತದೆ. ಬಾಹತ್ತರ ನಿಯೋಗ ಎಂಬುದು ಒಂದು ನೌಕರರ ಸಂಘದಂತೆ ಕಂಡು ಬರುತ್ತಿದ್ದು ಇದರಲ್ಲಿ ''ಗುರು, ಮಹಾಪ್ರಧಾನ, ಸಾಮಂತ, ಸೇನಾಪತಿ, ದ್ವಾರಪಾಲಕ, ಅವಸಾರಿಕಾ, ಘಟಿಕಾನಿರ್ಧಾರಕ ( ವೇಳೆಯನ್ನು ಸೂಚಿಸುವವ), ಗಣಕ, ಲೇಖಕ, ಪೌರಾಣಿಕ, ಪುರೋಹಿತ, ಜೋತಿಷ್ಯ, ಕಾವ್ಯಜ್ಞ, ವಿದ್ವಜ್ಜನ, ದೇವ ಅರ್ಚಕ, ಮೌಲ್ಯಾಕಾರಕ, ವಾರಿಮಳಕಾರ, ಗೋಷ್ಠಾಧಿಕಾರಿ, ಗಜಾಧಿಕಾರಿ, ಅಶ್ವಾಧಿಕಾರಿ, ಭಂಡಾಧಿಕಾರಿ, ಧಾನ್ಯಾಧಿಕಾರಿ, ಅಂಗರಕ್ಷಕ, ಸೂತ (ಸಾರಥಿ), ಸೂವ (ಅಡಿಗೆಯವ), ಬೇತಾಳ, ಮಲ್ಲ, ತಾಂಬೂಲಿಕ, ತಾಳವೃಂದಕ, (ಗಾಳಿಬಿಸುವವ), ನರವಾಹಕ (ರಾಜ ಮುಂತಾದವರನ್ನು ಮೇನೆ ಮುಂತಾದವುಗಳಲ್ಲಿ ಕುಡಿಸಿ ಎತ್ತಿಕೊಂಡು ಹೋಗುವವ), ಚಾತ್ರಿಕ (ಸತ್ತಿಗೆಯವರು), ಚಾಮರಸ, ಕಳಾಚಿಕ, ಕರ ಶಾರಿಕ, ಕಂಪಾಲಿಕ (ಕರದೀಪಕಾರ), (ಕೈಯಲ್ಲಿ ಚೂರಿಹಿಡಿದ ಅಂಗರಕ್ಷಕ), ಪಾದುಕಾದಾರ, ನರ್ತಕ, ಗಾಯಕ, ವೈಣಿಕ ಶಾಕುನಿಕ, ಮಾಗದ (ಹೊಗಳು ಭಟ್ಟ), ವೈತಾಳಿಕ (ಬೆಳಿಗ್ಗೆ ತನ್ನ ಹಾಡಿನಿಂದ ರಾಜನನ್ನು ಎಚ್ಚರಿಸುವವ), ಪರಿಹಾಸಕ, ಕಂಚುಕ, ಪೌರಕ, ರಜಿಕ, ಸೌಚಿಕ, ಚರ್ಮಕಾರಕ, ಮುದ್ರಾಧಿಕಾರ, ಪುರಪಾಲಕ, ವನಪಾಲಕ, ನರವೈದ್ಯ, ಗಜವೈದ್ಯ, ಅಶ್ವವೈದ್ಯ, ಪಶುವೈದ್ಯ, ಭೇರಿವಾದಕ, ಮುಜರವಾದಕ, ರೌಮಕ, ( ಉಪ್ಪು ತಯಾರಿಸುವವ), ಶಿಲಾಚ್ಛೇದಕ, ಕಾಂಸ್ಯಕಾರಕ, ಕುಂಭ ಕಾರಕ, ಚಿತ್ರಕಾರಕ, ವ್ಯವಹಾರಿಕ, ಮೃಗಯಾರ್ಥಿ, ಪಕ್ಷಿ ಪೋಷಕ, ಪಣಿಹಾರಕ (ಹಾವಿನ ವೀಸ ಅಳಿಯುವವ) ರಾಯಬಾರ, ಉಗ್ರಾಣಾಧಿಕಾರ, ವೇಶ್ಯಾಜನ, ಬಿಂಟು, ಸ್ವರ್ಣಕಾರ, ಕಠಾರಿಕ.''

ಈ ಪಟ್ಟಿಯು ಗುರು, ಪ್ರಧಾನ, ಸಾಮಂತರಂತಹ ಉನ್ನತಾಧಿಕಾರಿಗಳಿಂದ ಹಿಡಿದು ಕಲೆಗಾರ, ರಾಜನ ಸೇವಕರಿತ್ಯಾದಿ ಜನರನ್ನು ಒಳಗೊಂಡಿದೆ.[೫೮] ಜಿಲ್ಲೆಯ ಎರಡು ಶಾಸನಗಳು ಮಾತ್ರ ಈ ಬಾಹತ್ತರ ನಿಯೋಗಾಧಿಪತಿಯ ಕುರಿತು ಹೇಳುತ್ತವೆ.

## ೧) ರೇಚಿಮಯ್ಯ ದಂಡನಾಯಕ

ಪುರ ಗ್ರಾಮದ ಶಾಸನವು ಬಾಹತ್ತರ ನಿಯೋಗಾಧಿಪತಿ ರೇಚಿಮಯ್ಯ ದಂಡನಾಯಕ ಆಗಿದ್ದನೆಂದು ಉಲ್ಲೇಖಿಸಿದೆ.[೫೯] ಕ್ರಿ.ಶ. ೧೧೭೭ ರ ಕವಲೂರು ಶಾಸನದಲ್ಲಿ ಉಲ್ಲೇಕನಾದ ಮಂತ್ರಿ ರೇಚಿದೇವ ಮತ್ತು ಈ ಪುರ ಶಾಸನದಲ್ಲಿ ಉಲ್ಲೇಖಗೊಂಡ ಬಾಹತ್ತರ ನಿಯೋಗಾಧಿಪತಿ ರೇಚಿದೇವರು ಭಿನ್ನರಾಗಿರದೆ ಇಬ್ಬರು ಒಂದೇ ಯಾಗಿದ್ದಾರೆ.

## ೨) ವಾಮದೇವ ನಾಯಕ

ಸಂಕನೂರು ಶಾಸನವು ಸಹ ಮತ್ತೊಬ್ಬ ನಿಯೋಗಾಧಿ ಪತಿಯನ್ನು ಹೇಸರಿಸುತ್ತದೆ. ಅದು ''ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮನುಮಹಾ ಪ್ರಧಾನಂ ಬಾಹತ್ತರ ನಿಯೋಗಾಧಿಪತಿ ಸಕಳ ಲಕ್ಷಪತಿ-ಸರ್ವಾಧಿಕಾರಿ ವಾಸುದೇವ ಶ್ರೀ ಕರಣಾಗ್ರಗಣ್ಯ ವಾಮನ ದೇವನಾಯಕ''[೬೦] ನೆಂದು ವರ್ಣಿಸುವದು.

## ಸುಂಕಾಧಿಕಾರಿಗಳು

ಕೈಗಾರಿಗೆ, ವ್ಯಾಪಾರ ಹಾಗೂ ಭೂ ಮಾಲಿಕ (ರೈತ)ರ ಮೇಲೆ ಸುಂಕವನ್ನು ವಿಧಿಸುವ ಪದ್ಧತಿ ಇವತ್ತಿನದಲ್ಲ ಅದು ಬಹುಪ್ರಾಚೀನ ಕಾಲದಿಂದ ನಡೆದುಕೊಂಡು ಬಂದ ಪದ್ಧತಿಯಾಗಿದೆ. ರಾಜ್ಯಕ್ಕೆ ಹೆಚ್ಚು ಸುಂಕಾದಾಯ ಕೈಗಾರಿಕೆ ಮತ್ತು ವಿವಿಧ ವೃತ್ತಿಗಳಿಂದ ಬರುತ್ತಿತ್ತು. ರಾಜನು ರಾಜ್ಯಕ್ಕೆ ಜನರಿಂದ ಬರಬೇಕಾದ ಸುಂಕ (ತೆರಿಗೆ) ವನ್ನು ವಸೂಲಿ ಮಾಡಲು ಸಾಮ್ರಾಜ್ಯದ ವಿವಿಧಭಾಗಗಳ ಮೇಲೆ ಸುಂಕ ವೆರ್ಗ್ಗಡೆಗಳನ್ನು ನೇಮಿಸುತ್ತಿದ್ದನು. ಸುಂಕಿಗರ ಕೈಕೆಳಗೆ ಕೆಲವು ಸುಂಕಾಧಿಕಾರಿಗಳು ಇರುತ್ತಿದ್ದರು. ಇಂತವರನ್ನು ಸುಂಕಿಗ ಎಂದು ಕರೆದರು ಶಾಸನಗಳು ಹೆರ್ಗ್ಗಡೆ, ಪೆರ್ಗ್ಗಡೆ, ವೆರ್ಗ್ಗಡೆಗಳೆಂದು ಕರೆಯುವವು. ಈ ಸುಂಕಿಗರ ಕುರಿತು ನಯಸೇನ ''ಕದ್ದು ಪರದಾಡುವ ಸುಂಕಿಗನ ಕಯ್ಯೊಳ್ ಸಿಕ್ಕುವಂತೆ,'' ''ಸುಂಕಿಗನಂ ಕಂಡ ಭಂಡಮುಳ್ಳನಂತೆ ಸುಂಕಿಸುತ್ತಂ ಈ ಬಟ್ಟೆಯೋಳ್ ಸುಂಕಂ ಪಿರಿದಂದೊಡೆ ಮೊದಲಾಗ ದೆಂಬರ್'' ಎಂಬ ಮಾತುಗಳನ್ನು ಹೇಳಿರುವನು.[೬೧] ಇದರಿಂದ ಅಂದು ಕಳ್ಳರೂ, ಭಂಢವುಳ್ಳವರೂ ಸುಂಕಿಗನ ಕೈಯಲ್ಲಿ ಸಿಕ್ಕು ಪೇಚಾಡುತ್ತಿದ್ದರೆಂದು ಹೇಳಬಹುದು. ವ್ಯಾಪಾರಿಗಳು ಸುಂಕದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರೆಂದೂ ನಯಸೇನನ ಮಾತಿನಿಂದ ತಿಳಿಯುವದು. ಜಿಲ್ಲೆಯ ಶಾಸನಗಳು ಕೇಂದ್ರ, ನಾಡು, ಪಟ್ಟಣ, ಊರಾಡಳಿತಗಳಲ್ಲಿ ಬರುವ ಸುಂಕದ ಪೇರ್ಗ್ಗಡೆಗಳ ಕುರಿತು ಹೇಳುತ್ತವೆ.

## ೧) ಬುಟ್ಟಯ್ಯ

ಗಂಗಭೂತುಗ ಎಡದೊರೆಯ ಮೇಲೆ ಮಂಡಳೇಶ್ವರನಾಗಿ ಆಳುತ್ತಿರುವಾಗ ಇದೆ ಎಡದೊರೆಯ ಮೇಲೆ ಭೂತುಗನ ಪೆರ್ಗ್ಗಡೆಯಾಗಿ ಬುಟ್ಟಯ್ಯನು ಸುಂಕವನ್ನಾಳುತ್ತಿದ್ದನು.[೬೨]

**೨) ಚಾವುಣ್ಡಮಯ್ಯ**

ಈತನು ಪೆರ್ಗ್ಗಡೆಯಾಗಿದ್ದುದನ್ನು ಅರಕೇರಿಯ ಕ್ರಿ.ಶ. ೧೦೩೩ ರ ಶಾಸನ ಹೇಳುತ್ತದೆಯಾದರು ಯಾರ ಕೈಕೆಳಗೆ ಯಾವ ಪ್ರದೇಶದ ಸುಂಕಾಧಿಕಾರಿಯಾಗಿದ್ದನೆಂದು ಹೇಳುವದಿಲ್ಲ.[೬೩]

**೩) ಬಸವಣಯ್ಯನಾಯಕ**

ಈತನು ಸಹ ಹೆಗ್ಗಡೆ ಭಂಡಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದುದನ್ನು ಅಳವಂಡಿಯ ಕ್ರಿ.ಶ. ೧೦೬೧ ರ ಶಾಸನ ಹೇಳುವದು[೬೪] ಆದರೆ ಯಾರ ಕೈಕೆಳಗೆ ಅಧಿಕಾರಿಯಾಗಿದ್ದ ಮತ್ತು ಯಾವ ಪ್ರದೇಶದ ಮೇಲೆ ಅಧಿಕಾರ ಹೊಂದಿದನೆಂಬುದು ಮಾತ್ರ ತಿಳಿಯುವದಿಲ್ಲ.

**೪) ಮೂಕಿಮಯ್ಯ**

ಮಾಕಿಮಯ್ಯನು ಸಹ ಹೆಗ್ಗಡೆಯಾಗಿದ್ದು ಶಾಸನ ಇವನು ಯಾರ ಅಧಿಕಾರಿ ಮತ್ತು ಎಲ್ಲಿ ಕೆಲಸ ಮಾಡುತ್ತಿದ್ದನೆಂದು ಹೇಳುವದಿಲ್ಲ.[೬೫]

**೫) ಆಚಿಯಣ್ಣ**

ಈತನು ನಾಡ ಹಿರಿಯ ಹೆಗ್ಗಡೆಯಾಗಿ ಕೆಲಸ ನಿರ್ವಹಿಸುತ್ತಿದ್ದನು. ಅಂಟೂರಠಾಣಾದ ಶಾಸನ[೬೬] ಇದನ್ನು ಹೇಳುವದರಿಂದ ಬಹುಶಃ ಕೆಳವಡಿ-೩೦೦ ರ ನಾಡ ಹಿರಿಯ ಹೆಗ್ಗಡೆಯಾಗಿ ಕೆಲಸ ಮಾಡಿರಬೇಕು.

**೬) ಮಹಾವಿಷ್ಣುವರಸ**

ಮಹಾವಿಷ್ಣುವರಸ ದಂಡನಾಯಕನಾಗಿದ್ದು ಅವನು ಅಚ್ಚು ಪನ್ನಾಯದ ಅಧಿಷ್ಠಾಯಕನಾಗಿ ಕೆಲಸ ನಿರ್ವಹಿಸಿದ್ದಾನೆ.[೬೭]

**೭) ಜಕ್ಕರಾಜ**

ಈತನು ವಾಮಯ್ಯ ಹೆಗ್ಗಡೆಯ ಕೈಕೆಳಗಿನ ಸುಂಕದ ಅಧಿಕಾರಿಯಾಗಿದ್ದ.[೬೮]

**೮) ದೇವದಾಸ**

ದೇವದಾಸನು ಮಹಾ ಪ್ರಧಾನ ದಂಡನಾಯಕ ಮತ್ತು ಪನ್ನಾಯದಿಷ್ಠಾಯಕನಾಗಿ ಕೆಲಸ ನಿರ್ವಹಿಸಿದ್ದನು.[೬೯]

**೯) ಮಹೇಶ್ವರಯ್ಯ**

ಮಹೇಶ್ವರಯ್ಯನು ಸಹ ಸುಂಕಾಧಿಕಾರಿಯಾಗಿದ್ದು ಶಾಸನವು ಮಹಾಪ್ರಧಾನ ಹೆಜ್ಜುಂಕ-ವಡ್ಡರಾವುಳ ದಂಡನಾಯಕ ಮಹೇಶ್ವರಯ್ಯನೆಂದು ಕರೆಯುವದು.[೭೦]

**೧೦) ರೇವರಸ**

ಇವನು ಪನ್ನಾಯದ ಸುಂಕಾಧಿಕಾರಿ ಸೋವರಸನ ತಮ್ಮನಾಗಿದ್ದನಲ್ಲದೆ ಅವನ ಕೈಕೆಳಗಿನ ಸುಂಕಾಧಿಕಾರಿಯಾಗಿರುವಂತೆ ಹೇಳುವದು.[೭೧]

**೧೧) ಮೇದಿರಾಜ**

ಮೇದಿರಾಜ ದಂಡನಾಯಕನು ಸಹ ಸುಂಕಾಧಿಕಾರಿಯಾಗಿರುವದನ್ನು ಕುಕನೂರ ಶಾಸನ ತಿಳಿಸುವದು.[೮೨]

**೧೨) ಸೋಮಶಿವ ಭಟ್ಟ ಬಿಟ್ಟಯ್ಯ**

ಸೋಮಶಿವಭಟ್ಟ ಬಿಟ್ಟಯ್ಯ ಎಂಬುವವನು ಸುಂಕಾಧಿಕಾರಿಯಾಗಿದ್ದನೆಂದು ಚಳಗೇರಿ ಶಾಸನವು ತಿಳಿಸುವದು.[೮೩]

**೧೩) ಸಾರಂಗ ಪಾಣಿ ನಾಯಕ**

ಪೆರ್ಗ್ಗಡೆ ಸಾರಂಗಪಾಣಿ ನಾಯಕ ಸುಂಕಾಧಿಕಾರಿಯಾಗಿದ್ದನು. ಇವನು ದಂಡನಾಯಕ ಸುಂಕಾಧಿಕಾರಿಯಾದ ರೇವರಸನ ಮೈದುನ.[೮೪]

**ಪ್ರಾಂತಿಯ ಆಡಳಿತ (ನಾಡಾಳಿತ)**

ಭೌಗೋಳಿಕವಾಗಿ ವಿಸ್ತಾರವಾಗಿದ್ದ ರಾಜ್ಯವನ್ನು ಆಡಳಿತದ ಹಿತದೃಷ್ಟಿಯಿಂದ ವಿಭಾಗಿಸುವದು ಪ್ರಾಚೀನ ಕಾಲದಿಂದ ಇಂದಿನವರೆಗೆ ನಡೆದುಕೊಂಡು ಬಂದಿದೆ. ವಿಭಾಗಗೊಂಡ ಪ್ರದೇಶಗಳ ಮೇಲೆ ಅರಸನು ಸಾಮಂತ ಮಂಡಳೇಶ್ವರರನ್ನು ನೇಮಕಮಾಡುತ್ತಿದ್ದನು.

ನಾಡು ಸಾಮ್ರಾಜ್ಯದ ಒಂದು ಅಂಗವಾಗಿದ್ದುದರಿಂದ ರಾಜನು ಅವುಗಳ ಆಡಳಿತದ ಮೇಲೆ ಹಿಡಿತ ಸಾಧಿಸಲು ತನ್ನ ರಾಜಪರಿವಾರವನ್ನೊ, ರಾಜ್ಯಾಧಿಕಾರಿಗಳನ್ನೊ, ರಾಜನಿಷ್ಠರನ್ನೊ ನಾಡಿನ (ಪ್ರಾಂತ) ಆಡಳಿತದಲ್ಲಿ ತೊಡಗಿಸುತ್ತಿದ್ದ.[೮೫] ಹೀಗಾಗಿ ನಾಡಿನ ಮುಖ್ಯಸ್ಥರಲ್ಲಿ ಮೇಲಿನ ಯಾರಾದರು ಒಬ್ಬರು ಆಗಿರಬಹುದಾಗಿತ್ತು. ರಾಜಪರಿವಾರ ವೆಂದರೆ ರಾಜನ ಮಕ್ಕಳು, ರಾಣಿಯರು, ಕೇಂದ್ರ ಮಂತ್ರಿಮಂಡಳದ ಸದಸ್ಯರು, ರಾಜನಿಗೆ ನಿಷ್ಠರಾಗಿರುವ ಮಂಡಳೇಶ್ವರ, ಮನ್ನೆಯ ಸಾಮಂತರು ಪ್ರಮುಖರಾಗಿದ್ದರು. ಜಿಲ್ಲೆಯ ಶಾಸನಗಳು ಇವರನ್ನು ರಾಜನ ಪಾದ ಪದ್ಮೋಪ ಜೀವಿ, ಮಂಡಳೇಶ್ವರ, ಮಹಾಸಾಮಂತರೆಂದು ಕರೆದಿವೆ. ಇವರು ಹಸ ರಾಜನಂತೆ ಬಿರುದು, ಗುಣವೀಶೇಶಗಳನ್ನು ಶಾಸನಗಳಲ್ಲಿ ಹೇಳಿಕೊಂಡಿರುವರು.

ಅಧಿಕಾರ ಸೂಚಕ ಪದವಾದ ಪಂಚಮಹಾಶಬ್ದ, ಮಹಾಸಾಮಂತ, ಮಂಡಳೇಶ್ವರ ಪ್ರಶಸ್ತಿಗಳ ಜೋತೆಗೆ ತಮ್ಮ ಮನೆತನದ ಲಾಂಛನ, ಧ್ವಜಗಳನ್ನು ಹೊಂದಿರುತ್ತಿದ್ದರು. ಪಂಚಮಹಾಶಬ್ದವೆಂದರೆ ಏನು ಎಂಬುದರ ಕುರಿತು ಸಾಕಷ್ಟು ಚರ್ಚೆ ನಡೆದಿದೆ. ಆದರೆ ಜಿಲ್ಲೆಯ ಶಾಸನಗಳಲ್ಲಿ ಪಂಚಮಹಾಶಬ್ದ ದ ಉಲ್ಲೇಖ ಬರುತ್ತದೆಯಾದರು ಪಂಚವಾದ್ಯಗಳು ಯಾವವು ಎಂಬುದನ್ನು ಉಲ್ಲೇಖಿಸುವದಿಲ್ಲ. ಇಲ್ಲಿ ಪಂಚಮಹಾಶಬ್ದಸಧ್ಯ ತಿಳಿದಿರುವಂತೆ ಪಂಚವಾದ್ಯಗಳಾಗಿವೆ. ಅವು ಗೌರವ ಸೂಚಕ ಪಂಚಮಹಾವಸ್ತುಗಳಾಗಿರುವುದೆಂದು ಕೊಪ್ಪಾರವರ ಅಭಿಪ್ರಾಯವಾಗಿದೆ.[೮೬]

ಶಾಸನಗಳಲ್ಲಿ ಉಲ್ಲೇಖಗೊಂಡ ಮಹಾಸಾಮಂತ ಮತ್ತು ಮಹಾ ಮಂಡಳೇಶ್ವರರೂ ನಾಡಿನ ಅಧಿಕಾರ ನಡೆಸಿದವರಲ್ಲಿ ಪ್ರಮುಖರು. ಆದರೆ ಅವರ ಅಧಿಕಾರದ ಸ್ವರೂಪ ಮತ್ತು ವ್ಯಾಪ್ತಿ ಮಾತ್ರ ಸ್ಪಷ್ಟಗೊಳ್ಳುವದಿಲ್ಲ. ಕೆಲವರು ಇವೆರಡು ಸಮಾನವೆಂದರೆ, ಕೆಲವರು ಬೇರೆ ಬೇರೆಯೆಂದು ಹೇಳುವರು.[೭೭] ರನ್ನನು ಮಾತ್ರ ಮಹಾ ಸಾಮಂತ ಮತ್ತು ಮಂಡಳೇಶ್ವರರು ಬೇರೆ ಬೇರೆ ಎಂಬುದನ್ನು ತನ್ನ ಗದಾಯುದ್ಧದಲ್ಲಿ ''ಮೊದಲೊಳ್ ಸಾಮಂತರೆನಿಸಿ । ಸುದಿತೋದಿತನಾಗಿ ಮಂಡಳೇಶ್ವರ ನಿಂದ ॥ ಬ್ಯುದಯ ಪರನೆನಸಿ ಚಕ್ರಿಯೀನುದಯ ಪರಂಪರೆಯನೆಯ್ದಿದಂ ಕವಿರತ್ನಂ॥'' ಎಂದು ಸ್ಪಷ್ಟಪಡಿಸಿರುವನು.[೭೮] ರನ್ನನ ಹೇಳಿಕೆಯಂತೆ ಸಾಮಂತ, ಮಂಡಳೇಶ್ವರರು ಬೇರೆ ಬೇರೆ ಎಂಬುದು ಸ್ಪಷ್ಟವಾಗುತ್ತದೆ. ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಬರುವ ''ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತ ಪ್ರತ್ಯಕ್ಷ ಭೂರಿಶ್ರವಂ ಪುಸಿಯಿಲ್ಲಾದಾತಂ ನೆರೆವೊಡೆ ಗಣ್ಡಂ ಕದನ ಪ್ರಚಣ್ಡ ಕಟಕ ಪ್ರಕರಂ ಗಿರಿದುರ್ಗ ಮಲ್ಲಂ ರಣವೀರಂ ಶ್ರೀ ಮದಾಹವಮಲ್ಲದೇವಪಾದ ಪಂಕಜ ಭ್ರಮರ ಶ್ರೀಮತ್ಸೋಭನರಸರ್''[೭೯] ''ತ್ರೈಲೋಕ್ಯ ಮಲ್ಲದೇವ ಚಕ್ರಿ ಶ್ರೀ ಮನ್ಮಹಾ ಸಾಮಂತ ಪಂಡರಸ್''[೮೦] ಎಂಬಿತ್ಯಾದಿ ಉಲ್ಲೇಖಗಳು ನೋಡಿದರೆ ಇವರು ಕೇಂದ್ರ ಮಂತ್ರಿ ಮಂಡಳದ ಸದಸ್ಯರಾಗಿರುವದು ಸ್ಪಷ್ಟ ರಾಜನೇ ಇವರನ್ನು ಕೇಂದ್ರದಿಂದ ನೇರವಾಗಿ ನಾಡಾಳಿತ ನೋಡಿಕೊಳ್ಳಲು ನೇಮಕ ಮಾಡಿರುವದು ಇದರಿಂದ ತಿಳಿದು ಬರುತ್ತದೆ. ಈ ಸಾಮಂತ ಮಂಡಳೇಶ್ವರರು ತಮ್ಮ ನಾಡಿನ ಚಿಕ್ಕ ಚಿಕ್ಕ ವಿಭಾಗಗಳಲ್ಲಿ ತಮ್ಮ ಕೈಕೆಳಗಿನ ಮಂಡಳಿಕ ಸಾಮಂತರನ್ನು ನೇಮಕ ಮಾಡಿಕೊಳ್ಳುತ್ತಿದ್ದರು. ಉದಾ : ''ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ ಸಾವಿಯಣ್ಣಂ ಸೋಭನರಸರ ದಯದಿಂಕುಕ್ಕನೂರಮ್ಮೂರ್ವತ್ತ ಮನಾಳುತ್ತಿರೆ.''[೮೧] ಎಂದು ಕುಕನೂರ ಶಾಸನ ಹೇಳುವದು. ಅಂದರೆ ಸೋಬನರಸ ಕುಕನೂರ ೩೦ ವಿಭಾಗವನ್ನು ನೋಡಿಕೊಳ್ಳಲು ಸಾವಿಯಣ್ಣನನ್ನು ನೇಮಿಸಿದ್ದನು.

ಹೀಗೆ ರಾಜನಿಂದ ನೇಮಕ ಗೊಂಡ ಮಹಾ ಸಾಮಂತ ಮತ್ತು ಮಂಡಳೇಶ್ವರರು ಅರಸನ ಪ್ರತಿನಿಧಿಗಳಾದರೂ ಇವರ ಅಧಿಕಾರ ವ್ಯಾಪ್ತಿ ಬೇರೆಯೆಂಬುದು ಈಗಾಗಲೆ ರನ್ನನ ಹೇಳಿಕೆಯಿಂದ ಸ್ಪಷ್ಟವಾಗಿದೆ. ಆದರೆ, ಮಹಾಮಂಡಳೇಶ್ವರರು ಸಹ ನಾಡುಗಳ ಮೇಲೆ ನೇರವಾಗಿ ಅರಸನಿಂದ ನಿಯುಕ್ತಗೊಂಡು ಮಹಾ ಸಾಮಂತರಷ್ಟು ಪ್ರಾಮುಖ್ಯ ಪಡೆದುಕೊಂಡಿದ್ದರು.

### ಆಡಳಿತಾಧಿಕಾರಿಗಳು

ಪ್ರಾಂತಿಯ ಆಡಳಿತವನ್ನು ಮೇಲೆ ಚರ್ಚಿಸಿದಂತೆ ಮಹಾಮಂಡಳೇಶ್ವರರು, ಮಹಾಸಾಮಂತರು ನಡೆಸುತ್ತಿದ್ದರು. ಅಂತವರನ್ನು ಜಿಲ್ಲೆಯ ಶಾಸನಗಳು ಉಲ್ಲೇಖಿಸುತ್ತವೆ. ಈಗಾಗಲೇ ಕೊಪ್ಪಳ ಜಿಲ್ಲೆಗೆ ಸಂಬಂಧಿಸಿದ ಸಾಮಂತ-ಮಂಢಳೇಶ್ವರರ ಕುರಿತು ರಾಜಕೀಯ ಅಧ್ಯಾಯದಲ್ಲಿ ಚರ್ಚಿಸಿರುವದರಿಂದ ಈ ಅಧ್ಯಾಯದಲ್ಲಿ ಪ್ರಾಂತಿಯ ಆಡಳಿತ ವ್ಯವಸ್ತೆಯ ವಿಷಯದಲ್ಲಿ ಸಂಕ್ಷೇಪ ಗೊಳಿಸಿದ್ದೇವೆ.

ನಾಡುಗಳ ಆಡಳಿತ ವ್ಯವಸ್ಥೆಯು ಕೇಂದ್ರಾಡಳಿತ ಮಾದರಿಯಲ್ಲಿಯೇ ರೂಪುಗೊಂಡಿದ್ದು ನಾಡುಗಳ ಆಡಳಿತ ನಡೆಸುವ ಸಾಮಂತ- ಮಂಡಳೇಶ್ವರರು ಸಹ ತಮ್ಮ ನಾಡುಗಳ ಆಡಳಿತ ಸುಗಮವಾಗಿ ನಡೆದುಕೊಂಡು ಹೋಗಲು ಕೆಲವು ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ವಿಷಯಕ್ಕನುಗುಣವಾಗಿ ಇಲಾಖೆಗಳನ್ನಾಗಿ ವಿಂಗಡಿಸಿ ಅವುಗಳ ಕಾರ್ಯ ವೈಕರಿ ನೋಡಿಕೊಳ್ಳಲು ನೇಮಕ ಮಾಡಿಕೊಳ್ಳುತ್ತಿದ್ದರು. ಉದಾ : ಸುಂಕ, ಸೈನ್ಯ ಇತ್ಯಾದಿ ಇಲಾಖೆಗಳಲ್ಲಿ ಒಬ್ಬೊಬ್ಬ ಮುಖ್ಯಾಧಿಕಾರಿಯನ್ನು ನೀಯಮಿಸುತ್ತಿದ್ದರು. ಅವರೆಲ್ಲರು ದಂಡನಾಯಕರಾಗಿದ್ದವರು. ಈ ಅಧಿಕಾರಿಗಳನ್ನು ಸಚಿವ, ಮಂತ್ರಿ, ಪ್ರಧಾನದಂಡನಾಯಕ, ಪೆರ್ಗಡೆ, ಸೇನಭೋವ, ತಳಾರರೆಂಬ ಅಧಿಕಾರಿಗಳೆಂದು ಕರೆಯಲಾಗಿದೆ.

### ಅಧಿಕಾರಿಗಳು

ನಾಡುಗಳ ಮೇಲೆ ಸಾಮಂತ ಮಂಡಳೇಶ್ವರರು ತಮ್ಮ ಮಂತ್ರಿಮಂಡಳಕ್ಕೆ ಬೇಕಾದ ಮತ್ತು ವಿವಿಧ ಇಲಾಖೆಗಳಿಗೆ ಬೇಕಾದ ಅಧಿಕಾರಿಗಳನ್ನು ನೇಮಿಸಿಕೊಂಡಿದ್ದರು. ಅಂತವರ ಕುರಿತು ಕುಕನೂರ ಶಾಸನವು ವಿವರವಾಗಿ ತಿಳಿಸುತ್ತದೆಯಲ್ಲದೆ ಅವರನ್ನು ಸ್ಥಳದ ಅಧಿಕಾರಿಗಳೆಂದು ಕರೆಯುವದು.[೮೨] ಶಾಸನ ಹೆಸರಿಸುವ ಅಧಿಕಾರಿಗಳು ಬೆಳ್ವಲ ನಾಡಿಗೆ ಸೇರಿದ ಸ್ಥಳದ ಅಧಿಕಾರಿಗಳಾಗಿದ್ದು ಎಲ್ಲರು ಬೆಳ್ವಲನಾಡನ್ನು ಆಳುವ ತೇಜಿರಾಜನ ಮಂತ್ರಿಮಂಡಳದ ಅಧಿಕಾರಿಗಳಾಗಿ ಕೆಲಸ ನಿರ್ವಸುತ್ತಿದ್ದರು. ಅವರೆಂದರೆ, ೧) ಆದಿತ್ಯ ನಾಯಕ ೨) ಮಹದೇವ ನಾಯಕ ೩) ಮಂತ್ರಿ ನರಸಿಂಹ ನಾಯಕ ೪) ದಾಸಿರಾಜ ೫) ಕರಣ ನಾಟಿಮಯ್ಯ ೬) ಬೊಪ್ಪಣ ನಾಯಕ

### ಇತರ ಅಧಿಕಾರಿಗಳು

ಮೇಲೆ ತಿಳಿಸಿದ ಕುಕನೂರ ಶಾಸನದ ಸ್ಥಳದ ಅಧಿಕಾರಿಗಳು ಮಂತ್ರಿಮಂಡಳಕ್ಕೆ ಸಂಬಂಧಿಸಿದವರು. ಇವರಲ್ಲದೆ ಜಿಲ್ಲೆಯ ಶಾಸನಗಳು ಇನ್ನು ಕೆಲವು ಅಧಿಕಾರಿಗಳ ಕುರಿತು ಉಲ್ಲೇಖ ಮಾಡುತ್ತವೆ. ಅವರಲ್ಲಿ ನಾಡಾಧಿಕಾರಿ ನಾಡತಳಾರ, ಪಸಾಯಿತ, ಸೇನಭೋವರು ಪ್ರಮುಖರಾಗಿದ್ದಾರೆ.

### ೧) ಕುಪ್ಪರಸ

ಕ್ರಿ.ಶ. ೧೧೭೮ ರ ಸುಮಾರಿಗೆ ಮನ್ನೆಯ ಕುಪ್ಪರಸ ನಾಡಾಧಿಕಾರಿಯಾಗಿದ್ದ- ನಾಡು ಯಾವುದೆಂಬುದು ತಿಳಿದು ಬರುವದಿಲ್ಲ.[೮೩]

### ೨) ಗಂಗಪಂಡಿತ

ಮೇಲಿನ ಕುಪ್ಪರಸ ನಾಡಾಧಿಕಾರಿಯಾಗಿದ್ದರೆ, ಗಂಗ ಪಂಡಿತನು ಊರತಳಾರಿಕೆಯ ಜೊತೆಗೆ ನಾಡತಳಾರಿಕೆ ಮಾಡುತ್ತಿದ್ದನು.[೮೪]

## ೩) ಸಣ್ಣಗೇತೆಯನಾಯಕ

ಸಣ್ಣಗೆತೆಯ ನಾಯಕನು ಸಿಂಧ ವೀರಬಿಜ್ಜಳ ಮತ್ತು ವೀರವಿಕ್ರಮಾದಿತ್ಯರ ಮಹಾ ಪಸಾಯಿತನಾಗಿ ಕೆಲಸ ನಿರ್ವಹಿಸುತ್ತಿದ್ದನು.[೮೫] ಇವನ ಕೆಲಸ ರಾಜ ಪರಿವಾರಕ್ಕೆ ಬಟ್ಟೆ- ಆಭರಣ ಮೊದಲಾದವುಗಳನ್ನು ಒದಗಿಸುವದಾಗಿತ್ತು.

## ೪) ಸೇನ ಭೋವರು

ಸೇನಭೂವ ಎಂಬುದು ಸೇನಭೋಗ, ಸ್ಯಾನಭೋಗ, ಕರಣಿಕ ಇತ್ಯಾದಿ ಹೆಸರಿನಿಂದ ಕರೆಯಲಾಗುತ್ತಿದ್ದು, ಇವರು ಲೆಕ್ಕ ಪತ್ರ ನೋಡಿಕೊಳ್ಳುವ ಕೆಲಸ ಮಾಡುತ್ತಿದ್ದರು. ಅಂತವರಲ್ಲಿ ಶಾಸನಗಳು ರಾಜ್ಯ ಮತ್ತು ನಾಡುಗಳ ಸೇನಭೋವರ ಕುರಿತು ಉಲ್ಲೇಖಿಸಿವೆ. ಕಲಚುರಿಬಿಜ್ಜಳನ ಕರಣಿಕರಾಗಿ ಮಧುಸುದನ, ಆದಿತ್ಯದೇವ, ಸೋಮರಾಜ, ಬೋಪ್ಪದೇವ ಮತ್ತು ಚಾವುಂಡರು ಕೆಲಸ ನಿರ್ವಹಿಸುತ್ತಿದ್ದರು.[೮೬] ಅದರಂತೆ ದೇವರ ಮನೆಯ ಸೇನಭೋವ ಬಸವರಸ, ಸೇನಭೋವ ಬಮ್ಮರಸ,[೮೭] ರಾಜಧಾನಿ ಪಟ್ಟಣ ಎರಂಬರವಿಯ ಸೇನಭೋವ ಆಚಣ್ಣ[೮೮] ಮತ್ತು ಚಿಕ್ಕ ಸೇನಭೋವ ಕೊಪ್ಪರಸರನ್ನು ಹೆಸರಿಸುತ್ತವೆ.[೮೯]

ಪ್ರಾಂತಿಯ ಆಡಳಿತದಲ್ಲಿ ಮೊದಮೊದಲು ಅನೇಕರು ಸೇನಾ ಸೇವೆಯಿಂದ ಸಾರ್ವಜನಿಕ ಸೇವೆಗೆ ಬಂದವರಾದುದರಿಂದ ಬಹಳ ಜನ ದಂಡನಾಯಕರೆಂಬ ಹೆಸರಿಗೆ ಪಾತ್ರರಾಗಿದ್ದಾರೆ. ನಾಡಿನ ವ್ಯವಹಾರದಲ್ಲಿ ಸೈನಿಕ ವ್ಯವಸ್ಥೆಗೆ ಹೆಚ್ಚಿನ ಮಹತ್ವ ನೀಡಿರುವದು ದಂಡನಾಯಕ ಎಂಬ ವಿಶೇಷಣದಿಂದ ಅರಿಯಬಹುದು. ನಾಡಿನ ಆಡಳಿತವನ್ನು (ಪ್ರಾಂತಾಡಳಿತ) ಸಮರ್ಥವಾಗಿ ನಿರ್ವಹಿಸಿದ ಮಹಾ ಸಾಮಂತ, ಮನ್ನೆಯ, ಮಹಾಮಂಡಳೇಶ್ವರರು ರಾಜ ಮತ್ತು ಪ್ರಜೆಗಳ ಮಧ್ಯದ ಸೇತುವೆಯಾಗಿ ನಿಂತು ದಂಗೆ, ಯುದ್ಧಗಳಂತ ಸಂದರ್ಭಗಳಲ್ಲಿ ರಾಜನಪರವಾಗಿ ಹೋರಾಡಿ ನಾಡಿನಲ್ಲಿ ಶಾಂತಿಯನ್ನು ಕಾಪಾಡುತ್ತಿದ್ದರು.

## ಊರ ಆಡಳಿತ

ಊರುಗಳೇ ಬೆಳೆದು ಅಥವಾ ಮಾರ್ಪಟ್ಟು ಪಟ್ಟಣ ಅಗ್ರಹಾರಗಳಾಗಿರುವದರಿಂದ ಊರಾಡಳಿತದಲ್ಲಿ ಪಟ್ಟಣ, ಅಗ್ರಹಾರ ಗ್ರಾಮಗಳು ಸೇರುತ್ತವೆ. ಊರು, ಹಳ್ಳಿ, ಗ್ರಾಮಗಳು, ಮೊದಲು ಕೆಲವು ಜನರು ಒಂದು ಕಡೆ ನೆಲೆ ನಿಂತು ಸಂಘಟಿತ ಸಮುದಾಯ ಕಟ್ಟಿದ ಸ್ಥಳಗಳೇ ಊರು-ಹಳ್ಳಿ-ಗ್ರಾಮಗಳು. ಪುರ-ಪಟ್ಟಣಗಳು ಸಕಲ ನಾಗರಿಕ ಸೌಲಭ್ಯಗಳನ್ನು ಪಡೆದ ಹಳ್ಳಿಗ್ರಾಮಗಳ ವಿಸ್ತೃತ ರೂಪಗಳು. ಮಾನಸಾರದ ಪ್ರಕಾರ ಒಂದು ಊರು ಪುರ ಎಂದು ಕರೆಯಿಸಿಕೊಳ್ಳ ಬೇಕಾದರೆ ಸುತ್ತಲೂ ತೋಟಗಳಿಂದ, ಜನದಟ್ಟಣೆಯಿಂದ, ಮಾರಾಟಗಾರರಿಂದ, ಕೊಂಡು ಕೊಳ್ಳುವ ಜನರಿಂದ ತುಂಬಿರಬೇಕು. ಮತ್ತು ಅದು ಏಳು ದೇವತೆಗಳ ದೇವಾಲಯಗಳಿಂದ ರಾಜಾಸುತ್ತಿರಬೇಕೆಂದು ಹೇಳುತ್ತದೆ.[೯೦] ಅದೇ ರೀತಿ ಬ್ರಾಹ್ಮಣ ಹಾಗೂ ಬ್ರಾಹ್ಮಣೇತರರಿಗೆ ದತ್ತಿಯಾಗಿ ಹಾಕಿಕೊಟ್ಟ ಗ್ರಾಮಗಳು ಊರು ಪಟ್ಟಣಗಳಾದರೆ, ರಾಜ್ಯದ

ಆಡಳಿತದ ಮುಖ್ಯ ಕೇಂದ್ರಗಳಾದ ರಾಜಧಾನಿಗಳು ಸಹ ನಗರ-ಪಟ್ಟಣಗಳೆಂದು ಕರೆಯಿಸಿಕೊಂಡಿವೆ. ಊರಾಡಳಿತದ ದೃಷ್ಟಿಯಿಂದ ಪಟ್ಟಣ, ಅಗ್ರಹಾರ ಮತ್ತು ಗ್ರಾಮಾಡಳಿತ ವೆಂದು ವಿಂಗಡಿಸಲಾಗಿದೆ.

**ಪುರ-ಪಟ್ಟಣ**

ಪ್ರಾಚೀನ ಕಾಲದಲ್ಲಿ ಪಟ್ಟಣಗಳ ಸಂಖ್ಯೆ ಈಗಿನಷ್ಟು ಇರದೆಹೊದರು ಅಂದು ಹಲವಾರು ನಾಡು, ಕಂಪಣಗಳ ಕೇಂದ್ರ ಸ್ಥಳಗಳು, ಅಗ್ರಹಾರ, ಪುರ, ನಗರ ಪಟ್ಟಣಗಳೆನಿಸಿದ್ದವು. ಇವೆಲ್ಲವೂ ವಿಸ್ತಾರವಾಗಿ, ದೊಡ್ಡ ವಾಣಿಜ್ಯ ಮತ್ತು ಸಾಂಸ್ಕೃತಿಕ ಕೇಂದ್ರಗಳಾಗಿ ಹೆಸರು ಪಡೆದಿದ್ದವು. ಜಿಲ್ಲೆಯಲ್ಲಿ ಅಂದು ಶ್ರೀಮದ ರಾಜಧಾನಿ ಪಟ್ಟಣ ಎರಂಬರಗೆ, ರಾಜಧಾನಿ ದೇಸಿಯ ಪಟ್ಟಣ-ಪುರ[೯೧] ಹಾಗೂ ಅಗ್ರಹಾರ ಪಟ್ಟಣಗಳ ಕುರಿತು ಶಾಸನಗಳು ಉಲ್ಲೇಖಿಸಿವೆ. ಈ ಪುರ-ಪಟ್ಟಣ-ಅಗ್ರಹಾರಗಳನ್ನು ಪಟ್ಟಣಶೆಟ್ಟಿಯರು, ನಖರರು,[೯೨] ಕರಣರು,[೯೩] ಊರೊಡೆಯರು,[೯೪] ಮಹಾಜನಬ್ರಾಹ್ಮಣ ಬ್ರಾಹ್ಮಣೇತರರು ನೋಡಿಕೊಳ್ಳುತ್ತಿದ್ದರು. ಹೆಚ್ಚಾಗಿ ಪಟ್ಟಣಗಳನ್ನು ವರ್ತಕರಲ್ಲಿಯೇ ಪ್ರಶಿದ್ಧರಾದ ಪಟ್ಟಣಸ್ವಾಮಿ, ಮಂಡಳ ಸ್ವಾಮಿ, ನಾಡ ಸ್ವಾಮಿಗಳು ಆಳುತ್ತಿದ್ದರು. ಕೆಲವುಬಾರಿ ರಾಜ ಹಾಗೂ ಸಾಮಂತ ಮಂಡಳೇಶ್ವರರ ಪತ್ನಿಯರು ನೋಡಿಕೊಳ್ಳುತ್ತಿದ್ದರು. ಇವರ ಕಾರ್ಯದಕ್ಷತೆಯಿಂದ ಪಟ್ಟಣಗಳ ಆರ್ಥಿಕ ಚಟುವಟಿಕೆಗಳು ದಿನದಿನಕ್ಕೆ ಬೆಳೆಯುತ್ತಿದ್ದವು. ಪುರ, ಪಟ್ಟಣ ಹಾಗೂ ಅಗ್ರಹಾಗಳು ಬಣಜಿಗ ವಟ್ಟನೂರರಿಂದ,[೯೫] ಮೂಲಿಗಗೌಡ, ಹುಣಿಸಮಗೌಡರಿಂದ [೯೬] ತುಂಬಿಕೊಂಡಿದ್ದವು.

ನಾಡಿನ ಮುಖ್ಯ ಸ್ಥಳಗಳಾದ ಪುರ-ಪಟ್ಟಣ-ಅಗ್ರಾಹಾರಗಳು ಸ್ವಯಂಪೂರ್ಣ ಆಡಳಿತದ ಘಟಕಗಳಾಗಿ ರಾಜ್ಯಾಡಳಿತದೊಡನೆ ಸಂಬಂಧ ಪಡೆದಿರುವುದನ್ನು ಜಿಲ್ಲೆಯ ಶಾಸನಗಳು ಸ್ಪಷ್ಟಪಡಿಸುತ್ತವೆ. ಪಟ್ಟಣಗಳು ವ್ಯಾಪಾರಿಕೇಂದ್ರಗಳಾಗಿರುವದರಿಂದ ಅಲ್ಲಿನ ಪ್ರತಿಯೊಂದು ಚಟುವಟಿಕೆಗಳಲ್ಲಿ ವರ್ತಕರ ಪ್ರಭಾವ ಎದ್ದುಕಾಣುತ್ತದೆ. ವಿವಿಧ ವೃತ್ತಿ ವ್ಯಾಪಾರಗಳನ್ನು ಕೈಕೊಂಡ ಪಟ್ಟಣಗಳ ವರ್ತಕರು ತಮ್ಮದೆಯಾದ ಸಂಘಸಂಸ್ಥೆಗಳನ್ನು ಹೊಂದಿ ಸಾಮಾಜಿಕ ಧಾರ್ಮಿಕ ಕಾರ್ಯಗಳಲ್ಲಿ ಭಾಗಿಯಾಗಿದ್ದಾರೆ. ಈ ವರ್ತಕರು ಪರಸ್ಪರ ಸಹಕಾರ ಸಹಬಾಳ್ವೆಗಳು ಎದ್ದು ಕಾಣುವ ಅಂಶಗಳಾಗಿದ್ದು ಅದನ್ನು ಹನುಮನಾಳ ಶಾಸನ ಮತ್ತು ಪುರದ ಶಾಸನಗಳು ಈ ಅಂಶವನ್ನು ಎತ್ತಿ ಹಿಡಿದಿರುವವು.

ಹನುಮನಾಳ ಶಾಸನವು ''ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಂಚಶತ ವೀರರಾಸನಲಬ್ಧಾನೇಕ ಗುಣಗಣಾಳಂಕ್ರಿತ ಸತ್ಯ ಶೌಚಾಚಾರ ಚಾರಿತ್ರ ನಯ ನಿಯಮ ವಿನ್ಯಾಸ ವೀರಬಳಂಜು ಸಮಯ ಧರ್ಮ ಪ್ರತಿಪಾಳನ ವಿಸುದ್ದ ಗುಡ್ಡ ದ್ವಜವಿರಾಜಮಾನ ವಾಸುದೇವ ಕಂಡಳಿಕ ಮಾಳಭದ್ರೋೀದ್ಭವರುಂ ಸಮಸ್ತ ಭಲ್ಲುಂಕಿ ದಣ್ಡ ಹಸ್ತರಯ್ಯವೊಳೆಪುರ ಪರಮೇಶ್ವರಾಚಾರಗಲಿಗಳಪ್ಪ ಶ್ರೀ ಮದಯ್ಯಾರ್ವ್ವರ ಸ್ವಾಮಿಗಳು

ಅಷ್ಟಾದಶ ಪಟ್ಟಣಮಂ ದ್ವಾತ್ರಿಂಸ ವೇಳಾಪುರಮುಂ ಅರವತ್ತನಾಲ್ಕು ಘಟಿಕಾಸ್ಥಾನ ಮುಂಚುವುಟ್ಟ ಯೋಗ ಪೀಠ ಮುಂ ಎಂಟುನಾಡ ಪದಿನರುವರುಂ ಗವರೆಯುಂ ಗಾತ್ರಿಗರುಂ ಬೀರರುಂ ಬೀರವಣಿಗರುಂ ತಂಬುಲಿಗ ನಾನೂರ್ವ್ವರು ಮಿಳ್ದು'' ದಾವರಿಗೆ ದಾನ ನೀಡಿರುವರು.[೯೭]

ಪುರ ಪಟ್ಟಣದಲ್ಲಿ ಬಾಹತ್ತರ ನಿಯೋಗಾಧಿಪತಿ ರೇಚಿಮಯ್ಯ ದಂಡನಾಯಕ ಅವನ ಅಧಿಕಾರಿ ಬಿಚಯ್ಯ ದಂಡನಾಯಕ ಮುಖ್ಯರಾಗಿ ಶ್ರೀಕರಣಗಳು ನವಿಲೆ, ಅಗ್ರಹಾರ ಸಿಂಧನೂರ, ಮುದನೂರು, ನಿಡುಗೋಳ ಮುಂತಾದ ಸ್ಥಳಗಳ ನಾನಾದೇಶಿ ಮುಮ್ಮರಿದಂಡಗಳು ಮಹಾನಾಡಾಗಿ ದೇವಸಭೆ, ಬ್ರಹ್ಮಸಭೆ, ರಾಜ್ಯಸಭೆಯ ಸನ್ನಿದಾನದಲ್ಲಿ ಸಭೆ ಸೇರಿದ್ದರು. ಇವರ ಜೋತೆಗೆ ಕೆಳವಾಡಿನಾಡಿನ ಮನ್ನೆಯ ಸೆಟ್ಟಿಯರು, ಎಂಟುಹಿಟ್ಟು ಸಹಿತ ಸಲವತ್ತೆಂಟು ಮನ್ನೆಯರು ಈ ಮಹಾ ಸಭೆಯಲ್ಲಿ ಬಂದು ಸೇರಿದ್ದರು. ಈ ಸಭೆಯ ನಿರ್ಣಯದಂತೆ ಪುರದ ವ್ಯಾಪಾರಿಗಳ ಮುಖ್ಯ ದೇವರಾದ ಗವರೇಶ್ವರ ದೇವರಿಗೆ ಎಲ್ಲರೂ ಸೇರಿ ದೇವರ ಸಮಸ್ತ ಕಾರ್ಯಗಳು ನಡೆಯಲು ದತ್ತಿದಾನಗಳನ್ನು ನೀಡಿರುವದನ್ನು ಶಾಸನ ಹೇಳುವದು.[೯೮]

ಅಂದು ಪಟ್ಟಣದಲ್ಲಿ ನಡೆಯುವ ಸಂತೆಯಲ್ಲಿ ಬೇರೆ ಕಡೆಯಿಂದ ಬಂದು ಸೇರುತ್ತಿದ್ದ ವ್ಯಾಪಾರಸ್ಥರು, ಅವರು ನಡೆಸುವ ಸಭೆಗಳು, ಅವುಗಳಲ್ಲಿ ಭಾಗವಹಿಸುವ ಸುಂಕದ ಅಧಿಕಾರಿಗಳನ್ನು ನೋಡಿದಾಗ ಅಂದು ಒಂದು ಪುರ ಅಥವಾ ಪಟ್ಟಣವೆನಿಸಿಕೊಂಡ ಊರು ಎಷ್ಟೊಂದು ಪ್ರಮುಖ ಸ್ಥಾನಗಳಿಸಿಕೊಂಡಿತ್ತೆಂಬುದರ ಅರಿವುಂಟಾಗುತ್ತದೆ. ಈ ಪುರ ಪಟ್ಟಣಗಳ ಸಂತೆ ಮತ್ತು ವ್ಯಾಪಾರಗಳ ಮೇಲಿನ ಸುಂಕವನ್ನು ಆಯಾ ಉಪವಿಭಾಗದ ಸುಂಕಾಧಿಕಾರಿಗಳಾದ, ಸುಂಕ ಪೆರ್ಗ್ಗಡೆ, ಪೆರ್ಗ್ಗಡೆಗಳು ಆಕರಿಸಿ ಕೊಳ್ಳುತ್ತಿದ್ದರು.

## ಅಗ್ರಹಾರ

ಅಗ್ರಹಾರಗಳ ಅಸ್ತಿತ್ವ ನಮಗೆ ಕದಂಬರ ಕಾಲದಿಂದ ದೊರಕುತ್ತಿದ್ದು ಬಹುಶಃ ಅಗ್ರಹಾರಗಳು ಅಂದಿನಿಂದಲೇ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದವೆನಿಸುತ್ತವೆ. ಕ್ರಿ.ಶ. ೩೫೨ ರ ತಗರ್ಶಿ ಮತ್ತು ಕ್ರಿ.ಶ. ೪೪೮ ರ ಗೌಜ ಗ್ರಾಮದ ಶಾಸನಗಳು ಕರ್ನಾಟಕದ ಅಗ್ರಹಾರಗಳ ಪ್ರಾಚೀನತೆಯನ್ನು ತಿಳಿಸುವ ಮೊದಲ ಶಾಸನಗಳು.[೯೯] 'ಅಗ್ರಹಾರ' ಪದವು ಅಗ್ರ=ಶ್ರೇಷ್ಠ; ಆಹಾರ=ಸ್ಥಳ ಎಂಬ ಎರಡು ಪದಗಳ ಕೂಡು ಸಮಾನ ಪದವಾಗಿದೆ. ಅದರ ಅರ್ಥ ಶ್ರೇಷ್ಟರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದಾಗುತ್ತದೆ.[೧೦೦] ಶ್ರೇಷ್ಠರೆಂದರೆ ಚಾತುರ್ವರ್ಣದಲ್ಲಿ ಅಗ್ರಸ್ಥಾನ ಪಡೆದ ಬ್ರಾಹ್ಮಣರು. ಇವರಿಗೆ ದತ್ತಿಯಾಗಿ ಬಿಟ್ಟು ಕೊಟ್ಟ ಊರುಗಳೇ ಅಗ್ರಹಾರಗಳು. ದತ್ತಿಗಳನ್ನು ಬ್ರಾಹ್ಮಣರಿಗೆ ಬಿಟ್ಟುಕೊಟ್ಟಿದ್ದರೂ ಕೆಲವು ಸಂದರ್ಭಗಳಲ್ಲಿ ಬ್ರಾಹ್ಮಣೇತರರಾದ ಶೈವ-ಜೈನರಿಗೂ ಬಿಟ್ಟು ಕೊಟ್ಟಂತಹ ಸಾಕಷ್ಟು ಉದಾಹರಣೆಗಳಿವೆ.[೧೦೧]

ಕ್ರಿ.ಶ. ೯೭೩ ರ ಮಾದಿನೂರು ಅಗ್ರಹಾರವು ಜಿಲ್ಲೆಯ ಪ್ರಥಮ ಅಗ್ರಹಾರವಾಗಿದ್ದು, ಚಾಲುಕ್ಯ ಚಕ್ರವರ್ತಿ ಎರಡನೇ ತೈಲಪ ಸಿಂಹಾಸನಕ್ಕೆ ಬಂದ ತಕ್ಷಣ ಹಲವು ಅಗ್ರಹಾರ ಸ್ಥಾಪಿಸಿದಂತೆ ಮಾದಿನೂರನ್ನು

ಅಗ್ರಹಾರವನ್ನಾಗಿ ಪರಿವರ್ತಿಸಿ, ಅದನ್ನು ಬ್ರಾಹ್ಮಣ ಕಾಶ್ಯಪಗೊತ್ರದ ಪವಿತ್ರನಾದ ರೈಕೆಯ ದ್ವೇದಿಚಟ್ಟೋಪಾಧ್ಯಾಯ ಸೋಮಯಾಜಿಗೆ ಸರ್ವನಮಸ್ಯವಾಗಿ ಬಿಟ್ಟುಕೊಟ್ಟನು. ಗ್ರಾಮ ದತ್ತಿಯಲ್ಲಿಯು ಸಹ ಮಾದಿನೂರವೇ ಮೊದಲ ಗ್ರಾಮದತ್ತಿ ಗ್ರಾಮವಾಗಿದೆ.[೧೦೨]

ಒಂದು ಊರನ್ನು ಅಗ್ರಹಾರವನ್ನಾಗಿ ಮಾರ್ಪಡಿಸುವ ಉದ್ದೇಶ ಬ್ರಾಹ್ಮಣರಿಗೆ ದಾನವಾಗಿ ಕೊಡುವದರ ಮೂಲಕ ಪುಣ್ಯಗಳಿಸಿ ಕೊಳ್ಳಬಹುದಾಗಿತ್ತಾದರೂ, ಬ್ರಾಹ್ಮಣರಿರುವ ಊರುಗಳ ಮೇಲೆ ಪ್ರಭುತ್ವದ ದಾಳಿ ಮತ್ತು ತೆರಿಗೆ ಇತ್ಯಾದಿ ಹಿಂಸೆಗಳಿಂದ ಮುಕ್ತವಾಗಿಡುವುದೆ ಇದರ ಮುಖ್ಯ ಗುರಿಯಾಗಿತ್ತು. ರಾಜರಿರಂದ ಸಾಮಂತ- ಮಂಡಲೇಶ್ವರರಿಂದ ದಾನ ಪಡೆದ ಬ್ರಾಹ್ಮಣರು ಆಯಾ ಅಗ್ರಹಾರಗಳ ಸಂಪೂರ್ಣ ಹೊಣೆ ಹೊತ್ತು ಅಲ್ಲಿಯ ಆದಾಯಗಳನ್ನು ರಾಜ್ಯಕ್ಕೆ ಸಲ್ಲಿಸದೆ, ಅವರು ಸರ್ವಬಾದಾಪರಿಹಾರವಾಗಿ ಉಪಭೋಗಿಸಲು ಅರ್ಹರಾಗಿದ್ದರು. ಅಗ್ರಹಾರ ಒಡೆತನ ಹೊಂದಿದ ಬ್ರಾಹ್ಮಣರು ಮಹಾಜನರೆನಿಕೊಂಡಿದ್ದರು. ಜೊತೆಗೆ ಅಗ್ರಾಹಾರದ ಚಟುವಟಿಕೆಗಳಲ್ಲಿ ಭಾಗವಹಿಸುವದರ ಮೂಲಕ ಆ ಊರಿನ ಪ್ರಭು, ಊರೊಡೆಯರೆಂದು ಕರೆಯಿಸಿಕೊಂಡರು, ಅಗ್ರಾಹಾರಗಳ ಮೇಲ್ವಿಚಾರಣೆಗಾಗಿ ಅಧಿಕಾರಿಗಳನ್ನು ನೇಮಕ ಮಾಡಲಾಗುತ್ತಿತ್ತು. ಅವರನ್ನು ಊರೋಡೆಯರೆಂದು, ಪ್ರಭುಗಳೆಂದು ಶಾಸನಗಳು ಕರೆದಿವೆ. ಇವರಲ್ಲದೆ ಬ್ರಾಹ್ಮಣೇತರ ಅಗ್ರಾಹಾರಗಳಲ್ಲಿ ಅಧಿಕಾರಿಗಳ ಹುದ್ದೆಗಳು ಹಡಪವಳ, ಹಡವಳ ಹೆಸರಿನಿಂದ ಊರೊಡೆಯರಾಗಿ ಆಡಳಿತ ನಡೆಸುತ್ತಿದ್ದುದನ್ನು ಶಾಸನಗಳು ವಿವರಿಸುವವು.

**ಊರೋಡೆಯರು**

**೧) ಸೋಮಯಾಜಿ ಚಟ್ಟೋಪಾಧ್ಯಾಯ**

ಮಾದಿನೂರದ ಊರೋಡೆಯನಾಗಿ ಕಾಶ್ಯಪಗೋತ್ರದ ರೈಕೆಯ ಚಟ್ಟೋಪಾಧ್ಯಾಯ ಸೋಮಯಾಜಿಯು ಆಡಳಿತ ನಡೆಸುತ್ತಿದ್ದನು.[೧೦೩]

**೨) ಕೊಂಡಯ್ಯವಾರಿ ಅಯ್ಯ**

ಈತನು ಬೈಳ್ವೆನೆಗೆ (ಯಲಬುರ್ಗಾ ತಾಲೂಕಿನ ಬೆಳಗೇರಿ) ಯ ಊರೋಡೆಯನಾಗಿ ಆಡಳಿತ ನಿರ್ವಸುತ್ತಿದ್ದ.[೧೦೪]

**೩) ಸೋಮನಾಥ**

ಇವನು ಪುಲಿಗೆಯ ಊರೋಡೆಯನಾಗಿದ್ದನಲ್ಲದೆ ಅಲ್ಲಿತನ್ನ ಹೆಸರಿನಿಂದ ಶಿವನ ದೇವಾಲಯವನ್ನು ಕಟ್ಟಿಸಿದನು.[೧೦೫]

**೪) ಏಚಿಮಯ್ಯ ನಾಯಕ**

ಇವನು ಶ್ರೀಮನ್ಮಹಾ ಅಗ್ರಾಹಾರ ಕೌರೂರದ (ಕವಲೂರ)ಮಹಾಪ್ರಭುವಾಗಿ ಕೆಲಸ ನಿರ್ವಹಿಸುತ್ತಿದ್ದನು.[೧೦೬] ಇವನು ಹಡವಳ ಪಡೆವಳರ ಎಂಬ ನಾಮಾಂಕಿತ ಹೊಂದಿದ್ದ.

### ೫) ಬಸವರಸ, ಅಯ್ಯಪರಸ, ಕೇಶವದೇವ

ಪುರ ಗ್ರಾಮದ ಊರೋಡೆಯರಾಗಿ ಬಸವರಸ, ಅಯ್ಯಪರಸ ಮತ್ತು ಕೇಶವದೇವರು ಸೇರಿಕೊಂಡು ಕೆಲಸ ನಿರ್ವಹಿಸುತ್ತಿದ್ದರು.[೧೦೭]

### ೬) ನಾಗದೇವ

ಕೋಳಿವಾಡದ ಊರೋಡೆಯನಾಗಿದ್ದ ನಾಗದೇವ ಕಲ್ಲೂರದ ಊರೋಡೆಯನಾಗಿ ಕೆಲಸ ನಿರ್ವಹಿಸುತ್ತಿದ್ದನು.[೧೦೮]

### ೭) ಬಮ್ಮಿದೇವ

ಬಮ್ಮಿದೇವನು ಕುಕ್ಕನೂರದ ಊರೋಡೆಯನಾಗಿದ್ದುದನ್ನು ಶಾಸನವು ''ಪಡುವಳುರೋಡೆಯನ ನೊಲದಿಂ ಬಂಮ್ಮಿ ದೇವನಂ ಧರೆ ಪೊಗುಳ್ಗ೦'' ಎಂದು ಹೊಗಳುವದು.[೧೦೯]

ಅಗ್ರಹಾರದ ಕುರಿತು ಸಮಾಜ ವ್ಯವಸ್ಥೆ ಮತ್ತು ಶಿಕ್ಷಣ ಮತ್ತು ಸಾಹಿತ್ಯ ಅಧ್ಯಯನಗಳಲ್ಲಿ ಹೆಚ್ಚಿನ ವಿಷಯದೊಂದಿಗೆ ಚರ್ಚೆಮಾಡಿದ್ದರಿಂದ ಇಲ್ಲಿ ಕೇವಲ ಅವುಗಳ ಆಡಳಿತದ ಮತ್ತು ಅಧಿಕಾರಿ ಊರೋಡೆಯರ ಕುರಿತು ಮಾತ್ರ ಚರ್ಚಿಸಲಾಗಿದೆ.

### ಊರಾಡಳಿತ

ಪ್ರಾಚೀನ ಕಾಲದಿಂದಲೂ ಆಡಲಿತದ ಚಿಕ್ಕ ಘಟಕ ಊರು (ಗ್ರಾಮ) ಊರುಗಳ ಅಡಿಪಾಯದ ಮೇಲೆ ನಾಡು, ರಾಜ್ಯ, ದೇಶಗಳು ನಿಂತಿವೆ. ಒಂದು ಊರು ರಾಜನಿಗೆ ಸಲ್ಲಿಸಬೇಕಾದ ವಾರ್ಷಿಕ ಸುಂಕವನ್ನು ಸಲ್ಲಿಸಿದರೆ ಸಾಕು ವರ್ಷದುದಕ್ಕೂ ಒಂದು ಪ್ರತ್ಯೇಖ ರಾಜ್ಯವೆಂಬಂತೆ ಸ್ವತಂತ್ರರೀತಿಯಲ್ಲಿ ಆಡಳಿತ ನಡೆಸಬಹುದಾಗಿತ್ತು. ಇಡೀ ದೇಶಕ್ಕೆ ದುಸ್ತಿತಿ ಬಂದರೆ ಅಥವಾ ಆ ಊರಿನ ಜನರು ಸೇರಿ ಪರಿಹರಿಸಿ ಕೊಳ್ಳಲಾಗದ ಯಾವುದೇ ಸಮಸ್ಯೆ ಎದುರಾದಾಗ ಮಾತ್ರ ಊರಿಗೆ ಕೇಂದ್ರದ ಪ್ರವೇಶ ವಾಗುತ್ತಿದ್ದಂತೆ ತೋರುತ್ತದೆ.[೧೧೦] ಊರುಗಳು ರಾಜ್ಯಾಡಾಳಿತದಿಂದ ದೂರವಿರುತ್ತಿದ್ದರೂ, ಯುದ್ಧ, ಗಲಭೆಗಳಂತಹ ವಿಶೇಷ ಸಂದರ್ಭಗಳಲ್ಲಿ ರಾಜ್ಯದೊಡನೆ ಸಂಪರ್ಕ ಪಡೆದು ಅದಕ್ಕೆ ಸಹಾಯ ನೀಡುವದು ಪಡೆಯುವದು ಅವಶ್ಯವಾಗಿತ್ತು. ಪ್ರಾಚೀನ ಮತ್ತು ಮಧ್ಯಕಾಲಿನ ಕರ್ನಾಟಕದ ಜನರು ತಮ್ಮ ಹಿತಾಸಕ್ತಿಗಳ ರಕ್ಷಣೆಗೆ ಮತ್ತು ಚಿಕ್ಕ ಪುಟ್ಟ ಸಮಸ್ಯೆಗಳ ನಿವಾರಣೆಗೆ ಆಯಾ ಊರುಗಳ ಉನ್ನತ ವ್ಯಕ್ತಿಗಳ ಮೊರೆ ಹೊಗುತ್ತಿದ್ದರು. ನ್ಯಾಯದ ಪಕ್ಷವಹಿಸಿದ ಇವರು ಊರಿನ ಜನರ ಪ್ರತಿನಿಧಿಗಳಾಗಿದ್ದರು. ಮತ್ತು ಊರಿನ ಸಮಸ್ತ ಆಗುಹೋಗುಗಳಿಗೆ ಕಾರಣರಾಗಿ ಜನತೆ ಹಾಗೂ ರಾಜ್ಯಗಳ ಮಧ್ಯದ ಕೊಂಡಿಯಂತಿದ್ದರು. ಅಂತವರಲ್ಲಿ ಗಾವುಂಡರು, ಸೇನಭೋವರು, ಪೆರ್ಗ್ಗಡೆಗಳು ಮತ್ತು ತಳಾರರು ಪ್ರಮುಖರು.

**ಗಾವುಂಡ**

ಮಧ್ಯಕಾಲಿನ ಇತಿಹಾಸದ ಊರು ಆಡಳಿತದಲ್ಲಿ ಬೌದ್ಧಿಕವಾಗಿ ಹೆಚ್ಚುಮಹತ್ವದ ಪಾತ್ರ ನಿರ್ವಹಿಸಿದವರೆಂದರೆ ಅಲ್ಲಿಯ ಗಾವುಂಡರು. ಇವರು ಮೊದಲಿನಿಂದಲೂ ವಂಶ ಪಾರಂಪರ್ಯವಾಗಿ ಮುಂದುವರೆದು ಕೊಂಡು ಬರುತ್ತಿದ್ದರು ಇದನ್ನೆ ಶಾಸನಗಳು 'ಮೂಲಿಗ' ಎಂಬ ಪಾರಿಭಾಷಿಕ ಶಬ್ದದಿಂದ ಕರೆದು ಅವರ ಸಂಖ್ಯೆ ಹೆಚ್ಚಾದಾಗ ಮೂಲಿಗ ಸಮಯ (ಸಮುದಾಯ) ವೆಂದು ಮುಖ್ಯಸ್ಥ ಗಾವುಂಡನನ್ನು 'ಪ್ರಭುಗಾವುಂಡ,' 'ಮೂಲಿಗ ಮುಖ್ಯ'ನೆಂದು ಕರೆದಿವೆ.[೧೧೧] ಊರ್ಗ್ಗಾವುಂಡ ಊರಿನ ಆಡಳಿತದ ಮುಖ್ಯಸ್ಥನಾಗಿರುತ್ತಿದ್ದ. ಶಾಸನಗಳು ಸಹ ಊರ್ಗ್ಗಾವುಂಡ, ಗಾವುಂಡ ಎಂದೆ ಕರೆಯುತ್ತಿದ್ದು ಇಂದಿನ ಗೌಡರು ಹಿಂದಿನ ಗಾವುಂಡರಾಗಿರುವದು ಸ್ಪಷ್ಟ. ರಾಜ್ಯದ ಪ್ರತಿಯೊಂದು ಊರಿಗೂ ಒಬ್ಬ ಗಾವುಂಡ ನಿರುತ್ತದ್ದ. ಕೆಲವೊಮ್ಮೆ ಅವರ ಸಂಖ್ಯೆ ಹೆಚ್ಚಾಗುತ್ತಿತ್ತು. ಉದಾ : ಜಿಲ್ಲೆಯ ಮಂಕಲ್ಕೇರಿ ಊರಿಗೆ ಬೊಮ್ಮಗಾವುಂಡನ ಜೊತೆಗೆ ಎಂಟು ಗಾವುಂಡರಿದ್ದುದನ್ನು,[೧೧೨] ಅದೇ ರೀತಿ ಸಿರಗುಪ್ಪದ ರಾಜಮಗಾವುಂಡ, ನಿರಮೊಪ್ಪ ಆಚಗಾವುಂಡರ ಹೆಸರುಗಳು ಶಾಸನಗಳಿಂದ ತಿಳಿದು ಬರುವವು.[೧೧೩]

ಗಾವುಂಡರಲ್ಲದೆ ಊರುಗಳನ್ನು ದಂಡನಾಯಕರು ಅರಸ-ಮಂಡಳೇಶ್ವರರ ಅರ್ಧಾಂಗಿಯರು ಸಹ ಆಳಿರುವುದನ್ನು ಶಾಸನಗಳು ಹೇಳುವವು. ಕಿಸುಕಾಡು-೭೦ ರ ಗ್ರಾಮವಾದ ಕೆಲ್ಲಂಗೆರೆಯ ಮೇಲೆ ಲಕ್ಷ್ಮೀದೇವ ದಂಡನಾಯಕ ಆಡಳಿತ ನಡೆಸಿದ್ದರೆ,[೧೧೪] ಮಹಾಮಂಡಳೇಶ್ವರ ಚಾವುಂಡರಸದೇವನ ಅರ್ಧಾಂಗಿ ಮಹದೇವಿಯು ಕಲ್ಲೂರ ಗ್ರಾಮವನ್ನು ಗಂಡನ ದಯೆಯಿಂದ ಆಳುತ್ತಿದ್ದುದನ್ನು ಕ್ರಿ.ಶ. ೧೧೫೪ ರ ಶಾಸನ ಉಲ್ಲೇಖಿಸುತ್ತದೆ.[೧೧೫]

ಗ್ರಾಮದ ಸಂಪೂರ್ಣ ಹೊಣೆ ಹೊತ್ತುಕೊಂಡ ಗಾವುಂಡನ ಕಾರ್ಯ ಚಟುವಟಿಕೆಗಳು ಹಲವಾರಿದ್ದವು. ಆದಾಗ್ಯೂ ಅವನು ಸರ್ವಾಧಿಕಾರಿಯಂತೆ ನಡೆದು ಕೊಳ್ಳುತ್ತಿರಲಿಲ್ಲ. ಊರ ಹಿರಿಯರು ನಿಷ್ಠಾವಂತ ಗಣ್ಯರ ಒಂದು ಸಭೆಯನ್ನು ನಡೆಯಿಸಿ ಅವರ ಸಲಹೆಯಂತೆ ತನ್ನ ಅಧಿಕಾರ ಚಲಾಯಿಸುತ್ತಿದ್ದನು. ಅಂತಿಮ ಅಧಿಕಾರ ಅವನೆದೆಯಾಗಿತ್ತು. ಗಾವುಂಡ ನಡೆಸುವ ಇಂತಹ ಸ್ಥಾನಿಕ ಸಭೆಯನ್ನು 'ಗ್ರಾಮಸಭೆ-ಜನತಾಸಭೆ' ಎಂದು ಕರೆಯಲಾಗಿದೆ.[೧೧೬] ಈ ಗ್ರಾಮಸಭೆಗಳಲ್ಲಿ ಸದಸ್ಯರಾಗುತ್ತಿದ್ದವರು ಅರಸನಿಂದ ನಿಯುಕ್ತರಾದವರಲ್ಲದೆ, ಜನರಿಂದ ಚುನಾಯಿತ ಊರಿನ ಪ್ರಭುಗಳು, ಮಹಾಜನರು, ಒಕ್ಕಲು, ಎಂಟು ಹಿಟ್ಟು, ಕರಣಗಳು, ಸೇನಭೋವ, ಶೆಟ್ಟಿ ಇತ್ಯಾದಿ ಜನರಾಗಿದ್ದರು.

ರಾಜ್ಯಕ್ಕೆ ಸಲ್ಲಿಸಬೇಕಾದ ಸುಂಕವಸೂಲಿಯಲ್ಲಿ, ರಾಜನಿಗೆ ಸೈನಿಕರನ್ನು ಒದಗಿಸುವದರಲ್ಲಿ, ಊರಿನ ಸಮಸ್ಯೆಗಳನ್ನು ಪರಿಹರಿಸುವಲ್ಲಿ, ಅದರ ಅಭಿವೃದ್ಧಿಯಲ್ಲಿ ಗ್ರಾಮಸಭೆಯ ಸದಸ್ಯರು ಬಹಳ ಶ್ರಮವಹಿಸುತ್ತಿದ್ದರು. ಊರಲ್ಲಿ ನಡೆಯುತ್ತಿದ್ದ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಗಾವುಂಡ ಅವಶ್ಯವಾಗಿ ಇರುತ್ತಿದ್ದನಲ್ಲದೆ

ದೇವಾಲಯ ಇತ್ಯಾದಿಗಳಿಗೆ ದಾನ ಬಿಡುವಾಗಲು ಗಾವುಂಡ ಇತರರೊಂದಿಗೆ ತಪ್ಪದೆ ಉಪಸ್ಥಿತ ನಿರುತ್ತಿದ್ದನು. ಮತ್ತು ಭೂಮಿಯನ್ನು ದಾನ ಇಲ್ಲವೆ ದತ್ತಿಯಾಗಿ ಕೊಡುವ ಸಂದರ್ಭದಲ್ಲಿ ಗಾವುಂಡನ ಉಲ್ಲೇಖ ತಪ್ಪದೆ ಸ್ಫೂರ್ತಿಸುವದರಿಂದ ಅವನು ಕಂದಾಯ ವಿಭಾಗಕ್ಕೂ ಸಂಬಂಧಿಸಿದ್ದನೆಂದು ಸ್ಪಷ್ಟವಾಗುತ್ತದೆ.[೧೧೭] ಗಾವುಂಡನು ನ್ಯಾಯಧೀಶನು ಆಗಿದ್ದು ಗ್ರಾಮ ಸಭೆಯನ್ನು ಕರೆದು ಊರಿನ ಪ್ರತಿಯೊಂದು ತಕರಾರು ವ್ಯಾಜ್ಯಗಳನ್ನು ಪರಿಶಿಲಿಸಿ ನ್ಯಾಯನಿರ್ಣಯ ಕೈಕೊಳ್ಳುತ್ತಿದ್ದನು. ಸಾರ್ವಜನಿಕ ಸೇವೆಗಳಾದ ಕೆರೆ, ಬಾವಿ ಕಟ್ಟಿಸುವದು ಕಳ್ಳರನ್ನು ನಿಯಂತ್ರಿಸುವದು ಗಾವುಂಡನ ಕರ್ತವ್ಯಗಳಾಗಿದ್ದವು.[೧೧೮]

## ಪೆರ್ಗ್ಗಡೆ-ಹೆರ್ಗ್ಗಡೆ

ಶಾಸನಗಳಲ್ಲಿ ಪೆರ್ಗ್ಗಡೆಗಳ ಉಲ್ಲೇಖದೊಂದಿಗೆ ಕೆಲವು ಜನರ ಹೆಸರಿನೊಂದಿಗೆ 'ದಂಡನಾಯಕ' ಎಂಬುದು ಬರುತ್ತದೆ. ಇವರು ಮೂಲತಃ ಸುಂಕದ ಅಧಿಕಾರಿಗಳಾಗಿದ್ದು ಮುಂದೆ ದಂಡನಾಯಕರಾಗಿ ಬಡತಿ ಹೊಂದಿರಬೇಕು. ಜಿಲ್ಲೆಯ ಶಾಸನಗಳು ಇಂತಹ ಕೆಲವು ಪೆರ್ಗ್ಗಡೆಗಳ ಕುರಿತು ಹೆಸರಿಸುತ್ತವೆ.

### ೧) ಚಾವುಂಡಮಯ್ಯ

ಈತ ಚಾವುಂಡರಾಯನ ಮನ್ನೆಯ ಸಾಮ್ಯದಲ್ಲಿ ಅವನ ಪೆರ್ಗ್ಗಡೆಯಾಗಿ ಸುಂಕವನ್ನು ಆಕರಿಸಿ ಕೊಳ್ಳುತ್ತಿದ್ದ.[೧೧೯]

### ೨) ಮಾಕಿಮಯ್ಯ

ಈತನು ಕುರುವರ ಹೊಚಿಮಯ್ಯನ ಮಗನಾಗಿದ್ದು ಸುಂಕದ ಹೆಗ್ಗಡೆಯಾಗಿದ್ದ.[೧೨೦]

### ೩) ವಾಮಯ್ಯ-ಜಕ್ಕಿರಾಜ

ವಾಮಯ್ಯ ಹೆಗ್ಗಡೆ ಮತ್ತು ಸುಂಕದ ಜಕ್ಕಿರಾಜರು ಸುಂಕಿಗರಾಗಿದ್ದುದನ್ನು ಕಲ್ಲೂರ ಶಾಸನ ಹೇಳುವುದು.[೧೨೧]

ಹೀಗೆ ಹೆಗ್ಗಡೆ-ಪೆರ್ಗ್ಗಡೆಗಳಾಗಿ ಊರ ಗಾವುಂಡರ ಆಪ್ತರಾಗಿ ಕೆಲಸ ನಿರ್ವಹಿಸುತ್ತಿದ್ದರು. ಆದರೆ ಗಾವುಂಡ ಪೆರ್ಗ್ಗಡೆಗಳ ಮಧ್ಯದ ಸಂಬಂಧ ತಿಳಿದುಬರುವದಿಲ್ಲ. ಗಾವುಂಡ ಊರಿಗೆ ಮುಖ್ಯಸ್ಥನಾದರೆ ಪೆರ್ಗ್ಗಡೆಗಳು ಒಂದಕ್ಕಿಂತ ಹೆಚ್ಚು ಊರುಗಳ ಸುಂಕವನ್ನು ಆಕರಿಸುವವರಾಗಿದ್ದರು.

## ಸೇನ ಭೋವ

ಕರಣಿಕ, ಸೇನಭೋವ, ಕುಳಕರಣಿ ಈ ಮೂರು ಶಬ್ದಗಳು ಒಂದೇ ಅರ್ಥವನ್ನು ಒಂದೇ ಹುದ್ದೆಯನ್ನು ನಿರ್ದೇಶಿಸುತ್ತವೆಯಾದರೂ ಅವರು ಮಾಡುವ ಕೆಲಸ ಒಂದೇ ತೆರನಾಗಿದ್ದರೂ ಅವರ ಅಧಿಕಾರ ವ್ಯಾಪ್ತಿ ಹಾಗೂ ಹುದ್ದೆಯ ಸ್ಥಾನ ಮಾತ್ರ ಬೇರೆಯಾಗಿವೆ. ಕರಣಿಕ ಒಂದು ಉರಿಗೆ ಮಾತ್ರ ಸಂಬಂಧಿಸಿದವನಲ್ಲ ಅವನು ರಾಜ, ಮಹಾಮಂಡಳೇಶ್ವರ ಮತ್ತು ಸಾಮಂತರಸರ ಕಛೇರಿಯಲ್ಲಿ ಲೆಕ್ಕ

ಬರೆಯುವ ಅಧಿಕಾರಿಯಾಗಿದ್ದ. ಊರುಗಳ ಲೆಕ್ಕವನ್ನು ಬರೆಯುವವ ಸೇನ ಭೋವ ಇವನು ಊರ ಒಡೆಯನಾದ ಗಾವುಂಡನ ಕೈ ಕೆಳಗಿನ ಅಧಿಕಾರಿ. ಕುಳಕರಣಿಗಳು ಸಹ ಗಾವುಂಡರ ಕೆಳಗಿನ ಅಧಿಕಾರಿ ಮತ್ತು ಸೇನ ಭೋವನ ಸ್ಥಾನವೇ ಅವನಿಗೂ ಇತ್ತು. ಶಾಸನಗಳು ಕುಳಕರಣಿಯಂದೆ ಕರೆಯುವವು. ಜಿಲ್ಲೆಯ ಶಾಸನಗಳಲ್ಲಿ ಕೇಲವರ ಹೆಸರುಗಳು ಮಾತ್ರ ಕಂಡುಬರುತ್ತವೆ.

### ೧) ಬಸವರಸ ಮತ್ತು ಸೇನಭೋವ ಬಮ್ಮರಸ

ಪುರ ಶಾಸನವು ದೇವರ ಮನೆಯ ಸೇನಭೋವನಾಗಿ ಬಸವರಸ ಮತ್ತು ಸೇನಭೋವ ಬಮ್ಮರಸರು ಕೆಲಸ ನಿರ್ವಹಿಸಿದ್ದನ್ನು ಹೇಳುವದು.[೧೨೨]

### ೨) ಕೋಪ್ಪ

ಕಲ್ಲೂರ ಶಾಸನವು ಚಿಕ್ಕ ಸೇನಭೋವನಾಗಿ ಕೋಪ್ಪನಾಗಿದ್ದನೆಂದು ಹೆಸರಿಸುತ್ತದೆ.[೧೨೩]

## ತಳಾರ

ಪ್ರಾಚೀನ ಮತ್ತು ಮಧ್ಯಕಾಲಿನ ಚರಿತ್ರೆಯಲ್ಲಿ 'ತಳಾರ'ರು ಎಂಬ ಚಿಕ್ಕ ಹುದ್ದೆಯ ಅಧಿಕಾರಿಗಳು ಮಹತ್ವದ ಪಾತ್ರ ವಹಿಸುದುದು ಶಾನಗಳಿಂದ ತಿಳಿದು ಬರುತ್ತದೆ. ಇವರು ಊರುಗಳಲ್ಲಿಯ ಇಂದಿನ 'ತಳವಾರ'ರಾಗಿದ್ದಾರೆ. ಈ ಶಬ್ದ 'ಸ್ಥಳ' ಇಲ್ಲವೆ 'ತಲ್ವಾರ್' (ಖಡ್ಗ)ಮೂಲದಿಂದ ಬಂದಿರಬಹುದು. ಪ್ರಮುಖವಾಗಿ ಈತನ ಕೆಲಸ ಊರ ರಕ್ಷಣೆ, ಅಂದರೆ ಕಳ್ಳರಿಂದ, ಸಮಾಜ ದ್ರೋಹಿಗಳಿಂದ ರಕ್ಷಣೆ ಮಾಡುವುದು ಹಗಲು ರಾತ್ರಿ ಎನ್ನದೆ ಊರನ್ನು ರಕ್ಷಿಸುವ ಈತನಿಗೆ ಖಡ್ಗದ ಅಂದರೆ ತಲ್ವಾರದ ಅವಶ್ಯಕತೆ ಯಾವಾಗಲೂ ಇರುತ್ತಿತ್ತು. ಹೀಗಾಗಿ ಯಾವಾಗಲೂ ಖಡ್ಗಧಾರಿಯಾಗಿರುವ ಈತನನ್ನು 'ತಳಾರ'ನೆಂದು ಕರೆದಿರಬೇಕು.[೧೨೪] ಇವನ ಕುರಿತು ವಡ್ಡಾರಾಧನೆ ಮತ್ತು ನಯಸೇನ ಧರ್ಮಾಮೃತಗಳು ವಿಸ್ತ್ರತ ಮಾಹಿತಿ ನೀಡುತ್ತವೆ.[೧೨೫] ಜಿಲ್ಲೆಯ ಶಾಸನಗಳು ಸಹ ಇಬ್ಬರು ತಳಾರರ ಕುರಿತು ಉಲ್ಲೇಖ ಮಾಡುವವು.

### ೧) ಗಂಗ ಪಂಡಿತ

ಅಗಳಕೇರಿಯ ಶಾಸನವು ಗಂಗ ಪಂಡಿತ ಊರತಳಾರಿಕೆ ಮಾಡುತ್ತಿದ್ದನಲ್ಲದೆ ನಾಡತಳಾರಿಕೆಯನ್ನು ಸಹ ನೊಡಿಕೊಂಡು ಹೋಗುತ್ತಿದ್ದನೆಂದು ಹೇಳುವುದು.[೧೨೬]

### ೨) ಕಾಳಭೋವ

ಸಿರಗುಪ್ಪದ ಶಾಸನವು ಊರ ಅಳಿವಿನಲ್ಲಿ ಹೊರಾಡಿ ತಳಾರನು ಮರಣಿಸಿದ್ದನ್ನು ಹೇಳುತ್ತದೆ. ಸಿರಗುಪ್ಪದ ಆಚ ಗಾವುಣ್ಡನು ಊರ ಆಡಳಿತ ನಡೆಸುತ್ತಿದ್ದಾಗ ತುರು (ಗೋವು)ಗಳ್ಳರೊಡನೆ ಹೋರಾಡಿ ತಳಾರಿ ಕಾಳಭೋವನು ಸುರಲೋಕಕ್ಕೆ ಸಂದ ವಿಷಯವನ್ನು ತಿಳಿಸುವದು.[೧೨೭]

## ನ್ಯಾಯಾಡಳಿತ

ಆಡಳಿತ ನಡೆಸುವ ರಾಜನ ಮುಖ್ಯ ಕರ್ತವ್ಯ ಶಿಷ್ಟ ಪ್ರತಿಪಾಲನೆ, ದುಷ್ಟನಿಗ್ರಹವೆ ನ್ಯಾಯಾಡಳಿತದ ಮುಖ್ಯ ಅಂಶ. ಇದರ ಕುರಿತು ಕಾಮಂದಕನ ನೀತಿಸಾರವು ಅಪರಾದಕ್ಕೆ ತಕ್ಕ ಶಿಕ್ಷೆಯನ್ನೆ ವಿಧಿಸಬೇಕೆಂದು ಹೇಳುವದು.[೧೨೮] ಮಧ್ಯಕಾಲಿನ ರಾಜರು ದಂಡ ನೀತಿಯನ್ನು (ಶಿಕ್ಷೆ) ಹೇಗೆ ಯಾವ ರೀತಿ ಜಾರಿಗೆ ತಂದಿದ್ದರೆಂಬುದರ ಕುರಿತು, ಅದರ ಸ್ವರೂಪ ಎಂತಹವೆಂಬುದರ ಚಿತ್ರಣ ಶಾಸನಗಳಲ್ಲಿ ದೊರಕುವದಿಲ್ಲ. ಜಿಲ್ಲೆಯ ಶಾಸನಗಳಲ್ಲಿ ದುಷ್ಟನಿಗ್ರಹ, ಶಿಷ್ಟ ಪ್ರತಿವಾಳನಪ್ಪ, ದುಷ್ಟನಿಗ್ರಹ, ಕಷ್ಟ ಪ್ರತಿಪಾಲನದಿಂದ ರಾಜ್ಯವಾಳುತ್ತಿದ್ದ ಕುರಿತು ಮಾತ್ರ ಉಲ್ಲೇಖಬರುವದು. ಧರ್ಮಾಧ್ಯಕ್ಷ, ತಳಾರರ ಉಲ್ಲೇಖಗಳನ್ನು ಗಮನಿಸಿದರೆ ಆಡಳಿತಗಾರರು ನ್ಯಾಯಾಡಳಿತಕ್ಕೆ ಹೆಚ್ಚಿನಸ್ಥಾನ ನೀಡಿದ್ದರೆಂದು ಹೇಳಬಹುದು. ಇವುಗಳನ್ನು ಮಂದಿಟ್ಟುಕೊಂಡು ಸಮಕಾಲಿನ ಸೋಮ ದೇವಸೂರಿಯ ಯಶಸ್ತಿಲಕ, ಶಿವಕೋಟ್ಯಾಚಾರ್ಯನ ವಡ್ಡಾರಾಧನೆ ಗ್ರಂಥಗಳನ್ನು ಅವಲೋಕಿಸಿ ಜಿಲ್ಲೆಯ ನ್ಯಾಯಾಡಳಿತದ ಕುರಿತು ಅರಿಯಲು ಪ್ರಯತ್ನಿಸಲಾಗಿದೆ.

ಎಲ್ಲಾ ಕಾಲದೇಶಗಳಲ್ಲಿ ಆಡಳಿತ ನಡೆಸಿದ ಅರಸು ಮನೆತನಗಳ ರಾಜರ ಕರ್ತವ್ಯಗಳಲ್ಲಿ ಪ್ರಮುಖ ಕರ್ತವ್ಯವೆಂದು ಪರಿಗಣಿಸಿದ್ದು ಈ ನ್ಯಾಯವನ್ನು. ಅವರ ಈ ಕರ್ತವ್ಯಗಳಲ್ಲಿ ಸಮಾಜ ಘಾತುಕರನ್ನು, ರಾಜಾಜ್ಞೆಗಳನ್ನು ಉಲ್ಲಂಘಿಸಿದವರನ್ನು, ಪ್ರಜಾಪಿಡಿತರನ್ನು ಹಿಡಿದು ಶಿಕ್ಷಿಸುವುದು ಮತ್ತು ವ್ಯಕ್ತಿಗಳ ಅಥವಾ ಪಕ್ಷ-ಪಂಗಡಗಳ ನಡುವಣ ವಿವಾದವನ್ನು ಬಗೆಹರಿಸುವದಾಗಿತ್ತು. ಪ್ರಾಚೀನ ಕರ್ನಾಟಕದಲ್ಲಿ ಹಲವಾರು ವೇಳೆ ರಾಜನೇ ನ್ಯಾಯವಿಚಾರಣೆ ಮಾಡುತ್ತಿದ್ದ. ಅಪರಾಧಕ್ಕಿಂತಲೂ ಹೆಚ್ಚು ಕ್ರೂರವಾದ ಶಿಕ್ಷೆಯನ್ನು ವಿಧಿಸುವದರಿಂದ ರಾಜನು ಪ್ರಜೆಗಳ ದೃಷ್ಠಿಯಲ್ಲಿ ಭಯಂಕರನಾಗುತ್ತಾನೆ. ಅದೇ ಅಪರಾಧ ಕಡಿಮೆಯನಿಸಿದರೇ ಶಿಕ್ಷೆಯನ್ನು ವಿಧಿಸುವದರಿಂದ ರಾಜನನ್ನು ತಿರಸ್ಕಾರದಿಂದ ಕಾಣುತ್ತಾರೆ. ಆದ್ದರಿಂದ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಬೇಕೆಂದು ಕಾಮಾಂದಕ ಎಚ್ಚರಿಸಿರುವನು.[೧೨೯]

ರಾಜನು ಸಮತೋಲನ ವಿಚಾರವನ್ನು ನಡೆಸಬೇಕಾದರೇ ಅವನು ಅಪರಾಧದ ಪೂರ್ವಾಪರಗಳನ್ನು ಕುಲಂಕೂಶವಾಗಿಯೂ, ಎಚ್ಚರಿಕೆಯಿಂದಲೂ ವಿಶ್ಲೇಷಿಸಿ ನಂತರ ತೀರ್ಪನ್ನು ಕೊಡಬೇಕಾಗಿತ್ತು ಎಲ್ಲ ಸಂದರ್ಭಗಳಲ್ಲಿ ರಾಜನೇ ನ್ಯಾಯ ವಿಚಾರಣೆಯನ್ನು ನಡೆಸಬೇಕೆಂದು ಯಾವ ಗ್ರಂಥಗಳು ಹೇಳಿಲ್ಲ. ಅಲ್ಲಲ್ಲಿ ಊರ ಗ್ರಾಮಸಭೆಗಳು ವಿವಾದಗಳ ವಿಚಾರಣೆಯಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದ್ದು ತಿಳಿದುಬರುತ್ತದೆ.[೧೩೦] ಇಲ್ಲಿ ಅಪರಾಧಗಳನ್ನು ಊರಿನ ಸಭೆಗಳು ವಿಚಾರಿಸಿ ತೀರ್ಪನ್ನು ಕೊಟ್ಟರೂ - ಅದು ಮೊದಲೇ ರಾಜನು ನಿರ್ಧರಿಸಿ ಹೊರಡಿಸಿದ ಶಾಸನ ಆಜ್ಞೇಗಳ ಅನುಸಾರವಾಗಿ ನಡೆಯುತ್ತಿತ್ತು[೧೩೧]

## ಶಿಕ್ಷೆಗಳು

ವಡ್ಡಾರಾಧನೆಯು ವ್ಯಕ್ತಿಮಾಡಿದ ತಪ್ಪಿಗೆ ನೀಡುವ ಕೆಲವು ಶಿಕ್ಷೆಗಳಲ್ಲಿ ನಾಲಗೆ, ಕೈಕಾಲು ಕತ್ತರಿಸಲಾಗುತ್ತಿತ್ತೆಂದು ಹೇಳುವದು.[೧೩೨] ಸೋಮದೇವ ರಾಜನ ಮೂರು ರೀತಿಯ ಶಿಕ್ಷೆಗಳ ಕುರಿತು

ಹೇಳುತ್ತಾನೆ. ಅವು ಕಳ್ಳರು ಕದಿಯುವ ವಸ್ತುಗಳಿಗೆ ಕತ್ಕಂತೆ ನೀಡುವ ಶಿಕ್ಷೆಗಳಾಗಿದ್ದವು.[೧೩೩] ಇವಲ್ಲದೆ ಇನ್ನೂ ಕೆಲವು ಅಪರಾಧಕ್ಕೆ ತಕ್ಕಂತೆ ಮಂಡಿಗೆ, ದಿವ್ಯ, ದೈಹಿಕ ಹಿಂಸೆ, ದಂಡ, ಮರಣ ದಂಡಣೆ ಎಂಬ ನ್ಯಾಯ ಶಿಕ್ಷೆಗಳು ಪ್ರಚಲಿತದಲ್ಲಿದ್ದವು.[೧೩೪]

## ಅಡಿಟಿಪ್ಪಣಿಗಳು

೧. ನಾರಾಯಣ, ಪಿ. ವ್ಹಿ., ೧೯೮೩, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು-೨೦೪, ಗದಗ.

೨. ನಾಗಯ್ಯ, ಜೆ. ಎಂ., ೧೯೯೨, ಆರನಯ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ, ಪು-೨೨, ಬೆಳಗಾವಿ.

೩. ನಾಗಯ್ಯ, ಜೆ. ಎಂ., ೧೯೯೨, ಆರನಯ ವಿಕ್ರಮಾದಿತ್ಯನ ಶಾಸನಗಲು : ಒಂದು ಅಧ್ಯಯನ, ಪು-೭೮, ಬೆಳಗಾವಿ.

೪. ದೇವರಕೊಂಡಾರಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೧೬, ಕಲ್ಲೂರ (ಯ. ತಾ), ಕ್ರಿ.ಶ. ೧೧೩೨, ಪು-೧೭೩, ಹಂಪಿ.

೫. ಅದೇ ನಂ-೧, ವಿಪ್ರ (ಗ. ತಾ), ಕ್ರಿ.ಶ. ೧೦೯೪, ಪು-೩೧೩.

೬. ಅದೇ, ನಂ-೯, ಹಿರೆಮನ್ನಾಪುರ (ಕು.ತಾ), ಕ್ರಿ.ಶ. ೧೧ ನೆ ಶತಮಾನ, ಪು-೨೮೪.

೭. ಅದೇ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೦೯೮, ಪು-೧೭೪.

೮. ಅದೇ, ನಂ-೨೭, ಸಂಕನೂರ (ಯ.ತಾ), ಕ್ರಿ.ಶ. ೧೧೧೩, ಪು-೧೮೨.

೯. ನಾಗಯ್ಯ, ಜೆ. ಎಂ., ೧೯೯೨, ಆರನಯ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ, ಪು-೭೯, ಬೆಳಗಾವಿ.

೧೦. ಅದೇ, ಪು-೮೨.

೧೧. ದೇವರಕೊಂಡಾರಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೩೯, ಕುಕನೂರ (ಯ.ತಾ), ಕ್ರಿ.ಶ. ೧೧೪೯, ಪು-೨೦೪, ಹಂಪಿ, ಕ.ವಿ.ವಿ.

೧೨. ಅದೇ, ನಂ-೫೯, ತಳಕಲ್ಲ (ಯ.ತಾ), ಕ್ರಿ.ಶ. ೯೯೧, ಪು-೨೫೩.

೧೩. Keval Potvani., *Manu Dharma Sastra*, ಪುಟ-೧೩೭, ಪು-೧೩೭.

೧೪. ಸದಾನಂದ, ಜಿ. ಎಸ್., ಕೌಟಿಲ್ಯ, ಪು-೬, ೭.

೧೫. ಮಲ್ಲಾಪುರ, ಬಿ.ವ್ಹಿ., ೧೯೭೮, ನಯಸೇನ ಮತ್ತು ಅವನ ಕೃತಿಗಳು, ಪು-೨೭೪, ಕ.ವಿ.ವಿ. ಧಾರವಾಡ.

೧೬. ರಂಗಸ್ವಾಮಿ, ಅಯ್ಯಂಗಾರ., *Considerations on Some Aspects of Ancient Indian, Polity*, ಪು-೧೦೮.

೧೭. ಮಲ್ಲಾಪುರ, ಬಿ. ವ್ಹಿ., ೧೯೭೮, ನಯಸೇನ ಮತ್ತು ಅವನ ಕೃತಿಗಳು, ಪು-೨೭೪ ಕ.ವಿ.ವಿ. ಧಾರವಾಡ.

೧೮. ದೇವರಕೊಂಡಾರಡ್ಡಿ (ಸಂ), ೧೯೯೯, ಕನ್ನಡ. ವಿ.ವಿ.ಶಾ.ಸಂ-೨, ಕೊ.ಜಿಲ್ಲೆ, ನಂ-೨೪, ಸಂಕನೂರ, (ಯ.ತಾ) ಕ್ರಿ.ಶ. ೧೩೧೨, ಪುಟ-೧೮೦, ಹಂಪಿ, ಕ.ವಿ.ವಿ.

೧೯. ಮಲ್ಲಾಪುರ, ಬಿ.ವ್ಹಿ., ೧೯೭೮, ನಯಸೇನ ಮತ್ತು ಅವನ ಕೃತಿಗಳು, ೧೯೭೮, ಪು-೨೭೫, ಕ.ವಿ.ವಿ. ಧಾರವಾಡ.

೨೦. Altekar, A. S., 1967, *Rastrakutas and Their Times* , ಪು-೧೫೩, Orientieal Book Agency, Poona.

೨೧. Kadabadi, B.K., 1979, *Vaddaradhane A Study,* ಪು-೧೬೯ K.U.D. Dharwad.

೨೨. ಎಲಿಗಾರ, ಚೆನ್ನಕ್ಕ., ೧೯೯೦, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪು-೧೮೨, ಕ.ವಿ.ವಿ. ಧಾರವಾಡ.

೨೩. ಪಾಟೀಲ, ಭೋಜರಾಜ., ೧೯೯೫, ನಾಗರಕಂಡ-೭೦, ಒಂದು ಅಧ್ಯಯನ, ಪು-೯೭, ಆನಂದಪುರಂ.

೨೪. *South Indian Inscriptions, ಸಂ-೧೧, ಭಾಗ-೧, ನಂ-೭, ಕೆಸರಬಾವಿ ಕ್ರಿ.ಶ. ೮೩೭.*

೨೫. ದೇವರಕೊಂಡಾರಡ್ಡಿ (ಸಂ), ೧೯೯೯, ಕನ್ನಡ. ವಿ.ವಿ.ಶಾ.ಸಂ-೨, ಕೊ.ಜಿಲ್ಲೆ, ನಂ-೬೫, ಇಟಗಿ, (ಯ.ತಾ) ಕ್ರಿ.ಶ. ೯೩೯, ಪು-೨೫೭, ಹಂಪಿ, ಕ.ವಿ.ವಿ.

೨೬. ಅದೇ, ನಂ-೩, ಗೋತಗಿ (ಕು.ತಾ), ಕ್ರಿ.ಶ. ೧೦೨೪, ಪು-೨೭೯.

೨೭. ಅದೇ, ನಂ-೨೬, ಮಾದಿನೂರ (ಕೊ.ತಾ), ಕ್ರಿ.ಶ. ೧೧೩೬, ಪು-೩೧.

೨೮. ಅದೇ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೫೪-೧೧೯೮, ಪು-೧೭೪.

೨೯. Handique, K.K., 1949, *Yasastilaka and Indian Culture,* ಪು-೧೧೧, Sholapur.

೩೦. ಕೋಪ್ಪಾ, ಎಸ್.ಕೆ., ೧೯೯೦, ತರ್ದವಾಡಿನಾಡು : ಒಂದು ಅಧ್ಯಯನ, ಪು-೯೯ ಪ್ರತಿಭಾ ಪ್ರಕಾಶನ, ಇಂಡಿ.

೩೧. Altekar, A. S., 1967, *Rastrakutas and Their Times* , ಪು-೧೬೭, Orientieal Book Agency, Poona.

೩೨. ನಾರಾಯಣ, ಪಿ.ವಿ., ೧೯೮೩, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು-೨೦೯, ಗದಗ.

೩೩. ದೇವರಕೊಂಡಾರಡ್ಡಿ (ಸಂ), ೧೯೯೯, ಕನ್ನಡ. ವಿ.ವಿ.ಶಾ.ಸಂ-೨, ಕೊ.ಜಿಲ್ಲೆ, ನಂ-೩, ಕವಲೂರ, (ಕೊ. ತಾ), ಕ್ರಿ.ಶ. ೧೧೭೭, ಪುಟ-೪, ಹಂಪಿ, ಕ.ವಿ.ವಿ.

೩೪. ಅದೇ, ನಂ-೧೭, ಕಲ್ಲೂರ, (ಯ.ತಾ), ಕ್ರಿ.ಶ ೧೧೨೫, ಪು-೧೭೪.

೩೫. ಅದೇ, ನಂ-೧೩, ಕಲ್ಲೂರ, (ಯ.ತಾ), ಕ್ರಿ.ಶ. ೧೧೮೫, ಪು-೧೬೭.

೩೬. ಅದೇ, ನಂ-೨೮, ಅಂಟೂರಠಾಣ, (ಕು.ತಾ), ಕ್ರಿ.ಶ. ೧೦೯೫, ಪು-೩೦೮.

೩೭. ಅದೇ, ನಂ-೫೩, ಕುಕನೂರ, (ಯ.ತಾ), ಕ್ರಿ.ಶ. ೧೧೭೮, ಪು-೨೩೬.

೩೮. ಅದೇ, ನಂ-೩೨, ಮುಧೋಳ (ಯ.ತಾ),ಪು-೧೯೦.

೩೯. ಅದೇ, ನಂ-೪೧, ಕುಕನೂರ (ಯ. ತಾ),ಕ್ರಿ.ಶ. ೧೧೭೦, ಪು-೨೦೯.

೪೦. ಕೋಪ್ಪಾ, ಎಸ್.ಕೆ., ೧೯೯೦, ತರ್ದವಾಡಿನಾಡು : ಒಂದು ಅಧ್ಯಯನ, ಪು-೧೦೧, ಪ್ರತಿಭಾ ಪ್ರಕಾಶನ, ಇಂಡಿ.

೪೧. Handique, K.K., 1949, *Yasastilaka and Indian Culture,* Sholapur.

೪೨. ಪಾಟೀಲ, ಭೋಜರಾಜ. ೧೯೯೫, ನಾಗರಕಂಡ-೭೦, ಒಂದು ಅಧ್ಯಯನ, ಪು-೪, ಆನಂದಪುರಂ.

೪೩. ದೇವರಕೊಂಡಾರಡ್ಡಿ (ಸಂ), ೧೯೯೯, ಕನ್ನಡ. ವಿ.ವಿ.ಶಾ.ಸಂ-೨, ಕೊ.ಜಿಲ್ಲೆ, ನಂ-೩, ಕವಲೂರ, (ಕೊ. ತಾ), ಕ್ರಿ.ಶ. ೧೧೭೭, ಪುಟ-೪, ನಂ-೩, ಕವಲೂರ, (ಕೊ.ತಾ), ಕ್ರಿ.ಶ. ೧೧೭೭, ಪು-೪, ಹಂಪಿ, ಕ.ವಿ.ವಿ.

೪೪. ಅದೇ, ನಂ. ೬೭, ಇಟಗಿ (ಯ.ತಾ), ಕ್ರಿ.ಶ. ೧೧೦೮-೯, ಪು-೨೫೯.

೪೫. ಅದೇ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೨೫, ಪು-೧೭೪.

೪೬. ಅದೇ, ನಂ-೩೯, ಕುಕನೂರ (ಯ.ತಾ), ಕ್ರಿ.ಶ. ೧೧೪೯, ಪು-೨೦೨.

೪೭. ಅದೇ, ನಂ-೪೦, ಕುಕನೂರ (ಯ.ತಾ), ಕ್ರಿ.ಶ. ೧೧೬೩, ಪು-೨೦೫.

೪೮. ಅದೇ, ನಂ-೪೧, ಕೂಕನೂರ (ಯ. ತಾ), ಕ್ರಿ.ಶ. ೧೧೭೦, ಪು-೨೦೯.

೪೯. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ. ೧೧೭೨, ಪು-೨೯೮.

೫೦. ಅದೇ, ನಂ-೪೧, ಕುಕನೂರ (ಯ.ತಾ), ಕ್ರಿ.ಶ. ೧೧೭೦, ಪು-೨೦೯.

೫೧. ಅದೇ, ನಂ-೫೨, ಕೂಕನೂರ (ಯ. ತಾ), ಕ್ರಿ.ಶ. ೧೧೭೮, ಪು-೨೨೮.

೫೨. ಅದೇ, ನಂ-೩೨, ಮುಧೋಳ (ಯ. ತಾ),ಪು-೧೯೦.

೫೩. ಅದೇ, ನಂ-೨೮, ಅಂಟೂರಠಾಣ (ಕು.ತಾ), ಕ್ರಿ.ಶ. ೧೦೯೫, ಪು-೩೦೮.

೫೪. Handique, K.K., 1949, *Yasastilaka and Indian Culture,* ಪು-೯೨, ೯೩, Sholapur.

೫೫. ಚಿದಾನಂದ ಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೩೩೩, ಮೈಸೂರು

೫೬. ದೇವರಕೊಂಡಾರಡ್ಡಿ (ಸಂ), ೧೯೯೯, ಕನ್ನಡ. ವಿ.ವಿ.ಶಾ.ಸಂ-೨, ಕೊ.ಜಿಲ್ಲೆ, ನಂ-೬೭, ಇಟಗಿ, (ಯ.ತಾ) ಕ್ರಿ.ಶ. ೧೧೦೮, ಪು-೨೫೯, ಹಂಪಿ, ಕ.ವಿ.ವಿ.

೫೭. ಅದೇ, ನಂ-೧೭, ಕಲ್ಲೂರ, (ಯ.ತಾ), ಕ್ರಿ.ಶ. ೧೧೨೫, ಪುಟ-೧೭೪.

೫೮. ನಾರಾಯಣ, ಪಿ.ವ್ಹಿ., ೧೯೮೩, ವಚನ ಸಾಹಿತ್ಯ ಸಾಂಸ್ಕೃತಿಕ ಅಧ್ಯಯನ, ಪುಟ-೨೧೪-೨೧೫, ಗದಗ.

(ಈ ಪಟ್ಟಿಕೆಯನ್ನು ಯಥಾವತ್ತಾಗಿ ಎತ್ತಿ ಕೊಳ್ಳಲಾಗಿದೆ)

೫೯. ದೇವರಕೊಂಡಾರಡ್ಡಿ. (ಸಂ), ೧೯೯೯ ಕ.ವಿ.ವಿ.ಶಾ.ಸಂ-೨, ಕೊ.ಜಿ. ನಂ-೧೩, ಪುರ, (ಕು.ತಾ), ಪು-೨೮೮, ಹಂಪಿ.

೬೦. ಅದೇ, ನಂ-೨೮, ಸಂಕನೂರ, (ಯ.ತಾ), ಕ್ರಿ.ಶ. ೧೨೩೮, ಪು-೧೮೩.

೬೧. ಮಲ್ಲಾಪುರ, ಬಿ.ವ್ಹಿ., ೧೯೭೮, ನಯಸೇನ ಮತ್ತು ಅವನ ಕೃತಿಗಳು, ಪು-೨೭೯ ಕ.ವಿ.ವಿ, ಧಾರವಾಡ.

೬೨. ದೇವರಕೊಂಡಾರಡ್ಡಿ., ೧೯೯೯, ಕ.ವಿ.ವಿ.ಶಾ.ಸಂ-೨, ಕೊ.ಜಿ, ನಂ-೬೫, ಇಟಗಿ, (ಯ.ತಾ), ಕ್ರಿ.ಶ. ೯೩೯, ಪುಟ-೨೫೭, ಹಂಪಿ.

೬೩. ಅದೇ, ನಂ-೩೪, ಅರಕೇರಿ (ಕು.ತಾ), ಕ್ರಿ.ಶ. ೧೦೩೩, ಪು-೧೯೨.

೬೪. ಅದೇ, ನಂ-೨೭, ಅಂಟೂರಠಾಣ (ಕು.ತಾ), ಕ್ರಿ.ಶ. ೧೦೮೨, ಪು-೩೦೬.

೬೫. ಅದೇ, ನಂ-೬, ಅಳವಂಡಿ (ಕೊ.ತಾ), ಕ್ರಿ.ಶ. ೧೦೬೧, ಪು-೧೨.

೬೬. ಅದೇ, ನಂ-೨೭, ಅಂಟೂರಠಾಣ (ಕು.ತಾ), ಕ್ರಿ.ಶ. ೧೦೮೨, ಪು-೩೦೬.

೬೭. ಅದೇ, ನಂ.೨೮, ಅಂಟೂರಠಾಣ (ಕು.ತಾ), ಕ್ರಿ.ಶ. ೧೦೯೫, ಪು-೩೦೮.

೬೮. ಅದೇ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೨೫, ಪು-೧೭೪.

೬೯. ಅದೇ, ನಂ-೩೯, ಕುಕನೂರ (ಯ.ತಾ), ಪು-೨೦೨.

೭೦. ಅದೇ, ನಂ-೧೬, ಕಲ್ಲೂರ (ಯ.ತಾ), ಕ್ರಿ.ಶ. ೧೧೩೨, ಪು-೧೭೩.

೭೧. ಅದೇ ನಂ-೨೬, ಮಾದಿನೂರ (ಕೊ. ತಾ), ಕ್ರಿ.ಶ. ೧೧೩೬, ಪು-೩೧.

೭೨. ಅದೇ, ನಂ-೩೯, ಕುಕನೂರ, (ಯ.ತಾ), ಕ್ರಿ.ಶ. ೧೧೪೬, ಪು-೨೦೨.

೭೩. ಅದೇ, ನಂ-೨೦, ಚಳಗೇರಿ (ಕು.ತಾ), ಕ್ರಿ.ಶ. ೧೧೭೨, ಪು-೨೯೭.

೭೪. ಅದೇ, ನಂ-೩೯, ಕುಕನೂರ (ಯ.ತಾ), ಪು-೨೦೨.

೭೫. ಕೋಪ್ಪಾ, ಎಸ್.ಕೆ., ೧೯೯೦, ತ.ನಾ.ಓ.ಅ., ಪು-೧೦೪, ಇಂಡಿ.

೭೬. ಕರ್ನಾಟಕ ಭಾರತಿ ಸಂ-೧೭, ಸಂಚಿಕೆ-೩, ಪು-೧೬೬, ೧೬೭.

೭೭. ವಿವರಗಳಿಗಾಗಿ ನೋಡಿ Mhalingam, T.V., 1955, *South Indian Polity,* ಪುಟ-೧೮, Madras, Derate J.T.M, The Hoysal, ಪು-೧೮೮.

೭೮. ಕೃಷ್ಣ ಭಟ್ಟ, ಕೆ.ವಿ. (ಸಂ), ೧೯೭೩, ಸಾಹಸ ಭೀಮ ವಿಜಯ, ಪು-೩೪, ಮೈಸೂರ.

೭೯. ದೇವರಕೊಂಡಾರಡ್ಡಿ. (ಸಂ), ಕ.ವಿ.ವಿ.ಶಾ.ಸಂ-೨, ಕೊ.ಜಿ. ನಂ-೫೯, ತಳಕಲ್ಲ, (ಯ.ತಾ) ಕ್ರಿ.ಶ. ೯೯೧, ೧೯೯೯, ಪು-೨೫೩, ಹಂಪಿ.

೮೦. ಅದೇ, ನಂ-೧೫೯, ಶಿವಪುರ (ಕೊ.ತಾ), ಕ್ರಿ.ಶ. ೧೦೩೩, ಪು-೧೫೩.

೮೧. ಅದೇ, ನಂ-೫೯, ತಳಕಲ್ಲ (ಯ.ತಾ), ಕ್ರಿ.ಶ. ೯೯೧, ಪು-೨೫೩.

೮೨. ಅದೇ, ನಂ-೪೧, ಕೂಕನೂರ (ಯ.ತಾ), ಕ್ರಿ.ಶ. ೧೧೭೦, ಪು-೨೦೯.

೮೩. ಅದೇ, ನಂ-೩, ಕವಲೂರ (ಕೊ.ತಾ), ಕ್ರಿ.ಶ. ೧೧೭೯, ಪು-೪.

೮೪. ಅದೇ, ನಂ-೧೪೬, ಅಗಳಗೇರಿ (ಕೊ.ತಾ), ಕ್ರಿ.ಶ. ೧೧ ನೆ ಶತಮಾನ, ಪು-೧೪೪.

೮೫. ಅದೇ ನಂ-೧೩, ಕಲ್ಲೂರ (ಯ.ತಾ), ಕ್ರಿ.ಶ. ೧೧೮೫, ಪು-೧೬೭.

೮೬. ಅದೇ, ನಂ-೪೦, ಕುಕನೂರ (ಯ.ತಾ), ಕ್ರಿ.ಶ. ೧೧೯೩, ಪು-೨೦೫.

೮೭. ಅದೇ ನಂ-೧೩, ಪುರ (ಕು.ತಾ), ಕ್ರಿ.ಶ. ೧೨ ನೆ ಶತಮಾನ, ಪು-೨೮೮.

೮೮. ಅದೇ, ನಂ-೫, ಯಲಬುರ್ಗ (ಯ.ತಾ), ಪು-೧೬೨.

೮೯. ಅದೇ, ನಂ-೯, ಕಲ್ಲೂರ (ಯ.ತಾ), ಪು-೧೬೪.

೯೦. ಚಿದಾನಂದಮೂರ್ತಿ, ಎಂ., ೧೯೭೯, ಕ.ಶಾ.ಸಾಂ.ಅ., ಪು-೩೪೯, ಮೈಸೂರ.

೯೧. ದೇವರಕೊಂಡಾರಡ್ಡಿ. (ಸಂ), ೧೯೯೯, ಕ.ವಿ.ವಿ.ಶಾ.ಸಂ-೨, ಕೊ.ಜಿ. ನಂ-೧೩, ಪುರ, (ಕು.ತಾ) ಪು-೨೮೮, ಹಂಪಿ.

೯೨. ಅದೇ, ನಂ-೨೦, ಚಳಗೇರಿ (ಕು.ತಾ), ಕ್ರಿ.ಶ.೧೧೭೨, ಪು-೨೯೭.

೯೩. ಅದೇ, ನಂ-೪೦, ಕುಕನೂರ (ಯ.ತಾ), ಕ್ರಿ.ಶ. ೧೧೬೩, ಪು-೨೦೫.

೯೪. ಅದೇ, ನಂ-೧೮, ಪುರ (ಕು.ತಾ), ಕ್ರಿ.ಶ. ೧೦೧೮, ಪು-೨೯೬.

೯೫. ಅದೇ, ನಂ-೧೩, ಪುರ (ಕು.ತಾ), ಕ್ರಿ.ಶ. ೧೨ ನೆ ಶತಮಾನ, ಪು-೨೮೮.

೯೬. ಅದೇ, ನಂ-೧೫, ಪುರ (ಕು.ತಾ), ಕ್ರಿ.ಶ. ೧೨ ನೆ ಶತಮಾನ, ಪು-೨೯೮.

೯೭. ಅದೇ, ನಂ-೨೨, ಹನುಮನಾಳ (ಕು.ತಾ), ಕ್ರಿ.ಶ. ೧೦೯೧, ಪು-೩೦೨.

೯೮. ಅದೇ, ನಂ-೧೩, ಪುರ (ಕು.ತಾ), ಕ್ರಿ.ಶ.೧೨ ನೆ ಶತಮಾನ, ಪು-೨೮೮.

೯೯. Shantakumari, L. S., 1986, *Agraharas In Ancient Karnataka,* ಪು-೨೫-೨೬, Madras.

೧೦೦. ಚಿದಾನಂದಮೂರ್ತಿ, ಎಂ., ೧೯೭೯, ಕ.ಶಾ.ಸಾಂ.ಅ., ಪು-೨೦೯, ಮೈಸೂರು.

೧೦೧. ಕೊಪ್ಪಾ, ಎಸ್.ಕೆ., ೧೯೯೦, ತ.ನಾ. ಒ.ಅ., ಪು-೧೧೩, ಇಂಡಿ.

೧೦೨. ದೇವರಕೊಂಡಾರಡ್ಡಿ. (ಸಂ), ೧೯೯೯, ಕ.ವಿ.ವಿ. ಶಾಸನ ಸಂಪುಟ-೨, ಕೊ.ಜಿ. ನಂ-೨೬, ಮಾದಿನೂರ, (ಕೊ. ತಾ) ಕ್ರಿ.ಶ. ೯೨೩, ಪುಟ-೩೧, ಹಂಪಿ.

೧೦೩. ಅದೇ, ನಂ-೨೬, ಮಾದಿನೂರ (ಕೊ.ತಾ), ಕ್ರಿ.ಶ. ೯೨೩, ೧೯೯೯, ಪುಟ-೩೧, ಹಂಪಿ.

೧೦೪. ಅದೇ, ನಂ. ೧೮, ಪುರ (ಕು.ತಾ), ಕ್ರಿ.ಶ. ೧೦೧೮, ಪು-೨೯೬.

೧೦೫. ಅದೇ, ನಂ-೧೪೮, ಹುಲುಗಿ (ಕೊ. ತಾ), ಕ್ರಿ.ಶ. ೧೦೮೮, ಪು-೧೪೫.

೧೦೬. ಅದೇ, ನಂ-೩, ಕವಲೂರ (ಕೊ.ತಾ), ಕ್ರಿ.ಶ.೧೧೭೯, ಪು-೪.

೧೦೭. ಅದೇ, ನಂ-೧೫, ಪುರ (ಕು.ತಾ), ಕ್ರಿ.ಶ. ೧೨ ನೆ ಶತಮಾನ, ಪು-೨೯೨.

೧೦೮. ಅದೇ, ನಂ-೧೧, ಕಲ್ಲೂರ (ಯ.ತಾ), ಕ್ರಿ.ಶ. ೧೨ ನೆ ಶತಮಾನ, ಪು-೧೬೫, ೬೬.

೧೦೯. ಅದೇ, ನಂ-೪೧, ಕೂಕನೂರ (ಯ.ತಾ), ಕ್ರಿ.ಶ. ೧೧೭೦, ಪು-೨೦೯.

೧೧೦. ಚಿದಾನಂದಮೂರ್ತಿ, ಎಂ., ೧೯೭೯, ಕ.ಶಾ.ಸಾಂ.ಅ., ಪುಟ-೩೫೩, ಮೈಸೂರ.

೧೧೧. ಕೋಪ್ಪಾ, ಎಸ್.ಕೆ., ೧೯೯೦, ತ.ನಾ. ಒ.ಅ., ಪು-೧೨೦, ಇಂಡಿ.

೧೧೨. ದೇವರಕೊಂಡಾರಡ್ಡಿ (ಸಂ)., ೧೯೯೯, ಕ.ವಿ.ವಿ.ಶಾ.ಸಂ-೨, ಕೊ.ಜಿ. ನಂ-೧, ಮಂಕಲ್ಕೇರಿ, (ಕು.ತಾ) ಕ್ರಿ.ಶ. ೧೧೨೩, ಪು-೨೭೬.

೧೧೩. ಅದೇ, ನಂ-೫, ಶಿರಗುಪ್ಪ (ಕು.ತಾ), ಕ್ರಿ.ಶ. ೧೧೧೦, ಪು-೨೮೧.

೧೧೪. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ. ೧೧೭೨, ಪು-೨೯೮.

೧೧೫. ಅದೇ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೫೪, ಪು-೧೭೪.

೧೧೬. ಚಿದಾನಂದ ಮೂರ್ತಿ, ಎಂ: ಕ.ಶಾ.ಸಾಂ.ಅ., ಪು-೩೫೬.

೧೧೭. Altekar, A. S., 1967, *Rastrakutas and Their Times,* ಪುಟ-೧೯೨, Orientieal Book Agency, Poona.

೧೧೮. ಪಾಟೀಲ, ಭೋಜರಾಜ. ೧೯೯೫, *ನಾಗರಕಂಡ-೭೦, ಒ. ಅ,* ಪು-೧೧೧, ಆನಂದಪುರಂ.

೧೧೯. ದೇವರಕೊಂಡಾರೆಡ್ಡಿ, (ಸಂ), ೧೯೯೯, *ಕ.ವಿ.ವಿ.ಶಾ.ಸಂ-೨, ಕೊ.ಜ,* ನಂ-೩೪, ಅರಕೇರಿ, (ಯ.ತಾ), ಕ್ರಿ.ಶ. ೧೦೩೩, ಪು-೧೯೨, ಹಂಪಿ.

೧೨೦. ಅದೇ, ನಂ-೬, ಅಳವಂಡಿ (ಕೊ.ತಾ), ಕ್ರಿ.ಶ. ೧೦೬೧, ಪು-೧೨.

೧೨೧. ಅದೇ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೨೫, ಪು-೧೭೪.

೧೨೨. ಅದೇ, ನಂ-೧೩, ಪುರ (ಕು. ತಾ) ಕ್ರಿ.ಶ. ೧೨ ನೆ ಶತಮಾನ, ಪು-೨೮೮ .

೧೨೩. ಅದೇ, ನಂ-೯, ಕಲ್ಲೂರ (ಯ.ತಾ) ಕ್ರಿ.ಶ. ೧೨ ನೆ ಶತಮಾನ, ಪು-೧೬೨, ೧೬೪.

೧೨೪. ನಾಗಯ್ಯಾ, ಜೆ. ಎಂ., ೧೯೯೨, *ಆ.ವಿ.ಶಾ. ಒ. ಅ.,* ಪು-೩೬೧, ಬೆಳಗಾವಿ.

೧೨೫. Kadabadi, B.K., 1979, *Vaddaradhane A Study,* ಪು-೧೬೦ K.U.D. Dharwad

೧೨೬. ದೇವರಕೊಂಡಾರೆಡ್ಡಿ., ೧೯೯೯, *ಕ.ವಿ.ವಿ.ಶಾ.ಸಂ-೨,* ಕೊ.ಜ, ನಂ-೧೪೬, ಅಗಳಕೇರಿ, (ಕೊ. ತಾ), ಕ್ರಿ.ಶ. ೧೧-೧೨ ನೆ ಶತಮಾನ, ಪು-೧೪೪, ಹಂಪಿ.

೧೨೭. ಅದೇ, ನಂ-೫, ಸಿರಗುಪ್ಪ, (ಕು.ತಾ), ಕ್ರಿ.ಶ. ೧೧೧೦.

೧೨೮. ದತ್ತ, ಎಂ, ಎಸ್, *Kamandakiya Nitisar.,* ಪು-೬-೧೫.

೧೨೯. ನಾರಾಯಣ, ಪಿ.ವಿ., ೧೯೮೩, *ವ.ಸಾ.ಒ.ಸಾಂ.ಅ.,* ಪು-೨೧೬, ಗದಗ.

೧೩೦. Neelkantha, K.V., 1955, *The Cholas,* ಪು-೭೩, Madras.

೧೩೧. ಚಿದಾನಂದಮೂರ್ತಿ, ಎಂ., ೧೯೭೯, *ಕ.ಶಾ.ಸಾಂ.ಅ,* ಪು-೩೪೩, ಮೈಸೂರ.

೧೩೨. Kadabadi, B.K., 1979, *Vaddaradhane A Study,* ಪುಟ-೧೬೧, K.U.D. Dharwad

೧೩೩. Handique, K.K., 1949, *Yasastilaka and Indian Culture,* ಪು-೧೧೮-೧೧೯, Sholapur.

೧೩೪. ನಾರಾಯಣ, ಪಿ.ವಿ., ೧೯೮೩, *ವ.ಸಾ. ಒ.ಸಾಂ.ಅ.,* ಪುಟ-೨೧೭-೨೨೯. ಮತ್ತು ಚಿದಾನಂದಮೂರ್ತಿ, ಎಂ., *ಕ.ಶಾ.ಸಾಂ.ಅ,* ಗದಗ.



Chapter-6

## ಅಧ್ಯಾಯ-ಆರು

# ಸಾಮಾಜಿಕ ಪರಿಸ್ಥಿತಿಯ ಐತಿಹಾಸಿಕತೆ

ಕೊಪ್ಪಳ ಜಿಲ್ಲೆಯ ಸಾಮಾಜಿಕ ಜೀವನದ ಸ್ವರೂಪ ಬಹುಮಟ್ಟಿಗೆ ಧಾರ್ಮಿಕ ಹಿನ್ನೆಲೆ ಹೊಂದಿದ್ದು, ಅದಕ್ಕೆ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಅಂಶಗಳೇ ನಿದರ್ಶನವಾಗಿವೆ.[೧]

ಸಾಮಾಜಿಕ ವ್ಯವಸ್ಥೆ ಸಮಾಜದ ಅನೇಕ ಅಂಶಗಳನ್ನೊಳಗೊಂಡ ವಿಶಾಲ ವ್ಯಾಪ್ತಿವುಳ್ಳ ವಿಷಯ. ಪರಸ್ಪರ ಸಂಬಂಧವುಳ್ಳ ಜನತೆಯ ವ್ಯವಸ್ಥಿತ ಸಮೂಹವೆ ಸಮಾಜವೆನ್ನಬಹುದು.[೨] ಆದಕಾರಣ ಇಲ್ಲಿ ವರ್ಗ, ವರ್ಣ, ಕುಟುಂಬ, ಸಂಘ-ಸಂಸ್ಥೆ, ಜಾತಿವ್ಯವಸ್ಥೆ, ಮಹಿಳೆಯರ ಸ್ಥಾನಮಾನ, ಸಂಸ್ಕಾರಗಳು, ಅಂಧಶ್ರದ್ಧೆಗಳು, ಪ್ರಚಲಿತ ಆಚರಣೆಗಳು, ಅಗ್ರಹಾರಗಳು, ವಿದ್ಯಾಭ್ಯಾಸ ಮತ್ತು ಅವುಗಳ ಅಲೋಚನಾಕ್ರಮ ಇತ್ಯಾದಿ ಅಂಶಗಳಿದ್ದು, ಅವುಗಳು ಆಯಾ ಸಮಾಜದ ಜನಗಳಿಂದ ಒಪ್ಪಿಗೆ ಪಡೆದ ಮೌಲ್ಯಗಳಾಗಿರುತ್ತವೆ. ಅಂದರೆ ಜನರು ತಮ್ಮ ಅನುಕೂಲತೆ ಮತ್ತು ಸಮಾಜದ ಭದ್ರತೆಗೆ ತೊಂದರೆ ಬಾರದಿರಲಿ ಎಂದು ತಮ್ಮಲ್ಲಿ ಒಂದು ಬಗೆಯ ಒಪ್ಪಂದವನ್ನು ಮಾಡಿಕೊಂಡಿರಬೇಕು. ಅದು ಸಂಸ್ಕೃತಿಯಲ್ಲಿ ತೋರಿದ ಉನ್ನತ ವಿಚಾರವೆನ್ನಬಹುದು.

### ೧. ವರ್ಗ-ವರ್ಣ-ಜಾತಿ

ಭಾರತೀಯ ಸಮಾಜದಲ್ಲಿ ವರ್ಗ-ವರ್ಣ-ಜಾತಿಗಳು ಬಹು ಪ್ರಾಚೀನ ಕಾಲದಿಂದಲೂ ಮಹತ್ತರ ಪಾತ್ರ ನಿರ್ವಹಿಸುತ್ತಾ ಬಂದಿವೆ. ಈ ವರ್ಣಪದ್ಧತಿ ರೂಪಗೊಳ್ಳುವುದಕ್ಕೆ ಮೊದಲು ಸಮಾಜವನ್ನು ವೃತ್ತಿಗನುಗುಣವಾಗಿ ವರ್ಗೀಕರಣ ಮಾಡಲಾಗುತ್ತಿತ್ತು.[೩] ಈ ವೃತ್ತಿಗಳು ತೀರ ಪ್ರಾಚೀನ ಕಾಲದಲ್ಲಿಯೇ ಜಾತಿಗಳಾಗಿ ರೂಪುಗೊಂಡಿದ್ದವು ಎಂಬುದರ ಬಗ್ಗೆ ಒಮ್ಮತವಿಲ್ಲ. ಅಲ್ಲದೆ ಈ ವೃತ್ತಿಗಳು ವಂಶಾನುಗತಿಗಳಾಗಿದ್ದವೆಂದು ತೋರಿಸಲು ಯಾವ ಆಧಾರಗಳೂ ಇಲ್ಲ.[೪]

ವರ್ಣ ಎಂಬ ಶಬ್ದವು ಜಾತಿ ಸೂಚಿಕವಾಗಿರದೇ ಅದು ಆರ್ಯರ ಮತ್ತು ಇಲ್ಲಿನ ಮೂಲನಿವಾಸಗಳ ನಡುವಣ ವ್ಯತ್ಯಾಸವನ್ನು (ಭಾಷೆ, ಮತ, ಧರ್ಮ, ಬಣ್ಣ, ಆಕಾರ) ಸೂಚಿಸುವ ಪದವಾಗಿತ್ತು.[೫] ಅನಂತರ ಕಾಲದಲ್ಲಿ ವೃತ್ತಿಗಳೇ ಸಾಮಾಜಿಕವಾಗಿ ಭೇದವನ್ನುಂಟುಮಾಡಿ ಮೇಲು ಕೀಳು ಭಾವನೆಗೆಡೆಮಾಡಿ ಜಾತಿ ವ್ಯವಸ್ಥೆಗೆ ಹಾದಿ ಮಾಡಿಕೊಟ್ಟಿರಬೇಕು. ಈಗಿನ ಜಾತಿ ಪದ್ಧತಿಯಲ್ಲಿರುವಂತೆ ರಕ್ತ ಸಂಬಂಧವು ಪ್ರಾಚೀನಕಾಲದಲ್ಲಿ ನಿಷಿದ್ಧವೆನಿಸಿರಲಿಲ್ಲ ಬ್ರಾಹ್ಮಣರಿಗೂ ಇತರ ವರ್ಣದವರಿಗೂ ಆಗ ಎಷ್ಟು ನಿಕಟ ಸಂಪರ್ಕವಿದ್ದಿತೆಂದರೆ; ಅವು ಹಲವು ವೇಳೆ ಅಂತರ್ವರ್ಣ ವಿವಾಹಗಳಲ್ಲಿ ಪರ್ಯಾವಸಾನ ಗೊಳ್ಳುತ್ತಿದ್ದವು ಮತ್ತು ಅಂತರ್ಜಾತಿ ವಿವಾಹಗಳು ನಡೆಯುತ್ತಿದ್ದ ಪ್ರಸ್ತಾಪ ಜಾತಕಗಳಲ್ಲಿ ಕಂಡುಬರುತ್ತದೆ.[೬] ವೃತ್ತಿಯ ವ್ಯತ್ಯಾಸಗಳು ಬ್ರಾಹ್ಮಣಕಗಳ ಕಾಲಕ್ಕೆ ಹೆಚ್ಚು ಜಟಿಲಗೊಂಡು ಹಿಂದುಳಿದ ವ್ಯಕ್ತಿಯ ಹುಟ್ಟು ವರ್ಣವನ್ನು ನಿರ್ಣಯಿಸುವಂತಾಯಿತು.[೭]

**ವರ್ಣಗಳಿಂದ ಜಾತಿಗಳು**

ವರ್ಣಗಳು ಕರ್ಮಾನುಗುಣವಾಗಿ ನಿರ್ಮಿತವಾದುವೆಂದು ಹೇಳಿದರೂ ಹುಟ್ಟಿನ ಮೇಲೆ ಮಾತ್ರ ಪರಿಗಣಿತವಾಗುವುದರಲ್ಲಿ ಅದು ಮುಕ್ತಾಯವಾಯಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಬಗ್ಗೆ ಅವಲೋಹಣ ಕ್ರಮದಲ್ಲಿ ಗೌರವ ಭಾವನೆಯನ್ನು ತೋರಿಸುವ ಪ್ರವೃತ್ತಿಯುಂಟಾಯಿತು. ಹೀಗೆ ವರ್ಣವ್ಯವಸ್ಥೆಯಲ್ಲಿ ಅನೇಕ ಉಪಜಾತಿಗಳು ಹುಟ್ಟಿಕೊಂಡು ಅವು ಸಮಾಜದಲ್ಲಿ ಜಟಿಲಗೊಂಡು ಪ್ರಬಲವಾದ ಜಾತಿ ವ್ಯವಸ್ಥೆಗೆ ಕಾರಣವಾದವು.

ಆದರೆ, ೧೨ನೇ ಶತಮಾನದ ವಚನಕಾರರ ಕಾಲಕ್ಕೆ ವರ್ಣವ್ಯವಸ್ಥೆ ತನ್ನ ಸ್ವರೂಪವನ್ನು ಉಳಿಸಿಕೊಂಡಿರಲಿಲ್ಲ. ಹಲವು ವಚನಕಾರರು ತಮ್ಮ ವಚನಗಳಲ್ಲಿ ವರ್ಣಗಳನ್ನು ಉಲ್ಲೇಖಿಸಿದರೂ, ಹೊಸ ಸಾಮಾಜಿಕ ವ್ಯವಸ್ಥೆಯೊಂದನ್ನು ಹುಟ್ಟುಹಾಕುವದಕ್ಕೆ ಮುಂದಾಗಿ ವರ್ಣಗಳ ಬಗ್ಗೆ ತುಚ್ಚ ಮನೋಭಾವನೆಯನ್ನು ಪ್ರಕಟಿಸುತ್ತಾರೆ. ಆದಾಗ್ಯೂ ಈ ಕಾಲದ ಜಾತಿ ವ್ಯವಸ್ಥೆಯೂ ತುಂಬಾ ನಿಖರವಾಗಿತ್ತು.[೮] ಎಂಬುದಕ್ಕೆ ಜಿಲ್ಲೆಯ ಶಾಸನಗಳನ್ನು ಪರಿಶೀಲಿಸಿದಾಗ ಕೆಲವು ಜಾತಿಗಳ ಬಗ್ಗೆ ನಮಗೆ ನೇರ ಉಲ್ಲೇಖಗಳು ಸಿಗುತ್ತವೆ. ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ಎಂದು ವಿಂಗಡಿಸಿದ್ದರೂ, ಇದು ವಾಸ್ತವದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಪಂಚಮರೆಂಬ ಐದು ಪಂಗಡಗಳು ಇದ್ದವೆಂಬುದನ್ನು ಮಾದಿನೂರು ಗ್ರಾಮದ ಶಾಸನವು, ತ್ರಿಭುವನ ಮಲ್ಲದೇವನ ಅರಸಿ, ಮೈಲಳದೇವಿ ದೇವಾಲಯಕ್ಕೆ ದಾನ-ದತ್ತಿಗಳನ್ನು ನೀಡಿದಂತೆ ವೈಶ್ಯ, ಶೂದ್ರ, ಪಂಚಮರು ಸಹ ತಮ್ಮ ಮದುವೆಯ ಕಾಲದಲ್ಲಿ ದೇವರಿಗೆ ಹಣವನ್ನು ದಾನ ಬಿಟ್ಟರೆಂದು ತಿಳಿಸುವುದರಿಂದ ಅಂದು ಜಾತಿ ವ್ಯವಸ್ಥೆ ಸಮಾಜದಲ್ಲಿ ಬಲವಾಗಿ ತಳವುರಿತ್ತೆಂಬುದನ್ನು ತೋರಿಸುತ್ತದೆ.[೯] ಕಲ್ಲೂರ ಶಾಸನ[೧೦] . ೧ ಪಂಚವರ್ಗಾವಂ ಪ್ರತಿ - - ಮಿರೆ ಶ್ರೀ ಸೋಬನೇಶ್ವರದೇವರಂಗಭೋಗಕ್ಕೆ ದನಕ್ಕಂಬಿಟ್ಟ ಕೋಳಿವಾಡ ಎಂದು ಪಂಚವರ್ಗದ ಉಲ್ಲೇಖವನ್ನು ನೀಡುವುದು, ಪಂಚವರ್ಗ ಎಂಬುದು ವಿಶ್ವಕರ್ಮರಾದ ಪಂಚಾಳರೆ ಆಗಿರಬೇಕು. ಒಂದು ಜಾತಿಯವರು ಬೇರೆ ಜಾತಿಗಳಿಗಿಂತ ಮೇಲೆಂಬ ಅಂಶವನ್ನು ಸಾಬೀತುಪಡಿಸುವ ಎರಡು ದಾಖಲೆಗಳು ದೊರಕುತ್ತವೆ. ಆನೆಗುಂದಿ ತಾಪ್ರಪಟ ಶಾಸನ[೧೧] ಕುಂಬಾರರಿಗೆ ಆ ವೃತ್ತಿ ಬಂದ ರೀತಿಯ ವಿವರವನ್ನು ನೀಡುತ್ತಾ ''ತಾವು ಈಗ ಮಾಡುತ್ತಿರುವ ಮಣ್ಣಿನ ಪಾತ್ರೆಗಳು ಗಿರಿಜಾ ಕಲ್ಯಾಣಕ್ಕಾಗಿ ಸೃಷ್ಟಿಯಾದವೆಂಬ ಹೆಗ್ಗಳಿಕೆಯನ್ನು ಪ್ರಸ್ತಾಪಿಸುತ್ತಾ, ಇವರಿಗೆ 'ಶಿವನೇ ಸಾಲೆಸಾಸಿರ್ವರು' ಎಂಬ ಹೆಸರನ್ನು ನೀಡಿದುದಾಗಿಯೂ, ಕುಂಬಾರ ಕುಲವು ಗಿರಿರಾಜನಕುಲವೆಂದೂ ಶಿವನು ಇವರಿಗೆ ಭಾವನಾಗಬೇಕೆಂದೂ ತಿಳಿಸುತ್ತದೆ. ಅಲ್ಲದೆ ೧೮ ಕೇಣಿಗಳ ಪಟ್ಟಿಯನ್ನು ಸಹ ಶಾಸನ ನೀಡುತ್ತದೆ. ಈ ಕೇಣಿಗಳಲ್ಲಿ ಮೂವತ್ತಿಚ್ಛಾಸಿರದ ಕೇಣಿಯೇ ಮೇಲಾದದ್ದು ಎಂದಿದೆ. ಶಾಸನ ನೊಳಂಬವಾಡಿ ೩೨,೦೦೦ ಪ್ರದೇಶದಲ್ಲಿ ರಚಿತವಾಗಿದ್ದರಿಂದ ನಾಡಿನಲ್ಲಿ ಕುಂಬಾರ ಕೇಣಿಯನ್ನು ಅವರ ವಿಶೇಷ ಗುಣಗಳನ್ನು ಸುಂದರವಾಗಿ ವರ್ಣಿಸುತ್ತದೆ.

ಗಿಣಿಗೇರಿಯ ಶಾಸನವು[೧೨] ಪಾಂಚಾಳರಬಗ್ಗೆ ಪ್ರಸ್ತಾಪಿಸುತ್ತದ್ದು, ಕಲ್ಲೂರ ಶಾಸನದ ಪಂಚವರ್ಗವು ಈ ಶಾಸನದ ಪಾಂಚಾಳ (ಪಂಚಾಳ) ರಾಗಿರುವುದಕ್ಕೆ ಪುಷ್ಟಿಕೊಡುತ್ತದೆ. ಮುಧೋಳಿನ ರಾಷ್ಟ್ರಕೂಟರ ಕಾಲದ ಶಾಸನ ಸವ್ಮಗಾರಚಂದ ಯುದ್ಧದಲ್ಲಿ ಹೋರಾಡಿ ಮಡಿದನೆಂದು ಮತ್ತು ಆತ ಚರ್ಮದ ಕೆಲಸ ಮಾಡುತ್ತಿದ್ದನೆಂದು ಹೇಳುವಲ್ಲಿ ಅವನ ಕುಲವನ್ನು ಉಲ್ಲೇಖಿಸುತ್ತದೆ.[೧೩] ಕೊಪ್ಪಳದ ಶಾಸನ ದಾನದ ಪೆಂಪಸಮಸ್ತ ಚಾತುರ್ವ್ವರ್ಣ್ಣ ಎಂದು ಹೇಳುತ್ತಾ ೪ ವರ್ಣಗಳ ಬಗ್ಗೆ ಮಾಹಿತಿ ನೀಡುತ್ತದೆ.[೧೪] ಮತ್ತೊಂದು ಶಾಸನ ಗೊನಂಬೆ ಕಂತೆಯ ತಂದೆಗಂಗವಂಶದ ಎರೆಗಂಗ ಗಂಡ ಅಜವರ್ಮನ ಮಗ ಕ್ಷತ್ರಿಯ ಕುಲದರಾಮನೆಂದು ಹೇಳುವಲ್ಲಿ ಕ್ಷತ್ರಿಯ(ಜಾತಿಯವರ) ಬಗ್ಗೆ ತಿಳಿಸುವ ಅಂಶ ಗಮನಾರ್ಹವಾಗಿದೆ.[೧೫]

## ವರ್ಣ ಹಾಗೂ ವೃತ್ತಿ

೧೩ ನೇ ಶತಮಾನದ ಹೊತ್ತಿಗೆ ವರ್ಣವ್ಯವಸ್ಥೆ ಕರ್ನಾಟಕದಲ್ಲಿ ಸಂಪೂರ್ಣವಾಗಿ ಕಣ್ಮರೆಯಾಗಿತ್ತು. ಆದರೆ ಬ್ರಾಹ್ಮಣ ಕ್ಷತ್ರಿಯ ಹಾಗೂ ವೈಶ್ಯವರ್ಣಗಳು ಅನೇಕ ಉಪಜಾತಿಗಳಾಗಿ ಒಡೆದಿದ್ದರೂ ಸಮಾಜದ ಗೌರವಕ್ಕೆ ಪಾತ್ರರಾಗಿದ್ದರು. ಶೂದ್ರರು ಹಲವಾರು ಕುಲಕಸುಬುಗಳನ್ನು ಅನುಸರಿಸುತ್ತಾ ನಾನಾ ಜಾತಿಗಳಾಗಿ ಕಾಣಿಸಿಕೊಂಡಿದ್ದಾರೆ. ಜಿಲ್ಲೆಯ ವಿಪ್ರನಾರಾಯಣದಲ್ಲಿ ಎಲೆಕಾರರು, ವೇಶ್ಯೆಯರು, ವಾಸವಾಗಿದ್ದು ಅಲ್ಲೊಂದು ಶೂದ್ರಾಲಯವಿದ್ದು, ಉನ್ನತ ವರ್ಗವಾದ ಬ್ರಾಹ್ಮಣರು ಸಹವಾಸವಾಗಿದ್ದರೆಂದು ತಿಳಿಸಿದರೆ,[೧೬] ಅಂಟೂರುಠಾಣ ಶಾಸನವು[೧೭] ಬಾದಾಮಿಯ ಬಲದೇವ, ಕೊಣಂಗೆರೆಯಯ್ಚಿಸೆಟ್ಟಿ ಮೆಗಣಗೇರೆಯ ಚಂಡಿಸೆಟ್ಟಿ, ಹಾವೇರಿಯ ಸೇನಬೋವಯೀಸ್ವರಸೆಟ್ಟಿ, ಅಧಿಕಾರವರ್ಗದವರು ಬ್ರಾಹ್ಮಣರು ಸೇರಿ ಪೆಂದೆಯ ಕೇರಿಯಲ್ಲಿ ಸತ್ರಶಾಲೆ ಮಾಡಿಸಿದವರೆಂದು ಹೇಳುವಲ್ಲಿ ಅಂದಿನ ಸಮಾಜದಲ್ಲಿ ವಿವಿಧ ವರ್ಗದ ಜನರು ಇರುವದನ್ನು ಪ್ರಸ್ತಾಪಿಸುತ್ತದೆ.

ವಿಪ್ರದ ಇನ್ನೊಂದು ಶಾಸನವು ಗಾವುಂಡರು, ಶ್ರೀನಖರಗಳು, ತಂಬುಲಿಗ ಸಾಸಿರ್ವರು, ತೆಲ್ಲಿಗರು, ಮಾಲೆಗಾರರು, ಮೇದರರು, ತಂಬುಲಿಗ ಸೆಟ್ಟಿಗಳು, ನಾಲ್ಕೂರು ಹಾಲುಗರು, ಅಕ್ಕಸಾಲಿಗರು, ಬಡಿಗರು, ಕಮ್ಮಾರರು ಕೋರಗವರು, ಹೆಗ್ಗಡೆಗಳೆಂಬ ಅನೇಕ ವೃತ್ತಿ ಜಾತಿವರ್ಗದವರು ವಾಸಿಸುತ್ತಿರುವ ಬಗ್ಗೆ ಉಲ್ಲೇಖಿಗಳನ್ನು ನಿಡುತ್ತದೆ.[೧೮] ಕುಕನೂರಿನ ಶಾಸನವೊಂದು ''ನಲ್ವತ್ತೆಂಟು ಕೇರಿಗಳ ಬಗ್ಗೆ ಉಲ್ಲೇಖಿಸುತ್ತಾ ವಿವಿಧ ಜನ ವರ್ಗದವರು ಅಲ್ಲಿ ವಾಸಿಸುತ್ತಿದ್ದರೆಂದು ತಿಳಿಸುತ್ತದೆ''[೧೯] ಪುರ ಶಾಸನ ಗಾಣಿಗರು, ಸೇನಬೋವ ಬಂಮರಸ, ನರಸಿಂಹಮಯ್ಯ, ಅರಮನೆಯ 'ಶಿಲ್ಪಿಕಾಳಾಚಾರ್ಯರ್' ಕಾಳೋಜ, ಅರಮನೆಯ 'ಬಡಿಗ' ಕಲ್ಲೋಜ, ಕೆಳವಾಡಿನಾಡ ಹಿರಿಯ ಬೀರವಣಿಗ ಕೇತಿ ಸೆಟ್ಟಿ, ಬ್ರಾಹ್ಮಣರು, ೪೮ ಮನೆಯ ಷಟ್ಟರು, ಕವಡಿಯ ಕೇತಶೆಟ್ಟಿ ವಿವಿಧ ಊರಿನ ವಿವಿಧ ಜಾತಿಯ ಮುಖಂಡರು ಸೇರಿ ದೇವರಿಗೆ ದಾನದತ್ತಿ ನೀಡಿದರೆಂದು ಹೇಳುತ್ತಾ, ಜಾತಿಯ ಬಗ್ಗೆ ಬೆಳಕು ಚೆಲ್ಲುವುದು.[೨೦] ಕವಲೂರಿನ ಶಾಸನದಲ್ಲಿ ಸೂಳಿಗೇರಿ, ಯಡೆಹಳ್ಳಿಗೇರಿ, ೫೦೦ ಮಹಾಜನ ಬ್ರಾಹ್ಮಣರಿದ್ದ ಪ್ರಸ್ತಾಪಗಳಿವೆ.[೨೧] ಅಳವಂಡಿ ಶಾಸನದಲ್ಲಿ ಸಹ ತಳಕಲಗೇರಿ, ಕಡಬಗೇರಿ, ತೇಲ್ಲಿಗಗೇರಿ ಇಂಗೆಯಗೇರಿ, ಉಲ್ಲೇಖಿಗಳಿದ್ದುದನ್ನು ಹೇಳುತ್ತಾ ಅಂದು ವಿವಿಧ ವರ್ಗದ ಜನರು ಬೇರೆ

ಬೇರೆಯಾಗಿ ತಮ್ಮ ತಮ್ಮ ಕೇರಿಗಳಲ್ಲಿ ವಾಸಮಾಡುತ್ತಿದ್ದರೆಂಬುದನ್ನು ತಿಳಿಸುತ್ತದೆ.[೨೨] ಆನೆಗುಂದಿ ಶಾಸನ, ಅಂಬಿಗರು, ಹರಗೊಲ್ಲರು, ತಳವಾರ, ಕೋಟೆ, ಬ್ರಾಹ್ಮಣರು, ಬೋವರು, ತಳವಾರಕಟ್ಟೆ, ಸಾಧುಸಂತರು, ಒಂದೇ ಊರಿನಲ್ಲಿ ವಾಸವಾಗಿರುವುದಾಗಿ ತಿಳಿಸುವುದು.[೨೩] ಹೀಗೆ ಶಾಸನಗಳಲ್ಲಿ ಉಲ್ಲೇಖ ಬರುವ ಜಾತಿಗಳ ಕುರಿತು ಗಮನಿಸುತ್ತಾ, ೧೨ ನೆಯ ಶತಮಾನದ ಶರಣರ ಕಾಲದ ಸಾಮಾಜಿಕ ಸ್ಥಿತಿಗತಿ ಅವರ ಬದುಕು, ಇತ್ಯಾದಿ ಅರಿತಾಗ ಪ್ರಾಚೀನ ಮಧ್ಯಕರ್ನಾಟಕದಲ್ಲಿ ಪ್ರತಿಯೊಂದು ಜಾತಿಯ ಜನಾಂಗದವರು ಅವರವರ ಕೇರಿಯಲ್ಲಿ, ಬೀದಿಯಲ್ಲಿ, ಕೋಟೆಯಲ್ಲಿ ವಾಸವಾಗಿರುತ್ತಿದ್ದರೆಂದು ಸ್ಪಷ್ಟವಾಗುವುದು. ಶಾಸನಕಾರರಿಗೆ ಸಾಮಾನ್ಯ ಜನತೆ ವಾಸಿಸುವ ಕುರಿತು ಅವರ ಜೀವನ ವಿಧಾನದ ಕುರಿತು ಚಿತ್ರಿಸುವ ಉದ್ದೇಶವಿರದಿದ್ದರೂ ಸಂದರ್ಭಕ್ಕನುಗುಣವಾಗಿ ಅವರ ಬಗೆಗೆ ನೀಡುವ ಉಲ್ಲೇಖಗಳು ಪ್ರಾಚೀನರ ವರ್ಣವ್ಯವಸ್ಥೆ ತಿಳಿಯಲು ಸಹಾಯಕಾರಿಯಾಗಿವೆ. ಚಾತುರ್ವರ್ಣವ್ಯವಸ್ಥೆಯಲ್ಲಿ ಬಾಳಿದ ಅಂದಿನ ಜನತೆ ಅನೇಕ ತೊಂದರೆ ಸಂಕಟಗಳಲ್ಲಿಯೂ ಆದರ್ಶ ನೀತಿಯಂತಹ ಮೌಲ್ಯಗಳನ್ನು ಎತ್ತಿ ಹಿಡಿದಿರುವುದು ಕಂಡುಬರುತ್ತದೆ. ಶಾಸನಗಳಿಂದ ವಿವಿಧ ಜಾತಿಯ ಇಡೀ ಜನಜೀವನದ ವಿವರಗಳನ್ನು ತಿಳಿಯಲು ಸಾಧ್ಯವಾಗದಿದ್ದರೂ ಅಲ್ಲಲ್ಲಿ ಪ್ರಕಟವಾಗಿರುವ ಕೆಲ ಸಂಗತಿಗಳನ್ನು ಸಂಗ್ರಹಿಸಿ ಜನತೆಯ ಜೀವನ ಕ್ರಮದ ಬಗ್ಗೆ ಊಹಿಸಲು ಸಾಧ್ಯವಿದೆ.

ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಮುಖ್ಯ ಘಟ್ಟವಾಗಿ ಕಾಣಿಸಿಕೊಂಡ ಸಮಾಜದ ವ್ಯವಸ್ಥೆಯನ್ನು ಬ್ರಾಹ್ಮಣ (ಮಹಾಜನರು) ವರ್ಗ ಹಾಗೂ ವಿವಿಧ ವೃತ್ತಿಗಳನ್ನವಲಂಬಿಸಿದ ಶ್ರಮಿಕವರ್ಗ ಇವೆರಡರ ಮಧ್ಯದಲ್ಲಿ ಬರುವವರು ವ್ಯಾಪಾರಿ ವರ್ಗಗಳೆಂದು ವಿಂಗಡಿಸಿಕೊಂಡು ಚರ್ಚಿಸಲಾಗಿದೆ. ವ್ಯಾಪಾರಿವರ್ಗ ತಮ್ಮ ಆರ್ಥಿಕ ಸ್ಥಿತಿಯಿಂದ ಪ್ರಭುವರ್ಗ(ಬ್ರಾಹ್ಮಣರು)ವನ್ನೇ ಪ್ರತತಿನಿಧಿಸಿದಂತೆ ತೋರಿದರೆ, ಶ್ರಮಿಕವರ್ಗ ಜನಸಾಮಾನ್ಯರನ್ನು ಪ್ರತಿನಿಧಿಸಿರುವುದು ಕಂಡುಬರುವುದು. ಬ್ರಾಹ್ಮಣ ವರ್ಗ ಸಮಾಜದಲ್ಲಿ ಉನ್ನತ ಸ್ಥಾನದಲ್ಲಿರುವುದರಿಂದ ಅವರು ಧರ್ಮ ಮತ್ತು ರಾಜಧರ್ಮವನ್ನು ನಿಯಂತ್ರಿಸುತ್ತಿದ್ದರೆಂದು ಕಾಣುತ್ತದೆ.

## ಬ್ರಾಹ್ಮಣರು(ಮಹಾಜನರು)

ಕ್ರಿ.ಶ. ೩ ನೇ ಶತಮಾನಕ್ಕಿಂತ ಹಿಂದೆಯೇ ಗುರ್ತಿಸಿಕೊಂಡಿದ್ದ ಬ್ರಾಹ್ಮಣರು ೧೧ ನೇ ಶತಮಾನಕ್ಕಾಗಲೇ ದಕ್ಷಿಣ ದ್ರಾವಿಡ ದೇಶದ ಮುನ್ನೂರ್ವರು ಬ್ರಾಹ್ಮಣರು ವಲಸೆ ಬಂದು ಕರ್ನಾಟಕದಲ್ಲಿ ನೆಲೆಸಿದ್ದರು, ಎಂಬ ವಿಷಯ ಹೊರನಾಡಿನ ಶಾಸನಗಳಿಂದ ಸ್ಪಷ್ಟಗೊಳ್ಳುತ್ತದೆ.[೨೪] ಈ ಬ್ರಾಹ್ಮಣರು ಪ್ರಾಚೀನ ಕರ್ನಾಟಕದಲ್ಲಿ ಅತ್ಯಂತ ಪ್ರಭಾವಶಾಲಿಗಳಾಗಿ ಅಂದಿನ ಸಮಾಜದಲ್ಲಿ ಅಗ್ರಸ್ಥಾನದಲ್ಲಿದ್ದರು. ಅವರ ವಿದ್ಯಾಭ್ಯಾಸಕ್ಕಾಗಿ ರಾಜರು ನೂರಾರು ದತ್ತಿಗಳನ್ನು ಬ್ರಾಹ್ಮಣರಿಗೆ ಬಿಟ್ಟುಕೊಡುತ್ತಿದ್ದರು. ಅಲ್ಲದೆ ಊರುಗಳನ್ನು ಅಗ್ರಹಾರಗಳನ್ನಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದರು, ಎಂಬ ಸಂಗತಿಯನ್ನು ಕೊಪ್ಪಳಜಿಲ್ಲೆಯ ಅನೇಕ ಶಾಸನಗಳಲ್ಲಿ ಕಾಣುತ್ತೇವೆ.

ಮಾದಿನೂರಿನ ಶಾಸನವೊಂದರಲ್ಲಿ ನೂರ್ಮಡಿ ತೈಲ ಅಹವಮಲ್ಲನು ( ೨ ನೇ ತೈಲಪ) ತನ್ನ ಮೊದಲ ರಾಜ್ಯಭಾರದಲ್ಲಿ ಬ್ರಹ್ಮಾಂಡಕ್ರತುವನ್ನು ಮಾಡಿ ಅಲ್ಲಿಯ ೨೦ ಜನ ಮಹಾ ಜನರ ಕಾಲ ತೊಳೆದು

ಮಾದಿನೂರು ಗ್ರಾಮವನ್ನು ಅಗ್ರಹಾರವಾಗಿ ಬ್ರಾಹ್ಮಣರಿಗೆ ನೀಡಿ, ಅಲ್ಲೊಂದು ತ್ರೈಪುರುಷ ದೇವಾಲಯ ಕಟ್ಟಿಸಿ, ಆ ದೇವಾಲಯದ ಪೂಜೆ ಪುನಸ್ಕಾರ, ಜೀರ್ಣೋದ್ಧಾರ, ನಂದಾದೀಪಕ್ಕೆ, ಪೂಜಾರಿ, ಮಹಾಜನರಿಗಾಗಿ ವಿವಿಧ ದಾನ ದತ್ತಿಗಳನ್ನು ನೀಡಿರುವುದಾಗಿ ಹೇಳಿದೆ.[೨೫] ಕುಕನೂರು ಶಾಸನದಲ್ಲಿ ತ್ರಿಭುವನ ಮಲ್ಲದೇವರು ಆಳುತ್ತಿದ್ದಾಗ ಗಂಗಾಧರನಾಯಕನು ಮಹಾ ಅಗ್ರಹಾರ ಕುಕನೂರ ಸಾಸಿರ್ವ್ವರ ಕೈಯಲ್ಲಿ ಸರ್ವನಮಸ್ಯವಾಗಿ ಪಡೆದು ಸರಸ್ವತಿದೇವಿಯ ಅಂಗಭೋಗ, ನಿವೇದ್ಯಕ್ಕೆ ಪೂಜಾರಿಕೆ, ಹಾಡುವವರಿಗೆ, ಮಾಲೆಗಾರರಿಗೆ, ಹರಿಕಾರರಿಗೆ ಭೂಮಿದಾನ ಮಾಡಿದ ವಿಷಯ, ಮತ್ತು ಅದೇ ಅಗ್ರಹಾರದ ಸಾವಿರ ಮಹಾಜನರ ಕೈಯಲ್ಲಿ ಬ್ರಾಹ್ಮಣರ ಭೋಜನಕ್ಕಾಗಿ, ಅಲ್ಲಿಯ ಸತ್ರಕ್ಕೆ ಚತುರ್ವೇದಭಟ್ಟರ ತಿಪ್ಪೆ ಘೈಸಾಸರಿಗೆ, ನಂದಾದೀಪಕ್ಕೆ ವಿವಿಧ ರೀತಿಯದಾನ - ದತ್ತಿ ನೀಡಿ ಈ ಧರ್ಮವನ್ನು ಸಾಸಿರ್ವರು ನಡೆಸಬೇಕೆಂದು ವಿಧಿಸಿದ್ದಾನೆ. ಈ ಅಗ್ರಹಾರ ೪೮ ಕೇರಿಗಳಿಂದ ಕೂಡಿದ್ದು ಇಲ್ಲಿ ಅನೇಕ ಮಂಟಪ ದೇವಾಲಯಗಳಿಂದ ಕಂಗೊಳಿಸುತ್ತಿತ್ತು. ವೇದ ಪಾಠಗಳು ನಡೆಯುತ್ತಿದ್ದ ಈ ಗ್ರಾಮ ಬ್ರಹ್ಮನಿಗೆ ಸಮಾನವಾದ ಬ್ರಾಹ್ಮಣ ನಿವಾಸಿಗಳಿಂದ ಹೆಸರಾಗಿತ್ತು. ಇಂತಹ ವಿಖ್ಯಾತ ಅಗ್ರಹಾರದಲ್ಲಿ ೧೦೦ ಜನ ಬ್ರಾಹ್ಮಣರು ಯಮ, ನಿಯಮ ಸ್ವಾಧ್ಯಾಯ ಧ್ಯಾನ, ಧಾರಣ, ಸಮಾಧಿ, ಜಪ ಮೊದಲಾದ ಕರ್ತವ್ಯಗಳಲ್ಲಿ ನಿರತರಾಗಿದ್ದರಲ್ಲದೆ, ತರ್ಕ, ವ್ಯಾಕರಣ, ಪುರಾಣ, ಕಾವ್ಯ, ನಾಟಕದಂತಹ ವಿಷಯಗಳಲ್ಲಿ ವಿದ್ವಾಂಸರಾಗಿದ್ದರೆಂದು ವರ್ಣಿಸುವುದು. [೨೬]

ಅದೇ ಊರಿನ ಇನ್ನೊಂದು ಶಾಸನ ಕುಕನೂರು ಹಲವು ಬಾಡಗಳ ಅಧಿಕಾರಿ, ಮಹಾ ಪ್ರಧಾನ ದಂಡನಾಯಕ ಬಲಿದೇವಯ್ಯ, ಮತ್ತವನ ಕರಣಗಳು ಹಾಗೂ ಮಹಾಪ್ರಧಾನಿ, ಸೇನಾಪತಿ, ಬೆಳ್ವಲನಾಡಿನ ಅಧಿಕಾರಿಯಾದ ಅಮ್ಮಣ್ಣಯ್ಯ ಮತ್ತವನ ಕರಣಗಳು ಬಿಜ್ಜಳ ದೇವನಿಗೆ ಬಿನ್ನಹ ಮಾಡಿಕೊಂಡು ಕುಕನೂರು ೩೦ ರ ಶ್ರೀಮಂತಗ್ರಾಮ ಎಡೆಹಳ್ಳಿಯ ಸಿಮೆಯ ಉತ್ಪತ್ತಿಯನ್ನು ಎರಡುಭಾಗ ಮಾಡಿ ಒಂದು ಭಾಗ ದೇವರಿಗೂ ಇನ್ನೊಂದು ಭಾಗ ಕುಕನೂರಿನ ೧೫ ಜನ ಬ್ರಾಹ್ಮಣರಿಗೆ ದಾನ ನೀಡಿದ ವಿವರಣೆ ನೀಡಿದರೆ,[೨೭] ಅದೇ ಕುಕನೂರಿನ ಕ್ರಿ.ಶ. ೧೧೪೩ ರ ಶಾಸನ ಜಗದೇಕಮಲ್ಲನು ರಾಜ್ಯವನ್ನು ಆಳುತ್ತಿರುವಾಗ ಅಗ್ರಹಾರ ಕುಕನೂರಿನ ಸಾವಿರ ಮಹಾಜನರ ಪ್ರಿಯ ಮಕ್ಕಳಾದ ಗಳೆಯ ಮುನ್ನೂರ್ವರು, ಸಾವಿರ ಮಹಾಜನರ ಕೈಯಲ್ಲಿ, ತೋಟಗೇಶ್ವರ ದೆವರ್ಗೆ ತೋಟಗೆಲಸದಲ್ಲಿ ಒಂದು ಹಾಗ ಬಿಟ್ಟಂತೆ ತಿಳಿಸಿದರೆ, ಕ್ರಿ.ಶ. ೧೧೨೯ ರ ಶಾಸನ ಗಣೇಶ್ವರ ದೇವಾಲಯದಲ್ಲಿ ರುದ್ರಾದಿತ್ಯ ಘೈಸಾಸನು ಮಾಡಿಸಿದ ಸತ್ರದ ಮನೆಯಲ್ಲಿ ಪ್ರತಿದಿವಸವೂ ೬ ಜನ ಬ್ರಾಹ್ಮಣರು ಊಟ ಮಾಡುವಂತೆ ಭೂದಾನ ನೀಡಿರುವುದಾಗಿ ತಿಳಿಯುತ್ತದೆ.

ಅಳವಂಡಿಯ ಶಾಸನ ಪ್ರಕಾರ ಜಗದೇಕಮಲ್ಲ ಪೆರ್ಮಾಡಿಯು ಕುಂತಳದೇಶದಲ್ಲಿ ಆಳ್ವಿಕೆ ಮಾಡುತ್ತಿರುವಾಗ, ಅವರ ಅಧೀನದ ಅಳವಂಡಿ ಅಗ್ರಹಾರದ ೪೦೦ ಜನ ಬ್ರಾಹ್ಮಣರು ವ್ಯಾಕರಣ, ಆಗಮ, ಸ್ಮೃತಿ, ಪುರಾಣ ಮುಂತಾದ ಅಧ್ಯಯನ ಅಧ್ಯಾಪನ ದಾನ, ಪ್ರತಿಗ್ರಹಣ, ಯಜನ, ಯಾಜನ, ಶಟ್ಕರ್ಮನಾಟಕ ಇತ್ಯಾದಿ ವಿಷಯಗಳ ಅಧ್ಯಯನದಲ್ಲಿ ತೊಡಗಿ ಉದ್ದಾಮ ಪಂಡಿತರೆನಿಸಿಕೊಂಡಿದ್ದರು. ಇವರಿಗೆ ಅನೇಕ ಚಟುವಟಿಕೆಗಳನ್ನು ನಡೆಸಲು ಭೂಮಿ, ಹಣ ಇತ್ಯಾದಿ ದಾನದತ್ತಿಗಳು ನೀಡಿದರೆಂದು[೨೮] ಶಾಸನಗಳು

ವಿವರವಾಗಿ ಉಲ್ಲೇಖಿಸುವವು. ಕವಲೂರಿನ ಊರೋಡೆಯ ಮಹಾಜನಂಗಳೈನೂರ್ವರುಂ(೫೦೦) ಗೋಬ್ರಾಹ್ಮಣರಿಗೆ ಯಡೆಹಳ್ಳಿಯ ಗ್ರಾಮದ ಆದಾಯವನ್ನು ಬಿಟ್ಟರೆಂದು ಮತ್ತೊಂದು ಶಾಸನ ತಿಳಿಸುತ್ತದೆ.[೨೯] ತಳಕಲ್ಲಿನ ಶಾಸನ ಕೂಡಾ ಅಗ್ರಹಾರದ ಬ್ರಾಹ್ಮಣರಿಗೆ ಬಡಗಲ್ ಹೊಲದ ಆದಾಯ ಬಿಟ್ಟ ಕುರಿತು ಹೇಳಿದೆ [೩೦] ಮುಧೋಳ ಶಾಸನವು ಚಾಳುಕ್ಯದೊರೆ ಶ್ರೀ ತೈಲಪನು ಕಲ್ಯಾಣದ ನೆಲೆವೀಡಿನಿಂದ ರಾಜ್ಯಭಾರ ಮಾಡುವಾಗ, ಅಲ್ಲಿಯ ಬ್ರಾಹ್ಮಣರು ಮತ್ತು ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಗ್ರಹಾರಂ ಮುದುವೊಳಲಶೇಷ ಮಹಾಜನಂಗಳ ಸಾಸಿರ್ವ್ವರ ಕುರಿತು ವರ್ಣಿಸಲ್ಪಟ್ಟಿದೆ. ಬ್ರಾಹ್ಮಣರು ಅಲ್ಲಿ ಪಾಠ ಓದುವದು, ಓದಿಸುವುದು, ದಾನ ಮಾಡುವುದು ಮತ್ತು ಸ್ವೀಕರಿಸುವುದು ಇತ್ಯಾದಿ ಷಟ್ಕರ್ಮಗಳಲ್ಲಿ ನಿರತರಾಗಿದ್ದರಲ್ಲದೆ ನಾಲ್ಕು ವೇದಗಳನ್ನು ಸಹ ತಿಳಿದವರಾಗಿದ್ದರೆಂದು ಹೇಳುವಲ್ಲಿ ಬ್ರಾಹ್ಮಣರ ಪ್ರಾಮುಖ್ಯತೆಯ ಕುರಿತು ತಿಳಿಸುತ್ತದೆ.[೩೧] ಮತ್ತೊಂದು ಕುಕನೂರು ಶಾಸನ ಯಮ, ನಿಯಮ, ಸ್ವಾಧ್ಯಾಯ, ದ್ಯಾನದಾರಣಮೊನಾನುಷ್ಟಾನ, ಜಪಹೋಮ ಸಮಾಧಿ ಶೀಳಸಂಪನ್ನರಪ್ಪ, ಶ್ರೀಮನ್ನ್ಗ್ರಹಾರ ಕುಕನೂರು ಮಹಾಜನ ಬ್ರಾಹ್ಮಣರ ಕುರಿತು ಉಲ್ಲೇಖಿಸಿದೆ[೩೨] ಇದನ್ನೆ ಹನ್ನೆರಡನೆಯ ಶತಮಾನದ ಶರಣರು ಇಂತಹ ಚತುರ್ವೇದಗಳ ಅಧ್ಯಯನದಲ್ಲಿ ಬ್ರಾಹ್ಮಣರು ತಮ್ಮನ್ನು ತಾವು ತೊಡಗಿಸಿಕೊಂಡಿರುವದನ್ನು ಬಣ್ಣಿಸಿರುವದು.[೩೩] ಇದೇ ಜಿಲ್ಲೆಯ ಇನ್ನೊಂದು ಮಹಾ ಅಗ್ರಹಾರ ಇಟ್ಟಿಗೆಯಾಗಿದ್ದು, ಸರಸ್ವತಿಯ ದೇವಾಲಯದಲ್ಲಿರುವ ಶಾಸನ ಅಲ್ಲಿಯ ಅಗ್ರಹಾರದ ನಾಲ್ಕುನೂರು ಜನ ಬ್ರಾಹ್ಮಣರು, ಶಾಸ್ತ್ರಜ್ಞರನ್ನು ಅವರ ಕರ್ತವ್ಯಗಳನ್ನು, ದಾನ ದತ್ತಿಗಳನ್ನು ದೇವಾಲಯಕ್ಕೆ ಹೊಂದಿಕೊಂಡಿರುವ ಬಾಳೆ, ತೆಂಗು, ಅಡಿಕೆ ತೋಟ ಗದ್ದೆ ಇತ್ಯಾದಿ ವಿಷಯಗಳ ಕುರಿತು ಸವಿಸ್ತಾರವಾಗಿ ವರ್ಣಿಸಿರುವುದು[೩೪] ಈ ಬ್ರಾಹ್ಮಣರಿಂದಲೆ ಅಗ್ರಹಾರ ಬ್ರಹ್ಮಪುರಿ ಘಟಿಕಾಸ್ಥಾನಗಳು, ಪ್ರಾಚೀನ ಕರ್ನಾಟಕದ ಅತೀ ಮುಖ್ಯ ವಿದ್ಯಾಕೇಂದ್ರಗಳಾಗಿ ಬೆಳೆಯಲು ಅನುಕೂಲವಾಯಿತೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅಂತೆಯೇ ಅವರ ಶ್ರೇಷ್ಠತೆಯ ಬಗ್ಗೆ ಇದೇ ಶಾಸನ ''ಸಕಳ ವ್ಯಾಕರಣಂಗಳುಂ ವಿವಿಧ ವೇದಾರ್ಥಂಗಳುಂ ಮೂರ್ತಿಗೊಂಡ ಸಕಲಶಾಸ್ತ್ರ ಸಮೇತ ಮೊಳಗಿಸಿ ತಮಂ ಬ್ರಹ್ಮ ವಿದ್ಯಾ ವಿಶೇಷಕರವಲ್ಲಾನಂ ಚರಿತ್ರ ಪಾತ್ರರಮಳ ಜ್ಞಾನರ್ಥಿ ಸಂಪನ್ನರೀಸಕಳಕ್ಷೋಣಿಗೆ ಪೂಜ್ಯರಿಟ್ಟಿಗೆ ನಾಲ್ನೂರ್ವ್ವದ್ವಿಜಂಗುತ್ತಮರೆಂದು'' ವರ್ಣಿಸುತ್ತದೆ.

ರಾಜಕೀಯ ಕ್ಷೇತ್ರದಲ್ಲಿಯೂ ಸಹ ಬ್ರಾಹ್ಮಣರು ತಮ್ಮ ಪ್ರಭಾವ ಬೀರಿದ್ದರೆಂಬ ಅಂಶ ಮೇಲಿನ ಇಟ್ಟಿಗೆ ಶಾಸದಿಂದ ಅರ್ಥವಾಗುತ್ತದೆ. ಅಲ್ಲಿಯ ಬ್ರಾಹ್ಮಣ ಕುಲದಲ್ಲಿ ಜನಿಸಿದ ಮಹಾದೇವ ದಂಡನಾಯಕನು ಕಲ್ಯಾಣ ಚಾಳುಕ್ಯ ಅರಸ ವಿಕ್ರಮಾದಿತ್ಯನ ಕೈಕೆಳಗೆ ದಂಡನಾಯಕನಾಗಿದ್ದಾಗ ಇಟ್ಟಿಗೆಯ ಅಗ್ರಹಾರದಲ್ಲಿ ತನ್ನ ಹೆಸರಿನಿಂದ ಮಹಾದೇವ ದೇವಾಲಯ ಕಟ್ಟಿಸಿದನು. ಅಲ್ಲದೆ ಆ ದೇವಾಲಯದ ಅಂಗಭೋಗ, ಪಾತ್ರಪಾವುಳ, ನಿವೇದ್ಯ, ಅನ್ನದಾನ ಭಟ್ಟವೃತ್ತಿ ಮುಂತಾದವುಗಳು ನಡೆಯಲು ೫೦೦ ಮತ್ತರು ಭೂಮಿದಾನ ಮಾಡಿದನಲ್ಲದೆ, ಆಳುಕಾಳುಗಳಿಗಾಗಿ ಮನೆ ಕಟ್ಟಿಸುತ್ತಾನೆ. ಋಗ್ವೇದದ ಬಾಲ ಶಿಕ್ಷೆ, ಯಜುರ್ವೇದದ ಬಾಲಶಿಕ್ಷೆ ಮುಂತಾದವುಗಳು ನಡೆಯಲು ಬೇರೆ ಬೇರೆ ದಾನಗಳನ್ನು ನೀಡಿ ತನ್ನ ರಾಜಕೀಯ ಪ್ರಭಾವನ್ನು ಹೆಚ್ಚಿಸಿಕೊಂಡನು[೩೫] ಅಂಟೂರತಾಣ ಶಾಸನವೊಂದು ಮಹಾಪ್ರಧಾನ ಧರ್ಮಾಧ್ಯಕ್ಷನಾಗಿ ಸೊಮೇಶ್ವರ

ಭಟ್ಟೋಪಾಧ್ಯಾಯನು ಆಡಳಿತ ಅಧಿಕಾರಿಯಾಗಿದ್ದಾಗಿ ಸ್ಪಷ್ಟ ಪಡಿಸಿದೆ.[೩೬] ಈ ಶಾಸನಗಳು ಉಲ್ಲೇಖಮಾಡುವ ವಿಷಯವನ್ನು ನೋಡಿದರೆ ಅಗ್ರಹಾರಗಳನ್ನು ಪಡೆದು ವಿದ್ಯಾದಾನ ಮಾಡುವ ಬ್ರಾಹ್ಮಣರು ರಾಜಕೀಯ ಕ್ಷೇತ್ರದತ್ತ ವಾಲಿದ್ದಲ್ಲದೆ, ಸೈನಿಕರಾಗಿ ಸಂಧಿವಿಗ್ರಹಿಗಳಾಗಿ ಕ್ಷತ್ರಿಯರು ಮಾಡುವ ಸೈನಿಕ ಸೇವೆಯನ್ನು ಬ್ರಾಹ್ಮಣರು ಮಾಡುವ ಹಂತ ತಲುಪಿದ್ದು ಸಾಮಾಜಿಕ ಪರಿವರ್ತನೆ ಮತ್ತು ಜಾತಿ ವ್ಯವಸ್ಥೆಯಂತ ಅನಿಷ್ಠತೆ ಸಾವಕಾಶವಾಗಿ ಅಸ್ತಿತ್ವ ಕಳೆದುಕೊಳ್ಳುವ ಸೂಚನೆ ನೀಡುತ್ತದೆ.

ಈ ವಿವಿಧ ಕ್ಷೇತ್ರದಲ್ಲಿ ಹೆಸರಾದ ಬ್ರಾಹ್ಮಣರಿಗೆ ವಿಶಿಷ್ಟ ರೀತಿಯ ಕುಲಗೋತ್ರಗಳಿರುವುದಾಗಿ ಶಾಸನಗಳು ವಿವರವಾಗಿ ತಿಳಿಸುತ್ತವೆ. ಮಾದಿನೂರ ಶಾಸನವು. ಅಗಸ್ತ್ಯ ಗೋತ್ರ, ಅತ್ರೇಯಗೋತ್ರ, ಕಾಶ್ಯಪಗೋತ್ರ ವಿಶ್ವಾಮಿತ್ರಗೋತ್ರಗಳನ್ನು ಹೆಸರಿಸಿದರೆ[೩೭] ಹುಲಗಿ ಶಾಸನವು ಕಾಮನಾಯಕನ ಗೋತ್ರವನ್ನು,[೩೮] ಆದರಂತೆ ಇನ್ನೂ ಕೆಲವು ಶಾಸನಗಳು ಅಗಸ್ತ್ಯಗೋತ್ರದ[೩೯] ಕ್ಷತ್ರಿಯ ಗೋತ್ರ, ಕ್ಷಾತ್ರಗೋತ್ರ, ಸೋಮವಂಶ, ಮನುವಂಶ, ಹಾರತಿಗೋತ್ರ[೪೦] ಕಾಶ್ಯಪ ಗೋತ್ರ ಜಾಹ್ನವಿಗೋತ್ರ[೪೧] ಮೊದಲಾದ ಗೋತ್ರಗಳ ಬಗ್ಗೆ ಉಲ್ಲೇಖಿಸಿರುವವು. ಈ ಕುಲಗೋತ್ರಗಳು ಯಾಗಗಳಲ್ಲಿ ದೇವತೆಗಳ ಆಹ್ವಾನಕ್ಕೆ ಉಪಯುಕ್ತವೆಂದು ತಿಳಿಯಲಾಗಿತ್ತು.

ಅಂತೆಯೆ ಬ್ರಾಹ್ಮಣರಲ್ಲಿಯ ಜ್ಞಾನ, ಶಾಸ್ತ್ರ ಪರಿಜ್ಞಾನ, ವಿದ್ಯಾಕ್ಷೇತ್ರದಲ್ಲಿನ ಪ್ರತಿಭೆ, ಇತರ ವಿವಿಧ ಕ್ಷೇತ್ರದಲ್ಲಿ ಹೆಸರಾದ ಇವರನ್ನು ರಾಜರು, ಅಧಿಕಾರಿಗಳು, ಸಾಮಾಜಿಕರು ಗೌರವಿಸಿ ಅವರಿಗಾಗಿ ಅನೇಕ ದಾನ ದತ್ತಿಗಳನ್ನು ನೀಡಿ ವಿವಿಧ ಚಟುವಟಿಕೆಗಳನ್ನು ನಡೆಸಲು ಅಗ್ರಹಾರ ಕಟ್ಟಿಸಿಕೊಡುತ್ತಿದ್ದರು.[೪೨] ಇದರಿಂದಾಗಿ ಈ ಬ್ರಾಹ್ಮಣರು ಅಗ್ರಹಾರಗಳಲ್ಲಿದ್ದುಕೊಂಡು ಧಾರ್ಮಿಕ ಖ್ಯಾತಿಯನ್ನು ಪಡೆದು ಸಮಾಜದ ಎಲ್ಲ ಜನವರ್ಗದ ಗೌರವಕ್ಕೆ ಪಾತ್ರರಾಗಿದ್ದರು.

## ಸ್ಥಾನಾಚಾರ್ಯರು

ಶೈವಧರ್ಮ ಸಂಪ್ರದಾಯದ ಸ್ಥಾನಾಚಾರ್ಯರೂ, ಸ್ಥಾನಿಕ, ಸ್ಥಾನಪತಿ, ತಪೋಧನ, ದೇಗುಲ ಆಳುವವರು, ಒಡೆಯರು, ಪೂಜಿಸುವರು ಎಂದು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಇವರು ದೇವಾಲಯ ಮಠಗಳಿಗೆ ಕೊಟ್ಟ ದಾನಧರ್ಮವನ್ನು ಪರಿಗ್ರಹಿಸಿದವರಾಗಿರುವರು. ಹೀಗಾಗಿ ಜನರಿಗೆ ಪೂಜ್ಯರು, ವಂದನೀಯರು, ಗುರುಗಳಾಗಿದ್ದರೆಂದು ತಿಳಿಯುತ್ತದೆ.[೪೩] ಹತ್ತನೆಯ ಶತಮಾನದ ಬಳಿಕ ಜೈನರ ಪ್ರಭಾವ ಕಡಿಮೆಗೊಳ್ಳುತ್ತಿದ್ದಂತೆಯೇ ಸ್ಥಾನಾಚಾರ್ಯರು ರಾಜಪ್ರಭುತ್ವ ಮತ್ತು ಸಮಾಜ ಮನ್ನಣೆಯಿಂದ ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡರು. ಅರಸರು ರಾಣಿಯರು ಸಾಮಂತರು ಮಂಡಳೇಶ್ವರರೂ ದಂಡನಾಯಕರು ಸ್ಥಾನಾಚಾರ್ಯರಿಗಾಗಿ ದಾನ-ದತ್ತಿ ಬಿಟ್ಟಿರುವುದನ್ನು ಶಾಸನಗಳು ತಿಳಿಸುತ್ತವೆ. ಇವರು ನೈಷ್ಠಿಕ ಬ್ರಹ್ಮಚಾರಿಗಳಾಗಿ ದೇವಾಲಯ-ಮಠಗಳ ಆಡಳಿತ ನೋಡಿಕೊಳ್ಳುತ್ತಿದ್ದರಲ್ಲದೆ ಬ್ರಾಹ್ಮಣರಂತೆ ಯಮ, ನಿಯಮ, ಸ್ವಾಧ್ಯಾಯ, ದಾನ, ಧಾರಣ ಜಪ ಸಮಾಧಿ ಸಂಪನ್ನರಾಗಿದ್ದರು.

ಕುಕನೂರಿನ ಶಾಸನವೊಂದು ಯಮ, ನಿಯಮ, ಸ್ವಾಧ್ಯಾಯ, ಧ್ಯಾನ, ಧಾರಣ, ಜಪ, ಸಮಾಧಿ, ವ್ಯಾಕರಣ, ಪುರಾಣ, ನಾಟಕ ಇತ್ಯಾದಿಗಳಲ್ಲಿ ನಿರತನಾದ ಸ್ಥಾನಾಚಾರ್ಯ ಶ್ರೀಮತ್ಸಿದ್ಧಾಂತಿ ರಾಜಗುರು ಕಳೇಶ್ವರ

ದೇವರಾಚಾರ್ಯರ ಪಾದತೊಳೆದು ಕುಕನೂರಿನ ಜೇಷ್ಠಾದೇವಿಯ ಮತ್ತು ನವಲಿಂಗಾಧೀಶ್ವರ ಮಠ ಹಾಗೂ ಅಗ್ರಹಾರಕ್ಕೆ, ಪೂಜೆ, ಪುನಸ್ಕಾರ, ತಪೋಧನರ ಆಹಾರ, ದೇವಾಲಯದ ಜೀರ್ಣೋದ್ಧಾರಕ್ಕೆ, ದಾನದತ್ತಿಗಳು ನೀಡಿದ ಕುರಿತು ತಿಳಿಸುವುದಲ್ಲದೆ ಕುಕನೂರಿನಮಠದ ಜವಾಬ್ದಾರಿ, ಸಿಂಧರ ರಾಜಧಾನಿ ಯರಂಬರವಿಯ ಮೂಲಸ್ಥಾನ ಸಿಂಗೇಶ್ವರ , ರಾಜೇಶ್ವರ, ಚೌಡೇಶ್ವರ, ವಿಕ್ರಮೇಶ್ವರ ದೇವಾಲಯಗ ಮಠದ ಆಚಾರ್ಯ ಪಟ್ಟವನ್ನು ಪಡೆದು ಈ ಕಳೇಶ್ವರಯತಿಯು ಸ್ಥಾನಾಚಾರ್ಯನಾಗಿ ವಿವಿಧ ಮಠಗಳ ಜವಾಬ್ದಾರಿ ನೋಡಿಕೊಳ್ಳುತ್ತಿದ್ದನಲ್ಲದೆ, ಮಹಾಮಂಡಳೇಶ್ವರ ಸಿಂಧರಾಜ ಪೇರ್ಮಾಡಿಗೂ ಅವನ ಮಂಡಳೇಶ್ವರ ಚಾವುಂಡನಿಗೂ ಗುರುವಾಗಿದ್ದನು. ಅಲ್ಲದೆ ಸೂಂಡಿಯ ನಗರೇಶ್ವರ ಕಾಳಾಮುಖಾನ್ವಯಕ್ಕೆ ಸೇರಿದ್ದ ಈ ಕಳೇಶ್ವರನು ಶಾಂತಮೂರ್ತಿಯಾಗಿದ್ದು, ಶೈವ ಸಿದ್ಧಾಂತವನ್ನು ಒಪ್ಪಿಕೊಂಡಿದ್ದನು. ಮಂತ್ರ, ತಂತ್ರಗಳಲ್ಲಿ ಪ್ರವೀಣನೆನಿಸಿ ಅನೇಕ ಸಿದ್ಧಾಂತಗಳಲ್ಲಿ ಪರಿಣತನಾಗಿ, ಕಾಳಿಕಾ ಜೇಷ್ಠತೆಯ ಆರಾಧಕನಾಗಿ ಗುರು ಯೋಗೀಶ್ವರನಾಗಿ ಹೆಸರಾದ ಇವನ ಗುರು ಸೋಮೇಶ್ವರನಾಗಿದ್ದನೆಂದು ಶಾಸನ ವರ್ಣಿಸುವುದು'[೪೪]

ತಳಕಲ್ಲು ಶಾಸನವು ಕಾಳದಾಲೂರಿನ ಸಿದ್ಧೇಶ್ವರದ ಸಂಕರಾಶಿಭಟಾರನ ಶಿಷ್ಯನಾದ ಅಮೃತರಾಶಿಭಟಾರನಿಗೆ ಸೋಬನರಸನು ಬಂಕಾಪೂರದ ನೆಲೆಯಲ್ಲಿ ನಿಂತಾಗ ಅಮೃತ ರಾಶಿ ಭಟಾರರಿಗೆ ಮತ್ತು ತಳಕಲ್ಲಿನ ನಾಗಲೇಶ್ವರ ದೇವರಿಗೆ ೪೦೦ ಮತ್ತರು ಹೂದೋಟ ದಾನ ಮಾಡಿದ್ದನ್ನು ಹೇಳುತ್ತದೆ. ಅಮೃತ ರಾಶಿ ಭಟಾರನ ಶಿಷ್ಯ ಸೂರ್ಯಭರಣ ಮೂನಿಯೂ ಸ್ಥಾನಾಚಾರ್ಯನಾಗಿದ್ದನು ಎಂದು ತಿಳಿಸುವುದು.[೪೫] ಕುಕನೂರಿನ ಇನ್ನೊಂದು ಶಾಸನವು ಶ್ರೀಮತ್ ಹೊಸ ಮಠದ ಚೋಳ ಪಣ್ಡಿತರ ಶಿಷ್ಯ ಆಗಸ್ತ್ಯಜೀಯನು ಕುಕನೂರ ಮಠದ ಆಚಾರ್ಯತ್ವ ಹೊಂದಿರುವುದಾಗಿ ಹೇಳಿದೆ.[೪೬] ಮತ್ತೊಂದು ಶಾಸನ ಸೋಮೇಶ್ವರಾಚಾರ್ಯರ ಕುರಿತು ಹೇಳುತ್ತ ಇವನು ಇರಿವಬೆಡಂಗನ ಕಾಲದಲ್ಲಿ ಹೊಸಮಠದ ಚೋಳ ಸೋಮೇಶ್ವರ ಪಂಡಿತನ ಶಿಷ್ಯನಾಗಿದ್ದನೆಂದು ಹೇಳುತ್ತದೆ.[೪೭] ಕಲ್ಲೂರ ಶಾಸನ ಕಾಳಾಮುಖಯತಿ ಸಂಬಂಧದ ರುದ್ರಶಕ್ತಿ ಮತ್ತು ಶಿವಶಕ್ತಿ ಪಂಡಿತ ಆಚಾರ್ಯರನ್ನು[೪೮] ಮಂಕಲ್ಕೇರಿ ಶಾಸನವು[೪೯] ಸ್ವಸ್ತಿ ಯಮ ನಿಯಮ ಜಪಸಮಾಧಿ ಶೀಲಗುಣ ಸಂಪನ್ನರಪ್ಪ ಶ್ರೀಮತು ಸಂಕರಾಶಿ ಪಣ್ಡಿತರ ಉಲ್ಲೇಖಮಾಡಿದರೆ, ಮುಧೋಳ ಶಾಸನವು ಈ ಸ್ಥಾನದ ಪೂರ್ವ್ವಾಚಾರ್ಯ್ಯರು ಶ್ರೀ ಮದಾಹ ವಮಲ್ಲದೇವರ ಶಿಷ್ಯ ತಾರ್ಕಿಕ ಚಕ್ರವರ್ತಿ ದೇವರು ಎಂದು ಹೇಳುವುದು.[೫೦]

ಕಲ್ಲೂರ ಶಾಸನ ಸಿಂಧ ವಿಕ್ರಮಾದಿತ್ಯನ ನಿಜದೇವರ ಗುರುಗಳು ಕಳೇಶ್ವರ ಬ್ರತಿಗಳ ಬಗ್ಗೆ ಹಾಗೂ ಕಲಿದೇವ ಸ್ವಾಮಿ ಭಕ್ತ ಗಣಮಠದ ಆಚಾರ್ಯ ಮೊಲ್ಲೆಯ ಬಮ್ಮಯ್ಯ, ಸೋಮೇಶ್ವರ ಪಂಡಿತರ ಬಗ್ಗೆ ತಿಳಿಸುತ್ತದೆ.[೫೧] ಪುರ ಶಾಸನ ಗವರೇಶ್ವರ ದೇವರ ಆಚಾರ್ಯ ದೇವರಾಶಿ ಪಂಡಿತರನ್ನು[೫೨] ಕುಕನೂರ ಶಾಸನ ಶ್ರೀ ಮೂಲಸ್ಥಾನ ದೇವರಾಚಾರ್ಯ ವಿರೂಪಾಕ್ಷ ಸ್ವಾಮಿಗಳನ್ನು ಹೇಸರಿಸುತ್ತದೆ.[೫೩] ಹೀಗೆ ವಿವಿಧ ಶಾಸನಗಳಲ್ಲಿ ಉಲ್ಲೇಖಗೊಂಡ ಈ ಆಚಾರ್ಯರು ಆಯಾ ಮಠ, ಅಗ್ರಹಾರ ದೇವಾಲಯಗಳ ಪೂಜೆ, ಪುನಸ್ಕಾರ, ಪರ್ವ, ಪವಿತ್ರಗಳೊಂದಿಗೆ ಓದುವ ತಪೋಧನರ, ಛಾತ್ರರ ವಸತಿ, ಉಟೋಪಚಾರ ಇತ್ಯಾದಿಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. ಅವರ ಖರ್ಚುವೆಚ್ಚಕ್ಕಾಗಿ ರಾಜರು, ಅಧಿಕಾರಿಗಳು,

ಜನಸಾಮಾನ್ಯರು, ಹೇರಳವಾಗಿ ದಾನ-ದತ್ತಿಗಳನ್ನು ನೀಡುತ್ತಿದ್ದರು. ದೇವಾಲಯಗಳು, ಮಠಗಳು, ಸಾರ್ವಜನಿಕರ ಸೇವಾಸಂಸ್ಥೆ ಗಳಾಗಿದ್ದರಿಂದ ಸಮಾಜದಲ್ಲಿ ಸ್ಥಾನಾಚಾರ್ಯರ ಕರ್ತವ್ಯ ಜವಾಬ್ದಾರಿ ಹೆಚ್ಚಾಗಿರುತ್ತಿತ್ತು. ಸ್ಥಾನಪತಿಗಳಾದ ಇವರು ಎಲ್ಲರೂ ಕಳೇಶ್ವರ , ಕಲದೇವಸ್ವಾಮಿ, ಅಮೃತರಾಸಿ, ಶಂಕರರಾಶಿ, ಯತಿ, ಮುನಿ, ಬ್ರತಿ ಮುಂತಾದ ವಿಶೇಷಣಗಳಿಂದ ಶಾಸನಗಳು ಕರೆಯುತ್ತವೆ. ಸ್ಥಾನಪತಿಗಳಲ್ಲಿ ಕೆಲವರಿಗೆ ಮಾತ್ರ '' ಯಮನಿಯಮ ಧ್ಯಾನಧಾರಣ ಮೋನಾನುಷ್ಠಾನ ಜಪತಪ ಸಾಮಾಧಿ ಶೀಲ ಸಂಪನ್ನರು''ಎಂಬ ವಿಶೇಷಣಗಳಿಂದ ಕರೆದಿರುವುದರಿಂದ ಇವರು ಯತಿ ಅಥವಾ ಬ್ರಹ್ಮಚಾರಿಗಳಾಗಿದ್ದರೆಂದು ಹೇಳಬಹುದು.

ಯತಿ, ಮುನಿ, ತಪೋಧನ ಮುಂತಾದವರೆಲ್ಲರಿಗೂ ಕಾಳಾಮುಖವೆಂಬ ವಿಶೇಷಣವಿಲ್ಲ. ಅವರಲ್ಲಿ ಕೆಲವರಿಗೆ ಮಾತ್ರ ಕಾಳಾಮುಖ ಶಬ್ದವು ಪ್ರಯೋಗವಾಗಿರುವುದು ಶಾಸನಗಳಲ್ಲಿ ಕಾಣುತ್ತೇವೆ. ಇವರ ಆಚಾರ ವಿಚಾರಗಳಲ್ಲಿ ನೈಷ್ಠಿಕರು, ವೃತ್ತಿ ಮನುಮಾರ್ಗಚರಿತರು ಎಂಬ ವರ್ಣನೆ ಶಾಸನದಲ್ಲಿ ಸಿಕ್ಕುತ್ತದೆ. ಇಂತಹ ವಿಶಿಷ್ಟ ಲಕ್ಷಣಗಳಲ್ಲಿ ಕಾಣಿಸುವ ಇವರು ಯಾರು ಎಲ್ಲಿಂದ ಬಂದವರು ಎಂಬ ಮೂಲವನ್ನು ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿರುವವು.[೫೪] ಈ ಸ್ಥಾನಾಚಾರ್ಯರ ಸಾಮಾಜಿಕ ಕ್ಷೇತ್ರದಲ್ಲಿ ಮಾಡಿದ ಧಾರ್ಮಿಕ ಸೇವೆಗಳು ಮಾತ್ರ ಇತಿಹಾಸದ ಪುಟಗಳಲ್ಲಿ ಚಿರಸ್ಮರಣೀಯವಾಗಿದೆ.

**ಜೇನಮುನಿಗಳು**

ಪ್ರಾಚೀನ ಕರ್ನಾಟಕದ ಚರಿತ್ರೆಯಲ್ಲಿ ತನ್ನದೇ ಆದ ಘನತೆಯಿಂದ ಮೆರೆದ ಜೈನಧರ್ಮ ೧೦ ನೇ ಶತಮಾನದ ಬಳಿಕ ಅರಸರ ಮನ್ನಣೆ ಕಳೆದುಕೊಂಡು ರಾಜವೈಭವದಿಂದ ವಂಚಿತವಾಗಿ ಏಳುಬೀಳಿಗೆ ಕಾರಣವಾಯಿತು. ಇದರ ಪರಿಣಾಮ ಜೈನ ಮುನಿಗಳ ಮೇಲು ಆಗಿರಬೇಕು. ಕೊಪ್ಪಳ ಶಾಸನವು ಕುನ್ದಕುನ್ದಾನ್ವಯಕ್ಕೆ ಸೇರಿದ ಎಕಚಟ್ಟುಗದಭಟಾರರ ಶಿಷ್ಯ ಸರ್ವನಂದಿ ಭಟಾರನ ಬಗ್ಗೆ ಉಲ್ಲೇಖಿಸಿ ಈತ ಊರಿಗೂ ತೀರ್ಥಕ್ಕೂ ಉಪಕಾರಿಯಾಗಿ ಕೆಲವು ಕಾಲ ತಪಸ್ಸು ಮಾಡಿ ವೃತ್ತವನ್ನು ಸ್ವೀಕರಿಸಿ ಯಾವಾಗಲೂ ಶಾಸ್ತ್ರ ದಾನವನ್ನು ಮಾಡುತ್ತಾ ಸನ್ನಡತೆಯುಳ್ಳವನಾಗಿ ಭೂಮಿಯ ಪಾಪಗಳನ್ನು ತೊಳೆದನೆಂದು ಹೇಳುವುದು.[೫೫] ಇದೇ ಊರಿನ ಇನ್ನೊಂದು ಶಾಸನ ಜಟಾಸಿಂಗನಂದಿ ಆಚಾರ್ಯರ ಕುರಿತು ಹೇಳುತ್ತ ಇವರ ಜೊತೆ ಸಿಂಹನಂದಿಅಣ್ಣ, ಮತಿಸಾಗರ ಅಣ್ಣ, ಸಾರಲೋಕಮಿತ್ರ ಮತ್ತು ಬ್ರಹ್ಮಚಾರಿ ಅಣ್ಣ ಈ ನಾಲ್ವರು ಶಿಷ್ಯರಿದ್ದರೆಂದು ತಿಳಿಸುತ್ತದೆಯಲ್ಲದೆ.[೫೬] ಸ್ವಾಮಿಕುಮಾರ ಎಂಬುವನು ಬಿಚ್ಚುಕುನ್ದೆ ಗ್ರಾಮದಲ್ಲಿ ನಾಗದೇವ ಬಸದಿ ಕಟ್ಟಿಸಿ ಹೊಸ ಜಿನ ಬಿಂಬವನು ಪ್ರತಿಷ್ಠಾಪಿಸಿ ಪೂಜಿಸಿದನೆಂದು ಉಲ್ಲೇಖಿಸಿದೆ ಮತ್ತು ಕಲ್ಯಾಣ ಮುನಿಯನ್ನು ಕೀರ್ತಿಸುತ್ತಾ ಮುಡಿಪಿದನೆಂದಿರುವುದು. ಅನೇಕರಿಗೆ ಮೋಕ್ಷ ಪ್ರಾಪ್ತಿಸಿದ ಮಾಗಣಂದಿ ಮತ್ತು ನಂದಿಮುನಿಂದ್ರರು ಮೋಕ್ಷಕ್ಕೂ ಸಂದರು ಸಿಂಹನಂದಿ ಆಚಾರ್ಯರು ಮುಡಿಪಿದ ಸ್ಥಳದಲ್ಲಿ ಬಸದಿ ಕಟ್ಟಿಸಿದ ಕುರಿತು ಮತ್ತೊಂದು ಶಾಸನ ಹೇಳುವುದು.[೫೭]

ಉಪ್ಪಿನಬೆಟಗೇರಿ ಶಾಸನ ರಾಷ್ಟ್ರಕೂಟರ ಕನ್ನರದೇವನ ಆಳ್ವಿಕೆಯಲ್ಲಿ ಯಾದವವಂಶದ ಶಂಕರ ಗಂಡ ಕುಪಣದಲ್ಲಿ ಜೀನಾಲಯ ಕಟ್ಟಿಸಿದ, ಅದಕ್ಕೆ ಅಲ್ಲಿಯ ಮುನಿಗಳಾದ ನಾಗನಂದಿ ಪಂಡಿತ ಭಟಾರನ ಕಾಲ ತೊಳೆದು ಭೂಮಿ ದಾನ ಮಾಡಿದ ಕುರಿತು ಹೇಳುತ್ತಾ ನಾಗನಂದಿಭಟಾರನ ಶಿಷ್ಯ ವಿನಯ ನಂದಿ, ಅವನ ಶಿಷ್ಯ ನಾಗನಂದಿ ಪಂಡಿತ ಭಡಾರನೆಂದಿರುವುದು.[೫೮] ಕೊಪ್ಪಳದ ಇನ್ನೊಂದು ಶಾಸನವು ಗೊಲ್ಲಾಚಾರ್ಯನ ಶಿಷ್ಯನಾದ ತಳಗರಸಾತ್ತನು ಇಂದ್ರನಂದಿ ಭಟಾರಕರಿಂದ ದಿಕ್ಷೆ ಪಡೆದು ಕೊಂಡ ಕುರಿತು ಮತ್ತು ಇಂದ್ರನಂದಿ ಭಟಾರಕನು ಸನ್ಯಾಸ ವಿಧಾನದಿಂದ ಮುಡಿಪದನ್ನು ಹೇಳಿ ಆಚಾರ್ಯ ಪರಂಪರೆಯನ್ನು ವಿವರಿಸುತ್ತದೆ.[೫೯] ಇವರಲ್ಲದೆ ಇನ್ನೂ ಅನೇಕರು ಕೊಪ್ಪಳಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖಗೊಂಡಿದ್ದು ಇವರು ಅಂದಿನ ಸಮಾಜದಲ್ಲಿ ಜೈನಧರ್ಮ ಮತ್ತು ಜೈನ ಮತಿಯರ ಉಳಿವಿಗಾಗಿ ಸಾಕಷ್ಟು ಶ್ರಮವಹಿಸಿದ್ದು ಇವರು ಅಂದಿನ ಸಮಾಜದ ಉನ್ನತಸ್ಥಾನದಲ್ಲಿದ್ದವರಾಗಿದ್ದಾರೆ.

### ವೈಷ್ಣವ ಸ್ಥಾನಾಚಾರ್ಯರು

ಶೈವ ಮತ್ತು ಜೈನ ಆಚಾರ್ಯಪರಂಪರೆ ಬೆಳೆದುಬಂದಂತೆ ವೈಷ್ಣವ ಆಚಾರ್ಯರು ಅಂದಿನ ಸಮಾಜದಲ್ಲಿ ಉನ್ನತ ಸ್ಥಾನಪಡೆದುಕೊಂಡಿದ್ದರು. ಈ ವೈಷ್ಣವ ಆಚಾರಿರ್ಯ್ಯರಿಗೆ ಸಂಬಂಧಿಸಿದಂತೆ ಜಿಲ್ಲೆಯ ಗೋತಗಿ ಶಾಸನ ಗೊವನ್ತಿಗೆಯ ಚಾಮುಣ್ಡಭಟ್ಟೋಪಾಧ್ಯಾಯನನ್ನು,[೬೦] ಕಲ್ಲೂರ ಶಾಸನ ಯರಂಬರಿಗೆಯ ಕುಳಾಗ್ರಿ ಆಚಾರ್ಯ ಮಲ್ಲಯ್ಯಭಟ್ಟಯ್ಯಂಗಳನ್ನು,[೬೧] ಚಳಗೇರಿ ಶಾಸನ ಮಹಾಜನರಲ್ಲಿ ಒಬ್ಬನಾದ ನಾರಾಯಣಭಟ್ಟೋಪಾಧ್ಯಾಯನನ್ನು[೬೨] ಹೆಸರಿಸಿದರೇ ಅಳವಂಡಿ ಶಾಸನದಲ್ಲಿ ಅಗ್ರಹಾರವರ್ಣನೆ ಹಾಗೂ ವೈಶಿಷ್ಟ ಗೋತ್ರದ ಮಲ್ಲಯ್ಯನು ನಾನೂರು ಜನರ ಅಪ್ಪಣೆ ಪಡೆದು ಚಾವರಾಜ ಮತ್ತು ಕೇಶವದೇವರ ಹಿಂದಿನ ಸಾಮ್ಯವನ್ನು ಹಾಗೂ ಆಸ್ಥಾನದ ಆಚಾರ್ಯತ್ವವನ್ನು ಮಾನ್ಯವಾಗಿ ಪಡೆದುಕೊಂಡನೆಂದು ಹೇಳುವದು.[೬೩] ಇಟಗಿ ಶಾಸನದಲ್ಲಿ ನಾಗಣ ಸೋಮಯಾಜಿ ಭಟ್ಟರ ಉಲ್ಲೇಖ ಬರುತ್ತಿದ್ದು ಇವರು ಸಹ ಅಂದಿನ ಸಮಾಜದ ಉನ್ನತ ಸ್ತರದಲ್ಲಿದ್ದುಕೊಂಡು ದೇವಾಲಯಗಳ ಆಚಾರ್ಯರಾಗಿ ಪೂಜೆಪುನಸ್ಕಾರದಂತಹ ಕೆಲಸದ ಜೊತೆಯಲ್ಲಿ ಅಗ್ರಹಾರದ ಆಡಳಿತ ನೋಡಿಕೊಂಡು ಹೋಗುತ್ತಿದ್ದರು.[೬೪]

### ೨. ಶ್ರಮಿಕ ವರ್ಗಗಳು

ನಾಡಿನ ಇತಿಹಾಸ ರಚನೆಯಲ್ಲಿ ವಿವಿಧ ಕಸುಬುಗಳನ್ನಾಶ್ರಯಿಸಿದ ಕುಶಲಕರ್ಮಿಗಳು ಶ್ರಮಿಕ ವರ್ಗವನ್ನು ಪ್ರತಿನಿಧಿಸುತ್ತಿದ್ದು, ಅವರ ಕೊಡುಗೆ ಸಾಂಸ್ಕೃತಿಕ ಚರಿತ್ರೆಯಲ್ಲಿ ಅಪಾರವಾಗಿದೆ. ಶಾಸನಗಳು ಇವರನ್ನು ಕಂಚುಗಾರ, ಕಮ್ಮಾರ, ಕಲ್ಲುಕುಟಿಗ (ಶಿಲ್ಪಿ), ಅಕ್ಕಸಾಲಿಗ, ಬಡಿಗ, ಪಂಚಮರು, ಪಾಂಚಾಳರ ಉಲ್ಲೇಖಿಸುತ್ತವೆ.[೬೫] ಜಿಲ್ಲೆಯ ಕವಲೂರ ಶಾಸನ ಪಂಚವರ್ಗದವರನ್ನು ಹೆಸರಿಸಿದರೆ,[೬೬] ಗೀಣಿಗೇರಿ ಶಾಸನ ಪಾಂಚಾಳರಲ್ಲಿ ಆನೆಗೊಂದಿ ಪೀಠ, ಅಂತರವಳ್ಳಿಯ ಪೀಠದ ಬಗ್ಗೆ ಉಲ್ಲೇಖಿಸಿದೆ.[೬೭] ಮಾದಿನೂರ ಶಾಸನ ವಿವಿಧ ವೃತ್ತಿವುಳ್ಳ ವೈಶ್ಯ, ಶೂದ್ರ, ಚಿನ್ನದ ಕೆಲಸ ಮಾಡುವ ಅಕ್ಕಸಾಲಿಗರು ಹಾಗೂ ಪಂಚಮರನ್ನು ಉಲ್ಲೇಖಿಸುತ್ತದೆ.[೬೮] ಆನೆಗೊಂದಿ ಶಾಸನ[೬೯] ಕುಕನೂರು ಶಾಸನಗಳು[೭೦] ಹಡೆಯ ಗಳೆ ಕಂಚಳಿಕೆ ಹಿಡಿಯುವ

ಕುಂಬಾರರು, ತಾಮ್ರಪಟಶಾಸನ ಬರೆಯುವ ಶಿಲ್ಪಿಗಳ ಕುರಿತು ಪ್ರಸ್ತಾಪಿಸುತ್ತವೆ. ಅಕ್ಕಸಾಲಿಗ ನಾಸಿಮಯ್ಯ ನಾಯಕನ ಬಗ್ಗೆ ಕುಕನೂರು ಶಾಸನ [೭೧] ಶಿಲ್ಪಿಕಾರ ಚಾಮೋಜನ ಮಗ ಬೊಪ್ಪಣನ ಹೆಸರುಗಳನ್ನು ಉಲ್ಲೇಖಿಸುತ್ತವೆ.[೭೨] ಇವರೆಲ್ಲಾ ಒಂದೊಂದು ವೃತ್ತಿಯನ್ನವಲಂಬಿಸಿದವರೆಂದು ಬಸವಣ್ಣನ್ನವರು ತಿಳಿಸುತ್ತಾರೆ.[೭೩] ಕಲ್ಲುಕುಟಿಗರು, ಸೂತ್ರದಾರರು ಶಾಸನಗಳನ್ನು ಕಂಡರಿಸುವುದರೊಂದಿಗೆ ದೇವಾಲಯ ನಿರ್ಮಾಣ ಮಾಡುತ್ತಿದ್ದರು . ಮಾದಿನೂರಿನ ಶಾಸನ ಕಲ್ಲುಕುಟಿಗ ವೋಜನ ಕೈಯಿಂದ ಮಾದಿನೂರು ಸೋಮನಾಥ ದೇವಾಲಯಕ್ಕೆ ಕಲ್ಲು ಸಹಿತ ಇರಿಸಿ ಅದರ ಜೀರ್ಣೋದ್ಧಾರಮಾಡಿಸಿದರೆಂದಿರುವುದು[೭೪] ಯಲಬುರ್ಗಿಯ ಶಾಸನದಲ್ಲಿ ದೇವಾಲಯದ ಜೀರ್ಣೋದ್ಧಾರದ ರೂವಾರಿ ಚಕ್ರವರ್ತಿ ಪಾಲೋಜ ಎಂದರೆ [೭೫] ಕೊಪ್ಪಳ ಶಾಸನ ಬರೆದಪಿಟ್ಟೋಜ,[೭೬] ರೋಣದ ಚಾವಯ್ಯ[೭೭] ಇಟಗಿ ಶಾಸನ ಕೆತ್ತಿದ ಪಂದಯ್ಯ[೭೮] ಪುರ ಅಗ್ರಹಾರದ ಕಾಳೋಜ,[೭೯] ಕಲಿಯುಗ ವಿಶ್ವಕರ್ಮ ಶ್ರೀವರ್ಷ ಗರಿವೊಜ ಮತ್ತು ಅವನ ಮಗ ಬಲ್ಲವ [೮೦] ಎಂಬುವವರು ಶಾಸನಗಳನ್ನು ದೇವಾಲಯಗಳನ್ನು ಕಟ್ಟಿರುವರು. ದೇವಾಲಯ ಶಿಲ್ಪಿ ಶಾಸನಗಳನ್ನು ಕಟೆಯುವಲ್ಲಿ ಕಲ್ಲುಕುಟಿಗ, ಶಿಲ್ಪಿ, ಆಚಾರ್ಯ, ಬಡಿಗ ಇನ್ನಿತರರ ಸೇವೆ ಪ್ರಮುಖವಾಗಿತ್ತು. ಹುಲಗಿ ಶಾಸನದಲ್ಲಿ ಹುಲಗಿಯ ಸೋಮೇಶ್ವರ ದೇವಾಲಯದ ನಿರ್ಮಾಪಕ ಸೋಮನಾಥನ ವಂಶಾವಳಿಯನ್ನು ತಿಳಿಸುತ್ತಾ ಆ ಊರಿನ ಆಚಾರ್ಯನಿಗೆ ಆರು ಗದ್ಯಾಣ, ಪಂಚವರ್ಗಕ್ಕೆ ಆರು ಗದ್ಯಾಣ, ದೇವಾಲಯದಕಲ್ಲು ಕೆಲಸ, ಛತ್ರಕ್ಕೆ ನಂದಾದೀಪ ಇತ್ಯಾದಿಗಾಗಿ ದಾನ ಬಿಟ್ಟ ವಿವರಣೆ ಕಂಡುಬರುವುದು[೮೧] ಇಟಗಿಯಲ್ಲಿ ಕಟ್ಟಲ್ಪಟ್ಟ ದೇವಾಲಯಗಳನ್ನು ಸಹ ಕಲ್ಲುಕುಟಿಗ, ಬಡಿಗ, ಮುಂತಾದವರಿಂದಲೆ ನಿರ್ಮಾಣಗೊಂಡ ಬಗ್ಗೆ ಶಾಸನ ತಿಳಿಸುತ್ತದೆ.[೮೨]

ಬಡಗಿ ಕೂಡಾ ದೇವಸ್ಥಾನ, ಮನೆ, ಛತ್ರದಂತಹ ಅನೇಕ ಕಟ್ಟಡಗಳ ನಿರ್ಮಾಣದ ಸಂದರ್ಭದಲ್ಲಿ ಮರಗೆಲಸ, ಬಾಗಿಲುಗಳನ್ನು ಮಾಡುತ್ತಿದ್ದ ದೃಷ್ಟಾಂತಗಳು ಶಾಸನಗಳಲ್ಲಿ ಕಾಣುತ್ತವೆ. [೮೩] ಅಂತಹ ಬಡಿಗರ ಬಗ್ಗೆ ಪುರ ಶಾಸನವು[೮೪] ಅವರು ಕೆಲಸಕ್ಕಾಗಿ ದೇವರ ಅರಮನೆಯ ಶಿಲ್ಪಿ ಆಚಾರ್ಯ ಬಡಗಿ ಕಾಳೋಜನಿಗೆ ಒಂದು ಮತ್ತರು, ಇನ್ನೊಬ್ಬ ಬಡಗಿ ಕಲ್ಲೋಜನಿಗೆ ಅರೆಮತ್ತರು, ಭೂಮಿ ಬಿಟ್ಟಿರುವುದಾಗಿ ತಿಳಿಸಿದೆ. ಆಳವಂಡಿ ಶಾಸನ ಬಾಗಿಲು ಮಾಡಿದ ಬಡಿಗನ ಪ್ರಸ್ತಾಪಮಾಡಿದೆ.[೮೫] ಅಗ್ರಹಾರ ಕುಕನೂರಿನ ಜೇಷ್ಠಾದೇವಿಯ ದೇವಾಲಯದ ಬಾಗಿಲವನ್ನು ಆ ಊರಿನ ಗೌಡರು ಜೀರ್ಣೋದ್ಧಾರ ಗೊಳಿಸುವಾಗ ದೇವಸ್ಥಾನದ ಬಡಗಿ ಬಸವೋಜನ ಮಗ ರಾಮೋಜನು ಮಾಡಿದನೆಂದು ಶಾಸನದಲ್ಲಿದೆ[೮೬] ಅಂಟೂರುಟಾಣಾ,[೮೭] ಕಲ್ಲೂರ[೮೮] ಶಾಸನಗಳು ಬಡಿಗರೊಕ್ಕಲದೊಂದುಮನೆಯ ಹೊರೆಹೆಡಿಗೆಯ ಉಪ್ಪುಗಳನ್ನು ಉಲ್ಲೇಖಿಸುತ್ತವೆ.

## ಕ್ಷೌರಿಕರು

ಕ್ಷೌರದ ಕೆಲಸ ಮಾಡುವ ನಾವಿದರಿಗೆ ಶಾಶ್ವತ ದತ್ತಿ ಬಿಟ್ಟುಕೊಡುತ್ತಿದ್ದುದರಿಂದ ತಮ್ಮ ಕಾರ್ಯವನ್ನು ಮಾಡುತ್ತಿದ್ದರು. ಇಂದಿಗೂ ನಮ್ಮ ಹಳ್ಳಿಯ ಜನಪದರು ಜೋಳ, ದವಸದಾನ್ಯಗಳನ್ನು ರಾಶಿಯ ಸಮಯದಲ್ಲಿ ಕೊಡುವರು, ಇವರ ಕುರಿತು ಕೊಪ್ಪಳ ಶಾಸನ ಹಡಪದ ಲಖ್ಖಾಣಾಚಾರ್ಯನ ಬಗ್ಗೆ[೮೯] ಗಂಗಾವತಿ, ಕುಷ್ಟಗಿ ತಾಲೂಕಿನ ಎರಡು ಶಾಸನಗಳಲ್ಲಿ ನಾಯಂದರ ಕುರಿತು ಪ್ರಸ್ತಾಪಬರುತ್ತದೆ.

**ಜೇಡರು**

ಜೇಡರು ಮಗ್ಗದಿಂದ ಬಟ್ಟೆಗಳನ್ನು ನೆಯುತ್ತಿದ್ದರೆ, ಅಗಸರು ಜನರ ಬಟ್ಟೆಗಳನ್ನು ತೊಳೆದು ಮಡಿಮಾಡಿ ಕೊಡುತ್ತಿದ್ದರು. ಸಮಗಾರರು (ಚರ್ಮಕಾರರು) ಹೆಸರೆ ಸೂಚಿಸುವಂತೆ ಚರ್ಮದ ಕೆಲಸಗಳನ್ನು ಮಾಡುತ್ತಿದ್ದರು. ಮುಧೋಳ ಶಾಸನವೊಂದು ಸಮ್ಮಗಾರ ಚಂದನನ್ನು ಹೇಸರಿಸಿ ಅವನು ಊರಿನ ಮೇಲೆ ಶತೃಗಳು ದಾಳಿ ಮಾಡಿದಾಗ ಅವರೊಂದಿಗೆ ಹೊರಾಡಿ ಪ್ರಾಣತ್ಯಾಗ ಮಾಡಿದ ವಿಷಯವನ್ನು ಹೇಳುವುದು. [೯೦] ವೃತ್ತಿಯಲ್ಲಿ ಚರ್ಮದ ಕೆಲಸಮಾಡಿದರೂ ಊರಿನ ಮೇಲೆ ಆದ ದಾಳಿಯನ್ನು ಕಂಡು ಹೋರಾಡಿ ಮರಣ ಹೊಂದಿದ್ದನ್ನು ನೋಡಿದರೆ ಅಂದು ಗ್ರಾಮದ ಮೇಲೆ ಆದ ದಾಳಿಯನ್ನು ಸೈನ್ಯದವರ ಜೊತೆಯಲ್ಲಿ ಇತರರು ಬೇರೆತು ಪ್ರಾಣತ್ಯಾಗಮಾಡಿದ ದೃಷ್ಟಾಂತವನ್ನು ಬಿಂಬಿಸುತ್ತದೆ.

**ಕಂಬಾರ, ಕುಂಬಾರ, ಬಡಿಗ, ಅಕ್ಕಸಾಲಿ ಮತ್ತು ಕಂಚುಗಾರರು**

ಶ್ರಮಜೀವಿಗಳಾದ ಒಕ್ಕಲಿಗರು ಕುರುಬರು, ತಂಬುಲಿಗರು, ತೆಲ್ಲಿಗರು, ಮಾಲೆಗಾರರು, ಮೇದಾರರು, ಅಂಬಿಗರು ತಮ್ಮದೆ ಆದ ವೃತ್ತಿಸಂಘಗಳನ್ನು ಕಟ್ಟಿಕೊಂಡು ಜೀವನ ನಡೆಸುತ್ತಿದ್ದರು. ಶಾಸನಗಳಲ್ಲಿ ಉಲ್ಲೇಖವಾಗಿರುವ ''ಅರವತ್ತೊಕ್ಕಲು'' ಎಂಬ ಸಂಘ ಒಕ್ಕಲುತನ ಮಾಡುವವರ ಸಂಖ್ಯೆಯನ್ನು ಹೇಳಿದೆ ಅದು ಪಾರಂಪರಿಕವಾಗಿ ಬಂದ ಹೆಸರಾಗಿತ್ತೆಂದು ಕಂಡು ಬರುತ್ತದೆ. ಜಿಲ್ಲೆಯ ಕುಕನೂರು ಮತ್ತು ಆನೆಗುಂದಿಯ ಶಾಸನಗಳಲ್ಲಿ ೪೮ ಕೇರಿಗಳು, ೧೮ ಜಾತಿಗಳ ಉಲ್ಲೇಖಗಳಿದ್ದು [೯೧] ಇವುಗಳ ಕುರಿತು ಡಾ. ಪಿ.ವ್ಹಿ. ನಾರಾಯಣ ರವರು ಬ್ರಾಹ್ಮಣ, ಕ್ಷತ್ರಿಯ, ಬಣಜಿಗ, ಒಕ್ಕಲಿಗ, ಗೊಲ್ಲ, ಕುಂಬಾರ, ಪಾಂಚಾಳ, ಉಪ್ಪಾರ, ನಾಯಿದ, ಡೊಂಬಿ, ಅಗಸ, ಜೇಡ, ಕಬ್ಬಿಲ, ಹೊಲೆಯ, ಈಡಿಗ, ಸಮ್ಮಗಾರ, ಮಜ್ಜಿಗ, ಶುದ್ಧ ಮಾದಿಗ, ಕಂಚುಗಾರ ಮುಪಗಾರ, ಕಲ್ಲುಕುಟಿಗ, ಅಕ್ಕಸಾಲಿಗ, ಬಡಗಿ, ಕಮ್ಮಾರ ಇತ್ಯಾದಿಯಾಗಿ ಪಟ್ಟಿಮಾಡಿ ಒದಗಿಸಿದ್ದಾರೆ. [೯೨] ಅದನ್ನೆ ಆನೆಗುಂದಿ ಶಾಸನ ಹದಿನೆಂಟು ಪಟ್ಟಣಂ ಪದಿನೆಂಟು ಜಾತಿಯುಂ, ಪದಿನೆಂಟುಜಾತಿಯ ವಿಸ್ತಾರಮುಂ ಎಂದು ತಿಳಿಸುತ್ತದೆ. ಶರಣರು ಸಹ ಹೊಲೆಯ ಹದಿನೆಂಟು ಜಾತಿಗಳೆಂದು ಕರೆಯುತ್ತಿದ್ದರು. [೯೩] ವಿಪ್ರ, [೯೪] ಚಳಗೇರಿ, [೯೫] ಅಂಟೂರ ಠಾಣಾ, [೯೬] ಅಳವಂಡಿ [೯೭] ಆನೆಗುಂದಿ ಶಾಸನಗಳು [೯೮] ತಂಬುಲಿಗ ಸಾಸಿರ್ವರು, ಎಲೆಗಾರರು, ತಂಬುಲಿಗ ಸೆಟ್ಟಿ ನಾಲ್ಕೂನೂರುವರು ಎಂದು ಉಲ್ಲೇಖಿಸಿದರೆ, ಹನುಮನಾಳ ಶಾಸನವು [೯೯] ತಂಬುಲಿಗ ಸಾಸಿರ್ವರು ಕುರಿತು ತಿಳಿಸುವುದು ತೆಲ್ಲಿಗರು ಗಾಣದಿಂದ ಎಣ್ಣೆ ತೆಗೆಯುತ್ತಿದ್ದರು ಇವರು ಕಟ್ಟಿಕೊಂಡ ಸಂಘವೆ ತೆಲ್ಲಿಗರಯ್ಯೊತ್ತಕ್ಕಲು ಎಂದು ಕರೆದಿವೆ. ಅಂಟೂರಠಾಣಾ [೧೦೦] ಚಳಗೇರಿ [೧೦೧] ಶಾಸನಗಳು ಗಾಣ ಮತ್ತು ತೆಲ್ಲಿಗರೈವತ್ತೋಕ್ಕಲು ಬಗ್ಗೆ ಉಲ್ಲೇಖಿಸಿದರೆ ಅಳವಂಡಿ ಶಾಸನ ತೆಲ್ಲಿಗಗೇರಿ (ಓಣಿ)ಯ ಕುರಿತು ತಿಳಿಸುವುದು.

ಕುರುಬರು ಬೆಟ್ಟ ಗುಡ್ಡಗಳಲ್ಲಿ ಕುರಿಕಾಯ್ದುಕೊಂಡು ಜೀವನ ಸಾಗಿಸುತ್ತಿದ್ದರು. ಅವರ ಕುರಿತು ಅಳವಂಡಿಯ ಶಾಸನವು [೧೦೨] ಕುರುವರ ಬಮ್ಮರ್ನನ್ನು ಪ್ರಸ್ತಾಪಿಸುತ್ತಾ ಕುರುವರ ಗುಲ್ಗಿಮಯ್ಯನು ತೋಟ, ಬಾವಿ, ಕಲ್ಲ ದೇಗುಲ ಸತ್ರ, ಮನೆ ಹಾಗೂ ಊರನಡುವೆ ಬಾಗಿಲನ್ನು ಮಾಡಿಸಿ ದಾನ ನಿಡಿದನೆಂದು ಹೇಳುವುದರಿಂದ ಕುರುಬರು ಸಹ ಅಂದು ಕುರಿ ಕಾಯುವ ಕಾಯಕದ ಜೊತೆಗೆ ಲೋಕ ಉಪಕಾರದ ಕೆಲಸದಲ್ಲಿ ಭಾಗಿಯಾದುದ್ದಕ್ಕೆ ಶಾಸನ ನಿದರ್ಶನವಾಗಿದೆ.

ಮಾಲೆಗಾರರು 'ಹೂ' ಕಟ್ಟುವುದು, ದೇವರ ಪೂಜೆಮಾಡುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಿದ್ದರು ಕುಕನೂರಿನ ಶಾಸನ ಪೂಜಾರಿಗೆ ಹಾಡುವ-ಹರೆಕಾರ, ಮಾಲೆಗಾರರ ಕುರಿತು ತಿಳಿಸಿದರೆ, ಅಳವಂಡಿ ಶಾಸನ ಮಾಲೆಗಾರ ಮಾರಸಿಂಗಣನ ಬಗ್ಗೆ[೧೦೩] ಹಾಗೂ ಕುಕನೂರು ಶಾಸನ[೧೦೪] ಮಾಲೆಗಾರನ ಉಲ್ಲೇಖನೀಡುತ್ತವೆ.

ಕುಂಬಾರನ ಚಕ್ರದ ಉಲ್ಲೇಖ ಕವಿರಾಜ ಮಾರ್ಗದಲ್ಲಿ ಬಂದಂತೆ,[೧೦೫] ಆನೆಗೊಂದಿ ಶಾಸನ[೧೦೬] ಸಹ ಕುಂಬಾರರ ಜಾತಿ ಹುಟ್ಟಿದ ಕುರಿತು ಸುಧೀರ್ಗವಾಗಿ ಹೇಳುತ್ತಾ ಕುಂಬಾರರಿಗೆ ಸಂಬಂಧಿಸಿದ ೧೮ ಕೇಣಿಗಳನ್ನು ಹೆಸರಿಸುತ್ತದೆ. ಪುರ ಶಾಸನ ಸಹ ಕುಂಬಾರರ ಬಗ್ಗೆ ಉಲ್ಲೇಖಿಸುವುದು.[೧೦೭] ಅದರಂತೆ ಕಬ್ಬಿಣ ಕೆಲಸವನ್ನು ಮಾಡುವ ಕಮ್ಮಾರರ ಕುರಿತು ಗೊಂಡಬಾಳು ಶಾಸನ ಹೆಸರಿಸಿ[೧೦೮] ಈ ಶಾಸನ ಬರೆದ ಕೊಪಣದ ''ಕಮ್ಮಾರೊಜನ ಮಗ ರಾಮೋಜಶ್ರೀ'' ಯನ್ನು ಹೇಸರಿಸುವದು. ಅಂಟೂರ ಠಾಣ ಶಾಸನವು[೧೦೯] ದಿಪಾವಳಿ ಪಣತೆಗೆ ಅಕ್ಕಸಾಲಿ, ಬಡಗಿ, ಕಮ್ಮಾರ ದೊಕ್ಕಲದೊಂದು ತೆನೆಯ ಹೊರೆ ಹೆಡಿಗೆಯ ಉಪ್ಪು ಮಾನ ೧, ಬಿಟ್ಟಿರಿವುದಾಗಿ ತಿಳಿಸಿದೆ. ಇದನ್ನೇ ನಯಸೇನ ''ಕರ್ಬುನು ಎನಿಸುಕಾಯ್ದು ಮೃದುವಾದೊಡಂ ಕಮ್ಮರರಿಲ್ಲದೆ ಖಡ್ಗಾದಿಶಸ್ತ್ರಾಂಗಳಾಗವು'' ಎಂದಿದ್ದಾನೆ. ರಾಜರಿಗೆ ಯುದ್ಧಗಳು ಮಾಡುವ ಪ್ರಸಂಗ ಬಂದಾಗ ಸೈನಿಕರಿಗೆ ಬೇಕಾಗುವ, ಶಸ್ತ್ರಾಸ್ತ್ರಗಳನ್ನು ಮತ್ತು ಬೇಸಾಯಕ್ಕೆ ಅವಶ್ಯಕವಾದ ಸಲಕರಣೆಗಳನ್ನು ಬಡಿಗರು, ಕಮ್ಮಾರರು ಮಾಡುತ್ತಿದ್ದರು.[೧೧೦] ಅಂಟೂರಠಾಣಾ ಶಾಸನವೊಂದು ಬುಟ್ಟೆಗಳನ್ನು ಮಾಡುತ್ತಿದ್ದ ಮೇದಾರರನ್ನು ಉಲ್ಲೇಖಿಸಿದೆ[೧೧೧] ಶ್ರಮಿಕವರ್ಗದವರೆಲ್ಲರು ತಮ್ಮ ಅನುಕೂಲದೃಷ್ಟಿಯಿಂದ ತಮ್ಮದೇ ಆದ ವೃತ್ತಿ ಸಂಘಗಳನ್ನು ಕಟ್ಟಿಕೊಂಡಿರುವ ವಿಷಯವನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ.

## ಕುಟುಂಬ ವ್ಯವಸ್ಥೆ

## ಗೃಹ ಜೀವನ

ಸಮಾಜದ ಮೂಲ ಘಟಕ ಕುಟುಂಬ. ಇದಕ್ಕೆ ಪ್ರಥಮ ಸಮಾಜದ ಗಂಡು ಹೆಣ್ಣುಗಳ ಸಂಬಂಧವೇ ಮೂಲ ಈ ಸಮಾಜ ಮತ್ತು ಕುಟುಂಬಗಳಲ್ಲಿರುವುದು ಗಾತ್ರವ್ಯತ್ಯಾಸವೇ ಹೊರತು ಗುಣಗಳಲ್ಲ. ನಮ್ಮ ಭಾರತೀಯ ಕುಟುಂಬದ ಮುಖ್ಯ ಲಕ್ಷಣ ಕೂಡಿ ಬಾಳುವುದು, ಹೀಗಾಗಿ ಅಂಥ ಬಾಳು ಸಾಗಿಸಲು ಗ್ರಹಸ್ಥಗ್ರಹಿಣಿಯರು ಸಿದ್ಧರಾಗಿರಬೇಕಿದ್ದಿತು.

## ವಿವಾಹ

ಸಂಸ್ಕಾರಗಳನ್ನು ಕುರಿತು ಹೇಳುವ ಗೃಹ ಸೂತ್ರವು ಮದುವೆ ಎಲ್ಲಾ ಸಂಸ್ಕಾರಗಳಿಗೆ ಮೂಲವಾಗಿರುವುದರಿಂದ ಎಲ್ಲಾ ಆಚಾರ ನೇಮಗಳು, ಯಜ್ಞ ಯಾಗಗಳು ಗ್ರಹಸ್ಥನ ಸುತ್ತ ಹೆಣೆದುಕೊಂಡಿವೆ ಎಂದು ಹೇಳುತ್ತದೆ.[೧೧೨] ವಿವಾಹದಲ್ಲಿ ಬಾಲ್ಯವಿವಾಹ, ವಯಸ್ಕರ ವಿವಾಹಗಳನ್ನು ನಮ್ಮ ಪ್ರಾಚೀನರು ಅರಿತುಕೊಂಡಿದ್ದರು.[೧೧೩] ಬಾಲ್ಯ ವಿವಾಹದ ಕುರಿತು-ವಿದೇಶಿ ಪ್ರವಾಸಿಗ ಅಲ್ಬೇರೂನಿ ಪ್ರಸ್ತಾಪಿಸುತ್ತಾನೆ.[೧೧೪]

ವೇದಗಳು, ಸ್ಮೃತಿಗಳು ಇದನ್ನು ಸಮರ್ಥಿಸಿವೆ. ಈ ವಿವಾಹ ಸಂದರ್ಭಗಳಲ್ಲಿ ಕೊಳು ಕೊಡುಗೆಗಳು ಸಹಜವಾಗಿದ್ದಂತೆ ತೋರುತ್ತದೆ. ಶಾಸನಗಳಲ್ಲಿ ಸಹ ವಧು-ವರರ ವಿಷಯದ ಬಗ್ಗೆ ಮಾಹಿತಿ ದೋರೆಯುತ್ತಿದ್ದು. ಮುಧೋಳು ಶಾಸನವೊಂದು ''ವನಿತೆಯ ವೈವಾಹಿಕಕ್ಕಾದ ಕೆಯ್ನಿರ್ಧಕಿಯೊಳು ನರಸಿಜಭವಂಗೆ ವಾಣೀ ವರವಧು ವಧುವಾದ ಮಾಳ್ಕೇಯಿಂ ಸಕಳಕಳಾಧರನೆನಿಪ ಭಮ್ಮದೇವಂಗೆ ರೂಪವತಿ ಕಾಂತೆಯಾಗಿ ಭಾಗಳೆನೆಗಲ್ದಳು'' ಎಂದು ಈ ವಧು-ವರರರಾದ ಭಮ್ಮದೇವ ಮತ್ತು ಬಾಗಲದೇವಿಗೆ ಮಲ್ಲಿದೇವ ರಸದೇವ ಮತ್ತು ಭಮ್ಮಲದೇವಿ ಮಕ್ಕಳು ಜನಿಸಿದರೆಂದು, ಅದಕ್ಕಾಗಿ ಮುಧುವೋಳದಲ್ಲಿ ಹರಿಹರದೇವಾಲಯ ನಿರ್ಮಿಸಿದಂತೆ ತಿಳಿಸುವದು.[೧೧೫] ಕುಕನೂರು ಶಾಸನ ಅಳಿಯ, ಮಾವ, ಮಗಳು, ತಂದೆ-ತಾಯಿ, ಸೊಸೆಯರ ಮಾಹಿತಿ ಒದಗಿಸಿದೆ.[೧೧೬] ಕವಲೂರು ಶಾಸನ ಸೊಮಯಾಜಿಯ ಪತ್ನಿ ಮಾಕಬ್ಬೆಯರ ಮಗಳು ಶಾಂತಿಕಬ್ಬೆಯನ್ನು ಕೌಶಿಕ ಗೋತ್ರದ ಲೇಕ್ಕಪಯ್ಯನಮಗ ಜಕ್ಕಯ್ಯನಿಗೆ ಕೊಟ್ಟುಮದುವೆ ಮಾಡಿದರೆಂದಿದೆ.[೧೧೭] ಇನ್ನೊಂದು ಶಾಸನ ತನವಧು ಪತಿಭಕ್ತೆ ವಿನೂತ ಸತಿಯರ ಎಂದಿದೆ.[೧೧೮] ಬಳಗೇರಿ ಶಾಸನದಲ್ಲಿ ''ಸಂಸಾರವಿರಕ್ತರ'' (ಮದುವೆ ಆಗಿ ಸಂಸಾರದಲ್ಲಿ ತೊಡಗದವರು) ಕುರಿತು ಉಲ್ಲೇಖವಿದೆ.[೧೧೯] ಆನೆಗುಂದಿ ಶಾಸನದಲ್ಲಿ ಗಿರಿರಾಜನಮಗಳು ಪರ್ವತದಲ್ಲಿ ತಪಸ್ಸು ಆಚರಿಸುವಾಗ ಶಿವನು ಬೇಟೆಯಾಡಲು ಅಲ್ಲಿಗೆ ಬಂದಾಗ ಇವಳನ್ನು ಕಂಡು ಮೋಹಿತನಾಗಿ ದೇವಲೋಕದ ದೇವತೆಗಳೊಡನೆ ಬಂದು ಗಿರಿರಾಜನ ಮನೊಲಿಸುವಲ್ಲಿ ಶಿವನು ಬ್ರಹ್ಮವಿಷ್ಣು ದೇವೇಂದ್ರರನ್ನು ಕಳೆಸುತ್ತಾನೆ. ಅವರೆಲ್ಲಾ ಸೇರಿ ಗಿರಿರಾಜನ ಹತ್ತಿರ ಬಂದು ಶಿವನ ಇಚ್ಛೆಯನ್ನು ತಿಳಿಸಲಾಗಿ ಆಗ ತಂದೆ ಮಗಳನ್ನು ವಿಚಾರಿಸಿ ಮಗಳನ್ನು ಅವನಿಗೆ ಕೊಡಲು ಒಪ್ಪುತ್ತಾನೆ ಮುಂದೆ ಆ ಪುರದಲ್ಲಿ ವಿಜೃಂಭಣೆಯಿಂದ ಶಿವ-ಗಿರಿಜಾಳರ ಮದುವೆ ಆಗುತ್ತದೆ. ನಂತರ ಅವರಿಬ್ಬರು ನಂದಿ ಸಮೇತ ಕೈಲಾಸಕ್ಕೆ ಹೋಗುವಾಗ ತಮ್ಮ ಮದುವೆ ಧಾರೆಗೆ ಸಹಾಯ ಮಾಡಿದವರಿಗೆ 'ಸಾಲೆ ಸಾರ್ವರು' ಎಂಬ ಹೆಸರಿನಿಂದ ಪ್ರಸಿದ್ಧರಾಗಿರಿ ಎಂದು ಶಿವ ಹರಿಸಿದನೆಂದು ವರ್ಣಿಸುವ ಈ ಪೌರಾಣಿಕ ಕಥೆಯಲ್ಲಿ ಮದುವೆಯ ಸಮಗ್ರ ವರ್ಣನೆ ತಂದೆ-ತಾಯಿ-ಮಗಳು, ಭಾವ-ಮೈದುನ, ಮಾವಂದಿರ ಪಾತ್ರಗಳು ಮದುವೆ ಎಂಬ ವಿಚಾರಕ್ಕೆ ಒಂದಕ್ಕೊಂದು ಸಂಬಂಧವುಳ್ಳ ಕುಟುಂಬ ವ್ಯವಸ್ಥೆಯ ವಾತಾವರ್ಣವನ್ನು ಶಾಸನ ಚಿತ್ರಿಸುವುದನ್ನು ಕಾಣುತ್ತೇವೆ.[೧೨೦] ಹೀಗೆ ಮದುವೆ ಮುಂಚೆ ಮತ್ತು ನಂತರ ನಡೆಯುವ ಶಿಷ್ಟಾಚಾರ ಪದ್ಧತಿಗಳು ಪ್ರತಿಯೊಂದು ಸಮಾಜಧರ್ಮದಲ್ಲಿ ಇಂದಿಗೂ ಬೆಳೆದುಕೊಂಡು ಬಂದಿರುವುದನ್ನು ಕಾಣಬಹುದು.

## ಬಹುಪತ್ನಿತ್ವ

ಸಾಮಾನ್ಯವಾಗಿ ಅರಸುಮನೆತನದರಲ್ಲಿ, ಅಧಿಕಾರಿಗಳು, ಶ್ರೀಮಂತ ವರ್ಗಗಳಲ್ಲಿ ಅಧಿಕ ಪ್ರಮಾಣದಲ್ಲಿ ಕಂಡುಬರುವ ಬಹುಬತ್ನಿತ್ವ ಪದ್ಧತಿಯನ್ನು ಪ್ರಾಚೀನ ಕಾಲದ ಸಮಾಜವು ಒಪ್ಪಿಕೊಂಡಿರುವುದನ್ನು ಕಾಣುತ್ತೇವೆ.[೧೨೧] ಈ ಪದ್ಧತಿ ಜನ ಸಾಮಾನ್ಯರಲ್ಲಿ ಕಾಣುವುದು ವಿರಳ. ಬಾದಾಮಿ ಚಾಲುಕ್ಯರ ಅರಸ ಎರಡನೇ

ಪುಲಕೇಶಿ ಕಲ್ಯಾಣ ಚಾಲುಕ್ಯ ಅರಸ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ, ಹೊಯ್ಸಳ ಅರಸ ಎರೆಯಂಗ, ವಿಷ್ಣುವರ್ಧನ, ನಾರಸಿಂಹ, ಬಲ್ಲಾಳ ಇವರು ಬಹು ಪತ್ನಿಯರನ್ನು ಪಡೆದ ರಾಜರಲ್ಲಿ ಪ್ರಮುಖರು[೧೨೨] ಮಹಾಭಾರದತ ಕೃಷ್ಣ ಪರಮಾತ್ಮನಿಗೆ ಅಷ್ಟಮಹಿಷಿಯರಿದ್ದಂತೆ ರಾಜನಾದವನಿಗೆ ಬಹಳ ಜನ ರಾಣಿಯರಿರುತ್ತಿದ್ದರು. ಅವರನ್ನು ಪಟ್ಟ ಮಹಿಷಿ, ಪಿರಿಯರಸಿ ಎಂಬ ಹೆಸರಿನಿಂದ ಕರೆದಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಕವಲೂರ ಶಾಸನ ಅರಸ ಬಲ್ಲಾಳದೇವನ 'ಹಿರಿಯರಾಣಿ ರೇಮ್ಮಲದೇವಿಯನ್ನು ಮತ್ತು ಅವಳ ತಾಯಿಯನ್ನು,[೧೨೩] ವಿಕ್ರಮಾದಿತ್ಯನ ಹಿರಿಯ ಅರಸಿ (ರಾಣಿ) ಚಂದಲದೇವಿಯನ್ನು ಹೇಸರಿಸಿ ಅವಳ ಮಗಳಾದ ನಾಗಲದೇವಿಯನ್ನು ಕಳಚೂರಿ ಅರಸ ಕನ್ನಮನ ಮಗ ಜೋಗಮ ಅವನ ಮಗ ಪೇರ್ಮಾಡಿಗೆ ಕೊಟ್ಟು ಮದುವೆ ಮಾಡಿದನೆಂದು ಮಾದಿನೂರು ಶಾಸನ[೧೨೪] ಹೇಳುತ್ತದೆ. ಈ ದಂಪತಿಗಳ ಮಗನೆ ೨ ನೇ ಬಿಜ್ಜಳ ಈತನು ಮುಂದೆ ಮಂಗಳ ವೇಡೆಯ ಮಹಾ ಮಂಡಳೇಶ್ವರನಾದನೆಂದು ತಿಳಿಯುವದು. ಈ ವಿಕ್ರಮಾದಿತ್ಯನ ಹಿರಿಯ ರಾಣಿ ಚಂದಲದೇವಿಯ ಬಗ್ಗೆ ದಿಲ್ಹಣನು ತನ್ನ ಕಾವ್ಯದಲ್ಲಿ ಅವರ ವಿವಾಹ, ಮಧುಚಂದ್ರ, ವಿಹಾರ, ಯೌವ್ವನ ಇತ್ಯಾದಿಗಳನ್ನು ವರ್ಣಿಸಿರುವನು.[೧೨೫] ಇಟಗಿ ಶಾಸನವೊಂದು ತೈಲಪನಿಂದ ೬ ನೆಯ ವಿಕ್ರಮಾದಿತ್ಯ ಅರಸನವರೆಗಿನ ವಂಶಾವಳಿ ನೀಡಿ ಅದರಲ್ಲಿ ದೇಚಿರಾಜನ ಪತ್ನಿ ನಿಜಕಬ್ಬೆ, ವಸುದೇವನ ಪತ್ನಿವಳಜಿಕಬ್ಬೆ ಮತ್ತು ನಾರಾಯಣ ದೇವನ ಪತ್ನಿ ಚಂದ್ರಿಕಾಂಬಿಕೆ' ಈ ದಂಪತಿಗಳ ಮಗ ಮಹಾದೇವದಂಡಾನಾಯಕ ಇತನು ಕಾಳಲದೇವಿ, ಮಲ್ಲಿಕಾದೇವಿ, ಪಂಪಲದೇವಿ ಎಂಬ ರಾಣಿಯರನ್ನು ಹೊಂದಿರುವುದಾಗಿ ಶಾಸನ ವರ್ಣಿಸಿದೆ.[೧೨೬] ಕಲ್ಲೂರ ಶಾಸನ ಬಿಜ್ಜಲದೇವನ ಪತ್ನಿಯರಾದ ಲಕ್ಷ್ಮೀದೇವಿ, ಸಿರಿಯಾದೇವಿಯರನ್ನು ಹೆಸರಿಸಿದೆ.[೧೨೭]

ಈ ರಾಣಿಯರಲ್ಲಿ ಹಿರಿಯವಳನ್ನು (ಪಿರಿಯಸಿ) ಅಗ್ರಮಹಿಷಿ, ಪಟ್ಟಮಹಿಷಿ, ಎಂದು ಕರೆಯುತ್ತಿದ್ದರು. ಇವಳು ಯಾವತ್ತುರಾಜನ ಹತ್ತಿರದಲ್ಲಿದ್ದು ದಾನ-ಧರ್ಮ, ಆಡಳಿತ ಮುಂತಾದವುಗಳಲ್ಲಿ ರಾಜನಿಗೆ ನೆರವಾಗುತ್ತಿದ್ದಳು. ಉಳಿದ ರಾಣಿಯರು ರಾಜ್ಯದ ವಿವಿಧ ಭಾಗಗಳಲ್ಲಿದ್ದು ಅಧಿಕಾರ ನಡೆಸುತ್ತಿದ್ದಂತೆ ತೋರುತ್ತದೆ. ಈ ರಾಜರಲ್ಲದೆ ಸಾಮಾನ್ಯರು ಸಹ ಬಹು ಪತ್ನಿತ್ವದ ಸಂಪ್ರದಾಯ ಹೊಂದಿದ್ದರೆಂದು ಸಮಕಾಲಿನ ಕವಿ ರನ್ನನು ಉಚ್ಛರಿಸಿದ್ದಾನೆ.[೧೨೮]

## ವೈದವ್ಯ (ಸತಿಪದ್ಧತಿ)

ಪ್ರಾಚೀನ ಕರ್ನಾಟಕ ಮತ್ತು ಮಧ್ಯಕಾಲಿನ ಕರ್ನಾಟಕ ಇತಿಹಾಸದಲ್ಲಿ ವಿದುವೆಯರು ಗಂಡ ಸತ್ತ ಬಳಿಕ ಹೆಂಡಿತಿಯಾದವಳು ಸಹಗಮನ ಇಲ್ಲವೆ ಅನುಗಮನದ ಮೂಲಕ ಮಹಾಸತಿಯಾಗುತ್ತಿದ್ದಳು ಎಂಬುದುದಕ್ಕೆ ನಾಡಿನೂದ್ದಕ್ಕೂ ಕಾಣ ಸಿಗುವ ಮಾಸ್ತಿ ಕಲ್ಲುಗಳು (ಸತಿಗಲ್ಲುಗಳು) ಸಾಕ್ಷಿಯಾಗಿವೆ. ಇದರಲ್ಲಿ ಕೊಪ್ಪಳ ಜಿಲ್ಲೆಯೂ ಸೇರಿಕೊಳ್ಳುತ್ತದೆ. ಕುಷ್ಟಗಿ ತಾಲೂಕಿನ ಕಬ್ಬರಗಿ ಗ್ರಾಮದಿಂದ ಸುಮಾರು೧ ಕಿ.ಮೀ. ದೂರದಲ್ಲಿ ದೊಡ್ಡಮಹಾಸತಿಗುಡಿಯಲ್ಲಿ ಕರಿಕಲ್ಲಿನ ಮೇಲೆ೫ ಅಡಿ ಎತ್ತರ ಬಲಗೈ ಎತ್ತಿ ಆಶೀರ್ವಾಧಿಸುವಂತೆ, ಇನ್ನೊಂದು ಕೆಳಗಡೆ ಇಳಿಬಿಟ್ಟ ಕೈ, ಕೈಯಲ್ಲಿ ನಿಂಬೆಹಣ್ಣು, ಕಿವಿಯಲ್ಲಿ ಓಲೆ, ಕೊರಳಲ್ಲಿ ಹಾರಗಳು, ಮೈಮೇಲೆ ಸಿರೆಯನ್ನು

ನಿರಿಗೆರೂಪದಲ್ಲಿ ಕೆತ್ತಿಸಿದಂತೆ ಕೆತ್ತಲ್ಪಟ್ಟಿದೆ.[೧೨೯] ಅದರಂತೆ ಕೊಪ್ಪಳದ ಬಸ್ಟಾಂಡ ಎದುರಿಗೆ ಇರುವ ಕೋಟೆಯ ಮಾಸ್ತಿ ಗುಡಿ, ಇದೇ ತಾಲೂಕಿನ ಹಿರೇಸಿಂದೋಗಿ ಗ್ರಾಮದ ಮಾಸ್ತಿಕಲ್ಲಿನಲ್ಲಿ ಹೆಣ್ಣು ಮಗಳೊಬ್ಬಳು ಎತ್ತಿಕಟ್ಟಿದ ತುರುಬು ಮೆಲಕ್ಕೆ ಮಾಡಿದ ಕೈ, ನಿಂಬೆಹಣ್ಣು ಹಿಡಿದು ಕೆಳಗಡೆ ಮಾಡಿ ಕೆತ್ತಿದ ಕೈ ಇದರ ಪಕ್ಕದಲ್ಲಿ ಕತ್ತಿ ಹಿಡಿದ ವೀರನೊಬ್ಬನ ಚಿತ್ರ ವಿರುವ ಮಾಸ್ತಿಕಲ್ಲುಗಳು ಕಂಡುಬರುತ್ತವೆ.[೧೩೦] ಇದೇ ಕೊಪ್ಪಳ ಶಾಸನದಲ್ಲಿ ''ಪೊಲೆಯಬ್ಬೆಯ ಮಗಳು ಎರೆಯಬ್ಬೆ ಸಮಾಧಿ ಯೋಗದಿಂದ ಜನಕ ತನೂಜೆ ಯೆನ್ತೆ ಸುರಲೋಕ ಪತಿತ್ವ ಮನೆಯ್ದಿತಾಳಿದಳ್'' ಎಂದು ಉಲ್ಲೇಖಿಸಿದೆ.[೧೩೧] ಕುಕನೂರು ಗ್ರಾಮದ ನೈಋತ್ಯ ದಿಕ್ಕಿಗೆ ಇಟಗಿಗೆ ಹೊಗುವ ದಾರಿಯ ದಕ್ಷಿಣ ಭಾಗದ ಕಲೆಕೋಲಿಕಂಭದಲ್ಲಿ ಪದ್ಮಾಕಾರದ ಶಿಲೆಯ ಮೇಲೆ ಸ್ತ್ರೀದೇವತೆಯಂತೆ ಉಬ್ಬು ಶಿಲ್ಪ ಕಂಡುಬರುತ್ತದೆ. ಇದು ಕೂಡಾ ಸತಿಗಲ್ಲು ಎಂದು ತಿಳಿಯಲಾಗಿದೆ.[೧೩೨] ಹೀಗೆ ಕೇಲವು ಜನಸ್ತ್ರೀಯರು ತಮ್ಮ ಪತಿಯನ್ನು ಕಳಕೊಂಡು ಸಮಾಜದಲ್ಲಿ ಅಸ್ಪೃಷ್ಯರಂತೆ ಜೀವನ ಸಾಗಿಸುವುದಕ್ಕಿಂತ ಸಾಯುವದೆ ಮೇಲೆಂದು ಸತಿಹೋಗುತ್ತಿದ್ದರೆಂದು ಭಾವಿಸಲಾಗಿದೆ. ಇದರಿಂದ ಆಗಿನ ಸಮಾಜದಲ್ಲಿ ವೈದವ್ಯಪದ್ಧತಿ ಪ್ರಚಲಿತವಾಗಿದ್ದುದು ಗೋತ್ತಾಗುತ್ತದೆ.

**ನಾಮಕರಣ**

ಸ್ಥಳನಾಮಗಳಂತೆ ವ್ಯಕ್ತಿ ನಾಮಗಳು ಒಂದು ಜನಾಂಗದ ಧರ್ಮ, ಪ್ರದೇಶ, ಭಾಷೆ, ಅಂತಸ್ತು ಅಧಿಕಾರ, ಅವರ ಸಂಸ್ಕೃತಿಯನ್ನು ಬಿಚ್ಚಿ ತೋರಿಸುತ್ತವೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಕರ್ನಾಟಕದಲ್ಲಿ ಸ್ತ್ರೀಯರ ಹೆಸರುಗಳನ್ನಿಡುವಲ್ಲಿ ತಂದೆ ತಾಯಿಗಳು ಅನುಸರಿಸಿದ ಮನೋಧರ್ಮವೇನಿದ್ದಿತೆಂದು ಅರಿಯುವದು ಸೂಕ್ತವೆನಿಸುತ್ತದೆ. ಉದಾ : ಗಂಗೆ ಗೌರಿ, ಮಲ್ಲಿ, ಅಕ್ಕ, ಅಬ್ಬೆ, ಅವ್ವೆ, ದೇವಿ, ರೇವ, ಕಾಳಿ, ಮೈಳಲ, ಮಾಯಿ ಇತ್ಯಾದಿಯಾಗಿ ಕಾಣಿಸಿಕೊಳ್ಳುತ್ತವೆ.[೧೩೩] ಸ್ತ್ರೀಯಳು ಸಾಮಾನ್ಯಳಾಗಿದ್ದರೆ ಅಕ್ಕ, ಅಬ್ಬೆ, ಅವ್ವೆ, ಬಾಯಿಗಳ ಬದಲಾಗಿ ಅಂಬೆ, ಅಂಬಿಕೆ, ದೇವಿ, ಎಂಬ ಪದಗಳು ಸೇರುತ್ತವೆ. ಒಂದು ವೇಳೆ ಈ ಹೆಸರುಗಳ ಮುಂದೆ ಗೌಡ, ಅರಸಿ, ಮುಂತಾಗಿ ಇದ್ದರೆ ಸಾಮಾನ್ಯಸ್ತ್ರೀಯಳು ಉನ್ನತ ಅಂತಸ್ತಿಗೇರಿದ್ದು ತಿಳಿಯುತ್ತದೆ. ಉದಾ : ರೇವಕವ್ವೆಗೌಡಿ, ರೇವಕಬ್ಬರಸಿ ದೇವಿಯಕ್ಕ ನಾಯಕಿತಿ, ಮಹಾಭಾರತದಲ್ಲಿ ಹೆಸರಾದ ಅಂಬೆ ಅಂಬಾಲಿಕೆಯರನ್ನು ಗಮನಿಸಬಹುದು.[೧೩೪] ಸಾಮಾನ್ಯಸ್ತ್ರೀಯರಿಗೆ ಅಕ್ಕ ಅಬ್ಬೆ, ಅವ್ವೆ, ಇವು ಒಂದಕ್ಕಿಂತ ಹೆಚ್ಚು ಸೇರಿದ್ದರೆ ಅವಳು ಪ್ರಸಿದ್ಧಳೇಂಬುದಕ್ಕೆ ಪಂಪಕಬ್ಬೆ, ಮಲ್ಲಿಕಬ್ಬೆ, ವೈಜಕಬ್ಬೆ, ರೇವಕವ್ವೆ ಇತ್ಯಾದಿ[೧೩೫] ಹೆಸರುಗಳು ಸಹ ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತವೆ. ಅವುಗಳೆಂದರೆ ಪೋಲೆಯಬ್ಬೆ ಯರೆಯಬ್ಬೆ[೧೩೬] ಅಣಿಗಬ್ಬೆ[೧೩೭] ಜಕ್ಕಿಯಬ್ಬೆ ನಿಜಕಬ್ಬೆಕಂತಿ ರೇವಕಬ್ಬೆ,[೧೩೮] ಪಿಟ್ಟ ಕಬ್ಬೆ[೧೩೯] ಗೋನಂಬೆ[೧೪೦] ಜೆಜ್ಜಬ್ಬರಸಿ[೧೪೧] ಪದ್ಮಬ್ಬೆ[೧೪೨] ಪದ್ಮಾವತಿದೇವಿ [೧೪೩] ಪಿರಿಯಬ್ಬರಸಿರೇವಕಬ್ಬೆ[೧೪೪] ಜಕ್ಕಣ್ಣವ್ವೆ[೧೪೫] ಎಂಬ ಅನೇಕ ಉಲ್ಲೇಗಳು ಶಾಸನಗಳಲ್ಲಿ ಕಾಣಸಿಗುತ್ತವೆ. ದೇವಿಯ ಹೆಸರುಗಳಾದ ಅಂಬಿಕೆ, ಚಾಮುಂಡಿದೇವಿ, ವಸಂತದೇವಿ, ಮಹಾಮಾಯೆ, ಜೇಷ್ಠಾದೇವಿ, ಲಖ್ಖಿದೇವಿ, ಚಂಡಾಬಾಯಿ, ಲಳಿಯಾದೇವಿ ಹೆಸರುಗಳು[೧೪೬] ಸಹ ಸಮಾಜದಲ್ಲಿ ಹೆಸರನ್ನಿಡಲು ಬಳಸಿಕೊಳ್ಳುತ್ತಿದ್ದರೆಂಬುದಕ್ಕೆ ಇಂದಿನ ಜನಪದರಲ್ಲಿ ಉಳಿದುಕೊಂಡು ಬಂದ

ಸಂಸ್ಕೃತಿಯೇ ಮಹತ್ವವಾದ ಸಾಕ್ಷಿಯೆನ್ನಬಹುದು. ಇದಕ್ಕೆ ನಿದರ್ಶನವಾಗಿ ಇಟಗಿ ಶಾಸನ[೧೪೭] ದೇಚಿರಾಜನ ಪತ್ನಿ ನಿಜಕಬ್ಬೆ, ವಸುದೇವನ ಪತ್ನಿ ವಳಜಕಬ್ಬೆ, ನಾರಾಯಣನ ಪತ್ನಿ ಚಂದ್ರಿಕಾಂಬಿಕೆ, ಮಾದೇವನ ಪತ್ನಿಯರಾದ ಕಾಳಲಾದೇವಿ, ಮಲ್ಲಿಕಾದೇವಿ, ಪಂಪಲದೇವಿಯರ ಬಗ್ಗೆ ಹೆಸರಿಸಿದರೆ, ಗೋತಗಿ ಶಾಸನ[೧೪೮] ಚಾಳುಕ್ಯ ಅರಸ ಜಗದೇಕಮಲ್ಲನ ಪತ್ನಿ ಪದ್ಮಲದೇವಿಯಳ ಬಗ್ಗೆ ಹೇಳುವುದು. ಪುರ ಶಾಸನ[೧೪೯] ಭಾಗದೇವಿಯನ್ನು, ಚಳಗೇರಿ ಶಾಸನ[೧೫೦] ಸತ್ತಿಯದೇವಿ, ಲಕ್ಷ್ಮಾದೇವಿ, ದುರ್ಗಾಂಬೆ, ಸಿರಿಯಾದೇವಿಯರನ್ನು ಉಲ್ಲೇಖಿಸುತ್ತವೆ. ಇವು ಸಾಮಾಜಿಕ ಅಂತಸ್ತು ವಯಸ್ಸಿಗನುಗುಣವಾಗಿ ಮೇಲುವರ್ಗದ ಮಹಿಳೆಯರು, ಸಾಮಾನ್ಯ ವರ್ಗದ ಮಹಿಳೆಯರು ಅಂದು ಇಟ್ಟುಕೊಂಡ ಹೆಸರುಗಳಾಗಿವೆ.

## ಸ್ತ್ರೀಯರ ಸ್ಥಾನ ಮಾನ

ಭಾರತದಲ್ಲಿ ನಾರಿಯರ ಸ್ಥಾನ ಮಾನ ಕಾಯಿದೆ ಹಕ್ಕುಗಳು ಮೋದಲಾದವು ಹಿಂದು ಧರ್ಮದ ತಳಹದಿಯ ಮೇಲೆ ನಿಂತಿದೆ. ಭಾರತದ ಸಾಮಾಜಿಕ ಇತಿಹಾಸವನ್ನವಲೋಕಿಸಿದರೇ ಸ್ತ್ರೀಯರ ಬಗ್ಗೆ ಸಮಾಜವು ಎಲ್ಲಾ ಕಾಲಗಳಲ್ಲಿಯೂ ಒಂದೇ ಬಗೆಯಾಗಿ ಕಂಡಿರಲಿಲ್ಲವೆಂದು ತಿಳಿಯುತ್ತದೆ. ವೇದಕಾಲಗಳಿಂದ ಸ್ಮೃತಿಗಳ ಕಾಲಕ್ಕೆ, ಅದೇ ರೀತಿ ನಂತರದ ಕಾಲದಲ್ಲಿ ಮುಂದುವರೆದು, ಮಧ್ಯಕಾಲಿನ ಕರ್ನಾಟಕಕ್ಕೆ ಕಾಲಿರಿಸಿತು ಅಷ್ಟರಲ್ಲಿ ಸ್ತ್ರೀ ಯರಿಗಿದ್ದ ಗೌರವವು ಕಡಿಮೆಯಾಗ ತೋಡಗಿದವು. ಅದು ಕೊಪ್ಪಳ ಜಿಲ್ಲೆಯ ಸಾಮಾಜಿಕವ್ಯವಸ್ಥೆಯ ಮೇಲೆ ಪ್ರಭಾವ ಬೀರಿತ್ತೆಂಬುದಕ್ಕೆ ಶಾಸನಗಳು, ಸಾಹಿತ್ಯಿಕ ಗ್ರಂಥಗಳು ಆಧಾರವಾಗಿವೆ.[೧೫೧] ಮುಂದೆ ೧೨ ನೆಯ ಶತಮಾನದ ವಚನಕಾರರು ಸಂಪ್ರದಾಯ ಬದ್ಧ ಸಮಾಜದ ವಿರುದ್ಧ ಬಂಡೆದ್ದು, ಮಹಿಳೆಯರಿಗೆ ವಿಶೇಷಸ್ಥಾನ ಮಾನ ಒದಗಿಸಿಕೊಡುವಲ್ಲಿ ಪ್ರಯತ್ನಿಸಿದರು.[೧೫೨] ಈ ಹಿಂದೆ ಏನೆಲ್ಲಾ ಕಟ್ಟಳೆಗಳಿದ್ದರು ಸಾರ್ವಜನಿಕ ಜೀವನದಲ್ಲಿ ಗುರ್ತಿಸಿಕೊಂಡ ರಾಣಿಯರು, ಅಧಿಕಾರಿಗಳ ಕುಟುಂಬ ವರ್ಗದವರು, ಸಾಮಾನ್ಯರು, ಆಡಳಿತದಲ್ಲಿ ದೇವಾಲಯಗಳ ನಿರ್ಮಾಣ, ದಾನದತ್ತಿಗಳನ್ನು ಬಿಡುವದರ ಜೊತೆಗೆ ಕಲೆ, ಸಾಹಿತ್ಯ, ನೃತ್ಯ, ವಿದ್ಯಾಭ್ಯಾಸ ಕ್ಷೇತ್ರದಲ್ಲಿ ತೋರಿದ ಆಸಕ್ತಿಗಳು ಅವರ ಸ್ಥಾನಮಾನವನ್ನು ಎತ್ತಿತೋರಿಸುತ್ತವೆ. ಪ್ರಾಚೀನ ಕಾಲದಿಂದಲೂ ಮಹಿಳೆಯು ಸಮಾಜದ ಒಂದಿಲ್ಲ ಒಂದು ಕ್ಷೇತ್ರದಲ್ಲಿ ತಮ್ಮ ಗಂಡಂದಿರ ಜೊತೆ ಸೇರಿ, ಇಲ್ಲವೇ ಸ್ವತಂತ್ರವಾಗಿ ಆಡಳಿತ ನಡೆಸಿದ್ದಾರಲ್ಲದೆ, ದತ್ತಿ ದಾನನೀಡಿ ತಮ್ಮ ಧರ್ಮಬುದ್ಧಿ ತೋರಿಸಿಕೊಟ್ಟಿದ್ದಾರೆ. ತ್ರಿಭುವನ ಮಲ್ಲದೇವನ ಅರಸಿ ರೆಬ್ಬಲದೇವಿ ಪನ್ನಾಯದ ಸೋವರಸನ ತಮ್ಮ ರೇವರಸರೊಂದಿಗೆ ಮಾದಿನೂರದತ್ರೈಪುರಷ ದೇವಾಲಯಕ್ಕೆದಾನ ನೀಡಿಕೀರ್ತಿಮೆರಿದಿದ್ದಾಳೆ.[೧೫೩] ಕೌಶಿಕ ಗೋತ್ರದ ತಿಕಪಯ್ಯನ ಮಗ ಜಕ್ಕನು ಚಾಳುಕ್ಯದೊರೆ ತ್ರಿಭುವನಮಲ್ಲನ ಯುದ್ಧದಲ್ಲಿ ಹೋರಾಡಿ ಶೌರ್ಯ್ಯ ಮೆರೆದು ಸತ್ತಾಗ ಇವನ ಪತ್ನಿ ಶಾಂತಿಕಬ್ಬೆ ವಿಷ್ಣುಧ್ಯಾನಮಾಡಿ ಅನೇಕವ್ರತಗಳನ್ನು ಸ್ವಿಕರಿಸಿ ಕೇಶವದೇವರನ್ನು ಪ್ರತಿಷ್ಠೆಮಾಡಿದಳಲ್ಲದೇ ಕೆಲವುದಾನಗಳನ್ನು ನೀಡಿದಂತೆ ಶಾಸನ ತಿಳಿಸುತ್ತದೆ.[೧೫೪] ತ್ರೈಲೊಕ್ಯಮಲ್ಲನ ಮಂಡಳೇಶ್ವರನಾದ ಚವುಂಡರಸನ ಪತ್ನಿಯನ್ನು ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗ ಭಾಗಿನಿ ದ್ವಿತಿಯಲಕ್ಷ್ಮಿ ಸಮಾನೆ, ದಾನ ಚಿಂತಾಮಣಿ ಇತ್ಯಾಗಿಯಾಗಿ ಭಮ್ಮಲದೇವಿಯನ್ನು ಕೊಂಡಾಡಿದೆ.



ಮುದುವೊಳಲಿನಲ್ಲಿ ಆಕೆಯು ಹರಿಹರದೇವಾಲಯ ನಿರ್ಮಿಸಿದಂತೆ ವರ್ಣಿಸಿದೆ.[೧೫೫] ಇಟಗಿ ಶಾಸನ ಆರನೇ ವಿಕ್ರಮಾದಿತ್ಯನ ಪ್ರಸಿದ್ಧ ದಂಡನಾಯಕ ಮಹಾದೇವದಂಡನಾಯಕನು ಅಗ್ರಹಾರ ಇಟ್ಟಗೆಯಲ್ಲಿ ತನ್ನ ತಂದೆ-ತಾಯಿಗಳ ಹೆಸರಿನಲ್ಲಿ ದೇವಾಲಯಗಳನ್ನು ಕಟ್ಟಿಸಿ ದಾನ ಕಾರ್ಯಗಳನ್ನು ಕೈಕೊಂಡನೆಂದು ಹೇಳುತ್ತದೆ.[೧೫೬] ಕುಕನೂರಿನ ಶಾಸನವೊಂದು ಗಂಗಾಧರನಾಯಕನ ಮಗಳು ಕಾಮಿಯಕ್ಕಳು ಹೆಗ್ಗೆರೆಯ ಎರೆಭೂಮಿಯಲ್ಲಿ ೨ ಮತ್ತರು ಭೂಮಿಯನ್ನು ಸತ್ರಕ್ಕಾಗಿ ಬಿಟ್ಟರೆ, ಶ್ರೀಪತಿ ನಾಯಕನ ಪತ್ನಿ ಚಾಮಿಯಕ್ಕವ್ವೆ ೧ ಮತ್ತರು ೪೫೦ ಕಮ್ಮ ಭೂಮಿಯನ್ನು ಕುಕನೂರಿನ ಮೂಲಸ್ಥಾನ ದೇವರಿಗೆ ದಾನ ಬಿಟ್ಟಿರುತ್ತಾರೆ. ಮತ್ತು ಶ್ರೀಸರಸ್ವತಿ ದೇವರ ಅಂಗಭೋಗ, ರಂಗಭೋಗ, ನಿವೇದ್ಯಕ್ಕೆ ಅಲ್ಲಿ ಹಾಡುವ ವರ್ಗದವರಿಗೂ ಸಹಭೂಮಿ ದಾನ ನಿಡಿದ್ದನ್ನು ಶಾಸನ ಉಲ್ಲೇಖಿಸುತ್ತದೆ.[೧೫೭] ಕಳಚೂರಿರಾಯಯುರಾರಿ ಸೋವಿದೇವನ ಕೈಕೆಳಗೆ ದಾಸಿಗ ಮಂಡಳೇಶ್ವರನು ಕಿಸುಕಾಡೆಪ್ಪತ್ತನ್ನು ಆಳುತ್ತಿದ್ದಾಗ ಇತನ ಸಂತತಿಯ 'ಬಮ್ಮ' ಇವನ ಮಗ ಚಮುಂಡ ಇವನ ಪತ್ನಿ ಸತ್ತಿಯಾದೇವಿ, ಕಲ್ಲಂಗೆರೆಯ ಲಕ್ಷ್ಮಿದೇವದಂಡನಾಯಕ, ಇವನ ಪತ್ನಿ ಲಕ್ಕ್ಮಾದೇವಿ, ಚಾಮಚುಡಾಮಣಿಯ ಪತ್ನಿ ದುಗ್ಗಾಂಬೆ ಭೂಚದಂಡನಾಥನ ಪತ್ನಿ ಸಿರಿಯಾದೇವಿ ಇನ್ನಿತರರು ಸೇರಿ ಲಕ್ಷ್ಮೀನಾರಾಯಣ ದೇವಾಲಯ ಕಟ್ಟಿಸುವಲ್ಲಿ ಮತ್ತು ದಾನ ನೀಡುವಲ್ಲಿ ಸ್ತ್ರೀಯರಿಗಿದ್ದ ಸ್ಥಾನಮಾನ ಗೊತ್ತಾಗುತ್ತದೆ.[೧೫೮] ಸಂಕಮದೇವನ ೪ ನೆಯವರ್ಷದಲ್ಲಿ ಬಳ್ಳಾಳದೇವನ ಹಿರಿಯರಾಣಿ ರೆಮ್ಮಲದೇವಿಯು ತನ್ನ ತಾಯಿಯ ಸಮೇತ ಮಾಸವಾಡಿನಾಡಿನ ಅಗ್ರಹಾರ ಕೌರೂರಿನ ಹರಿಹರ ದೇವಾಲಯದ ಚೈತ್ರಪವಿತ್ರಕ್ಕೆ, ಬ್ರಹ್ಮಪುರಿಗೆ, ಸೂಳೆಗೇರಿಗೆ ಇತ್ಯಾದಿಗಾಗಿ ಸಂತಾನಾಭಿವೃದ್ಧಿ ಬಯಸಿ ದಾನ ಕೊಟ್ಟಳ್ಳು.[೧೫೯] ಚಂಡಾಬಾಯಿ, ಚಾಮುಂಡಿ, ಲಳಿಯಾದೇವಿಯರು ತಮ್ಮ ಪತಿಯರೊಂದಿಗೆ ಕುಕನೂರಿನ ಕಾಳಿಕಾದೇವಿಯ ದೇವಾಲಯದ ವಿವಿಧ ಕೆಲಸ ಕಾರ್ಯಗಳಿಗಾಗಿ ಬೇರೆ ಬೇರೆ ರೀತಿಯ ದಾನ ದತ್ತಿಗಳನ್ನು ಬಿಡುವಲ್ಲಿ ಅರಸರಷ್ಟೆಸರಿಸಮಾನಸ್ಥಾನ ಮೆರೆದಿದ್ದಾರೆ.[೧೬೦] ಈ ರೀತಿಯಾಗಿ ಸ್ತ್ರೀಯರು ಸ್ವತಂತ್ರವಾದ ನಿರ್ಣಯಗಳನ್ನು ಕೈಕೊಂಡು ದಾನದತ್ತಿಗಳನ್ನು ನೀಡಿರುವುದು, ದೇವಾಲಯ ಕಟ್ಟಿಸುವುದು, ಆಡಳಿತ ನಡೆಸುವುದು, ಶಾಸನ ನಿಶಿಧಿ, ಹಾಕಿಸುವುದು, ಪೂಜೆ, ಪುನಸ್ಕಾರಗಳು ದೇವಾಲಯದ ಅಂಗಭೋಗ, ರಂಗ ಭೋಗ, ಸಂಗೀತ, ಕಲೆ, ಶಿಕ್ಷಣ ಇತ್ಯಾದಿ ಚಟುವಟಿಕೆಗಳು ನಡೆಯುವಂತಾಗಲು ದಾನದತ್ತಿ ಬಿಟ್ಟಿರುವದನ್ನು ನೋಡಿದರೆ ಅಂದು ಸ್ತ್ರೀಯರಿಗೆ ಸಮಾಜದಲ್ಲಿ ಉನ್ನತಸ್ಥಾನಮಾನಗಳು ದೋರೆತ್ತಿದ್ದವೆಂಬುದು ಸ್ಪಷ್ಟವಾಗುತ್ತದೆ.

**ವೇಶ್ಯೆಯರು**

ವಿವಾಹ ವ್ಯವಸ್ಥೆ, ಗೃಹಿಣಿ ಸಮಾಜದ ಜೋತೆ ಜೊತೆಯಲ್ಲಿಯೇ ಬೆಳದು ಬಂದಿರುವುದೆ ಸೂಳೆ ಸಮಾಜ. ಇವರು ಋಗ್ವೇದದಲ್ಲಿ ಗಣಿಕೆಯರೆಂದು, ಜಾರೆಯರೆಂದು[೧೬೧] ಸ್ಕಂದ ಪುರಾಣದಲ್ಲಿ ಅಪ್ಸರೆಯರ ವಂಶಜರೆಂದು ಕರೆದುಕೊಂಡಿದ್ದಾರೆ.[೧೬೨] ಇದು ಕರ್ನಾಟಕದಲ್ಲಿ ಕ್ರಿ.ಸ. ೬ ರಿಂದ ೯ ನೆ ಶತಮಾನಗಳಲ್ಲಿ 'ಸೂಳೆಯ' ಪದಕ್ಕೆ ಪರ್ಯಾಯ ಪದಗಳಾಗಿ ಪೋಟಿ, ಪೊಡ್ಡಿ, ಬೊಡ್ಡಿ ಎಂದು ಬಳಕೆಗೊಂಡಿವೆ. ದೇವರ ಹೆಸರಲ್ಲಿ ಬಿಟ್ಟವಳು, ಹಣಕ್ಕಾಗಿ ದೇಹಮಾರಿಕೊಳ್ಳುವಳು, ವ್ಯಕ್ತಿಯೊಬ್ಬನೊಂದಿಗೆ ಇದ್ದವಳನ್ನು ದೇವಸೂಳೆ,

ಸಮಾಜ ಸೂಳೆ, ವ್ಯಕ್ತಿಸೂಳೆಯರೆಂದು ಕರೆಯಿಸಿಕೊಂಡಿದ್ದಾರೆ.[೧೬೩] ಇವರು ಸಾಮಾಜಿಕವಾಗಿ, ಆರ್ಥಿಕವಾಗಿ, ಉನ್ನತ ಸ್ಥಾನ ಪಡೆದು ಅಂದಿನ ಸಮಾಜದಲ್ಲಿ ಗಣ್ಯಸ್ಥಾನ ಮಾನ ಹೊಂದಿದ್ದರೂ ತಮ್ಮ ವೃತ್ತಿಯನ್ನು ಕೈಬಿಟ್ಟಿರಲಿಲ್ಲ.[೧೬೪] ದೇವಾಲಯಗಳಲ್ಲಿ ಅಂಗಭೋಗ, ರಂಗಭೋಗದ ಸೇವೆಗಳು ಹೆಚ್ಚಿದಂತೆಲ್ಲ ದೇವಾಲಯದ ಸೇವೆಗಾಗಿಯೂ ಇವರನ್ನು ತೋಡಗಿಸಿಕೊಂಡಿದ್ದರು. ಅಂತಹ ಹೆಣ್ಣುಗಳನ್ನು ಶಾಸನಗಳು 'ಸೂಳೆಯರೆಂದು' ಕರೆದಿವೆ. ಇವರು ಸಾಮಾನ್ಯ ವೇಶ್ಯೆಯರಿಗಿಂತ ಬಿನ್ನರಾಗಿ ಮದುವೆಯಾಗದೆ ಹಾಗೆಯೇ ಉಳಿದು ಸಾಮಾಜಿಕ ನಿಯಮಗಳನ್ನು ಪಾಲಿಸಿಕೊಂಡು ಜೀವನ ನಡೆಸುತ್ತಿದ್ದರು. ಉದಾ : ಈ ಪದ್ಧತಿ ಹಳ್ಳಿಗಳಲ್ಲಿ ಪರಿಶಿಷ್ಠಜಾತಿ, ಪರಿಶಿಷ್ಟ ಪಂಗಡಗಳಲ್ಲಿ ಉಳಿದುಕೊಂಡರೆ, ಹಿಂದುಳಿದ ಜನಾಂಗದವರು ಸಹ ಬೆಳಗಾಂವ ಜಿಲ್ಲೆಯ ಸವದತ್ತಿ ಯಲ್ಲಮ್ಮನಂತಹ ದೇವಿಗೆ ಹರಕೆ ಸಲ್ಲಿಸುವುದು ಪ್ರತ್ಯಕ್ಷ ನಿದರ್ಶನವಾಗಿದೆ.

ಇಂತಹ ವ್ಯವಸ್ಥೆಯನ್ನು ನಮ್ಮ ಪ್ರಾಚೀನರು ಪೋಷಿಸಿಕೊಂಡು ಬಂದಿದ್ದರು. ಏಕೆಂದರೆ ರಾಜನು ಪ್ರಜೆಗಳಿಗೆ ದೇವನು, ಪ್ರಭುವೂ ಆಗಿದ್ದನು ಹೀಗಾಗಿ ಭೋಗದ ವಸ್ತುಗಳೆಲ್ಲಾ ಆಳುವವರಿಗೆ ಅರ್ಪಿತವಾಗಿದ್ದವು. ಅವುಗಳಲ್ಲಿ ಹೆಣ್ಣು ಒಂದಾಗಿತ್ತು. ರಾಜನೊಂದಿಗೆ ಪಟ್ಟವೇರಿದ ಪಿರಿಯರಸಿ, ರಾಜಕೀಯ ಒತ್ತಡ ಪ್ರತಿಷ್ಠೆ ಸುಖ ಭೋಗದ ಕಾರಣವಾಗಿ ಮದುವೆ ಆದ ರಾಣಿಯರ ವರ್ಗ ಅಲ್ಲದೆ ವಂಶಪರಾಂಪರಾಗತ ಸೂಳೆವರ್ಗದವರು, ಪರಿಚಾರಿಕೆಯರು (ಗಣಿಕೆಯರು) ರಾಜನ ಅಂತಃಪುರಕ್ಕೆ ಸೇರಿದವರಾಗಿದ್ದರು.[೧೬೫] ಆಯಾ ವೃತ್ತಿವುಳ್ಳವರು ತಮ್ಮ ತಮ್ಮ ಕೇರಿಗಳಲ್ಲಿ ವಾಸಮಾಡಿದರೆ, ವೇಶಾವೃತ್ತಿವುಳ್ಳವರು ಸೂಳೆಗೇರಿಗಳಲ್ಲಿ ವಾಸಿಸುತ್ತಿದ್ದರು. ಇವರ ಮೇಲೆ ಅಂದಿನ ಸರ್ಕಾರ ತೇರಿಗೆಯನ್ನು ಆಕರಿಸುತ್ತಿತ್ತು. ಶಾಸನಗಳು ಇದನ್ನು 'ಸೂಳೆದೆರೆ' ಎಂದು ಕರೆದಿವೆ. ಸೂಳೆಯರು ಕೇವಲ ಭೋಗದವಸ್ತುವಾಗಿರದೆ ಸಾಮಾಜಿಕ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸಿರುವುದು ಕಾಣುತ್ತೇವೆ. ವಿಪ್ರ ಶಾಸನ ''ಶ್ರೀಧರೆಯ ಚಕ್ರಾಧಿನಾಥರ್ಪಲರು ಮರೆಯಲು ಪಟ್ಟಣಂ ರಾಜನಿವಾಸೋದ್ವಿಪ್ರವೇಶ್ಯಾತ್ಕಳ ವೇಶ್ಯಾವಾಟ ಸೂದ್ರಾಲಯ ಪರಮಪದಂ ಲಕ್ಷ್ಮಿಯಂ ತಾಳ್ದಿವೀ ಕಂಪಿಲೆ ನಾನಾ ವಸ್ತೋೀಕ್ಕರ ದಿವ್ಯ ಸೇವ್ಯದಿಂದ ನತಿಶಯದಿಂ ಕಣ್ಗೆವನ್ದೊಪ್ಪಿ ತೋರ್ಕುೞ'' ಎಂದಿದೆ.[೧೬೬] ಅಳವಂಡಿ,[೧೬೭] ಹೆಸರೂರ,[೧೬೮] ಕಲ್ಲೂರಿನ ಎರಡು ಶಾಸನಗಳು[೧೬೯] ಕುಕನೂರಿನ ಎರಡು ಶಾಸನಗಳು[೧೭೦] ಮುಧೋಳ[೧೭೧] ಅಳವಂಡಿಯಮತ್ತೊಂದು ಶಾಸನ[೧೭೨] ಅಟೂರತಾಣ[೧೭೩] ಚಳಿಗೇರಿ[೧೭೪] ಕವಲೂರ[೧೭೫] ಪುರ[೧೭೬] ಮಾದಿನೂರು[೧೭೭] ಶಾಸನಗಳು ಅಂಗಭೋಗ, ರಂಗ ಭೋಗಗಳ ಬಗ್ಗೆ ಉಲ್ಲೇಖಿಸುತ್ತಾ, ಅವುಗಳು ನಡೆಯುವಂತಾಗಲು ಅಧಿಕಾರಿಗಳು, ಸಾರ್ವಜನಿಕರು ಮನ್ನಣೆಯಿಂದ ದಾನದತ್ತಿಗಳನ್ನು ನಿಡಿರುವುದರ ಕುರಿತು ತಿಳಿಸುತ್ತವೆ. ಇಟಗಿ ಶಾಸನವೊಂದು ಸೂಳೆಯರ ಕುರಿತು ''ಜನನಿಗೆ ಚಂದಲೇಶ್ವರನೆತ್ತಿಸಿದಂ ಪುರ ವರ್ಗ್ಗಮಂ ಜಗಜ್ಜನನುತಮಾಗೆ ಕಾಮನೆರ್ಗ್ಗೆ ವಟ್ಟನೆನೆ ಮಾಡಿಸಿದಂ ಮನೋಜರಾಜನ ರತಿರಂಭೆಯಂಬವರ ಸಂತತಿಯಾಗಲೆವೇರ್ಕ್ಕುವೆಂಬ ಕಾಮನಿಯರ ನಾಯ್ದು ತಂದುಪುರವರ್ಗದ ಸೂಳೆಯರಾಣೆ ಮಾಡಿದಂ'' ಎಂದು ವಿವರಿಸುತ್ತಾ ಅವರಿಗಾಗಿ ದೇವರಅಂಗ ಭೋಗ, ರಂಗಭೋಗ, ಪಾತ್ರ-ಪಾವುಳ ಪರಿಗ್ರಹ ಮಾಟಕೂಟಕ್ಕೆ ೫೦೦ ಮತ್ತರು ಹೊಲವನ್ನು ದಾನಬಿಟ್ಟಿರುವುದಾಗಿ ತಿಳಿಸುವುದು.[೧೭೮] ಕವಲೂರಿನ ಶಾಸನವೊಂದು ಸೂಳೆಯರು ವಾಸಿಸುವ ಸೂಳೆಗೇರಿಗೆ ಎಡೆಹಳ್ಳಿಯ

ಆದಾಯದಲ್ಲೊಂದು ಭಾಗ ಬಿಟ್ಟ ಬಗ್ಗೆ ಹೇಳಿದರೆ,[೧೭೯] ಮಾದಿನೂರು ಶಾಸನ[೧೮೦] ಸೋಮರಸನು ಪನ್ನಾಯದ ಸುಂಕದೊಳಗೆ ದೇವರಂಗ ಭೋಗಕ್ಕೆ ಬಿಟ್ಟ ಪಣ ೨ ಹೆರ್ಜುಂಕ ಕೆರಿಯಾಯ ಬಿರಾಡ ಕಿರುಕುಳ ಸಹಿತ ದೇವರಂಗ ಬೋಗಕ್ಕೆ ತಿಂಗಳಿಗೆ ಬಿಟ್ಟ ಗದ್ಯಾಣ ಒಂದು ಎಂದು ವಿವರಿಸುವುದು. ಇದೆಲ್ಲಾ ಗಮನಿಸಲಾಗಿ ವ್ಯಕ್ತಿಯ ಬೋಗವಸ್ತು ವ್ಯಕ್ತಿ ಸೂಳೆಯಾದರೆ, ದೇವನ ಬೋಗಕ್ಕೆ ಒಪ್ಪಿಸಲ್ಪುಟ್ಟವಳು ದೇವ ಸೂಳೆಯಾಗಿದ್ದಳು. ಆದರೆ ಸೂಳೆಯರನ್ನು ದೇವಾಲಯಕ್ಕೆ ಬಿಡಲು ಪ್ರಾರಂಭಸಿದ ಕಾಲ ನಿರ್ದಿಷ್ಟವಾಗಿ ಇನ್ನುವರೆಗೂ ತಿಳಿದುಬಂದಿರುವುದಿಲ್ಲ. ಆದರೆ ಶಾಸನಗಳ ಉಲ್ಲೇಖಿತ ಸೂಳೆಯರು ದೇವಾಲಯಗಳಲ್ಲಿ ಇದ್ದ ಬಗ್ಗೆ ಜಿಲ್ಲೆಯ ಶಾಸನಗಳು ಸ್ಪಷ್ಟಪಡಿಸುತ್ತವೆ.

**ಅಂಗಭೋಗ**

ಅಂಗಭೋಗ ವೆಂದರೆ ದೇಹವನ್ನು ದೇವರಿಗೆ ಮುಡುಪಾಗಿಡುವುದಾಗಿದೆ. ದೇವರ ಅಂಗಬೋಗಕ್ಕೆ ಬಿಟ್ಟ ಸೂಳೆಯರಿಗೆ ಕೊಟ್ಟ ದಾನದ ಪ್ರಮಾಣ ನೋಡಿದರೆ ಇವರು ಸ್ವಲ್ಪ ಮೇಲ್ಮಟ್ಟದವರಾಗಿರಬೇಕು. ಆದರೆ ಸ್ಥಾನಮಾನದಲ್ಲಿ ವ್ಯತ್ಯಾಸವಿರಲಿಲ್ಲ. ದೇವರ ಗರ್ಭಗೃಹದಲ್ಲಿ ಇವರಿಗೆ ಮಾತ್ರ ಪ್ರವೇಶವಿದ್ದಿತ್ತೆಂದು ಕಾಣುತ್ತದೆ.[೧೮೧] ಸಂಕಮದೇವನ ಮಂತ್ರಿಯಾದ ಏಚಿರಾಜನು ಕೌರೂರಿನಲ್ಲಿ ಹರಿಹರದೇವಾಲಯ ಕಟ್ಟಿಸಿದ ಮತ್ತು ಈ ದೇವಾಲಯದ ಅಂಗಭೋಗ-ರಂಗಭೋಗಕ್ಕೆ ಖಂಡಸ್ಪಟಿತ ಜೀರ್ಣೋದ್ಧಾರಕ್ಕೆ ಬ್ರಹ್ಮಪುರಿಗೆ ತಕ್ಕವೃತ್ತಿಯನ್ನು ನಿರ್ಮಿಸಿ, ಮಂತ್ರಿಗಳಾದ ವಸುಧೈಕ ಭಾಸ್ಕರನಾದ ರೇಚಿದೇವ, ನಾಡಾಧಿಕಾರಿಮನ್ನೆಯ ಕುಪ್ಪರಸ ಆತನ ಮಕ್ಕಳು ಕೌರೂರು ಅಶೇಷ ಮಹಾಜನರು (೫೦೦) ಸೇರಿ ಎಡೆಹಳ್ಳಿಯನ್ನು ದಾನವಾಗಿ ನೀಡುತ್ತಾರೆ. ಇದೇ ದೇವಾಲಯದ ಬ್ರಹ್ಮಪೂರಿ, ಸೂಳೆಗೇರಿಗೆ, ಚೈತ್ರಪವಿತ್ರಕ್ಕೆ ಹರಿಹರದೇವರ ಭೋಗಕ್ಕೆ ಬಳ್ಳಾಳ ದೇವನ ಹಿರಿಯರಾಣಿ ರೆಮ್ಮಲದೇವಿಯ ಕೋರಿಕೆಯಂತೆ ಬಳ್ಳಾಳ ದೇವನು ಎಡೆಹಳ್ಳಿಯ ಗೇರಿಯಲ್ಲಿ ನಾಲ್ಕು ಕಡೆಗುಡ್ಡೆ ಮೇರೆಯಾಗಿ ಹೊಲವನ್ನು ಬಿಡುತ್ತಾನೆ. ಹಾಗೆಯೇ ಮಹಾ ಮಂಡಳೇಶ್ವರ ಮಣಿಯೂರ ಬಾಚರಸ, ದೊಡ್ಡರಸ ಮೊದಲಾದವರು ಸೇರಿ ಕೌರೂರ ಊರೋಡೆಯ ಪ್ರಮುಖ ಅಶೇಷ ಮಹಾಜನಗಳ ಸನ್ನಿಧಾನದಲ್ಲಿ ಹರಿಹರದೇವರ ಬ್ರಹ್ಮಪೂರಿ, ಸೂಳಿಗೇರಿಗೆ, ಅಂಗಭೋಗ, ರಂಗಭೋಗಕ್ಕೆ ಎಡೆಹಳ್ಳಿಗೇರಿಯಲ್ಲಿ ತಮ್ಮ ದಾನ ವ್ರಿದ್ಧಿಯಿಂಬಯಸಿ ದಾರಾ ಪೂರ್ವಕವಾಗಿ ಕೊಟ್ಟರೂ ಅದೇ ರೀತಿ ಹರಿಹರ ದೇವರಿಗೆ ಭೋಗಾರ್ತ್ತಕವಾಗಿ ಹಡವಳರ ಎಚಿಮಯ್ಯನಾಯಕರು ಶ್ರೀಮದನೂರ್ವ್ವರಿಗೆ ೨೪ ಮನೆ ಸೂಳೆಗೇರಿಗೆ ೨೭ ಮನೆ ಧಾರಪೂರ್ವಕವಾಗಿ[೧೮೨] ಮಾಡಿಕೊಟ್ಟರೆಂದು ಹೇಳುವಲ್ಲಿ ಶಾಸನ ಸಾಕಷ್ಟು ಮಾಹಿತಿ ನಿಡುತ್ತದೆ. ಕಲ್ಲೂರ ಶಾಸನ ನರೆಯಂಗಲ್ಲುಬಳಿಯ ಕಲ್ಲೂರದ ಕಲಿದೇವ ಸ್ವಾಮಿಯ ಅಂಗಭೋಗ ಖಂಡಸ್ವಟಿತ ಜೀರ್ಣೋದ್ಧಾರ, ತಪೋಧನರ ಆಹಾರದಾನಕ್ಕೆಂದು ೨೪ ಮತ್ತರ ಭೂಮಿಯನ್ನು ಸೋಮೇಶ್ವರ ದೇವರ ಆಚಾರ್ಯರ ಕಾಲುತೊಳೆದು ಮಹಾಪಸಾಯಿತ ಸಣ್ಣಗೇತ ನಾಯಕನು ಸಿಂಧವಂಶದ ವೀರಬಿಜ್ಜಲ-ವಿಕ್ರಮಾದಿತ್ಯದೇವರ ಅನುಮತಿ ಪಡೆದು ದಾನ ಬಿಟ್ಟನೆಂದಿದೆ[೧೮೩] ಇದೇ ದೇವರ ಅಂಗಬೋಗ, ತಪೋಧನಹಾರ ದಾನಕ್ಕೆ ಬೆನತೂರು ಸೀಮೆಯ ೫೦ ಮತ್ತರು ಎರಬರವಿಯದಕ್ಷಿಣಕ್ಕೆ ೫೦ ಮತ್ತರು ಒಟ್ಟು

೧೨೦ ಮತ್ತರು ಭೂಮಿಯನ್ನು ಚಾವುಂಡರಸನು ದಾನ ನೀಡಿದ್ದಾಗಿ ತಿಳಿಸಿದೆ.[೮೪] ಇನ್ನೂ ಅನೇಕ ಶಾಸನಗಳು ದೇವರ ಅಂಗಭೋಗಕ್ಕೆ ಭೂಮಿ-ಹಣ ದಾನನೀಡಿದ ಕುರಿತು ತಿಳಿಸುತ್ತವೆ.

## ರಂಗಭೋಗ

ಇದು ದೇವಾಲಯದ ಗರ್ಭಗೃಹದ ಮುಂಭಾಗವಾದ ನವರಂಗ ಅಥವಾ ರಂಗಮಂಟಪದಲ್ಲಿ ನಡೆಸುವ ದೇವರ ಸೇವೆಯಾಗಿದ್ದು ಅದನ್ನು ರಂಗ ಭೋಗವೆಂದು ಕರೆದು ಕಂಬದ, ಮಾಡದ, ಚಾಮರದ, ಪಾತ್ರದ, ಓಲಗದ, ಹತ್ತಾರು ಬಗೆಯಲ್ಲಿ ಶಾಸನಗಳು ತಿಳಿಸುತ್ತವೆ.[೮೫] ಅದರಲ್ಲಿ ಕೇರಿಯ ಸೂಳೆಯರ ಕಾರ್ಯಗಳು ಮುಖ್ಯವೆನಿಸಿದ್ದವು. ಈ ರಂಗಭೋಗದ ಸೂಳೆಯರು ದೇವಾಲಯದ ಮೊದಲ ಆಕರ್ಷಣೆಯಲ್ಲಿ ಕಾಣಿಸಿಕೊಳ್ಳುತ್ತಾರೆ. ಇವರ ಕುರಿತು ಕುಕನೂರಿನ ಶಾಸನ ಅಲ್ಲಿಯ ಮಲ್ಲಿಕಾರ್ಜುನ ದೇವರ ರಂಗಭೋಗ ಅಂಗಭೋಗಕ್ಕೆ ಹಾಡಲಗೇರಿಯ ಭೂಮಿಯ ಆದಾಯ ವ್ಯಯಿಸಬೇಕೆಂದು ಹೇಳುತ್ತದೆ.[೮೬] ಪುರಶಾಸನ ಪುರದಗವರೇಶ್ವರದೇವರ ಅಂಗಭೋಗ, ರಂಗಭೋಗ ಪಾತ್ರ, ಪಾವುಳ, ಚೈತ್ರ, ಪವಿತ್ರ ಇತ್ಯಾದಿಗಳು ಸದಾಕಾಲ ನಡೆಯುವಂತಾಗಲು ಉಮ್ಮಲಗುರುಕೆ ಎಂಬ ಗ್ರಾಮವನ್ನು ದಾನ ಬಿಟ್ಟಿರುವುದಾಗಿ ಉಲ್ಲೇಖಿಸಿದೆ.[೮೭]

## ಪಾತ್ರ ಸೂಳೆ

ಈ ಪಾತ್ರ ಸೂಳೆ ಎಂಬ ಪದ ಉಚ್ಚ ಮಟ್ಟದ ಸ್ಥಾನವನ್ನು ಸೂಚಿಸುತ್ತದೆ. ಇಲ್ಲಿ ಪಾತ್ರ ಎಂಬುದಕ್ಕೆ ನೃತ್ಯ ಗೀತಾದಿಗಳಲ್ಲಿ ಪರಿಣಿತಳಾದ ಸೂಳೆ ಎಂದು ತಿಳಿದುಬರುತ್ತದೆ.[೮೮] ಇಟಗಿ ಶಾಸನದಲ್ಲಿ ಪಾತ್ರ ಪಾವಳ ಪರಿಗ್ರಹಕ್ಕೆ ಮಾಟಕೂಟಕ್ಕೆ ಇನ್ನಿತರ ದೇವರಕಾರ್ಯಗಳು ನಡೆಯಲು ೫೦೦ ಮತ್ತರ ಹೊಲವನ್ನು ದಾನ ನೀಡಿದ ಪ್ರಸ್ತಾಪವಿದ್ದರೆ,[೮೯] ಮೇಲಿನ ಕ್ರಿ.ಶ. ೧೨ ನೆಯ ಶತಮಾನದ ಪುರ ಶಾಸನ ಗವರೇಶ್ವರ ದೇವರ ಅಂಗಭೋಗ, ರಂಗಭೋಗದ ಉಲ್ಲೇಖದೊಂದಿಗೆ ಪಾತ್ರಪಾವುಳಕ್ಕಾಗಿ ದಾನ ಬಿಟ್ಟ ನಿದರ್ಶನ ಕಂಡು ಬರುವುದು.

## ಓಲಗದ ಸೂಳೆ

ಇವರನ್ನು ಶಾಸನಗಳು ಹಾಡುವವರು, ಪಾಡುವವರು, ಎಂದು ಕರೆದಿವೆ. ದೇವಸ್ಥಾನದ ನರ್ತಕ ವರ್ಗದವರಿಗೆ ಹಿಮ್ಮೇಳದ ಸಂಗೀತ ಒದಗಿಸಲು ನಿಯೋಜಿಸುತ್ತಿರುವುದಾಗಿ ತಿಳಿಯುತ್ತದೆ.[೯೦] ಇವರ ಕುರಿತು ಕುಕನೂರಿನ ಮೂಲಸ್ಥಾನ ದೇವರಿಗೆ ಅಂಗಭೋಗ, ಚೈತ್ರ ಪೋತ್ರಕ್ಕೆ, ಪೂಜಾರಿಗಂ, ಹಾಡುವರ್ಗಂ, ಹರೆಕಾರರ್ಗ್ಗಂ ದೇವರ ಹೂದೋಂಟಮಾ ಮಾರ್ಪ್ಪ ಮಾಲೆಗಾವಿಂಗೆ ಇನ್ತಿನಿಬರ ಜೀವಿತಂ ಬಡ್ಡಿಯಲು ನಡೆಯುವಂತಾಗಿ ಗುರುದೇವರು ಊರ ಮೇಲೆ ಹಾಗ ವ್ರಿದ್ಧಿಯಂಕೊಟ್ಟ ಗದ್ಯಾಣ ೧೦೦ ಊರಿಂ ಬಡಗ ಪೂವಿನ ತೋಂಟಂ ಮತ್ತು ಕಮ್ಮ ೪೫೦ ದೇವರ್ಗ್ಗೆ ಸಾಸಿರ್ವರು ಹಾಡುವರ್ಗ್ಗಂ ಅಲ್ಲಿಯ ಹಿಟ್ಟಿನ ಹರೆಕಾರ ಬಮ್ಮೋಜಂಗೆ ಇತ್ಯಾದಿ ದಾನ ಬಿಟ್ಟಿರುವುದಾಗಿ ಹೇಳಿದೆ.[೯೧]

**ದೇವಸೂಳೆ**

ದೇವರ ಅನನ್ಯ ಸೇವೆ ಗೈಯುತ್ತಾ ದೇವನ ಭೋಗಕ್ಕೆ ಅರ್ಪಿತಳಾಗಿ ಜೀವನ ನಡೆಸುತ್ತಿದ್ದ ಇವಳನ್ನು ದೇವ ಸೂಳೆ ಎಂದು ಕರೆದಿವೆ.[೧೯೨] ಜಿಲ್ಲೆಯ ಕುಕನೂರಿನ ಶಾಸನ ಶ್ರೀಮೂಲಸ್ಥಾನ ದೇವರ ಸೂಳೆವಳಗೆ ಸೋವಿನಾಕನ ಮಗ ಸೂಳೆವಳ ಬಸವಣಾರಿಗೆ ಎಂದರೆ[೧೯೩] ವಿಪ್ರಶಾಸನದಲ್ಲಿ ದೇವ ನಿಮಿತ್ತಕೆ ದೇವ ಭೋಗಧರ್ಮ್ಮ ಸುತೆಯ ನಿತ್ಯ ನನ್ಯನರ ಪಾಳಲಸನ್ಮಣಿ ಎನ್ನುತ್ತಾ ವೇಶ್ಯಾವಾಟಿಕೆ, ಸುದ್ರಾಲಯ ಚಳೇಶ್ವರ ದೇವರಂಗಭೋಗಕ್ಕೆ ತೋಟ, ಗದ್ಯಾಣ ಬಿಟ್ಟಿರುವದನ್ನು ಹೇಳುತ್ತದೆ.[೧೯೪]

**ದಾಸಿ (ತೊತ್ತು)**

ಸೂಳೆಗಾರಿಕೆಯ ಇನ್ನೊಂದು ವ್ಯವಸ್ಥೆಯೇ ತೊತ್ತುಸಂತಾನ. ಸಂಸ್ಕೃತದಲ್ಲಿ 'ದಾಸ' 'ದಾಸಿ' ಎಂಬ ಪದಕ್ಕೆ ಸಮಾನವಾದ ಕನ್ನಡ ಪದ ತೊತ್ತು ಪದವನ್ನು ಸ್ತ್ರೀವಾಚಿಯಾಗಿಯೂ ತೊತ್ತು ಪದವನ್ನು ಪುರುಷವಾಚಿಯಾಗಿಯೂ ಬಳಸಿದಂತಿದೆ. ವಚನಗಳಲ್ಲಿ ಸಹ ದಾಸಿಯರನ್ನು ತೊತ್ತು ಎಂದು ಕರೆಯಲಾಗಿದೆ. ಇದು ಗಂಡು ಮತ್ತು ಹೆಣ್ಣುಗಳಿಬ್ಬರಿಗೂ ಅನ್ವಯಸುವಂತ ಪದವಾಗಿದೆ. ಈ ತೊತ್ತು ಎಂಬುದು ಇನ್ನೋಬ್ಬರ ಆಧೀನವಸ್ತು ಆಗಿದ್ದರಿಂದ ಒಡೆಯನಾದವನು ಬೇಕಾದಹಾಗೆ ಬಳಸಿಕೊಳ್ಳಬಹುದಾಗಿತ್ತು. ಕೇಲವು ಸಲ ವೇಶ್ಯೆಯರಂತೆ ಬಳಕೆಯಾಗುತ್ತಿತ್ತು.[೧೯೫] ಇಂತಹ ಒಂದೇರಡು ನಿದರ್ಶನ ಅಳವಂಡಿಯ ಶಾಸನದಲ್ಲಿ ''ನಾಲ್ಕೂರ್ವ್ವರ ದಾಸಿಕರುವನ ಮಗ ಭರ್ಮ್ಮಯ್ಯ ಸಾಷ್ಟಾಂಗ ಮೀರಿಸಿ ಪೊಡವಟ್ಟು ಬಿನ್ನಪಂಗೆಯ್ದೊಪ್ಪಿಸಿ ಅಂಥ ಧರ್ಮಕ್ಕೆ ಬಿಟ್ಟ ಭೂಮಿ । ಮಿಕ್ಕರ್ದಧರ್ಮಕ್ಕೆ ನಾಲ್ಕೂರ್ವರ ವಾರ ವೋಸದೊಳ್ನಡೆಯಿಸುವನ್ತಾಗಿ ಕರುವ ಭರ್ಮ್ಮಯ್ಯ ನಾಲ್ವರ್ವ್ವರದಾಸಿಪರನಾರಿಪುತ್ರಂ ಗೊತ್ರುವಿತ್ರಂ ಕುಳ ಶಿವನದಾಸಿಸುತ್ರಂ ದೀಪಕನೆನಿಸಿ ನೆಗಳ್ದಿಂ ॥ '' ಎಂದು ವರ್ಣಿಸಿದೆ.[೧೯೬] ಅದರಂತೆ ಹುಲಗಿ ಶಾಸನ ವೊಂದು ತೋಟ ಮನೆಗಳನ್ನು (ವೇಶ್ಯಯಳನ್ನು) ಭೃತ್ಯದಾಸಿ ವರ್ಗ ಸಹಿತವಾಗಿ ದಾರಪೂರ್ವಕವಾಗಿ ಶಿವ ದೇವಾಲಯಕ್ಕೆ ನೀಡಿದರೆಂದಿದೆ.[೧೯೭]

**ಸೂಳೆಗೇರಿ**

ಗ್ರಾಮದಲ್ಲಿ ಸೂಳೆಯರು ವಾಸಿಸುವ ಒಂದು ಭಾಗಕ್ಕೆ ಸುಳೆಗೇರಿ ಎಂದು ಕರೆಯಲಾಗುತ್ತಿತ್ತು ಎಂಬುದಕ್ಕೆ[೧೯೮] ಕವಲೂರಿನ ಹರಿಹರ ದೇವರ ಬ್ರಹ್ಮಪೂರಿ, ಸೂಳೆಗೇರಿಗೆ ಕೊಟ್ಟ ಎಡೆಹಳ್ಳಿಗೇರಿ ಹೋಲ ಎಂಬುದು ಸಾಕ್ಷಿಯಾಗಿದೆ.[೧೯೯]

**ಸಮಾಜದ ಸೂಳೆ**

ಸಾರ್ವಜನಿಕ ಮುಕ್ತ ಭೋಗಕ್ಕೆ ಒಪ್ಪಿಕೊಂಡವಳು 'ಸಮಾಜ ಸೂಳೆ'. ಧರ್ಮ ಪ್ರತಿಷ್ಠೆಗಳ ಹೆಸರಿನಲ್ಲಿ ಕ್ರಮವಾಗಿ ದೇವಸೂಳೆ, ವ್ಯಕ್ತಿಸೂಳೆಯಾಗಿ ಬೆಳೆದಂತೆ ಸಾರ್ವಜನಿಕರ ಕಾಮ ತೃಪ್ತಿಯ ಅವಶ್ಯಕತೆಗನುಗುಣವಾಗಿ ಸಮಾಜದ ಸೂಳೆಯರು ಸಮಾಜದ ಅನಿವಾರ್ಯ ಅಂಗವೆಂಬಂತೆ ಬೆಳೆದು ನಿಂತರು ಇದನ್ನೇ ಕವಿರಾಜ ಮಾರ್ಗಕಾರರಲ್ಲಿ 'ವರವಾರ ನಾರಿಯೋಳ್ ನೆರೆದೆ' ಎಂದು ವೇಶ್ಯಾಪದ್ಧತಿಯನ್ನು ಸೂಚಿಸಿದಂತೆ,[೨೦೦]

ಇಲ್ಲಿಯ ವಿಪ್ರ ಶಾಸನ ವೇಶ್ಯಾವಾಟಿಕೆ ಬಗ್ಗೆ ಪ್ರಸ್ತಾಪಿಸುತ್ತ ವೇಶ್ಯಾವಾಟಿಕೆ ನಡೆಯುವ ಸೂದ್ರಾಲಯದ ಕುರಿತು ಹೆಸರಿಸುತ್ತದೆ.[೨೦೧] ಈ ಮೇಲೆ ಉಲ್ಲೇಖಿತ ಕವಲೂರ ಶಾಸನ ಸಹ ಈ ಸಮಾಜದಲ್ಲಿ ಸೂಳೆಯರಿರುವ ಓಣಿಯ ಬಗ್ಗೆ ತಿಳಿಸುತ್ತದೆ.

## ಸೂಳೆವಳ

ಸೂಳೆವಳ ಎಂಬುದು ಸೂಳೆಯರಂತೆ ದೇವಸ್ಥಾನಕ್ಕೆ ಬಿಟ್ಟ ಪುರುಷನಟನೋ ಸೂಳೆಯರ ವಂಶಕ್ಕೆ ಸಂಬಂಧಿಸಿದ ಹಿರಿಯ ವ್ಯಕ್ತಿಯೋ, ದೇವಾಲಯದ ಅಧಿಕಾರಿಗಳಿಂದ ಸೂಳೆಯರ ಮೇಲ್ವಿಚಾರಣೆಗಾಗಿ ನೇಮಿಸಲ್ಪಟ್ಟ ಮುಖಂಡನೋ, ಸೂಳೆಯರ ತೇರಿಗೆಗಳನ್ನು ಆಕರಿಸಲು ಸರಕಾರದಿಂದ ನಿಯೋಜಿತನಾದ ಅಧಿಕಾರಿಯೋ ಎಂದು ಸ್ಪಷ್ಟವಾಗಿ ತಿಳಿಯುವುದಿಲ್ಲ ಆದರೆ ಶಾಸನಗಳು ಮಾತ್ರ ಇವರನ್ನು ಸೂಳೆವಳ, ಸೂಳವಾಳ, ಸುಳಾಯಿತ ಎಂದು ಕರೆಯುತ್ತವೆ. ಕುಕನೂರಿನ ಶಾಸನವೊಂದರಲ್ಲಿ ಅರ್ದಸೂಳಾಯಿತಿಕೆ ಅರ್ಥವಾಗದ ಪದ ಮೂಲಸ್ಥಾನದೇವರ ಸೂಳೆವಳ ಸೋವಿನಾಯಕನಮಗ ಸೂಳೆವಾಳ ಬಸವಣ್ಣನಿಗೆ ದತ್ತಿಕೊಟ್ಟ ವಿಷಯ ಸಿಗುತ್ತದೆ.[೨೦೨]

ಈ ಸೂಳೆಗಾರಿಕೆಯ ವ್ಯವಸ್ಥೆ ಪ್ರಾಚೀನ ಮಧ್ಯ ಕರ್ನಾಟಕದ ಸಮಾಜದಲ್ಲಿ ಮನ್ನಣೆ ಪಡೆದು ಬೆಳೆದು ಬಂದಿರುವುದಾಗಿ ಗೊತ್ತಾಗುತ್ತದೆ. ಮುಂದೆ ೧೨ ಮತ್ತು ೧೩ ನೆಯ ಶತಮಾನದಲ್ಲಿ ಶರಣರು , ದಾಸರು, ವಚನಕಾರರು ಈ ಪದ್ಧತಿಯನ್ನು ಹೋಗಲಾಡಿಸಲು ಸಾಕಷ್ಟು ಪ್ರಯತ್ನ ಮಾಡಿದರೂ[೨೦೩] ಅದು ಸಂಪೂರ್ಣವಾಗಿ ನಶಿಸಿಹೋಗದೆ ಇಂದಿನ ಸಮಾಜದಲ್ಲಿ ದೇವದಾಸಿಪದ್ಧತಿ, ದೇವರಿಗೆ ಬಿಡುವುದು, ಎಲ್ಲಮ್ಮಳಿಗೆ ಬಿಟ್ಟು ಹರಕೆ ಹೊತ್ತುಕೊಳ್ಳುವದನ್ನು ದಿನ ನಿತ್ಯ ಕಾಣುತ್ತೇವೆ.

## ಸಂಪ್ರದಾಯ, ನಂಬಿಕೆಗಳು

ಸಮಾಜದಲ್ಲಿ ದಿನ ನಿತ್ಯ ನಡೆಯುವ ದೈನಂದಿನ ಪದ್ಧತಿಗಳು ಅವುಗಳ ಹಿನ್ನೆಲೆಯಲ್ಲಿರುವ ಉದ್ದೇಶಗಳು, ಕಲ್ಪನೆಗಳು ಸೇರಿ ಅದೊಂದು ಸಂಪ್ರದಾಯವಾಗಿ ರೂಪುಗೊಂಡಿರುತ್ತದೆ. ಮನುಷ್ಯನ ಅಂತರಂಗದ ಪ್ರಕ್ರಿಯೆಗಳನ್ನೇ ನಂಬಿಕೆಗಳೆನ್ನಬಹುದು. ಆ ನಂಬಿಕೆ ಸಂಪ್ರದಾಯಗಳ ತಳಹದಿಯ ಮೇಲೆ ಮನುಷ್ಯನು ತನ್ನ ಜೀವನವನ್ನು ರೂಢಿಸಿಕೊಂಡಿದ್ದಾನೆ. ಅವುಗಳು ಆಯಾ ದೇಶ ಕಾಲ ಸಮಾಜಗಳ ಹಿನ್ನೆಲೆಯಲ್ಲಿ ಬೆಳೆದು ಬಂದಿವೆ. ಇದಕ್ಕೆ ಧಾರ್ಮಿಕ ಆಚರಣೆಗಳೇ ಕಾರಣವೆಂದು ಸಮಾಜ ಶಾಸ್ತ್ರಜ್ಞರು ಹೇಳುವಂತೆ ಜಿಲ್ಲೆಯ ಶಾಸನಗಳು ಅದನ್ನು ಸಮರ್ಥಿಸುತ್ತವೆ. ಅನೇಕ ರೀತಿಯಲ್ಲಿ ದಾನ - ದತ್ತಿ -ವ್ರತ, ನದಿಸ್ನಾನ, ಶುಭಾಶುಭ, ಪುಣ್ಯ- ಪಾಪಗಳು, ತೀರ್ಥ ಕ್ಷೇತ್ರಗಳು ಅದಕ್ಕಾಗಿ ಅವರು ಮಾಡಿದ ತ್ಯಾಗಗಳ ಕುರಿತು ಶಾಸನಗಳು ಜನರಲ್ಲಿರುವ ಕಲ್ಪನೆಯನ್ನು ಸಾಕ್ಷಿಗಳಾಗಿ ತೋರಿಸುತ್ತವೆ.

**ದಾನ -ವ್ರತ**

ಪ್ರಭುವರ್ಗದವರು ದಾನ, ಧರ್ಮ ಹೋಮ, ಹವನಾದಿಗಳನ್ನು ಪುತ್ರೋತ್ಸವ, ಜಾತಕಕರ್ಮ, ಪಟ್ಟಾಭಿಷೇಕ, ವರ್ದಂತಿ ಮುಂತಾದ ಸಂದರ್ಭಗಳಲ್ಲಿ ಮಾಡುತ್ತಿದ್ದರು. ದಾನ ದತ್ತಿಗಳನ್ನು ಬಿಡುವುದು ಮಾತ್ರ ಹಬ್ಬ-ಹರಿದಿನ, ಸೂರ್ಯಗ್ರಹಣ, ಚಂದ್ರಗ್ರಹಣದ ಕಾಲ ಸೂಕ್ತವೆಂದು ನಂಬಿದ್ದರು.[೨೦೪] ಮಹಾ ಪ್ರಚಂಡ ದಂಡನಾಯಕ ಮಾಮರಸನು ಸಿದ್ಧಕುಪಣಕ್ಕೆ (ಕೊಪ್ಪಳ) ತೀರ್ಥವಂದನಾರ್ಥವಾಗಿ ಬಂದಾಗ ಮಹಾ ಸಾಮಂತ ಬನವಾಸಿ ಪುರವೇಶ್ವರ ಪೆರ್ಮದೇವ ಮತ್ತು ದಡಿಯಮರಸರು ತಮಗೆ ಪುಣ್ಯವಾಗಲೆಂದು ತಾವು ಕಟ್ಟಿಸಿದ ಬಸದಿಗೆ ಕಾರ್ತಿಕ ಪುರ್ಣಿಮೆಯಂದು ದಾನ ನೀಡಿದರು.[೨೦೫]

೩ ನೇ ಕೃಷ್ಣ ರಾಜ್ಯಭಾರ ಮಾಡುವಾಗ ಅವನ ಕೈಕೆಗಳಗೆ ಗಂಗಪೆರ್ಮಾನಡಿ ರಾಜ್ಯ ಭಾರ ಮಾಡುತ್ತಿದ್ದ. ಇವನ ಅಧೀನದಲ್ಲಿ ಭೂತುಗ ಪೆರ್ಮಾನಡಿಯು ಬೆಳ್ವಲ-೩೦೦, ಮಾಸವಾಡಿ- ೧೪೦, ಕುಕನೂರು -೩೦, ಕೆಳವಾಡಿ-೩೦೦ ಮುಂತಾದವುಗಳನ್ನು ಆಳುವಾಗ ಈ ಸ್ಥಳಕ್ಕೆ ಬಂದು ಹುಣ್ಣಿಮೆಯ ದಿನದಂದು ತೀರ್ಥಯಾತ್ರೆ ಮಾಡಿ ದಾನ ನೀಡಿರುವುದಾಗಿ ಇಟಗಿ ಶಾಸನ ಹೇಳುತ್ತದೆ.[೨೦೬] ಭೂತುಗನ ಮಗಳಾದ ಕುಂದಣ ಸ್ವಾಮಿಯು ಶಕ ೮೯೦ ನೇ ವಿಭವ ಸಂವತ್ಸರದ ಉತ್ತರಾಯಣ ಸಂಕಾಂತಿ ಪುಣ್ಯಕಾಲದ ನಿಮಿತ್ಯವಾಗಿ ಕುಕನೂರಿನ ಉತ್ತರಕ್ಕಿದ್ದ ಅಡ್ಡವುರಿಗೆ ಗ್ರಾಮವನ್ನು ದಾನವಾಗಿ ನೀಡುತ್ತಾಳೆ.[೨೦೭] ಚಾಲುಕ್ಯ ಅರಸ ಅಹವಮಲ್ಲನು ತನ್ನ ಅಧಿಕಾರದ ಮೊದಲ ವರ್ಷದಲ್ಲಿ ಪೂರ್ಣಿಮಾ ಸೋಮವಾರ ಉತ್ತರಾಯಣ ಸಂಕ್ರಾಂತಿಯಂದು ಬ್ರಹ್ಮಾಂಡಕೃತು ಯಜ್ಞಮಾಡಿಸಿದ ನಂತರ ಬ್ರಾಹ್ಮಣರಿಗಾಗಿ, ದೇವಾಲಯಕ್ಕಾಗಿ, ಮಾದಿನೂರನ್ನು ದಾನನೀಡುತ್ತಾನೆ.[೨೦೮] ಪೊಲೆಯಬ್ಬೆ ಕನ್ತಿಯರು ಜೀನಧರ್ಮಕ್ಕಾಗಿ ಪ್ರಾಣತ್ಯಾಗ -ದಾನ-ಧರ್ಮ, ಬಸದಿ ನಿರ್ಮಾಣ ಮಾಡಿಸಿದ ವಿವರಗಳು ಕೊಪ್ಪಳದ ಶಾಸನಗಳಲ್ಲಿ ಕಾಣುತ್ತೇವೆ.[೨೦೯] ಕಲ್ಲೂರು,[೨೧೦] ಕುಕನೂರು[೨೧೧] ಶಾಸನಗಳು ಸಂಕ್ರಾಂತಿ, ಕಾರ್ತಿಕ, ಪೌರ್ಣಿಮೆ ಸಂದರ್ಭದಲ್ಲಿ ದೇವಾಲಯ, ವಿದ್ಯಾಭ್ಯಾಸ, ಆಹಾರ ದಾನಕ್ಕೆ ಭೂದಾನ ಮಾಡಿದ ಕುರಿತು ಮಾಹಿತಿ ಒದಗಿಸುತ್ತವೆ. ಕೊಪ್ಪಳದ ಬಿಚ್ಚು ಕುನ್ದೆ ಗ್ರಾಮದಲ್ಲಿ ನಾಗದೇವನೆಂಬುವವನು ಬಸದಿ ಕಟ್ಟಿಸಿ ಪೂಜಿಸಿದನು. ಅದು ಅನೇಕ ಮುನಿಗಳು ತಪಸ್ಸು ಮಾಡಿ ಇಂಗಿಣೀ ಮರಣದಿಂದು ಮುಡಿಪಿದ್ದಾಗಿ ತಿಳಿಯುವುದು.[೨೧೨] ಪುರ ಶಾಸನವೊಂದು ಕಾರ್ತಿಕ, ಪುಣ್ಣಿಮೆ, ಆದಿವಾರ ಸೋಮಗ್ರಹಣ ಸೋಮವಾರದ ಚಂದ್ರಗ್ರಹಣದಂದು ಬೈಳೆನೆಗೆಯೂರಿನ ಮುಖ್ಯಸ್ಥನಾದ ಕೊಣ್ಡಯವಾರಿ ಅಯ್ಯಣಯ್ಯನಿಗೆ ಪಂಪಾತೀರ್ಥದ ವಿರುಪಾಕ್ಷ ದೇವರಿಗೆ ೫ ಮತ್ತರ ಗದ್ದೆಯನ್ನು ದಾನವಾಗಿ ಬಿಡುತ್ತಾನೆಂದು ಉಲ್ಲೇಖಿಸಿದೆ[೨೧೩] ಗೋತಗಿ ಶಾಸನ ಪಾರ್ತಿವ ಸಂವತ್ಸರದ ಕಾರ್ತಿಕ ಪುಣ್ಣಿಮೆ ಆದಿವಾರ ಸೋಮಗ್ರಹಣ, ಉತ್ತರಾಯಣ ಸಂಕ್ರಾನ್ತಿಯನ್ದು ಗೋವನ್ತಿಗೆ ಕಲಿದೇವ ಸ್ವಾಮಿಗೆ ತೋಂಟ, ಭೂಮಿಕಮ್ಮ ಮತ್ತರಾರು ನೀಡಿದ್ದನ್ನುಹೇಳಿದೆ.[೨೧೪] ಕೊಪ್ಪಳ ಶಾಸನದಲ್ಲಿ ವಿಭವ ಸಂವತ್ಸರದ ಶ್ರಾವಣ ಶುದ್ಧ ಸಪ್ತಮಿ, ಮಂಗಳವಾರದಂದು ನಿಶಿಧಿ ನಿಲ್ಲಿಸಿದ ವಿವರಣೆ ನೀಡುವುದು.[೨೧೫] ವಿಪ್ರದ ಶಿವದೇವಾಲಯಕ್ಕೆ ೧ ನೆಯ ಸೋಮೇಶ್ವರನು ವಿಕಾರಿಸಂವತ್ಸರದ ಶ್ರಾವಣ ಪುಣ್ಣಿಮೆ ಬ್ರಹಸ್ಪತಿವಾರ ಸೋಮಗ್ರಹಣದಂದು ನವಕರ್ಮ್ಮ,

ನಿತ್ಯವಾದ್ಯ, ಧೂಪ, ದೀಪ ನಿರ್ವೇದ್ಯಕ್ಕೆ, ಪುಣ್ಯ ತೀರ್ಥಸ್ನಾನ ವಂದ್ಯಕ್ಕೆ ಮುಸುಂದೆ ಗ್ರಾಮದಾನ ನೀಡುತ್ತಾನೆ. ಅಲ್ಲದೆ ಈ ವಿಪ್ರ ನಾರಾಯಣ ೩೦ ತೀರ್ಥಗಳಿಂದ ಕೂಡಿದ್ದು, ಇಲ್ಲಿ ದೇವತೆಗಳ ವಾಸಸ್ಥಾನವಾಗಿತ್ತೆಂದು ಇಲ್ಲಿಗೆ ಬಂದು ದೇವಪೂಜೆ, ನದಿಪೂಜೆ ಮಾಡಿದವರಿಗೆ ಜಗತ್ತಿನ ಪಾಪನಾಶವಾಗುವುದೆಂದು ಶಾಸನ ತಿಳಿಸುತ್ತದೆ.[೨೧೬] ಆಳವಂಡಿ ಶಾಸನ ಶ್ರಾವಣ ಪುಷ್ಯ, ಶುದ್ಧ, ದಸಮಿ, ಸೋಮವಾರ ಉತ್ತರಾಯಣ ಸಂಕ್ರಾನ್ತಿಯಂದು ಕರುವರ ಗುಲ್ಲಿಮಯ್ಯನು ಸತ್ರ, ಮನೆ, ದೇವಾಲಯಕ್ಕೆ ಬಾಗಿಲನ್ನು ಮಾಡಿಸುತ್ತಾನೆ. ತೋಂಟ, ಬಾವಿಗಳನ್ನು ಕನ್ಯಾದಾನ, ಕವಿಲೆಯ ದಾನ, ಪಾದರಕ್ಷೆ ದಾನಗಳನ್ನು ಅನೇಕ ತೀರ್ಥಗಳಲ್ಲಿ ಸ್ನಾನಮಾಡಿ ಬಿಟ್ಟು ಮೋಕ್ಷ ಪಡೆಯುತ್ತಾನೆ ಹಾಗೂ ಸೂರ್ಯ ಗ್ರಹಣದ ಪುಣ್ಯದ ದಿನ ವಿವಿಧ ಅಧಿಕಾರಿಗಳು ವ್ಯಾಪಾರಸ್ಥರು ಸಹ ದಾನ ನೀಡಿದ್ದಾಗಿ ಹೇಳಿದೆ.[೨೧೭] ಚೌವೇದಿ ಭಟ್ಟನೆಂಬುವವನು ತನ್ನ ಪತ್ನಿಯೊಂದಿಗೆ ಐವರು ಮಕ್ಕಳು ಜನಿಸಿದ್ದಕ್ಕಾಗಿ ಚೈತ್ರಮಾಸದ ಸೊಮವಾರ ಸಂಕ್ರಾಂತಿಯಂದು ಶಿವ ದೇವಾಲಯ ಮಾಡಿಸಿ, ತೋಟ, ಭೂಮಿ, ಮನೆಗಳನ್ನು ಇನ್ನು ಮುಂತಾದ ಕೆಲಸ ಕಾರ್ಯಗಳು ನಡೆಯಲು ವಿವಿಧ ದಾನಗಳನ್ನು ಬಿಟ್ಟಿರುತ್ತಾರೆಂದಿರುವುದು.[೨೧೮] ಈ ಮೇಲಿನ ಶಾಸನಗಳಲ್ಲದೆ ಇನ್ನೂ ಹಲವಾರು ಶಾಸನಗಳು ಪುಣ್ಯಕಾಲದಂದು ಜನರು ದಾನ ವ್ರತಗಳನ್ನು ಕೈಕೊಂಡು ತಮ್ಮ ಇಷ್ಟಾರ್ಥಗಳನ್ನು ಪಡೆದಿರುವದನ್ನು ಹೇಳುತ್ತವೆ.

## ನದಿ ಸ್ನಾನ

ಗ್ರಹಣ, ಸಂಕ್ರಮಣಾದಿ ಪವಿತ್ರ ದಿನಗಳಲ್ಲಿ ನದಿಸ್ನಾನ ಮಾಡಿದರೇ ಪಾಪ ತೊಳೆದು ಪುಣ್ಯ ಲಭಿಸುವದೆಂಬ ನಂಬಿಕೆ ಭಾರತೀಯರಲ್ಲಿದೆ. ಹೀಗಾಗಿ ಜನರು ಪವಿತ್ರ ಪುಣ್ಯ ಕ್ಷೇತ್ರಗಳೆನಿಸಿದ ಸ್ಥಳಗಳಿಗೆ ಬೇಟಿ ಕೊಟ್ಟು ಅಲ್ಲಿರುವ ತೀರ್ಥ, ಹೊಂಡ, ನದಿ ಇತ್ಯಾದಿಗಳಲ್ಲಿ ಸ್ನಾನಮಾಡಿ ದೇವರಿಗೆ ದಾನದತ್ತಿಗಳನ್ನು ಮಾಡಿದನ್ನು ಜಿಲ್ಲೆಯ ಆಳವಂಡಿ,[೨೧೯] ಹುಲಗಿ,[೨೨೦] ಪುರ,[೨೨೧] ವಿಪ್ರ[೨೨೨] ಶಾಸನಗಳು ಸಪ್ಪಪಡಿಸಿದರೆ ಕುಕನೂರು, ಇಟಗಿ, ಕವಲೂರು, ಕಲ್ಲೂರ, ಮುಧೋಳ, ಆನೆಗುಂದಿ, ಹುಲಗಿ, ಅಂಟೂರ ಠಾಣಾದ ಶಾಸನಗಳು ಇದಕ್ಕೆ ಪುರಕವಾಗಿರುವ ಮಾಹಿತಿಗಳನ್ನೊದಗಿಸಿವೆ. ಆಳವಂಡಿ ಶಾಸನದಲ್ಲಿ ಕರುವ ಗುಲ್ಲಿಮಯ್ಯನು ವರ್ಘ್ಯತೀರ್ಥಗಂಗೆ ಶ್ರೀ ಪರ್ವತಂ ಸ್ವಾಮಿದೇವಂ ಶಿವಕಳ ಸಂವೋಹೋಗಿಂತಪ್ಪನೋಕ ತೀರ್ಥಂಗಳಂ ಮಿನ್ದು ದಾನ ಧರ್ಮ ಪರೋಪಕಾರಂಗಳಂ ಮಾಡಿದರೆಂದಿರುವುದು. ಹುಲಗಿಯ ಶಾಸನದಲ್ಲಿ ತುಂಗಭದ್ರಾನದಿಯತಟಮನಾರೈದು ಮಿಂಬಾಗಿರಲು ''ಶ್ರೀದಕ್ಷಿಣ ಗಂಗೆ ತುಂಗಭದ್ರಾನದಿ ತೀರದ ಶ್ರೀಕೂಟಂ ಚಿತ್ರ ಸೆಲೆ ಉತ್ತರ ವಾಹಿನಿ ಗೌತಮಾಶ್ರಮದ ಸ್ಥಾನಂ ಶ್ರೀಸೋಮನಾಥ ದೇವರ್ಗ್ಗೆ ಬಿಟ್ಟಧರ್ಮವೆಂದಿದೆ. ಪುರ ಶಾಸನ ಪಂಪಾತೀರ್ಥದ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ ಭೂದಾನ ನಿಡಿದ್ದಾಗಿ ತಿಳಿಯುತ್ತದೆ. ವಿಪ್ರಶಾಸನ ೩ ತೀರ್ಥಗಳು ಜಗತ್ತಿನಪಾಪನಾಶಿಯಾಗಿ ಶುಭಕರ ವಾಗಿತ್ತು. ಅದರಂತೆ ಕೊಪ್ಪಳವು ಸಹ ಜೈನರ ಪವಿತ್ರ ತೀರ್ಥಕ್ಷೇತ್ರವಾಗಿತ್ತೆಂದು ಅಲ್ಲಿಗೆ ಅನೇಕ ಜೈನ ಮುನಿಗಳು, ಶ್ರಾವಕಿಯರು ಬಂದು ಮುಡಿಪಿದ್ದಾಗಿ ಕೊಪ್ಪಳದ ಶಾಸನಗಳು ಸಾರಿ ಹೇಳಿವೆ.

ಹೀಗೆ ದೇವಪೂಜೆ, ನದಿ ಪೂಜೆ,ಮಾಡಿ ದೇವರಿಗೆ ದಾನ ಧರ್ಮಗಳು ಮಾಡುವುದರಿಂದ ಪಾಪಗಳು ನಾಶವಾಗಿ ಪುಣ್ಯಲಭಿಸುವುದಾಗಿ ನಂಬಿದ್ದರೆನ್ನಲಿಕ್ಕೆ ಇಲ್ಲಿಯ ವಿಪ್ರ ಶಾಸನವೇ ಸಾಕ್ಷಿಯಾಗಿದೆ. ''ತುಂಗಭದ್ರಾತಟದ ಬಡಗರೆ ಕಿನ್ದಮಿಪರ್ವನಾಮಿದರ ವ್ಯತಿಗಳೊಳ್ ಮಂತ್ರವನೊರೆದು ಸಮಾಳೋಚನನಂಗೆಯ್ವ ಮೆನ್ದಾಸ್ಪದವಿಂ ತತ್ರಿಂಶದೇವರ್ಣ್ಣಾ ಆಗಲಿದುವೀಪುಣ್ಯಾತ್ರಿತೀರ್ಥಂ ಜಗರೆನ್ತಿದುವಂದ್ಯಂ ಪಾಪನಾಶಿಂ ಶುಭಕರಮೇನಿಕುಂ ಸ್ಥಾನಮತ್ಯಂನ್ತದಿಂದ'' ಎಂದು ಉಲ್ಲೇಖಿಸಿದೆ. ದೇವಪೂಜೆ, ನದಿ ಪೂಜೆ ಯನಿಂಬಿನ ಮಾದಕೀರ್ತಿರಂಚಿಸಿ ಜಳದಾನ ಪೂರ್ವ್ವಕದೆದೇವನಿಮಿತ್ಯಕ್ಕೆ ಎಂದು ವರ್ಣಿಸಿರುವುದು ಕಾಣುತ್ತೇವೆ.

## ಶ್ರಾದ್ಧ

ಮರಣ ಮತ್ತು ಮರಣೋತ್ತರ ಕ್ರಿಯೆಗಳಿಗೆ ಸಂಬಂಧಿಸಿದಂತೆ ಇರುವ ಅನೇಕ ವಿಧಿ ಸಂಸ್ಕಾರಗಳು, ವರ್ಷಕ್ಕೊಮ್ಮೆ ನಡೆಯುವ ಶ್ರಾದ್ಧವು ಒಂದು ಈ ಸಂಸ್ಕಾರಗಳಲ್ಲಿ ದಾನ ಧರ್ಮಗಳಿಗೆ ವಿಶೇಷಸ್ಥಾನ ವಿತ್ತೆಂದು ಇಲ್ಲಿಯ ಶಾಸನಗಳನ್ನು ಗಮನಿಸಿದಾಗ ಅರಿವಿಗೆ ಬರುತ್ತದೆ.[೨೨೩] ಕೊಪ್ಪಳ ಶಾಸನವೊಂದರಲ್ಲಿ ಸೋಮದೇವನು ಸತ್ತಾಗ ಆತನ ಶ್ರಾದ್ಧ್ಯಕ್ಕಾಗಿ ಚಂದ್ರಪ್ರಭುದೇವನೆಂಬುವನು ನಿಸಿಧಿ ಮಾಡಿಸಿದನೆಂದಿದೆ.[೨೨೪] ಇನ್ನೊಂದು ಶಾಸನ ಇಂಗುಣಿ ಮರಣಹೊಂದಿದ ವ್ಯಕ್ತಿಗಾಗಿ ಅವನ ಸಹೋದರರು, ಶಿಷ್ಯರು, ಸೇರಿ ಸಿಂಹ ನಂದಿ ಆಚಾರ್ಯರು ಮುಡಿಪಿದ ಸ್ಥಳದಲ್ಲಿ ಶಾಂತಿನಾಥನ ಬಸದಿಯನ್ನು ಕಟ್ಟಿಸಿ ಜಿನಬಿಂಬ ಪ್ರತಿಷ್ಠೆ ಮಾಡಿದ ಉಲ್ಲೇಖವಿದೆ[೨೨೫] ಕೋಗಳಿಯ ಪದ್ಮಬ್ಬೆಕಂತಿಯು ಸತ್ತಾಗ ಈಕೆಯ ಮಗಳು ಜಕ್ಕಿಯಬ್ಬೆ ನಿಸಿಧಿಕಲ್ಲನ್ನು ಮಾಡಿಸಿ ಶ್ರಾದ್ಧವನ್ನು ಮಾಡಿದಳು.[೨೨೬] ಪಲ್ಲವ ವಶಂದ ರೇವಕಯ್ಯ ಕಂತಿಯು ಸನ್ಯಾಸ ಸ್ವಿಕರಿಸಿ ಮುಡಿಪಿದಾಗ ದೇವಲೋಕದಲ್ಲಿ ಸಹಶ್ರಾದ್ಧ್ಯ ಮಹೋತ್ಸವನ್ನು ಆಚರಿಸಿದರಂತೆ[೨೨೭] ಪದ್ಮನಂದಿಸಿದ್ಧಾಂನ್ತದೇವನು ಸನ್ಯಾಸವನ್ನು ಸ್ವೀಕರಿಸಿ ರತ್ನತ್ರಯಗಳನ್ನು ಸಾಧಿಸಿ ಸತ್ತಾಗ ಮಾಚಿಕಬ್ಬೆ ಕಂತಿಯು ಶ್ರಾದ್ಧವನ್ನು ಆಚರಿಸಿ ನೆನಪಿಗಾಗಿ ನಿಸಿಧಿಗೆಯನ್ನು ನಿಲ್ಲಿಸಿದಳು[೨೨೮]

## ಹಬ್ಬಗಳು

ಹಬ್ಬ ಎಂಬುದು ಸಮಾಜದ ಜನರೆಲ್ಲರು ಸೇರಿ ಸಂತೋಷದಿಂದ ಆಚರಿಸುವ ದಿನವಾಗಿದ್ದು ಸಂಸ್ಕೃತದಲ್ಲಿ ಇದನ್ನು 'ಪರ್ವ' ಎಂದು ಕನ್ನಡದಲ್ಲಿ 'ಪಬ್ಬ' ಹಬ್ಬವೆಂದು ಹೆಸರಿಗೆ ಬಂದಿರುವುದು.[೨೨೯] ಡಾ. ಚಿದಾನಂದ ಮುರ್ತಿಯವರು ಹೇಳುವಂತೆ ದೇವಾಲಯಗಳಲ್ಲಿ ನಡೆಯುತ್ತಿದ್ದ ಪೂಜಾ ಉತ್ಸವಗಳಾದ ಚೈತ್ರ ಮತ್ತು ಪವಿತ್ರಗಳನ್ನು ಹೆಸರಿಸುತ್ತ ಮಂತ್ರ ಪುಸ್ಪವನಾರೋಹಣ ಫಲಪೂಜೆ ಕಾರ್ತಿಕದೀಪ ಪೂಜೆ ವಸಂತೋತ್ಸವಗಳನ್ನು ಸೇರಿಸಿಕೊಂಡರೆ ಐದು ಹಬ್ಬಗಳಾಗುತ್ತವೆ[೨೩೦] ಎಂದು ಹೇಳಿರುವ ವಿಷಯವನ್ನೇ ಡಾ. ಬೆಟಗೇರಿ ಕೃಷ್ಣಶರ್ಮಾರವರು ಒಂದು ವರ್ಷದಲ್ಲಿ ಬರುವ ಹನ್ನೇರಡು ಹುಣ್ಣಿಮೆ, ಅಮವಾಸೆ, ಸಂಕ್ರಮಣಗಳ ಜೋತೆಗೆ ಬರುವ ಅಷ್ಟಮಿ, ಚತುರ್ದಶಿ, ತಿಥಿಗಳೆರಡನ್ನು ಸೇರಿಸಿ ಪಂಚಪರ್ವಗಳಾಗಿವೆ ಎಂದು ಹೇಳುವಲ್ಲಿ ನಾಡಿನ ಶಾಸನಗಳು ಇದನ್ನು ಸಮರ್ತಿಸುತ್ತವೆ. ಇಟ್ಟಿಗೆಯ ಶಾಸನವೊಂದು ನಂದನ ಬಾದ್ರಪದ, ಪುಣ್ಣಿಮೆ, ಆದಿತ್ಯಾವಾರ, ಸೋಮಗ್ರಹಣ, ಸಂಕ್ರಾಂತಿ ವ್ಯತೀಪಾತ ಭಾನುವಾರ ಪೌರ್ಣಿಮೆ, ಚಂದ್ರಗ್ರಹಣದ ಬಗ್ಗೆ

ಉಲ್ಲೇಖಿಸಿದರೆ[೨೩೧] ಮಾದಿನೂರು ಶಾಸನ ಪುಷ್ಯಶುದ್ಧ ಸೋಮವಾರದಂದುತ್ತರಾಯಣ ಸಂಕ್ರಾನ್ತಿ ಪರ್ವ್ವನಿಮಿತ್ಯಂ ಎಂದರೆ[೨೩೨] ಕುಕನೂರಿನ ಶಾಸನಗಳು ಮಾರ್ಗಸಿರ ಅಮವಾಸ್ಯೆ, ಸೋಮವಾರ ಸೂರ್ಯಗ್ರಹಣ, ಚೈತ್ರ ಪವಿತ್ರ, ಜೇಷ್ಠ, ಹುಣ್ಣಿಮೆ, ಶುಕ್ರವಾರ ಚಂದ್ರಗ್ರಹಣ, ಪಾಲ್ಗುಣದಹುಣ್ಣಿಮೆ, ಗುರುವಾರದ ಚಂದ್ರಗ್ರಹಣ, ಪುಷ್ಯದ ಆದಿತ್ಯವಾರ, ಉತ್ತರಾಯಣ ಸಂಕ್ರಾಂತಿ ದಿನಗಳಲ್ಲಿ ವಿವಿಧ ದಾನ ದತ್ತಿ ಕಾರ್ಯಗಳನ್ನು ನಡೆಸಿದ ಬಗ್ಗೆ ತಿಳಿಸುತ್ತವೆ.[೨೩೩] ಪುರ ಶಾಸನದಲ್ಲಿ[೨೩೪] ಪುರದಗವರೇಶ್ವರ ದೇವರ ಪಾತ್ರಪಾವುಳ, ಚೈತ್ರ, ಪವಿತ್ರ, ಪಂಚಪರ್ಬ್ಬ, ಮಹಾನ್ಯೆವೇದ್ಯ ಭೋಜನ ಇತ್ಯಾದಿಗಳು ಸರಿಯಾಗಿ ನಡೆಯಲಿ ಆಚರಿಸಲಿ, ಎಂದು ನಾಡಿನ ಸಮಸ್ತ ಅಧಿಕಾರಿಗಳು, ಪ್ರಜೆಗಳು, ದಾನದತ್ತಿಯನ್ನು ಬಿಟ್ಟು ಪ್ರೋತ್ಸಾಹಿಸಿರುವದನ್ನು ನೋಡುತ್ತೇವೆ. ಹೀಗೆ ಉಲ್ಲೇಖಿಗೊಂಡ ಚೈತ್ರ ಪವಿತ್ರ ಪರ್ವ, ತಿಥಿಗಳು ನಿತ್ಯ ನೈಮಿತ್ತಿಕ ಚತುರ್ವೇದದ ಅಧ್ಯಯನಕ್ಕಾಗಿ ಬಾದ್ರಪದ, ಅಮವಾಸ್ಯೆ, ಶ್ರಾವಣ, ಸೋಮವಾರ ವ್ಯತಿಪಾತ, ಸೂರ್ಯಗ್ರಹಣ, ಚಂದ್ರಗ್ರಹಣ ಉಭವ ಸಂವತ್ಸರದ ಉತ್ತರಾಯಣ ಸಂಕ್ರಾಂತಿ ಮುಂತಾದವುಗಳು ಪುಣ್ಯ ಕಾಲದ ನಿಮಿತ್ಯವಾಗಿ ಬಳಕೆ ಮಾಡಿಕೊಂಡಿರುವುದು ಅಂದಿನ ಸಂಸ್ಕೃತಿಯಲ್ಲಿ ಕಂಡರೆ ಇಂದಿನ ಸಮಾಜದಲ್ಲಿ ಅದು ಮುಂದುವರೆದುಕೊಂಡು ಬಂದಿರುವುದನ್ನು ಕಾಣುತ್ತೇವೆ.

**ಪಾಪ-ಪುಣ್ಯ**

ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವ ಉದ್ದೇಶದಿಂದ ಪಾಪ-ಪುಣ್ಯ ಸ್ವರ್ಗ-ನರಕಗಳ ಕಲ್ಪನೆಗಳನ್ನು ನಮ್ಮ ಪೂರ್ವಜರು ಜಾರಿಗೆತಂದದ್ದನ್ನು ಶಾಸನ ಉಲ್ಲೇಖಗಳಿಂದ ಗೋಚರವಾಗುತ್ತದೆ.[೨೩೫] ಇದನ್ನೇ ಗಮನದಲ್ಲಿರಿಸಿಕೊಂಡ ಜೈನಮುನಿಗಳು, ಶ್ರಾವಕಿಯರು, ಕಂತಿಯರು, ರಾಣಿಯರು ಕೊಪ್ಪಳದ ಪುಣ್ಯ ತೀರ್ಥಕ್ಷೇತ್ರಕ್ಕೆ ಬಂದು ಗುರುಮುನಿಗಳಿಂದ ದಿಕ್ಷೆಪಡೆದು ಸನ್ಯಾಸವನ್ನು ಸ್ವಿಕರಿಸಿ ಸ್ವರ್ಗಸ್ತರಾಗಿ (ಮುಡುಪಿದ)ರುವುದನ್ನು ಇಲ್ಲಿಯ ಶಾಸನಗಳು ಸಾರಿ ಹೇಳಿರುವ ಅಂಶವನ್ನು ನೋಡಿದರೆ ಜನರು ಪಾಪ ವಿಮುಕ್ತಿ ಮತ್ತು ಪುಣ್ಯ ಸಂಪಾದನೆಸಲುವಾಗಿ ಎಂಥಹ ತ್ಯಾಗ ಮಾಡಿದ್ದಾರೆ ಎಂಬುದು ತಿಳಿಯುತ್ತದೆ. ಸೂರ್ಯ ಗ್ರಹಣ, ಚಂದ್ರಗ್ರಹಣದಂತ ಪುಣ್ಯಕಾಲಗಳಲ್ಲಿ ದೇವರಿಗೆ, ಶಿಕ್ಷಣ ಸಂಸ್ಥೆಗಳಿಗೆ, ದೇವಾಲಯದ ಕಟ್ಟಡಗಳಿಗೆ, ದೇವರ ಸಮ್ಮುಖದಲ್ಲಿ ನಡೆಯುವ ಅನೇಕ ಕಾರ್ಯಚಟುವಟಿಕೆಗಳಿಗೆ ಇಂತಹ ಸಂದರ್ಭದಲ್ಲಿ ತಮ್ಮ ಪುಣ್ಯ ಜೀವನಕ್ಕಾಗಿ ದಾನ-ದತ್ತಿಗಳನ್ನು ಬಿಡುತ್ತಿದ್ದರು. ಅವರು ನಿಡಿದ ದಾನಗಳನ್ನು, ಸ್ಮಾರಕಗಳನ್ನು, ಶಾಸನಗಳನ್ನು ಹಾಳು ಮಾಡಿದರೆ ಪಾಪತಟ್ಟುವುದು, ಅವುಗಳನ್ನು ಕಾಪಾಡಿದರೆ ಪುಣ್ಯ ಲಭಿಸುವುದೆಂದು ಅನೇಕ ಶಾಸನಗಳು ಫಲಶೃತಿಗಳಲ್ಲಿ ಚಿತ್ರಿಸಿರುವುದನ್ನು ಕಾಣುತ್ತೇವೆ. ಅಂತವುಗಳಲ್ಲಿ ಕೆಲವೊಂದು ಶಾಸನ ಉಲ್ಲೇಖಗಳನ್ನು ಇಲ್ಲಿ ನೋಡಬಹುದಾಗಿದೆ.

ಕುಕನೂರಿನ ಶಾಸನವೊಂದು ''ಮೊದಲು ಕಾದು ವೃದ್ದಿಯೊಳ್ನಡೆಯಿಸುವ ರಾದ್ರವ್ಯ ಧರ್ಮಕ್ಕನುಕೂಳರಾಗಿ ನಡೆಸಿದವರ್ಗ್ಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗಾದಿ ತೀರ್ಥಸ್ಥಾನಂಗಳೊಳಮಿತ ದ್ರವ್ಯಮಂ ಕೊಟ್ಟ ಪಲಮದನುಪೆಕ್ಷಿಸಿ ವಕ್ರಿಸಿದವರ್ಗ್ಗಾ ಸ್ಥಳಂಗಳೊಳನಿತೆ ದೇವರಾಬ್ರಾಹ್ಮಣ ಸುವರ್ಣ್ನಾಪಹರಣ ಪಾಪಂ

ಸಾರ್ವ್ವದು''[೨೩೬] ಎಂದರೆ, ಆಳವಂಡಿ ಶಾಸನ ''ಇನ್ತಿ ಧರ್ಮ್ಮವಂ ಪ್ರತಿ ಪಾಳಿಸಿದವರ್ಗ್ಗೆ ವಾರಣಾಸಿ ಕುರುಕ್ಷೇತ್ರದಲು ಪನ್ನಿಚ್ಛಾಸಿರ ಕವಿಲೆಯ ನಲಂಕರ ಸಿವೇದ ಪಾರಗರಪ್ಪ ಬ್ರಾಹ್ಮಣರ್ಗ್ಗುಭಯ ಮುಖಿಯಂ ಕೊಟ್ಟವರು ಇನ್ತಿ ಧರ್ಮವನಳಿದವರು ಏಕ್ಕೋಟಿ ತೀರ್ಥಸ್ಥಾನಂಗೊಳೊಳು ಭಯಮುಖಿ ಕವಿಲೆಯ್ಮ ಬ್ರಾಹ್ಮಣರು ಮನಳಿದ ಮಹಾ ಪಾತಕರು'' ಎಂದಿದೆ.[೨೩೭] ಅಂಟೂರಠಾಣ ಶಾಸನವು ''ಸತ್ರವೊಂದು ಮಾಡಿಸಿ ಅದಕ್ಕೆ ದಾನ-ದತ್ತಿಗಳನ್ನು ಬಿಟ್ಟು ನಡೆಸಿದವರ್ಗ್ಗೆ ವಾರಣಾಸಿ ಕುರುಕ್ಷೆತ್ರವರ್ಘ್ಯ ತೀರ್ಥಪ್ರಯಾಗೆಯ್ಯ ನಿತ್ಯಾನಿಕಂ ಸಾಯಿರಕವಿಲೆಯಂ ಕೊಡು ಕೊಳಗುಮಂ ಪೊನ್ನಲು ಕಟ್ಟಿಸಿ ಚತುರ್ವ್ವೇದಪಾರಾಗರಪ್ಪಾ ಬ್ರಾಹ್ಮಣರಿಗೆ ದಾನಂಕೊಟ್ಟಫಲ ॥' ಯಿದನಳಿದವಂಗೆ ಅದರಷ್ಟೇ ಪಾಪ ತಟ್ಟುವುದೆಂದು ಉಲ್ಲೇಖಿಸಿದೆ[೨೩೮] ಕಲ್ಲೂರ ಶಾಸನ ''ಈ ಶಾಸನ ಕೆಡದವರಿಗೆ ಗಂಗೆಯಲು ವಾರಣಾಸಿಯಲುಂ ಏಳಕೋಟಿ ಕವಿಲೆಯುವುಂ ಏಳುಕೋಟಿ ತಪೋಧನರುಮಂ ಏಳುಕೋಟಿ ಬ್ರಾಹ್ಮಣರುಮಂಕೊನ್ದ ಪಾತಕರಪ್ಪರು[೨೩೯] ಎಂದು ವರ್ಣಿಸಿದೆ. ಪುರದ ಶಾಸನ (ನಂ ೧೪ ಪುಟ೨೯೧)ದಲ್ಲಿ ದೇವಾಲಯ, ಕೇರೆ ಕಟ್ಟಿಸಿ ಫಲ ಪುಸ್ಪ ಅರ್ಪಿಸಿ ಬೆಲ್ಲ ಮತ್ತು ಹಾದರಿಯಿವನಿಕ್ಕಿದವರಿಗೆ ಪುಣ್ಯವೆಂದಿರುವದು ಹಾಗೆಯೇ ಗೋತಗಿ[೨೪೦] ಇಟಗಿ [೨೪೧] ಕುಕನೂರಿನ[೨೪೨] ಪುರ[೨೪೩] ವಿಪ್ರ[೨೪೪] ಇನ್ನೂ ಮುಂತಾದ ಶಾಸನಗಳ ಫಲ ಶೃತಿಗಳಲ್ಲಿ ಪಂಚಪಾತಕ, ಪಾಪ-ಪುಣ್ಯಗಳ ಬಗ್ಗೆ ಉಲ್ಲೇಖಿಗಳಿವೆ. ಇವತ್ತಿಗೂ ಸಹ ಗುಡಿಗುಂಡಾರ ಕಟ್ಟಿಸುವುದು, ದಾನ ದತ್ತಿಗಳನ್ನು ಬಿಡುವುದು, ದಾಸೋಹಗಳನ್ನು ನಡೆಸುವುದು, ಪುಣ್ಯಕ್ಷೇತ್ರಗಳಿಗೆ ಹೋಗಿ ದಾನ ಮಾಡುವುದು ಇತ್ಯಾದಿಯಾಗಿ ಪುಣ್ಯವೆಂದು ತಿಳಿದು ನಮ್ಮ ಸಮಾಜಕರು ಅನುಸರಿಸುತ್ತ ಬಂದಿರುವುದನ್ನು ಕಾಣುತ್ತೇವೆ.

ಹೀಗೆ ಶಾಸನ ಉಲ್ಲೇಖಿತ ಪಾಪ-ಪುಣ್ಯಗಳ ಬಗ್ಗ ತಿಳಿಯಲು ಹೊರಟರೆ ಅವರು ಕೊಟ್ಟಂತ ದಾನ-ಧರ್ಮಗಳು ಸಾರ್ವತ್ರಿಕವಾಗಿ ಸೂರ್ಯಚಂದ್ರರಿರುವರೆಗೂ ಇರಲಿ ಎಂಬುದ್ಧೆ ಆಗಿತ್ತು. ಅಂತೆಯೇ ಪ್ರತಿ ಶಾಸನಗಳ ಮೇಲೆ ಸೂರ್ಯ ಚಂದ್ರರನ್ನು ಕೆತ್ತಿರುವದನ್ನು ಕಾಣುತ್ತೇವೆ.

**ಆಹಾರ-ಪಾನೀಯಗಳು**

ಪ್ರಾಚೀನ ಭಾರತೀಯ ಭೋಜನವನ್ನು ಒಂದು ಭೋಗ (ಅನ್ನಭೋಗ) ವಾಗಿ ಪರಿಗಣಿಸಿ ಅದಕ್ಕಾಗಿ ಅಡುಗೆಮಾಡುವ ಬಗೆಯನ್ನು ಒಂದು ಕಲೆಯಾಗಿ ಕಲಿಯುತ್ತಿದ್ದರು. ಶಾಸನಗಳಲ್ಲಿ ಉಲ್ಲೇಖ ಬರುವ ನೈವೆದ್ಯ (ಹಸಿವು-ನೀರಡಿಕೆ ಒಳಗೊಂಡಂತೆ) ಎಂಬುದು ಎಲ್ಲಾ ಪದಾರ್ಥಗಳನ್ನು ಒಳಗೊಂಡಿರುತ್ತದೆ. ಇದರೊಂದಿಗೆ ಅಲ್ಲಲ್ಲಿ ಉಲ್ಲೇಖಬರುವ ಸಾಂಬಾರವಸ್ತುಗಳು, ಜಿಡ್ಡು ಪದಾರ್ಥಗಳು, ಆಹಾರಪದಾರ್ಥಗಳಾದ ಎಲೆ, ಕಾಯಿ, ತುಪ್ಪ, ಎಣ್ಣೆ, ಉಪ್ಪು, ಬಾಳಿ, ಹತ್ತಿ, ಭತ್ತ, ಹಣ್ಣು, ಸುಣ್ಣ, ಅಡಕೆ, ಎಲೆ, ಹೆಸರು, ಮೆಣಸು, ಧನರಿ, ಅರಶೀಣ, ಜೊಳ, ಹುಣಸೆ, ಪಂಚವಣ್ಣಿಗೆ, ದೋಸೆ, ಸಜ್ಜೆ, ತೆಂಗು, ಹಲಸು, ಮಾವು, ನಿಂಬೆ, ಅರನೆರಲು, ಕಿತ್ತಾಳೆ, ಬೆಲ್ಲ ಮುಂತಾದವುಗಳು ಆಹಾರ-ಪಾನೀಯಗಳಲ್ಲಿ ಸಿಂಹಪಾಲು ಮಹತ್ವ ಪಡೆದುವುಗಳಾಗಿವೆ. ಈ ಉಲ್ಲೇಖಗಳು ಜಿಲ್ಲೆಯ ಕೊಪ್ಪಳ (ನ೯೪), ಅಂಟೂರುಠಾಣ (ನಂ೨೭), ಹುಲಗಿ (ನಂ೧೪೮), ಕಲ್ಲೂರು (ನಂ೧೭, ೧೫), ಕುಕನೂರು (ನಂ. ೩೮,೩೯,೪೦,೪೫,೫೦); ಪುರ (ನಂ೧೫, ೧೭,೧೪),[೨೪೫] ಶಾಸನಗಳಲ್ಲಿ

ಉಲ್ಲೇಖಬರುವ ಎಲೆ-ಅಡಿಕೆ-ಸುಣ್ಣ ಇವುಗಳನ್ನು ಸೇರಿಸಿ ಪ್ರಾಚೀನರು ವೀಳೆ (ವಿಳ್ಯೇದೇಲೆ) ಹಾಕುತ್ತಿರಬೇಕು. ಇದನ್ನೇ ಅಲ್ಬೇರೂನಿ ಭಾರತೀಯರು ಕಾರ್ತಿಕದ ಮೊದಲದಿನ ದಿಪಾವಳಿಯಂದು ದೇವರುತ್ಸವ, ಹಬ್ಬದ ದಿನಗಳಲ್ಲಿ ಸ್ನಾನ ಮಾಡಿ ಹೊಸ ಹೊಸ ಬಟ್ಟೆಗಳನ್ನು ಧರಿಸಿಕೊಂಡು ವಿವಿಧ ರೀತಿಯ ಅಡಿಗೆಯ ಪರ್ವದೂಟಕ ಮಾಡಿ ಎಲೆ ಅಡಿಕೆಯನ್ನು ಪರಸ್ಪರರು ಹಂಚುತ್ತಾ ಅವುಗಳನ್ನು ತಿಂದು ಹಲ್ಲು-ಬಾಯಿ ಕೆಂಪುಮಾಡಿ ಕೊಳ್ಳುತ್ತಿರುವುದಾಗಿ ಪ್ರಸ್ತಾಪಿಸಿರುವನು.[೨೪೬]

**ಸಾರ್ವಜನಿಕ ಚಟುವಟಿಕೆಗಳು**

ಲೌಕಿಕ ವ್ಯವಹಾರಗಳಷ್ಟರಿಂದಲೇ ಸಂತೃಪ್ತನಾಗದ ಮನುಷ್ಯ ಸಾಮಾಜಿಕ ಜೀವನದಲ್ಲಿ ಅನೇಕ ಒಳ್ಳೆಯ ಸತ್ಕಾರ್ಯಗಳನ್ನು ಮಾಡುವ ಮೂಲಕ ತನ್ನ ತ್ಯಾಗಮಯವಾದ ಸೇವಾ ಮನೋಭಾವನೆಯನ್ನು ಮೆರೆದಿದ್ದಾನೆ. ಇಂತಹ ಚಟುವಟಿಕೆಗಳಿಗೆ ಧರ್ಮವೇ ಮೂಲ ಕಾರಣವಾಗಿರಬೇಕು. ಅಂತೆಯೇ ಜಗತ್ಪ್ರಸಿದ್ಧ ಸಾಮ್ರಾಟ ಅಶೋಕನು ಘನಘೋರವಾದ ಕಳಿಂಗಯುದ್ಧದ ಬಳಿಕ ಬೌದ್ಧಧರ್ಮಸ್ವಿಕರಿಸಿ ತಾನು ಮಾಡಿದ ಪ್ರಾಯಶ್ಚಿತಕ್ಕಾಗಿ ಸಾರ್ವಜನಿಕ ಚಟುವಟಿಕೆಗಳಾದ ಕೆರೆ, ಅರವಟ್ಟಿಗೆ ಕಟ್ಟಿಸುವುದು ಚೈತ್ಯಾಲಯ, ಸ್ತೂಪ, ಶಿಕ್ಷಣ ಕೇಂದ್ರಗಳು ಸ್ಥಾಪಿಸಿವುದು, ರಸ್ತೆ ಮಾಡಿಸುವುದು, ಬಾವಿ ಕಟ್ಟಿಸುವುದು ಇತ್ಯಾದಿ ಕಾರ್ಯ ಚಟುವಟಿಕೆಗಳನ್ನು ದೇಶಾದ್ಯಂತ ಮಾಡಿಸಿದನು. ಒಳ್ಳೆಯ ನೀತಿನಿಯಮಗಳನ್ನು ಅಳವಡಿಸಿಕೊಳ್ಳಲು ಶಾಸನಗಳನ್ನು ಬರೆಯಿಸುವ ಮೂಲಕ ಕರೆನಿಡಿದನು. ಅಂತಹ ಶಾಸನಗಳು ಕರ್ನಾಟಕದ ಜಟ್ಟಿಂಗರಾಮೇಶ್ವರ, ಸಿದ್ದಾಪೂರ, ಮಸ್ಕಿ, ಉದುಗೋಳು, ನಿಟ್ಟೂರು, ಕೊಪ್ಪಳ, ಪಾಲ್ಕಿಗುಂಡು ಸನ್ನತಿಯಲ್ಲಿ ದೊರೆತ ಶಾಸನಗಳ ಅಧ್ಯಯನದಿಂದ ಗೊತ್ತಾಗುತ್ತದೆ.[೨೪೭] ಈ ಹಿನ್ನೆಲೆಯಲ್ಲಿ ನೋಡಿಗಾದ ಕರುವ ಗುಲ್ಗಿಮಯ್ಯನೆಂಬ ವ್ಯಕ್ತಿ ಮಾದಿನೂರಿನಲ್ಲಿ ದೇಗುಲ, ಸತ್ರ, ವಿಹಾರ, ಮನೆ ಕಟ್ಟಿಸಿ, ಕೆರೆ ಭಾವಿ ತೋಡಿಸಿ, ತೋಟ, ಭೂಮಿಯನ್ನು ದಾನಮಾಡಿದಬಗೆಯನ್ನು ಮಾದಿನೂರಿನ ಶಾಸನ ತಿಳಿಸುವುದು[೨೪೮] ಸೋಮನಾಥನೆಂಬುವನು ತನ್ನ ಪತ್ನಿಯೊಂದಿಗೆ ಸೇರಿ ಹುಲಗಿಯಲ್ಲಿ ಶಿವದೇವಾಲಯ ಕಟ್ಟಿಸಿ ಹೂವಿನ ತೋಟ, ಮನೆಗಳನ್ನು ದಾನ ಮಾಡಿ ದನು.[೨೪೯] ಸೋಮಯಾಜಿಯೂ ಕವಲೂರದಲ್ಲಿ ವಿಷ್ಣುದೇವಾಲಯ ಕಟ್ಟಿಸಿದರೆ,[೨೫೦] ಮಹಾದೇವ ದಂಡನಾಯಕನು ಇಟಗಿಯಲ್ಲಿ ತನ್ನ ಮತ್ತು ತನ್ನ ತಂದೆತಾಯಿಗಳ ಹೆಸರಲ್ಲಿ ದೇವಾಲಯ, ಕೋಟೆ, ಸತ್ರ, ಅರವಟ್ಟಿಗೆ, ಮಠಗಳನ್ನು ಕಟ್ಟಿಸಿ[೨೫೧] ಅವೇಲ್ಲವುಗಳನ್ನು ನಡೆಯುವಂತಾಗಲು ವಿವಿಧ ದಾನದತ್ತಿಗಳನ್ನು ಬಿಟ್ಟ ಬಗ್ಗೆ ಕವಲೂರು ಇಟಗಿ ಶಾಸನಗಳಿಂದ ತಿಳಿಯುವುದು. ಅಳಂಡಿಯಲ್ಲಿ ಚಾವರಾಜನು ಕೇಶವ ದೇವಾಲಯ ಅರವಟ್ಟಿಗೆ, ಅಗ್ಗಿಷ್ಟಿಕೆ ಕಟ್ಟಿಸಿ ದಾನ ಔದಾರ್ಯಗಳಿಗೆ ಹೆಸರಾಗಿದ್ದನು.[೨೫೨] ಭೂತದಂಡನಾಯಕನೆಂಬುವವನು ಕಲ್ಲಂಗೆರೆಯಲ್ಲಿ ಲಕ್ಷ್ಮಿನಾರಾಯಣ ದೇವಾಲಯ ಕಟ್ಟಿಸಿ ಭೂಮಿ ದಾನಮಾಡಿದನು.[೨೫೩] ಕಾಸಿದೇವ ಮತ್ತು ಮಲ್ಲಿದೇವ, ಭಮ್ಮಲದೇವಿಯರು ಮುಧೋಳದಲ್ಲಿ ಹರಿಹರ ದೇವಾಲಯ ಕಟ್ಟಿಸಿದರು.[೨೫೪] ಕವಲೂರಿನಲ್ಲಿ ಸೋಮಯಾಜಿ ಎಂಬುವವನು ಕೆರೆಯನ್ನು ಕಟ್ಟಿಸಿದನು.[೨೫೫] ಸೌರಾಷ್ಟದ ಸೋಮನಾಥ ದೇವರು ಓಹಿಲನಿಗೆ ಹಳ್ಳಿಗೆ ಹೋಗಿ ದೇಗುಲ ಕೆರೆಯನ್ನು ಕಟ್ಟಿಸಿ ದೇವರಿಗೆ ಪಲಪುಸ್ಪಗಳನ್ನು ಅರ್ಪಿಸಬೇಕೆಂದು ಹೇಳುತ್ತಾನೆ.[೨೫೬]

ಅದರಂತೆ ಕೊಪ್ಪಳ[೨೫೭] ಉಪ್ಪಿನ ಬೇಟಗೇರಿ [೨೫೮] ರಾಜೂರು, ಸಂಕನೂರು, ಅಂಟೂರತಾಣ ಮುಂತಾದ ಶಾಸನಗಳು ಇಂತಹ ವಿಷಯಗಳ ಬಗ್ಗೆ ಉಲ್ಲೇಖಿಸುತ್ತವೆ.[೨೫೯] ಮಾನವನಿಗೆ ಗಾಳಿ, ನೀರು, ಅನ್ನ ಅವಶ್ಯಕವಾಗಿದ್ದು. ಭಾವಿ ತೋಡಿಸುವುದು ಅರವಟ್ಟಿಗೆ ಸತ್ರ ಕೆರೆ ಕಟ್ಟಿಸುವುದು ಭೋಜನ ಆಹಾರಕ್ಕಾಗಿ ಅನ್ನದಾನಗಳನ್ನು ಮಾಡುವುದರಮೂಲಕ ತೃಪ್ತರಾಗುತ್ತಿದ್ದರು.[೨೬೦] ಇವೆಲ್ಲವುಗಳು ವ್ಯಾಪಾರಸ್ಥರಿಗೆ, ಜನಸಾಮಾನ್ಯರಿಗೆ, ಶಿಕ್ಷಣ ಕಲಿಯುವವರಿಗೆ ಕಲಿಸುವವರಿಗೆ ಬಹಳ ಅನುಕೂಲಕರವಾಗಿದ್ದವು. ಅರವಟ್ಟಿಗೆಗಳಲ್ಲಿ ಪ್ರಯಾಣಿಕರಿಗೆ ಕುಡಿಯಲು ನೀರು ಸಿಕ್ಕರೆ, ಸತ್ರಗಳು ಪ್ರವಾಸಿಗರಿಗೆ, ಅನಾಥರಿಗೆ ವಿದ್ಯಾರ್ಥಿತಪೋದರಿಗೆ ಆಹಾರ, ವಿಶ್ರಾಂತಿ, ವಸತಿ ಒದಗಿಸುತ್ತಿದ್ದವು. ಇದೊಂದು ರೀತಿಯ ಅತಿಥಿ ಸತ್ಕಾರ ವೆನ್ನುವಂತ್ತಿತ್ತು. ಇದಕ್ಕೆ ಜಿಲ್ಲೆಯ ಅಳವಂಡಿ, ಕವಲೂರು, ಮಾದಿನೂರು, ಇಟಗಿ, ಕುಕನೂರು-ತಳಕಲ್ಲು ಪ್ರಮುಖ ಸ್ಥಳಗಳಾಗಿದ್ದವು. ಭೂದಾನ, ಅನ್ನದಾನ, ವಿದ್ಯಾದಾನಕ್ಕೆ ಹೆಸರಾದ ನಮ್ಮ ಪ್ರಾಚೀನರು. ಜೋಳ, ಹೆಸರು, ಭತ್ತ, ಹಿಟ್ಟು, ಬೆಲ್ಲ, ಹಣ್ಣು, ದವಸ, ಭೂಮಿ, ತೋಟ, ಎಲೆ, ಅಡಕೆ, ಹೂ, ಕಾಯಿ ಇತ್ಯಾದಿ ರೂಪದಲ್ಲಿ ದಾನದತ್ತಿಗಳನ್ನು ಈ ಹಿನ್ನಲೆಯಲ್ಲಿಯೇ ಬಿಟ್ಟಿರಬೇಕು.

## ವಿದ್ಯಾಕೇಂದ್ರಗಳು

ಸಾರ್ವಜನಿಕ ಮೂಲಭೂತ ಬೇಡಿಕೆಯಾದ ವಿದ್ಯಾಭ್ಯಾಸ ಪದ್ಧತಿಯೂ ನಾಡಿನ ಸಂಸ್ಕೃತಿಯ ಕುರುಹಾಗಿದ್ದು, ಇದರ ಕುರಿತು ಭಾರತೀಯರಲ್ಲಿ ಅಪಾರ ಗೌರವವಿತ್ತು. ಆತ್ಮಸಿದ್ಧಿ, ಆತ್ಮಜ್ಞಾನ ಅರಿವು ಪಡೆಯುವಲ್ಲಿ ವಿದ್ಯೆಯ ಪರಮಪ್ರಯೋಜನ ಮುಖ್ಯವಾಗಿತ್ತು ಇದೆಲ್ಲವನ್ನು ಗಮನದಲ್ಲಿಟ್ಟುಕೊಂಡೆ ಅರಸರು, ಅಧಿಕಾರಿಗಳು, ಜನರು ದೇವಾಲಯಗಳಿಗೆ ದಾನ-ದತ್ತಿಗಳನ್ನು ಬಿಟ್ಟು ಕೊಡುವಾಗ ವಿದ್ಯಾಭ್ಯಾಸಕ್ಕಾಗಿಯೂ ಸಹ ಇಂತಿಷ್ಟೆಂದು ನಿಗದಿಪಡಿಸಿ ಬಿಟ್ಟುಕೊಟ್ಟಿರುವುದನ್ನು ಕಾಣುತ್ತೇವೆ.[೨೬೧] ವಿದ್ಯಾಕೇಂದ್ರಗಳಾದ ದೇವಸ್ಥಾನಗಳಲ್ಲಿ ತಪೋಧನರು ಛಾತ್ರರು ವಿದ್ಯಾಭ್ಯಾಸದಲ್ಲಿ ಕಲಿಯುವುದರಲ್ಲಿ ನಿರತರಾಗಿರುತ್ತಿದ್ದರು. ತಪೋಧನರು ನೈಷ್ಠಿಕಬ್ರಹ್ಮಚಾರಿಗಳಾಗಿ ಕಾರ್ಯನಿರ್ವಹಿಸಿ ನಂತರ ಮಠ-ದೇವಸ್ಥಾನಗಳಲ್ಲಿ ಸ್ಥಾನಪತಿಗಳಾಗುತ್ತಿದ್ದರು. ಛಾತ್ರರರು ತಮ್ಮ ಶಿಕ್ಷಣ ಮುಗಿದ ಬಳಿಕ ಗ್ರಹಸ್ಥಾಶ್ರಮಕ್ಕೆ ಮರಳುತ್ತಿದ್ದರು. ತಪೋದನರು, ಯಮನಿಯಮ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನಧಾರಣ, ಜಪ ಸಮಾಧಿ, ಸಂಪನ್ನರಾಗಲು ದಿನಾಲು ಹಿರಿಯ ಪಂಡಿತರಾದ ಸ್ಥಾನಪತಿಗಳಿಂದ ಉಪದೇಶ ಪಡೆಯುತ್ತಿದ್ದರು. ದೇವಸ್ಥಾನ ಮಠಗಳ ಸಮಸ್ತ ಹೊಣೆ ಹೊತ್ತ ಸ್ಥಾನಾಚಾರ್ಯರು ನೈಷ್ಠಿಕ ಬ್ರಹ್ಮಚಾರಿಗಳಾಗಿರುವುದರೊಂದಿಗೆ ವಿದ್ಯಾಪಕ್ಷಪಾತಿಗಳೂ ಆಗಿದ್ದರು. ಇವರಲ್ಲಿ ಕೆಲವರು ಅಧ್ಯಯನ ದೊಂದಿಗೆ ಅಧ್ಯಾಪನದಲ್ಲಿ ತೊಡಗುತ್ತಿದ್ದರು.

ವಿದ್ಯಾಭ್ಯಾಸಕ್ಕಾಗಿ ಮಠಗಳು, ದೇವಸ್ಥಾನಗಳು ಮುಖ್ಯ ವಿದ್ಯಾಕೇಂದ್ರಗಳಾಗಿದ್ದವು. ಘಟಿಕಸ್ಥಾನಗಳು, ಬ್ರಹ್ಮಪೂರಿಗಳು ಅಗ್ರಹಾರಗಳು ಕೂಡಾ ಬಾಲಶಿಕ್ಷಣ, ಪ್ರೌಢ ಶಿಕ್ಷಣ ಕಲಿಯಲು ಸಾಕಷ್ಟು ಅನುಕೂಲಗಳನ್ನು ಕಲ್ಪಿಸಿಕೊಟ್ಟು, ಸಮಾಜಕ್ಕೆ ನಾಡಿಗೆ ಸಾಕಷ್ಟು ಕೊಡುಗೆಯನ್ನು ನೀಡಿರುವುದನ್ನು ಶಾಸನಗಳ ಅಧ್ಯಯನದಿಂದ ತಿಳಿದುಬರುವುದು. ಈ ಶಿಕ್ಷಣ ಪದ್ಧತಿಯ ಕುರಿತು ಈ ಪ್ರಬಂಧದ ಶಿಕ್ಷಣ ಮತ್ತು ಸಾಹಿತ್ಯ ಚಟುವಟಿಕೆಗಳೆಂಬ ಪ್ರತ್ಯೇಕ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿರುವುದರಿಂದ ಅದರ ವಿವರಣೆ ಇಲ್ಲಿ ಮಾಡಿರುವುದಿಲ್ಲ.

## ಅಡಿಟಿಪ್ಪಣಿಗಳು

೧. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ಪು-೨೩-೫೨, ಹಂಪಿ.

೨. ಕೊಪ್ಪ, ಎಸ್. ಕೆ., ೧೯೯೦, ತರ್ದವಾಡಿನಾಡು ಒಂದು ಅಧ್ಯಯನ, ಪು - ೧೫೧, ಇಂಡಿ, ಪ್ರತಿಭಾ ಪ್ರಕಾಶನ.

೩. ಅಲ್ತೇಕರ, ಎ. ಎಸ್., ವೇದಕಾಲದ ಸಮಾಜಯುಗ ಯಾತ್ರಿ ಭಾರತೀಯ ಸಂಸ್ಕೃತಿ - ಸಂ- ೧, ಪು-೧೬೯, ಋಗ್ವೇದದಲ್ಲಿ ಕಮ್ಮಾರ, ಸ್ವರ್ಣಕಾರ, ವೈದ್ಯ, ವರ್ಧಕ, ತಂತುವಾಯ, ತಕ್ಷಮೇಧ ಸೈನಿಕ ಮತ್ತು ಪುರೋಹಿತ ವೃತ್ತಿಗಳ ಉಲ್ಲೇಖವಿದೆ.

೪. ಒಬ್ಬ ಋಷಿಯು ತಾನು ಕವಿಯೆಂದು ತನ್ನ ತಂದೆ ವೈದ್ಯನೆಂದು ಅಜ್ಜನು ಶಿಲ್ಪಿ ಎಂದು ತಿಳಿಸುತ್ತಾನೆ. ಮತ್ತೊಬ್ಬನು ತನ್ನನ್ನು ರಾಜ, ಅದಾಗದಿದ್ದರೆ ಪುರೋಹಿತ, ಅದೂ ಆಗದಿದ್ದರೆ ಒಬ್ಬ ಧನಿಕನ್ನಾಗಿ ಮಾಡಬೇಕೆಂದು ಇಂದ್ರನನ್ನು ಯಾಚಿಸುತ್ತಾನೆ. ಋಗ್ವೇದ ೪೩-೫ ಉಲ್ಲೇಖ ಯುಗಯಾತ್ರಿ ಭಾರತೀಯ ಸಂಸ್ಕೃತಿ, ಸಂ- ೧, ಪು - ೧೭೦.

೫. Louis, Renon., *The Civilization of Ancient India,* ಪು-೪೨.

೬. Radha Kumud Mukarji., *Local Government in Ancient India*, ಪು- ೬೨-೬೩.

೭. Datta, N.K., *Origen and Growth of Eastern India*, ಪು-೩೮- ೮೫-೮೬.

೮. ಪಿ.ವಿ. ನಾರಾಯಣ., ೧೯೮೩, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪುಟ - ೬೨, ಗದಗ.

೦೯. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨೬, ಮಾದಿನೂರ (ಕೊ.ತಾ.), ಪು-೩೨-೩೬, ಹಂಪಿ.

೧೦. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೧೧, ಕಲ್ಲೂರು (ಯ.ತಾ.), ಕ್ರಿ.ಶ. ೧೧೦೨, ಪು-೧೬೪, ಹಂಪಿ.

೧೧. ಅದೇ, ನಂ-೧೮, ಆನೆಗುಂದಿ (ಗ.ತಾ.), ಕ್ರಿ.ಶ. ೧೩ ನೇ ಶ., ಪು- ೩೨೪.

೧೨. ಅದೇ, ನಂ-೧೩೯, ಗಿಣಿಗೇರಿ (ಕೊ.ತಾ.), ಪು- ೧೩೭.

೧೩. ಅದೇ, ನಂ-೩೦, ಮುಧೋಳು (ಯ.ತಾ.), ಕ್ರಿ.ಶ. ೮೯೭, ಪು-೧೮೯.

೧೪. ಅದೇ, ನಂ-೧೧೨, ಕೊಪ್ಪಳ (ಕೊ.ತಾ.), ಕ್ರಿ.ಶ. ಪು- ೧೦೮.

೧೫. ಅದೇ, ನಂ-೧೧೩, ಕೊಪ್ಪಳ (ಕೊ.ತಾ.), ಕ್ರಿ.ಶ. ೯೯೨, ಪು-೧೦೯.

೧೬. ಅದೇ, ನಂ-೨, ವಿಪ್ರ (ಗ.ತಾ.), ಕ್ರಿ.ಶ. ೧೦೫೯, ಪು-೩೧೫.

೧೭. ಅದೇ, ನಂ- ೨೮, ಅಂಟೂರಠಾಣ (ಕು.ತಾ.), ಕ್ರಿ.ಶ. ೧೧೯೫, ಪು-೩೧೧.

೧೮. ಅದೇ, ವಿಪ್ರ (ಕು.ತಾ.), ಕ್ರಿ.ಶ. ೧೧೮೨, ಪು- ೩೧೩-೧೫.

೧೯. ಅದೇ, ನಂ-೫೧, ಕುಕನೂರು (ಯ.ತಾ.), ಕ್ರಿ.ಶ. ೧೦೦೫, ಪು-೨೨೪.
೨೦. ಅದೇ, ನಂ-೧೩, ಪುರ ( ಕು.ತಾ.), ೧೨ ನೆ.ಶ. ಪು-೨೮೮.
೨೧. ಅದೇ, ನಂ-೩, ಕವಲೂರು (ಕೊ.ತಾ.), ಕ್ರಿ.ಶ. ೧೧೭೭ ರಿಂದ ೧೧೮೦, ಪು-೬ ರಿಂದ ೧೦.
೨೨. ಅದೇ, ನಂ-೮, ಆಳವಂಡಿ (ಕೊ.ತಾ.), ಕ್ರಿ.ಶ. ೧೧೫೭, ಪು-೨೦.
೨೩. ಅದೇ, ನಂ-೨೬, ಆನೆಗುಂದಿ (ಗ.ತಾ.), ಕ್ರಿ.ಶ. ೧೫೫೬, ಪು- ೩೪೦.
೨೪. ಚಿದಾನಂದ ಮೂರ್ತಿ, ಎಂ., ೧೯೬೬, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೪೩೩, ಮೈಸೂರ.
೨೫. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨,
ಕೊಪ್ಪಳ ಜಿಲ್ಲೆ, ನಂ-೨೬, ಮಾದಿನೂರು (ಕೊ.ತಾ.),ಕ್ರಿ.ಶ. ೯೭೩, ೧೧೩೬, ಪು - ೩೨-೩೩, ಹಂಪಿ.
೨೬. ಅದೇ, ನಂ-೩೮, ಕುಕನೂರ (ಯ.ತಾ), ಕ್ರಿ.ಶ. ೧೧೦೭, ೧೨೩೧, ಪು-೨೦೦.
೨೭. ಅದೇ, ನಂ-೪೮, ಕುಕನೂರು (ಯ.ತಾ.), ಕ್ರಿ.ಶ. ೧೧೬೩, ಪು - ೨೦೬ ಮತ್ತು ಕ್ರಿಶ. ೧೧೭೦
ಪು - ೨೧೦.
೨೮. ಅದೇ, ನಂ-೮, ಆಳವಂಡಿ (ಕೊ.ತಾ.) , ಕ್ರಿ.ಶ. ೧೧೫೭ ರಿಂದ ೧೧೬೮, ಪು- ೧೭.
೨೯. ಅದೇ, ನಂ-೩, ಕವಲೂರ (ಕೊ.ತಾ.), ಕ್ರಿ.ಶ. ೧೧೭೭-೭೯, ೮೦, ೮೬, ಪು-೬.
೩೦. ಅದೇ, ನಂ-೫೯, ತಳಕಲ್ಲ (ಯ.ತಾ.), ಕ್ರಿ.ಶ. ೯೯೧, ಪು-೨೫೩.
೩೧. ಅದೇ, ನಂ-೨೯, ಮುಧೋಳ (ಯ.ತಾ.), ಕ್ರಿ.ಶ. ೧೧೫೪, ಪು-೧೮೪.
೩೨. ಅದೇ, ನಂ-೩೮-೫೬, ಕುಕನೂರು (ಯ.ತಾ), ಕ್ರಿ.ಶ. ೧೧೦೭ ರಿಂದ ಪು-೧೯೮.
೩೩. ನಾರಾಯಣ, ಪಿ.ವ್ಹಿ., ೧೯೮೩, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಗದಗ, ಪು - ೬೩.
೩೪. ಅದೇ, ನಂ-೬೭, ಇಟಗಿ (ಯ.ತಾ.), ಕ್ರಿ.ಶ. ೧೧೦೮, ೧೨, ೧೩, ಪು - ೨೫೯-೨೬೮.
೩೫. ಅದೇ, ನಂ-೬೭, ಇಟಗಿ -೬೭ (ಯ.ತಾ.), ಕ್ರಿ.ಶ. ೧೧೦೮, ೧೨,೧೩, ಪು - ೨೫೯-೨೬೮.
೩೬. ಅದೇ, ನಂ-೨೮, ಅಂಟೂರಠಾಣಾ (ಕು.ತಾ.) , ಕ್ರಿ.ಶ., ೧೧೯೫, ಪು-೩೦೮.
೩೭. ಅದೇ, ನಂ-೨೬, ಮಾದಿನೂರು (ಕೊ.ತಾ.), ಕ್ರಿ.ಶ., ೧೧೩೬ - ಪು-೩೩.
೩೮. ಅದೇ, ನಂ-೧೪೮, ಹುಲಗಿ (ಕೊ.ತಾ.), ಕ್ರಿ.ಶ. ೧೦೮೮, ಪು-೧೪೫.
೩೯. ಅದೇ, ನಂ-೧, ಕವಲೂರು (ಕೊ.ತಾ.), ಕ್ರಿ.ಶ. ೧೧೯೭, ಪು-೧.
೪೦. ಅದೇ, ನಂ-೬೭, ಇಟಗಿ (ಯ.ತಾ.), ಕ್ರಿ.ಶ. ೧೧೦೮ ರಿಂದ ೧೧೧೩., ಪು-೨೫೯.
೪೧. ಅದೇ, ನಂ-೫೬,ಕುಕನೂರು ( ಯ.ತಾ.), ಪು-೨೩೮ ರಿಂದ ೨೪೦.
೪೨. ಕೊಪ್ಪಾ, ಎಸ್. ಕೆ., ೧೯೯೦, ತ.ನಾ.ಒ.ಅ, ಪು-೧೮೬, ಇಂಡಿ.
೪೩. ಕಪಟರಾಳ ಕೃಷ್ಣರಾಯರು., ೧೯೫೫, ಕರ್ನಾಟಕ ಲಾಕುಳಶೈವರ ಇತಿಹಾಸ, ಪು - ೯೮, ಧಾರವಾಡ.
೪೪. ಅದೇ, ನಂ-೫೨, ಕುಕನೂರು (ಯ.ತಾ.), ಕ್ರಿ.ಶ. ೧೧೭೮, ಪು- ೩.೦-೨೩೫.
೪೫. ಅದೇ, ನಂ-೫೯, ತಳಕಲ್ಲು (ಯ.ತಾ.), ಕ್ರಿ.ಶ. ೯೯೧, ಪು-೨೫೩.

೪೬. ಅದೇ, ನಂ-೫೦, ಕುಕನೂರು (ಯ.ತಾ.), ಕ್ರಿ.ಶ. ೧೦೦೫, ಪು - ೨೨೩.

೪೭. ಅದೇ, ನಂ-೫೧, ಕುಕನೂರು ( ಯ.ತಾ.), ಕ್ರಿ.ಶ. ೧೦೦೫, ಪು- ೨೨೫.

೪೮. ಅದೇ, ನಂ-೧೭, ಕಲ್ಲೂರ ( ಯ.ತಾ.), ಕ್ರಿ.ಶ. ೧೦೯೮ ಪು-೧೭೪.

೪೯. ಅದೇ, ನಂ-೧, ಮಂಕಲ್ಕೇರಿ (ಕು.ತಾ.), ಕ್ರಿ.ಶ. ೧೧೨೩, ಪು-೨೭೬.

೫೦. ಅದೇ, ನಂ-೨೯, ಮುಧೋಳ (ಯ.ತಾ.), ಕ್ರಿ.ಶ. ೧೧೫೪, ಪು- ೧೮೪.

೫೧. ಅದೇ, ನಂ-೧೩, ಕಲ್ಲೂರ (ಯ.ತಾ.), ಕ್ರಿ.ಶ. ೧೧೮೫, ಪು-೧೬೭.

೫೨. ಅದೇ, ನಂ-೧೩, ಪುರ (ಕು.ತಾ.), ಕ್ರಿ.ಶ. ೧೨ ನೇ.ಶ, ಪು-೨೮೮.

೫೩. ಅದೇ, ನಂ-೩೮, ಕುಕನೂರು (ಯ.ತಾ.), ಕ್ರಿ.ಶ. ೧೧೦೭, ಪು-೯೨.

೫೪. ಕಪಟರಳ ಕೃಷ್ಣರಾಯರು., ೧೯೫೫, ಕರ್ನಾಟಕದಲ್ಲಿ ಲಾಕುಳ ಶೈವರ ಇತಿಹಾಸ, ಪು - ೧೦೭ ರಿಂದ ೧೩೭. ಧಾರವಾಡ.

೫೫. ಅದೇ, ನಂ-೪೫, ಕೊಪ್ಪಳ (ಕೊ.ತಾ.), ಕ್ರಿ.ಶ. ೮೮೧, ಪು- ೪೬.

೫೬. ಅದೇ, ನಂ-೫೮, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦ ನೆ.ಶ., ಪು - ೫೪.

೫೭. ಅದೇ, ನಂ-೬೨, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೦೮, ಪು -೫೬.

೫೮. ಅದೇ, ನಂ-೧೧, ಉಪ್ಪಿನ ಬೆಟಗೇರಿ (ಕೊ.ತಾ.), ಕ್ರಿ.ಶ. ೯೬೪, ಪು - ೨೨.

೫೯. ಅದೇ, ನಂ-೧೨೦, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೩೨, ಪು -೧೧೯.

೬೦. ಅದೇ, ನಂ-೪, ಗೋವನ್ತಿಗೆ (ಕು.ತಾ.), ಕ್ರಿ.ಶ. ೧೦೪೫.

೬೧. ಅದೇ, ನಂ-೧೫, ಕಲ್ಲೂರ (ಯ.ತಾ.), ಕ್ರಿ.ಶ. - ೧೧೨೯.

೬೨. ಅದೇ, ನಂ-೨೦, ಚಳಗೇರಿ (ಕು.ತಾ.), ಕ್ರಿ. ಶ. ೧೧೭೨.

೬೩. ಅದೇ, ನಂ-೮, ಅಳವಂಡಿ ( ಕೊ.ತಾ.), ಕ್ರಿ.ಶ. ೧೧೬೨, ಪು - ೧೭.

೬೪. ಅದೇ, ನಂ-೬೪, ಇಟಗಿ (ಯ.ತಾ.), ಪು-೨೫೭.

೬೫. ಚಿದಾನಂದ ಮೂರ್ತಿ, ಎಂ., ೧೯೬೬, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರ.

೬೬. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೧೦, ಕಲ್ಲೂರು (ಯ.ತಾ.), ಕ್ರಿ.ಶ. ೧೦೦೨, ಪು- ೧೬೪, ಹಂಪಿ.

೬೭. ಅದೇ, ನಂ-೧೩೯, ಗಿಣಗೇರಿ (ಕೊ.ತಾ.), ಪು- ೧೩೬.

೬೮. ಅದೇ, ನಂ-೨೬, ಮಾದಿನೂರು (ಕೊ.ತಾ.), ಕ್ರಿ.ಶ. ೯೭೩, ಪು-೩೨.

೬೯. ಅದೇ, ನಂ-೧೮, ಆನೆಗುಂದಿ (ಗ.ತಾ.), ಕ್ರಿ.ಶ. ೧೩ ನೇ ಶತಮಾನ, ಪು-೩೨೩

೭೦. ಅದೇ, ನಂ-೫೬, ಕುಕನೂರು (ಯ.ತಾ.), ಕ್ರಿ.ಶ. ೯೬೮, ಪು-೨೩೮.

೭೧. ಅದೇ, ನಂ-೪೫, ಕುಕನೂರು (ಯ.ತಾ.), ಪು - ೨೧೬.

೭೨. ಅದೇ, ನಂ-೨, ಹೆಸರೂರ (ಕು.ತಾ.), ಕ್ರಿ.ಶ. ೧೧೦೪, ಪು-೨೭೮.

೭೩. ಚಿದಾನಂದ ಮೂರ್ತಿ, ಎಂ., ೧೯೬೬, ಕನ್ನಡ ಶಾಸನಗಳ ಸಾಂಸ್ಕೃತಿಕ, ಅಧ್ಯಯನ ಎಂಬ ಗ್ರಂಥದಿಂದ ಅರಿಯಲಾಗಿದೆ.

೭೪. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨೬, ಮಾದಿನೂರು (ಕೊ.ತಾ.), ಕ್ರಿ.ಶ. ೧೧೩೬, ಪು-೩೨-೩೬, ಹಂಪಿ.

೭೫. ಅದೇ, ನಂ-೬, ಯಲಬುರ್ಗಿ (ಯ.ತಾ.), ಕ್ರಿ.ಶ. ೧೩ ನೆ.ಶ, ಪು-೧೬೨.

೭೬. ಅದೇ, ನಂ-೯೬, ಕೊಪ್ಪಳ (ಕೊ.ತಾ.), ಕ್ರಿ.ಶ.೧೦೧೯, ಪು-೮೪.

೭೭. ಅದೇ, ನಂ-೪೪, ಕುಕನೂರು (ಯ.ತಾ.), ಕ್ರಿ.ಶ. ೧೧ ನೇ.ಶ., ಪು-೨೧೬.

೭೮. ಅದೇ, ನಂ-೬೯, ಇಟಗಿ (ಯ.ತಾ.), ಕ್ರಿ.ಶ. ೧೧೮೩, ಪು-೨೬೯.

೭೯. ಅದೇ, ನಂ-೧೩, ಪುರ (ಕು.ತಾ.), ಕ್ರಿ.ಶ. ೧೨ ನೇ.ಶ., ಪು - ೨೮೮.

೮೦. ಅದೇ, ನಂ-೧೩೬, ಹ್ಯಾಟಿ (ಕೊ.ತಾ.), ಕ್ರಿ.ಶ. ೧೨ ನೇ.ಶ., ಪು- ೧೩೬.

೮೧. ಅದೇ, ನಂ-೧೪೮, ಹುಲಗಿ (ಕೊ.ತಾ.), ಕ್ರಿ.ಶ. ೧೦೮೮, ಪು- ೧೪೫.

೮೨. ಅದೇ, ನಂ-೬೭, ಇಟಗಿ (ಯ.ತಾ.), ಕ್ರಿ.ಶ. ೧೧೦೮, ಪು-೨೫೯.

೮೩. ಅದೇ, ನಂ-೬೨, ಕನ್ನೇರಮಡು ( ಗ.ತಾ.), ಪು-೩೮೦.

೮೪. ಅದೇ, ನಂ-೧೩, ಪುರ (ಕು.ತಾ.), ಕ್ರಿ.ಶ. ೧೨ ನೆ. ಶ. ಪು- ೨೮೮.

೮೫. ಅದೇ, ನಂ-೬, ಆಳವಂಡಿ (ಕೊ.ತಾ.), ಕ್ರಿ.ಶ. ೧೦೬೧, ಪ -೧೨.

೮೬. ಅದೇ, ನಂ-೪೯, ಕುಕನೂರು (ಯ.ತಾ.), ಪು-೨೨೨.

೮೭. ಅದೇ, ನಂ-೨೭, ಅಂಟೂರಠಾಣಾ (ಕು.ತಾ.), ಕ್ರಿ.ಶ. ೧೦೮೨, ಪು-೩೦೬.

೮೮. ಅದೇ, ನಂ-೧೭, ೧೫, ಕಲ್ಲೂರು (ಯ.ತಾ.), ಕ್ರಿ.ಶ. ೧೧೯೮, ೧೧೨೫, ೧೧೫೦, ೧೧೨೯, ಪು-೧೭೧-೧೭೭.

೮೯. ಅದೇ, ನಂ-೪೫, ಕುಕನೂರು (ಯ.ತಾ.), ಪು - ೨೧೬.

೯೦. ಅದೇ, ನಂ-೩೦, ಮುಧೋಳು (ಯ.ತಾ.), ಕ್ರಿ.ಶ. ೮೯೭, ಪು- ೧೮೯,

೯೧. ಅದೇ, ನಂ-೧೮, ಆನೆಗುಂದಿ ಮತ್ತು ಕೂಕ್ಕನೂರು ಶಾಸನ (ಗ.ತಾ.),(ಯ.ತಾ.), ಕ್ರಿ.ಶ. ಸು. ೧೩ ನೆ.ಶ., ಪು-೩೩೩.

೯೨. ನಾರಾಯಣ, ಪಿ.ವ್ಹಿ., ೧೯೮೩., ವಚನ ಸಾ. ಒ.ಸಾಂ.ಅ, ಪು - ೬೬ ರಿಂದ ೭೨, ಗದಗ.

೯೩. ಅದೇ, ಪು-೬೬.

೯೪. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨, ವಿಪ್ರ (ಗ.ತಾ.), ಕ್ರಿ.ಶ. ೧೦೫೯, ಪು- ೩೧೫.

೯೫. ಅದೇ, ನಂ-೨೧, ಚಳಗೇರಿ (ಕು.ತಾ.), ಕ್ರಿ.ಶ. ೧೧೭೨, ಪು- ೨೯.

೯೬. ಅದೇ, ನಂ-೨೭, ಅಂಟೂರಠಾಣಾ (ಕು.ತಾ.), ಕ್ರಿ.ಶ. ೧೦೮೨, ಪು- ೩೦೬.

೯೭. ಅದೇ, ನಂ-೫-೬, ಅಳವಂಡಿ (ಕೊ.ತಾ.), ಕ್ರಿ.ಶ. ೧೦೬೧ , ಪ -೧೨, ೧೩.
೯೮. ಅದೇ, ನಂ-೧೮, ಆನೆಗುಂದಿ (ಗ.ತಾ.), ಕ್ರಿ.ಶ. ೧೩. ನೆ.ಶ., ಪು - ೩೨೩.
೯೯. ಅದೇ, ನಂ-೧೦೧, ಹನುಮನಾಳ (ಕು.ತಾ.), ಕ್ರಿ.ಶ. ೧೧೯೯, ಪು- ೩೦೩.
೧೦೦. ಅದೇ, ನಂ-೨೭, ಅಂಟೂರಠಾಣಾ (ಕು.ತಾ.), ಕ್ರಿ.ಶ. ೧೦೮೨, ಪು - ೩೦೭.
೧೦೧. ಅದೇ, ನಂ-೨೧, ಚಳಗೇರಿ, (ಕು.ತಾ.), ಕ್ರಿ.ಶ. ೧೧೭೨, ಪು- ೨೯೮.
೧೦೨. ಅದೇ, ನಂ-೬, ಅಳವಂಡಿ ( ಕೊ.ತಾ.), ಕ್ರಿ.ಶ. - ೧೦೬೧, ೧೩.
೧೦೩. ಅದೇ, ನಂ-೬, ಅಳವಂಡಿ (ಕೊ.ತಾ.), ಕ್ರಿ.ಶ. ೧೦೬೧, ಪು - ೧೩.
೧೦೪. ಅದೇ, ನಂ-೩೮, ಕುಕನೂರು (ಯ.ತಾ.), ಕ್ರಿ.ಶ. ೧೧೦೭, ಪು - ೨೦೦.
೧೦೫. ಮಲ್ಲಾಪೂರ, ಜಿ. ಫ್ಟಿ ., ೧೯೭೮, ನಯಶೇನ ಮತ್ತು ಆತನ ಕೃತಿಗಳು, ಪುಟ - ೨೮೭, ಧಾರವಾಡ, ಕ.ವಿ.ವಿ.
೧೦೬. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೧೮, ಆನೆಗುಂದಿ (ಗ.ತಾ.), ಕ್ರಿ.ಶ.ಸು. ೧೩. ನೆ.ಶ.ಪು-೩೩೩.
೧೦೭. ಅದೇ, ನಂ-೧೩, ಪುರ (ಕು.ತಾ.), ಕ್ರಿ.ಶ. ೧೨ ನೆ ಶ.ಪು- ೨೯೦.
೧೦೮. ಅದೇ, ನಂ-೧೩೫, ಗೊಂಡಬಾಳು (ಕೊ.ತಾ.), ಪು - ೧೩೨.
೧೦೯ ಅದೇ, ನಂ-೨೭, ಅಂಟೂರ ಠಾಣಾ (ಕು.ತಾ.), ಕ್ರಿ.ಶ. ೧೦೮೨, ಪು-೩೦೭.
೧೧೦. ಮಲ್ಲಾಪೂರ, ಜಿ. ಫ್ಟಿ., ೧೯೭೮, ನಯಶೇನ ಮತ್ತು ಆತನ ಕೃತಿಗಳು, ಪು-೨೮೬, ಧಾರವಾಡ, ಕ.ವಿ.ವಿ.
೧೧೧. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨೭, ಅಂಟೂರಠಾಣಾ (ಕ.ತಾ.), ಕ್ರಿ.ಶ. ೧೦೮೨, ಪು-೩೦೭.
೧೧೨. ಪಾಂಡೆ, ಬಿ. ಆರ್., ಹಿಂದು ಸಂಸ್ಕಾರಗಳು ಶಿವರುದ್ರಪ್ಪಾ; ಎ. ಎಲ್. (ಅನು) ಯ.ಭಾ. ಸಂ. ಸಂ.೨ ಪು-೩.೦೧.
೧೧೩. ಅಲ್ತೇಕರ, ಎ. ಎಸ್., ವೇದಕಾಲದ ಸಮಾಜ, ಯು.ಭಾ.ಸ. ಸಂ. ೧, ಪು-೧೬೭.
೧೧೪. ನಾಗೇಗೌಡ, ಎಚ್. ಎಲ್., ೧೯೬೯, ಪ್ರವಾಸಿ ಕಂಡ ಇಂಡಿಯಾ, ಸಂ-೧, ಪು-೧೬೭, ಮೈಸೂರ.
೧೧೫. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೩೨, ಮುಧೋಳು (ಯ.ತಾ.), ಕ್ರಿ.ಶ. ೧೧ ನೆ. ಶ. ಪು-೧೯೦, ಹಂಪಿ.
೧೧೬. ಅದೇ, ನಂ-೩೮, ಕುಕನೂರು (ಯ.ತಾ), ಕ್ರಿ.ಶ. ೧೧೦೭, ೨೭, ೩೨, ೫೭, ಪು-೧೯೭.
೧೧೭. ಅದೇ, ನಂ-೧, ಕವಲೂರು (ಕೊ.ತಾ), ಕ್ರಿ.ಶ. ೧೧೯೭, ಪು-೧.
೧೧೮. ಅದೇ, ನಂ-೨., ಕವಲೂರು (ಕೊ.ತಾ), ಕ್ರಿ.ಶ. ೧೧೭೭-೭೮-೭೯-೮೬, ಪು-೫.
೧೧೯. ಅದೇ, ನಂ-೨೯, ಬಳಗೇರಿ (ಯ.ತಾ), ಪು-೧೯೪.

೧೨೦. ಅದೇ, ನಂ-೧೮, ಆನೆಗುಂದಿ (ಗ.ತಾ.), ಕ್ರಿ.ಶ. ೧೩. ನೆ. ಶ. ಪು-೩೩೩ ರಿಂದ ೩೩೪.

೧೨೧. ನಾಗೇಗೌಡ, ಎಚ್. ಎಲ್., ೧೯೬೯, ಪ್ರವಾಸಿ ಕಂಡ ಇಂಡಿಯಾ ಸಂ-೧, ಮೈಸೂರ, ಪು-೩೮೫. ಅದೇ, ಬ್ರಾಹ್ಮಣನು ನಾಲ್ವರನ್ನು ಕ್ಷತ್ರಿಯ ಮೂರುಜನರನ್ನು, ವೈಶ್ಯ ಇಬ್ಬರನ್ನು ಶೂದ್ರ ಒಬ್ಬಳನ್ನು ಮದುವೆ ಆಗಬಹುದೆಂದು ಅಲ್ಬೆರೂನಿ ಗುರುತ್ತಿಸಿದ್ದಾನೆ.

೧೨೨. ಚನ್ನಕ್ಕ ಎಲಿಗಾರ., ೧೯೯೦, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು-೨೪, ಧಾರವಾಡ.

೧೨೩. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨, ಕವಲೂರು (ಕೊ.ತಾ) ಕ್ರಿ.ಶ.೧೧೭೭, ಪು-೫, ಹಂಪಿ.

೧೨೪. ಬಿ.ಸಿ. ಪಾಟೀಲ., ೧೯೯೮, ''ಮಾದಿನೂರು ನೆನಹು'' ಪು-೧೭, ಮಾದಿನೂರ.

೧೨೫. ಜಿ.೦. ನಾಗಯ್ಯ., ೧೯೯೨, ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಪು.೩೬ ರಿಂದ ೪೦, ಬೆಳಗಾವಿ.

೧೨೬. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೬೭, ಇಟಗಿ (ಯ.ತಾ.), ಕ್ರಿ.ಶ. ೧೧೦೮, ೧೨, ೧೩, ಪು-೨೫೯, ಹಂಪಿ.

೧೨೭. ಅದೇ, ನಂ-೧೭, ಕಲ್ಲೂರ (ಯ.ತಾ.), ಕ್ರಿ.ಶ. ೧೯೦೮, ೧೧೨೫, ೫೪, ಪು-೧೭೪-೭೭. ಮತ್ತು ಅದೇ, ಕಲ್ಲೂರ-೧೩., ಕ್ರಿ.ಶ. ೧೧೮೫, ಪು-೧೬೮.

೧೨೮. ಚಿದಾನಂದಮೂರ್ತಿ, ಎಂ., ೧೯೬೬, ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ, ಮೈಸೂರ, ''ನಾಗದೇವನು ಅತ್ತಿ ಮಬ್ಬೆ ಮತ್ತು ಗುಂಡ ಮಬ್ಬೆ ಎಂಬ ಸಹೋದರಿಯರನ್ನು ಒಂದೇ ಹಸಿಯ ಮಣೆಯಮೇಲೆ ಪೊಲೆಯಮ್ಮ ಎನ್ನುವವನು ಮದುವೆಮಾಡಿಕೊಂಡಿದ್ದನ್ನು ಕಾಣುತ್ತೇವೆ.''

೧೨೯. ಕಲ್ಲುಡಿ ಬಸವರಾಜ., ೧೯೮೫, ಮಹಾಸತಿ ಆಚರಣೆ ಒಂದು ಅಧ್ಯಯನ, ಪು.೧೭೧ ಮತ್ತು ಪುಟ-೧೮೯, ಬೆಂಗಳೂರ, ವಿ.ವಿ.

೧೩.೦. ಅದೇ, ಪು-೧೮೯.

೧೩.೧. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೯೮, ಕೊಪ್ಪಳ (ಕೊ.ತಾ.), ಕ್ರಿ.ಶ. ೯೭೬ ಪು-೮೭, ಹಂಪಿ.

೧೩.೨. ಚನ್ನಬಸವಯ್ಯ ಹಿರೇಮಠ., ೧೯೮೫, ಕೂರಗೂಡಿನ ಸಿಂದರು, ಪು-೧೯೦, ಕೊಪ್ಪಳ.

೧೩.೩. ಚನ್ನಕ್ಕ ಎಲಿಗಾರ., ೧೯೯೦, ಶಾ.ಕ.ಸ್ತ್ರೀ ಸಮಾಜ, ಪು-೩೬, ಧಾರವಾಡ.

೧೩.೪. ಅದೇ, ಪು-೨೬.

೧೩.೫. ಅದೇ, ಪು-೨೬.

೧೩.೬. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೯೮, ಕೊಪ್ಪಳ (ಕೊ.ತಾ.), ಕ್ರಿ.ಶ. ೯೭೬, ಪು-೮೭, ಹಂಪಿ.

೧೩೭. ಅದೇ, ನಂ-೧೦೩., ಕೊಪ್ಪಳ (ಕೊ.ತಾ.), ಕ್ರಿ.ಶ. ೯೭೭, ಪು-೯೪.

೧೩೮. ಅದೇ, ನಂ-೯೩., ಕೊಪ್ಪಳ (ಕೊ.ತಾ.), ಕ್ರಿ.ಶ. ೯೯೦, ಪು-೮೦.

೧೩೯. ಅದೇ, ನಂ-೧೧೯, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೦೦, ಪು-೧೧೪.

೧೪೦. ಅದೇ, ನಂ-೧೧೩., ಕೊಪ್ಪಳ (ಕೊ.ತಾ.), ಕ್ರಿ.ಶ. ೯೯೨, ಪು-೧೦೯.

೧೪೧. ಅದೇ, ನಂ-೯೯, ಕೊಪ್ಪಳ (ಕೊ.ತಾ.), ಕ್ರಿ.ಶ. ೯೯೮, ಪು-೮೮.

೧೪೨. ಅದೇ, ನಂ-೧೧೫, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೦೧, ಪು-೧೧೧.

೧೪೩. ಅದೇ, ನಂ-೧೦೮, ಕೊಪ್ಪಳ (ಕೊ.ತಾ.), ಕ್ರಿ.ಶ. ೧೧ ನೆ ಶತಮಾನ, ಪು-೧೦೩.

೧೪೪. ಅದೇ, ನಂ-೧೧೨, ಕೊಪ್ಪಳ (ಕೊ.ತಾ.), ಪು-೧೦೮.

೧೪೫. ಅದೇ, ನಂ-೪೧, ಕುಕನೂರು (ಯ.ತಾ.), ಕ್ರಿ.ಶ. ೧೧೭೦ ಪು-೨೦೯.

೧೪೬. ಅದೇ, ನಂ-೫೨, ಕುಕನೂರು ೫೨ (ಯ.ತಾ.), ಕ್ರಿ.ಶ. ೧೧೭೮ ಪು-೨೨೯.

೨೪೭. ಅದೇ, ನಂ-೬೭, ಇಟಗಿ (ಯ.ತಾ), ಕ್ರಿ.ಶ. ೧೧೦೮, ೧೨, ೧೩., ಪು-೨೫೯.

೧೪೮. ಅದೇ, ನಂ-೩., ಗೋತಗಿ (ಕು.ತಾ), ಕ್ರಿ.ಶ. ೧೦೨೪ ಪು-೨೭೯.

೧೪೯. ಅದೇ, ನಂ-೧೩., ಪುರ (ಕು.ತಾ.), ಕ್ರಿ.ಶ. ೧೨ ನೇ ಶತಮಾನ, ಪು-೨೮೮.

೧೫೦. ಅದೇ, ನಂ-೨೧, ಚಳಗೇರಿ (ಕು.ತಾ.), ಕ್ರಿ.ಶ. ೧೧೧೭೨, ಪು-೨೯೮.

೧೫೧. ನಾರಾಯಣ, ಪಿ.ವ್ಹಿ., ೧೯೮೩., ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು-೮೭ ರಿಂದ ೯೦, ಗದಗ.

೧೫೨. ಅದೇ, ಪು-೮೮.

೧೫೩. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨೬, ಮಾದಿನೂರು (ಕೊ.ತಾ.), ಕ್ರಿ.ಶ. ೧೧೩೬, ೧೧೯೦ ಪು-೩೩, ಹಂಪಿ.

೧೫೪. ಅದೇ, ನಂ-೧, ಕವಲೂರು (ಕೊ.ತಾ.)ಕ್ರಿ.ಶ. ೧೦೯೭ ಪು-೧.

೧೫೫. ಅದೇ, ನಂ-೩೨, ಮುಧೋಳ (ಯ.ತಾ.), ಕ್ರಿ.ಶ. ೧೧ ನೆ ಶ. ಪು-೧೯೦.

೧೫೬. ಅದೇ, ನಂ-೬೭, ಇಟಗಿ (ಯ.ತಾ.), ಕ್ರಿ.ಶ. ೧೧೦೮, ೧೨, ೧೩., ಪು-೨೬೦.

೧೫೭. ಅದೇ, ನಂ-೩೮, ಕುಕನೂರು (ಯ.ತಾ.), ಕ್ರಿ.ಶ. ೧೧೦೭, ಪು-೧೯೯.

೧೫೮. ಅದೇ, ನಂ-೨೦, ಚಳಗೇರಿ (ಕು.ತಾ.), ಕ್ರಿ.ಶ. ೧೧೭೨, ಪು- ೯೮.

೧೫೯. ಅದೇ, ನಂ-೩., ಕವಲೂರು (ಕೊ.ತಾ.), ಕ್ರಿ.ಶ. ೧೧೭೪,೭೭,೭೮,೭೯,೮೬, ಪು-೬.

೧೬೦. ಅದೇ, ನಂ-೫೨, ಕುಕನೂರು (ಯ.ತಾ.), ಕ್ರಿ.ಶ. ೧೧೭೮, ಪು-೨೨೯.

೧೬೧. ಶ್ರೀಕಂಠಶಾಸ್ತ್ರೀ., ೧೯೭೫, ಭಾರತೀಯ ಸಂಸ್ಕೃತಿ, ಪು-೨೦೪, ಧಾರವಾಡ.

೧೬೨. ಅದೇ, ಪು-೨೦೪.

೧೬೩.. ಚನ್ನಕ್ಕ ಎಲಿಗಾರ., ೧೯೯೦, ಶಾ.ಕ. ಸ್ತ್ರೀ ಸಮಾಜ, ಪು - ೪೭, ಧಾರವಾಡ.

೧೬೪. ಕೊಪ್ಪಾ, ಎಸ್. ಕೆ., ೧೯೯೦, ತ.ನಾ. ಒಂ. ಆ, ಪು-೧೬೬, ಇಂಡಿ.

೧೬೫. ಚನ್ನಕ್ಕ ಎಲಿಗಾರ., ೧೯೯೦, ಶಾ. ಕ. ಸ್ತ್ರೀ. ಸ. ಪು-೪೮, ಧಾರವಾಡ.

೧೬೬. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨, ಪಿಪ್ರ (ಗ.ತಾ.), ಕ್ರಿ.ಶ. ೧೦೫೯, ಪು -೩೧೫, ಹಂಪಿ.

೧೬೭. ಅದೇ, ನಂ-೬, ಅಳವಂಡಿ (ಕೊ.ತಾ.), ಕ್ರಿ.ಶ. ೧೦೬೧, ಪು- ೧೨.

೧೬೮. ಅದೇ, ನಂ-೨, ಹೆಸರೂರು (ಕು.ತಾ.), ಕ್ರಿ.ಶ. ೧೧೦೪, ಪು-೨೭೭.

೧೬೯. ಅದೇ, ನಂ-೧೩., ೧೫, ಕಲ್ಲೂರ, (ಯ.ತಾ), ಕ್ರಿ. ಶ. ೧೧೮೫, ಪು-೧೬೭, ಮತ್ತು ೧೭೧.

೧೭೦. ಅದೇ, ನಂ-೨, ಕುಕನೂರು - ೩೮,೪೧ (ಯ.ತಾ.), ಕ್ರಿ.ಶ. ೧೧೦೭, ಪು-೨೦೦.

೧೭೧. ಅದೇ, ನಂ-೨೯, ಮುಧೋಳ (ಯ.ತಾ.), ಕ್ರಿ.ಶ. ೧೧೫೪, ಪು-೧೮೪.

೧೭೨. ಅದೇ, ನಂ-೮, ಅಳವಂಡಿ (ಕೊ.ತಾ.), ಕ್ರಿ.ಶ. ೧೧೫೭, ಪು- ೧೬.

೧೭೩.. ಅದೇ, ನಂ-೨೭, ಅಂಟೂರರಾಣಾ (ಕು.ತಾ.), ಕ್ರಿ.ಶ. ೧೦೮೨, ಪು-೩೦೬.

೧೭೪. ಅದೇ, ನಂ-೨೦, ಚಳಗೇರಿ (ಕು.ತಾ.), ಕ್ರಿ.ಶ. ೧೧೭೨, ಪು-೨೯೭.

೧೭೫. ಅದೇ, ನಂ-೩., ಕವಲೂರು (ಕೊ.ತಾ.), ಕ್ರಿ.ಶ. ೧೧೭೭, ೨೯, ೮೦, ೮೬, ಪು - ೪.

೧೭೬. ಅದೇ, ನಂ-೧೩., ಪುರ (ಕು.ತಾ.), ಕ್ರಿ.ಶ. ೧೨ ನೆ.ಶ. ಪು-೨೯೦.

೧೭೭. ಅದೇ, ನಂ-೨೬, ಮಾದಿನೂರು (ಕೊ.ತಾ.), ಕ್ರಿ.ಶ. ೧೧೩.೨, ೧೯೯೦, ಪು- ೩೦.

೧೭೮. ಅದೇ, ನಂ-೬೭, ಇಟಗಿ (ಯ.ತಾ.), ಕ್ರಿ.ಶ. ೧೧೦೮, ೧೨, ೧೩., ಪು-೨೫೯.

೧೭೯. ಅದೇ, ನಂ-೩., ಕವಲೂರು (ಕೊ.ತಾ.), ಕ್ರಿ.ಶ. - ೧೧೭೭, ೭೯, ೮೦, ೮೬, ಪು- ೬

೧೮೦. ಅದೇ, ನಂ-೨೬, ಮಾದಿನೂರು (ಕೊ.ತಾ), ಪು- ೩೧-೩೨.

೧೮೧. ಚೆನ್ನಕ್ಕ ಎಲಿಗಾರ., ೧೯೯೦, ಶಾ.ಕ.ಸ್ತ್ರೀ. ಸ. ಪು-೫೫- ೫೬, ಧಾರವಾಡ.

೧೮೨. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೩., ಕವಲೂರು (ಕೊ.ತಾ.), ಕ್ರಿ.ಶ. ೧೧೭೪, ೭೭, ೭೮, ೭೯, ೮೦, ೮೬, ಪು-೫, ಹಂಪಿ.

೧೮೩.. ಅದೇ, ನಂ-೧೩., ಕಲ್ಲೂರ (ಯ.ತಾ.), ಕ್ರಿ.ಶ. ೧೧೮೫ , ಪು -೧೬೮.

೧೮೪. ಅದೇ, ನಂ-೧೭, ಕಲ್ಲೂರ (ಯ.ತಾ.), ಕ್ರಿ.ಶ. ೧೦೯೮, ೧೧೨೫, ೫೪, ಪು- ೧೭೪.

೧೮೫. ಚೆನ್ನಕ್ಕ ಎಲಿಗಾರ., ೧೯೯೦, ಶಾ.ಕ.ಸ.ಕ.ಸ್ತ್ರೀ.ಸ. ಪು-೫೬, ಧಾರವಾಡ.

೧೮೬. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೪೧, ಕುಕನೂರ (ಯ.ತಾ.), ಕ್ರಿ.ಶ. ೧೧೭೦ ಪು-೨೧೦, ಹಂಪಿ.

೧೮೭. ಅದೇ, ನಂ-೧೩., ಪುರ (ಕು.ತಾ), ಕ್ರಿ.ಶ. ೧೨ ನೇ.ಶ. ಪು-೨೮೯.

೧೮೮. ಚೆನ್ನಕ್ಕ ಎಲಿಗಾರ., ೧೯೯೦, ಶಾ.ಕ.ಸ್ತ್ರೀ.ಸ. ಪು-೬೦, ಧಾರವಾಡ.

೧೮೯. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೬೭, ಇಟಗಿ (ಯ.ತಾ.) ಕ್ರಿ.ಶ. ೧೧೦೮ ೧೨, ೧೩., ಪು-೨೫೯.

೧೯೦. ಚೆನ್ನಕ್ಕ ಎಲಿಗಾರ., ೧೯೯೦, ಶಾ.ಕ.ಸ್ತ್ರೀ.ಸ, ಪು-೬೨, ಧಾರವಾಡ.

೧೯೧. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೩೮, ಕುಕನೂರು (ಯ.ತಾ.), ಕ್ರಿ.ಶ. ೧೧೨೭, ೩೨, ೫೭, ಪು-೨೦೦.

೧೯೨. ಚೆನ್ನಕ್ಕ ಎಲಿಗಾರ., ೧೯೯೦, ಶಾ.ಕ.ಸ್ತ್ರೀ.ಸ, ಪು-೬೨, ಧಾರವಾಡ.

೧೯೩. ದೇಸಾಯಿ, ಪಿ.ಬಿ., ೧೯೫೬, ಶಾಸನ ಪರಿಚಯ, ನಂ.೫೨, ಕುಕನೂರ, (ಯ.ತಾ.), ಕ್ರಿ.ಶ. ೧೧೭೮, ಪು-೨೩೫, ಧಾರವಾಡ.

೧೯೪. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨, ಏಪ್ರ, (ಗ.ತಾ.) ಕ್ರಿ.ಶ.೧೦೫೯, ಪು-೩೧೫, ಹಂಪಿ.

೧೯೫. ಚೆನ್ನಕ್ಕ ಎಲಿಗಾರ., ೧೯೯೦, ಶಾ.ಕ.ಸ್ತ್ರೀ.ಸ, ಪು-೭೪, ಧಾರವಾಡ.

೧೯೬. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೬, ಅಳವಂಡಿ (ಕೊ.ತಾ.), ಕ್ರಿ.ಶ. ೧೦೬೧, ಪು-೧೩.

೧೯೭. ಅದೇ, ನಂ-೧೪೮, ಹುಲಗಿ, (ಕೊ.ತಾ.), ಕ್ರಿ.ಶ. ೧೦೮೮, ಪು-೧೪೫.

೧೯೮. ಚೆನ್ನಕ್ಕ ಎಲಿಗಾರ., ೧೯೯೦, ಶಾ.ಕ.ಸ್ತ್ರೀ.ಸ, ಪು-೬೭, ಧಾರವಾಡ.

೧೯೯. ಅದೇ, ನಂ-೩., ಕವಲೂರ (ಕೊ.ತಾ.), ಕ್ರಿ.ಶ. ೧೧೭೭, ೮೬, ಪು-೧೦.

೨೦೦. ಚೆನ್ನಕ್ಕ ಎಲಿಗಾರ., ೧೯೯೦, ಶಾ.ಕ.ಸ್ತ್ರೀ.ಸ, ಪು-೭೩., ಧಾರವಾಡ.

೨೦೧. ಅದೇ, ನಂ-೨, ಏಪ್ರ, (ಗ.ತಾ.), ಕ್ರಿ.ಶ. ೧೦೫೯, ಪು-೩೧೫.

೨೦೨. ಅದೇ, ನಂ-೨, ಕುಕನೂರ (ಯ.ತಾ.), ಕ್ರಿ.ಶ. ೧೧೭೮, ಪು-೨೫೫.

೨೦೩.. ನಾರಾಯಣ, ಪಿ.ವ್ಹಿ., ೧೯೮೩., ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು-೯೮-೧೦೨, ಗದಗ.

೨೦೪. ಕೊಪ್ಪಾ, ಎಸ್. ಕೆ., ೧೯೯೦, ತ.ಸಾ. ಒಂ.ಆ, ಪು - ೧೬೮, ಧಾರವಾಡ.

೨೦೫. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨೪, ಕೊಪ್ಪಳ (ಕೊ.ತಾ.), ಕ್ರಿ.ಶ.೮೮೨., ಪು-೪೦, ಹಂಪಿ.

೨೦೬. ಅದೇ, ನಂ-೬೫, ಇಟಗಿ (ಯ.ತಾ.), ಕ್ರಿ.ಶ. ೯೩೯, ಪು-೨೫೭.

೨೦೭. ಅದೇ, ನಂ-೫೬, ಕುಕನೂರು (ಯ.ತಾ.), ಕ್ರಿ.ಶ. ೯೬೮, ಪು-೨೩೮.

೨೦೮. ಅದೇ, ನಂ-೨೬, ಮಾದಿನೂರು (ಕೊ.ತಾ.), ಕ್ರಿ.ಶ. ೯೭೩., ೧೧೩೬, ಪು- ೩೧.

೨೦೯. ಅದೇ, ಕೊಪ್ಪಳ ಶಾಸನಗಳಲ್ಲಿ ಅನೇಕ ಉಲ್ಲೇಖಗಳು ಕಂಡುಬಂದಿವೆ.

೨೧೦. ಅದೇ, ನಂ-೧೦, ಕಲ್ಲೂರ (ಯ.ತಾ.), ಕ್ರಿ.ಶ.೧೦೦೨, ಪು-೧೬೪, ಅದೇ ರೀತಿ ೧೨,೧೩,೧೪,೧೫,೧೬,೧೭ ನೆಯ ಶಾಸನಗಳಲ್ಲಿ ಇಂತಹ ಉಲ್ಲೇಖಗಳಿವೆ, ಪು-೧೬೪ ರಿಂದ ೧೭೪.

೨೧೧. ಅದೇ, ನಂ-೫೦, ೫೨ ಕುಕನೂರು ( ಯ.ತಾ.), ಕ್ರಿ.ಶ.೧೦೦೫, ೧೧೭೮, ಪು - ೨೨೪, ೨೨೮.
೨೧೨. ಅದೇ, ನಂ-೬೨, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೦೮, ಪು-೫೬.
೨೧೩. ಅದೇ, ನಂ-೧೮, ಪುರ (ಕು.ತಾ.), ಕ್ರಿ.ಶ. ೧೦೧೮, ಪು-೨೯೬.
೨೧೪. ಅದೇ, ನಂ-೩೪, ಗೂತಗಿ, (ಕು.ತಾ.), ಕ್ರಿ.ಶ. ೧೦೨೪, ೧೦೪೫, ಪು-೭೯, ೮೦ .
೨೧೫. ಅದೇ, ನಂ-೯೭, ಕೊಪ್ಪಳ (ಕೊ.ತಾ.), ಕ್ರಿ. ಶ. ೧೦೨೮, ಪು-೮೫.
೨೧೬. ಅದೇ, ನಂ-, ಏಪ್ರ-೨, (ಗ.ತಾ.), ಕ್ರಿ.ಶ. ೧೦೫೯, ಪು-೩.೧೪.
೨೧೭. ಅದೇ, ನಂ-೬, ಅಳವಂಡಿ (ಕೊ.ತಾ.), ಕ್ರಿ.ಶ. ೧೦೬೧, ಪು-೧೨.
೨೧೮. ಅದೇ, ನಂ-೨೭, ಅಂಟೂರಠಾಣ (ಕು.ತಾ.), ಕ್ರಿ.ಶ. ೧೦೮೨, ಪು-೩೦೬.
೨೧೯. ಅದೇ, ನಂ-೬, ಅಳವಂಡಿ (ಕೊ. ತಾ.), ಕ್ರಿ.ಶ. ೧೦೬೧ ಪು-೧೨.
೨೨೦. ಅದೇ, ನಂ-೧೪೮, ಹುಲಗಿ (ಕೊ. ತಾ.), ಕ್ರಿ.ಶ. ೧೦೮೮, ಪು-೧೪೫.
೨೨೧. ಅದೇ, ನಂ-೧೮, ಪುರ (ಕು.ತಾ), ಕ್ರಿ.ಶ. ೧೦೧೮ ಪು-೨೯೬.
೨೨೨. ಅದೇ, ನಂ-೨, ಏಪ್ರ (ಗ.ತಾ.), ಕ್ರಿ.ಶ. ೧೦೫೯ ಪು-೩.೧೪.
೨೨೩. ಕೊಪ್ಪಾ, ಎಸ್. ಕೆ., ೧೯೯೦, ತ.ನಾ. ಒ. ಅ, ಪು. ೧೭೦, ಇಂಡಿ.
೨೨೪. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೧೨೨, ಕೊಪ್ಪಳ (ಕೊ. ತಾ.), ಕ್ರಿ.ಶ. ೧೦೧೦ ಪು-೫೬.
೨೨೫. ಅದೇ, ನಂ-೬೨, ಕೊಪ್ಪಳ (ಕೊ. ತಾ), ಕ್ರಿ.ಶ. ೧೦೦೮ ಪು-೫೬.
೨೨೬. ಅದೇ, ನಂ-೧೧೫, ಕೊಪ್ಪಳ (ಕೊ. ತಾ), ಕ್ರಿ.ಶ. ೧೦೦೧ ಪು-೫೬.
೨೨೭. ಅದೇ, ನಂ-೧೧೨, ಕೊಪ್ಪಳ (ಕೊ. ತಾ), ಕ್ರಿ.ಶ. ಪು-೧೦೮.
೨೨೮. ಅದೇ, ನಂ-೯೭, ಕೊಪ್ಪಳ (ಕೊ. ತಾ), ಕ್ರಿ.ಶ೧೦೨೮ ಪು-೮೫.
೨೨೯. ಕೊಪ್ಪಾ, ಎಸ್. ಕೆ., ೧೯೯೦, ತ.ನಾ. ಒ. ಅ, ಪು-೧೭೦, ೭೧, ಇಂಡಿ.
೨೩೦. ಚಿದಾನಂದ ಮೂರ್ತಿ, ಎಂ., ೧೯೭೯, ಕ.ಶಾ.ಸಾಂ.ಅ, ಮೈಸೂರ.
೨೩೧. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೬೭, ಇಟಗಿ (ಯತಾ), ಕ್ರಿ.ಶ. ೧೧೦೮, ೧೨, ೧೩, ೨೬೦, ಹಂಪಿ.
೨೩೨. ಅದೇ, ನಂ-೨೬, ಮಾದಿನೂರು (ಕೊ.ತಾ.), ಕ್ರಿ.ಶ. ೧೧೧೩.೬, ೧೧೯೦ ಪು-೩೨.
೨೩೩. ಅದೇ, ನಂ-೩.೮, ಕುಕನೂರು (ಯ.ತಾ.), ಕಿ.ಶ. ೧೧೦೭, ೨೭, ೩೨, ೫೭ ಪು-೧೯೮.
೨೩೪. ಅದೇ, ನಂ-೧೨., ಪುರ (ಕು.ತಾ.), ಕಿ.ಶ. ೧೨ ನೆ.ಶ. ಪು-೨೮೯.
೨೩೫. ಭಟ್ಟಾಚಾರ್ಯ ದಿನೇಶಚಂದ್ರ., ಪ್ರಾಯಶ್ಚಿತಗಳು ಮತ್ತು ವ್ರತಗಳು, ಯು.ಭಾ.ಸಂ-೨, ಪು -೨೮೨
೨೩೬. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೫೦, ಕುಕನೂರು (ಯ.ತಾ.), ಕ್ರಿ.ಶ. ೧೦೦೫, ಪು-೨೨೨.

೨೩೭. ಅದೇ, ನಂ-೬, ಅಳವಂಡಿ (ಕೊ.ತಾ.), ಕ್ರಿ.ಶ. ೧೦೬೧, ಪು-೧೨.

೨೩೮. ಅದೇ, ನಂ-೨೮, ಅಂಟೂರಠಾಣ (ಕು.ತಾ.), ಕ್ರಿ.ಶ. ೧೧೯೫, ಪು-೩೦೮.

೨೩೯. ಅದೇ, ನಂ-೧೭, ಕಲ್ಲೂರು (ಯ.ತಾ.), ಕ್ರಿ.ಶ. ೧೧೯೮, ೧೧೨೫, ೫೪, ಪು- ೧೭೪.

೨೪೦. ಅದೇ, ನಂ-೩, ಗೋತಗಿ (ಕು.ತಾ), ಕ್ರಿ.ಶ. ೧೦೨೪, ಪು-೨೭೯.

೨೪೧. ಅದೇ, ನಂ-೬೭, ಇಟಗಿ (ಯ.ತಾ.), ಕ್ರಿ.ಶ.೧೧೧೮, ೧೨,೧೩., ಪು-೨೫೯.

೨೪೨. ಅದೇ, ನಂ-೫೨., ಕುಕನೂರು (ಯ.ತಾ.), ಕ್ರಿ.ಶ. ೧೧೨೯, ಪು-೨೩೬.

೨೪೩. ಅದೇ, ನಂ-೧೪, ೧೭ ಪುರ (ಕು.ತಾ.), ಪು-೨೯೧ ಮತ್ತು ಕ್ರಿ.ಶ. ೧೫೪೭, ಪು-೨೯೪.

೨೪೪. ಅದೇ, ನಂ-೧, ವಿಪ್ರ (ಗ.ತಾ.), ಕ್ರಿ.ಶ. ೧೧೯೪, ಪು-೩.೧೩.

೨೪೫. ಅದೇ, ಹೆಚ್ಚಿನ ವಿವರಣೆಯನ್ನು ಈ ಪ್ರಬಂಧದ ಆರ್ಥಿಕ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

೨೪೬. ನಾಗೇಗೌಡ, ಎಚ್.ಎಲ್., ೧೯೬೨., ಪ್ರವಾಸಿ ಕಂಡ ಇಂಡಿಯಾ, ಸಂ-೧, ಪು - ೩೫೭-೩೯೧, ಮೈಸೂರು ವಿ.ವಿ.

೨೪೭. ದೇವರಕೊಂಡಾರೆಡ್ಡಿ.(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ, ಸಂಪುಟ - ೨, ಕೊಪ್ಪಳ ಜಿಲ್ಲೆ, ನಂ-೨೮, ಕೊಪ್ಪಳ (ಕೊ.ತಾ.), ಕ್ರಿ.ಶ. ಪುರ್ವ, ೩ನೆ ಶತಮಾನ, ಪು- ೩೭, ಹಂಪಿ.

೨೪೮. ಅದೇ, ನಂ-೨೬, ಮಾದಿನೂರ (ಕೊ.ತಾ.), ಕ್ರಿ.ಶ. ೧೧೩೬, ೧೧೯೦, ೯೭೩, ಪು-೩೨ ಮತ್ತು ಕ್ರಿ.ಶ. ೧೦೬೧ ರ ಅಳವಂಡಿ ಶಾಸನವು ಕೂಡಾ ಇದೇ ವಿಷಯವನ್ನು ತಿಳಿಸುವದು (ಪು-೧೨).

೨೪೯. ಅದೇ, ನಂ-೧೪೮, ಹುಲಗಿ ( ಕೊ.ತಾ.), ಕ್ರಿ.ಶ. ೧೦೮೮, ಪು - ೧೪೫.

೨೫೦. ಅದೇ, ನಂ-೧, ಕವಲೂರು (ಕೊ.ತಾ.), ಕ್ರಿ.ಶ. ೧೧೯೭, ಪು-೧.

೨೫೧. ಅದೇ, ನಂ-೬೭, ಇಟಗಿ (ಯ.ತಾ.), ಕ್ರಿ.ಶ. ೧೧೦೮, ಪು-೨೫೯.

೨೫೨. ಅದೇ, ನಂ-೮, ಅಳವಂಡಿ (ಕೊ.ತಾ.), ಕ್ರಿ.ಶ. ೧೧೫೭, ೧೨೨೮, ಪು-೧೭.

೨೫೩. ಅದೇ, ನಂ-೨೧, ಚಳಗೇರಿ (ಕು.ತಾ.), ಕ್ರಿ.ಶ. ೧೧೭೨, ಪು-೨೯೭.

೨೫೪. ಅದೇ, ನಂ-೩೨, ಮುಧೋಳ (ಯ.ತಾ.), ಕ್ರಿ.ಶ. ೧೧ ನೇ.ಶ. . ಪು- ೧೯೦.

೨೫೫. ಅದೇ, ನಂ-೧, ಕವಲೂರು (ಕೊ.ತಾ.), ಕ್ರಿ.ಶ.೧೧೯೭, ಪು-೧.

೨೫೬. ಅದೇ, ನಂ-೧೪, ಪುರ (ಕು.ತಾ.), ಸು. ೧೦ ರಿಂದ ೧೧ ಶ. ಪು-೨೯೧.

೨೫೭. ಅದೇ, ನಂ-೬೨, ೩೪, ೧೨೩., ೩೫, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೦೮, ೮೮೩, ೧೧೦೦, ೧೨೦೦

೨೫೮. ಅದೇ, ನಂ-೧೧, ಉಪ್ಪಿನ ಬೆಟಗೇರಿ (ಕೊ.ತಾ.), ಕ್ರಿ.ಶ. ೯೬೪, ಪು -೨೨.

೨೫೯. ಅದೇ, ರಾಜೂರ, ಸಂಕನೂರ, ಅಂಟೂರಠಾಣಾ ಮುಂತಾದ ಶಾಸನಗಳು ಇದರ ಕುರಿತು ಉಲ್ಲೇಖಿಸಿರುವದನ್ನು ಕಾಣುತ್ತೇವೆ.

೨೬೦. Appadorai. A.. 1936. *Economic Conditions in South India*, Vol-2, p-738.

೨೬೧. ಕೊಪ್ಪಾ, ಎಸ್. ಕೆ., ೧೯೯೦, ತ.ನಾ.ಒ.ಅ. ಪು - ೧೭೬, ಇಂಡಿ.



Chapter-7

# ಅಧ್ಯಾಯ-ಏಳು

# ಧಾರ್ಮಿಕ ಇತಿಹಾಸ

''ಅಥ ಧರ್ಮಾರ್ಥಕಾಮ ಫಲಾಯ ರಾಜ್ಯಾಯ ನಮಃ'' ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳ ಫಲರೂಪವಾದ ರಾಜ್ಯಕ್ಕೆ ನಮಸ್ಕಾರ. ''ಯತೋಽಭ್ಯುದಯನಿಶ್ರೇಯಸಿದ್ಧಿ ಸ ಧರ್ಮ;'' ಯಾವುದರಿಂದ ಪ್ರಹಿಕ ಅಭ್ಯುದಯವೂ ಪರಲೌಕಿಕ ಸಿದ್ಧಿಯೂ ಉಂಟಾಗುವುದೋ ಅದೇ ಧರ್ಮ[1] ಧರ್ಮವೇ ಜಗದಿ ಮೂಲ, ಜೀವನದ ಸೂತ್ರ, ಸಮಸ್ತ ಮನುಕುಲದ ಬಾಳಿಗೆ ಬೆಳಕಾಗಿ ಪ್ರಾಚೀನ ಕರ್ನಾಟಕದ ಚರಿತ್ರೆಯಲ್ಲಿ ಚತುಸ್ಸಮಯಗಳಾದ ಬೌದ್ಧ, ಜೈನ, ವೈಷ್ಣವ, ಹಾಗೂ ಶೈವ ಧರ್ಮಗಳು ಕಾಣಿಸಿಕೊಂಡಿವೆ. ಅವುಗಳಲ್ಲಿ ಯಾವುದು ಮೊದಲು ಯಾವುದು ಅನಂತರವಾದದ್ದೆಂದು ನಿರ್ದಿಷ್ಟವಾಗಿ ಹೇಳಲು ಕಷ್ಟವಾದರೂ ಅತೀ ಪ್ರಾಚೀನ ಕಾಲದಲ್ಲಿಯೇ ಕರ್ನಾಟಕ ವೈದಿಕ ಸಂಸ್ಕೃತಿಯ ಗಾಢ ಪ್ರಭಾವಕ್ಕೆ ಒಳಗಾಗಿತ್ತೆಂದು ತಿಳಿಯಲವಕಾಶವಿದೆ.[2]

ವೈದಿಕ ಸಂಸ್ಕೃತಿಯ ಚಾತುರ್ವರ್ಣ ಪದ್ಧತಿಯಿಂದ ಕ್ರಮೇಣ ಜಾತಿಗಳಾಗಿ ಶೋಷಣೆ ಹೆಚ್ಚಿದಂತೆ ಬೌದ್ಧ, ಜೈನ ಧರ್ಮಗಳು ಜನ್ಮತಾಳಿ ತಮ್ಮ ಕಾರ್ಯಚಟುವಟಿಕೆಯನ್ನು ಹೆಚ್ಚಿಸಿಕೊಂಡವು. ಕಾಲ ಬದಲಾದಂತೆ ಸ್ಥಳಿಯ ಮತಭೇದಗಳು ಇವುಗಳೊಂದಿಗೆ ಸೇರಿಕೊಂಡವು. ಕೊನೆಗೊಮ್ಮೆ ಇವುಗಳಿಂದ ನೊಂದ ಜನತೆಗೆ ಹನ್ನೆರಡನೆಯ ಶತಮಾನದ ಶಿವಶರಣರು ಹೊಸ ಸಿದ್ಧಾಂತವನ್ನು ಮುಂದಿಟ್ಟರು. ಅದೇ ವೀರಶೈವ ಸಿದ್ಧಾಂತವಾಗಿ ಬೆಳಕಿಗೆ ಬಂದಿತು[3] ಈ ಎಲ್ಲಾ ಛಾಯೆಯನ್ನು ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ಗುರುತಿಸುವಾಗ ಅದು ಕೊಪ್ಪಳ ಜಿಲ್ಲೆಗೂ ಅನ್ವಯಿಸುತ್ತದೆ.

## ಬೌದ್ಧ ಧರ್ಮ

ಉತ್ತರ ಭಾರತದಲ್ಲಿ ಹುಟ್ಟಿದ ಬೌದ್ಧ ಧರ್ಮ ಕರ್ನಾಟಕಕ್ಕೆ ಕಾಲಿರಿಸಿದುದು ಬೌದ್ಧಧರ್ಮದ ಆಶ್ರಯದಾತನು ಮೌರ್ಯ ಸಾಮ್ರಾಟನೂ ಆದ ಅಶೋಕನು ತನ್ನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ.ಪೂ. ೩ನೆಯ ಶತಮಾನ) ದಕ್ಷಿಣ ಭಾರತದಲ್ಲಿ ಬೌದ್ಧಧರ್ಮ ಪ್ರಸಾರಗೊಳಿಸುವದಕ್ಕಾಗಿ ಮಹಿಷಮಂಡಲಕ್ಕೆ ಮಹದೇವನನ್ನು ಬನವಾಸಿಗೆ ರುಖ್ಖಿತನನ್ನು ಕಳಿಸಿಕೊಟ್ಟಿರುವುದಾಗಿ ತಿಳಿದು ಬರುತ್ತದೆ.[4] ರಾಯಚೂರ ಜಿಲ್ಲೆಯ ಮಸ್ಕಿ, ಬಳ್ಳಾರಿ ಜಿಲ್ಲೆಯ ನಿಟ್ಟೂರು, ಉದುಗೋಳು, ಚಿತ್ರದುರ್ಗ ಜಿಲ್ಲೆಯ ಜಟ್ಟಿಂಗರಾಮೇಶ್ವರ, ಸಿದ್ಧಾಪುರ, ಬ್ರಹ್ಮಗಿರಿ, ಕೊಪ್ಪಳ ಜಿಲ್ಲೆಯ ಗವಿಮಠ ಪಾಲ್ಕಿಗುಂಡುಗಳು ಬ್ರಾಹ್ಮಿ ಲಿಪಿಗಳುಳ್ಳ ಅಶೋಕನ ಶಾಸನ ಸ್ಥಳಗಳು ಸನ್ನತಿ, ಐಹೊಳೆ, ಚಂದ್ರವಳ್ಳಿ, ಕದರಿ, ಬಳ್ಳಿಗಾವೆ, ತೊರ್ಕೆ, ಕೋಳಿವಾಡ, ಬನವಾಸಿ, ಡಂಬಳ, ಇಂಡಿ, ಕೊಪ್ಪಳ ಮೊದಲಾದ ಊರುಗಳಲ್ಲಿ ದೊರೆತ ಪ್ರಾಕ್ತನ ಅವಶೇಷಗಳು ಹುಯೆನ್‌ತ್ಸಾಂಗನ ಪ್ರವಾಸದ ವರದಿಗಳು ಕರ್ನಾಟಕದಲ್ಲಿನ ಬೌದ್ಧಧರ್ಮದ ಪ್ರಸಾರಣಗೊಂಡ ವಿಷಯವನ್ನು ಅರಿಯಲು ಸಹಾಯಕವಾಗಿವೆ.

ಅಶೋಕನ ಬಳಿಕ ಶಾತವಾಹನರು ದಕ್ಷಿಣದ ಆಂಧ್ರ-ಕರ್ನಾಟಕ ಮಹಾರಾಷ್ಟ್ರ ರಾಜ್ಯಗಳನ್ನು ಒಳಮಾಡಿಕೊಂಡು ರಾಜ್ಯಕಟ್ಟಿಕೊಂಡರು. ಅಶೋಕನ ಕಾಲಕ್ಕೆ ಕರ್ನಾಟಕದಲ್ಲಿ ಪ್ರಚಾರಕ್ಕೆ ಬಂದ ಬೌದ್ಧಧರ್ಮ ಶಾತವಾಹನರ ಕಾಲದಲ್ಲಿ ರಾಜ್ಯಧರ್ಮವಾಗಿ ಬೆಳೆದು ನಿಂತಿತು. ಅಲ್ಲದೇ ಸುತ್ತಮುತ್ತಲಿನ ಆಂಧ್ರಪ್ರದೇಶದ ಅಮರಾವತಿ, ನಾಗಾರ್ಜುನಕೊಂಡ ಮಹಾರಾಷ್ಟ್ರದ ಅಜಂತ, ಕನ್ಹೇರಿ, ಕಾರ್ಲೆ, ಭಾಜ, ನಾಸಿಕ, ಜುನ್ನಾರಗಳಲ್ಲಿ ಬೌದ್ಧಗುಹಾಲಯಗಳು ನಿರ್ಮಾಣಗೊಂಡವು. ಕರ್ನಾಟಕದ ಬಳ್ಳಿಗಾವಿ, ಬನವಾಸಿ, ಗುಲಬುರ್ಗಾದ ಸನ್ನತಿ ಕೇಂದ್ರಗಳು ಬೌದ್ಧಧರ್ಮದ ನೆಲೆಗಳಾಗಿದ್ದವು. ಇಲ್ಲಿ ಹಿನಾಯಾನ ಪಂಥದ ಜೊತೆಗೆ ಮಹಾಯಾನ ಪಂಥವೂ ಕ್ರಿ.ಶ. ೪ನೆಯ ಶತಮಾನದ ವರೆಗೂ ಕಾಣಿಸಿಕೊಳ್ಳುತ್ತವೆ. ಅದರಂತೆ ಕದಂಬರು, ಗಂಗರು, ರಾಷ್ಟ್ರಕೂಟರು ಕಲ್ಯಾಣ ಚಾಲುಕ್ಯರು ಮುಂತಾದ ಅರಸರ ಕಾಲದಲ್ಲಿ ಕ್ರಿ.ಪೂ. ೩ನೆಯ ಶತಾಮಾನದಿಂದ ೧೬ನೆಯ ಶತಮಾನದ ಮಧ್ಯಾವಧಿಯ ಕರ್ನಾಟಕದಲ್ಲಿ ಈ ಧರ್ಮ ತನ್ನ ಅಸ್ತಿತ್ವ ಉಳಿಸಿಕೊಂಡಿತ್ತು. ಕೊಪ್ಪಳ ಜಿಲ್ಲೆಗೂ ಅದರ ಪ್ರಭಾವ ಬೀರಿತ್ತೆನ್ನುವದಕ್ಕೆ ಕೊಪ್ಪಳದ ಪಾಲ್ಕಿಗುಂಡು, ಗವಿಮಠದ ಅಶೋಕನ ಶಾಸನಗಳೇ ಸಾಕ್ಷಿಯಾಗಿವೆ.[೮] ಇಲ್ಲಿ ಅಶೋಕನ ಪಾಂಲ್ಕಿಗುಂಡಿನ ಶಾಸನದ ಮೆಲ್ಭಾಗವನ್ನು ಅಳಿಸಿ ಜೈನ ಜಟಾಸಿಂಗನಂದಿಯ ಪಾದಗಳನ್ನು ಬಿಡಿಸುವುದರ ಜೊತೆಗೆ ಶಾಸನ ಪಾಠವನ್ನು ಬರೆಯಲಾಗಿದೆ. ಸು. ೭ ನೆಯ ಶತಮಾನದಲ್ಲಿ ಚೀನಾ ದೇಶದಿಂದ ಬಂದ ಬೌದ್ಧಯಾತ್ರಿಕ ಹುಯೇನತ್ಸಾಂಗನು ಕೊಪ್ಪಳವನ್ನು 'ಕೊಂಕಿನ ಪುಲೋ' ಎಂದು ಕರೆಯುತ್ತಾ ಇಲ್ಲಿ ಅಶೋಕ ಕಟ್ಟಿಸಿದ ಸ್ತೂಪಗಳಿರುವುದಾಗಿ ಇದೊಂದು ಬೌದ್ಧರ ಕೇಂದ್ರವಾಗಿತ್ತೆಂದು ತಿಳಿಸಿದ್ದಾನೆ.[೬] ಚೀನಿ ಯಾತ್ರಿಕನು ಹೆಸರಿಸಿದ ಕೊಂಕಿನ ಪುಲೋ ಇಂದಿನ ಕೊಪ್ಪಳವೆಂಬುದರಲ್ಲಿ ಸಂಶಯವೇ ಇಲ್ಲವೆಂದು ಡಾ. ಸಾಲೆತ್ತೋರೆಯವರ ಅಭಿಪ್ರಾಯ ಒಪ್ಪಬಹುದಾಗಿದೆ.[೭] ಇದಲ್ಲದೆ ಹೈದ್ರಾಬಾದ ಸಂಸ್ಥಾನದ ಪುರಾತತ್ವ ಇಲಾಖೆಯವರು ಶೋಧಿಸಿದ ಪದ್ಮಾಸನದ ದ್ಯಾನ ಮುದ್ರೆಯಲ್ಲಿರುವ ಬುದ್ಧನ ವಿಗ್ರಹ ಅನೇಕ ಸಣ್ಣ ಸಣ್ಣ ಗೊಂಬೆಗಳನ್ನು ಕೊಪ್ಪಳದಲ್ಲಿ ಉತ್ಖನನ ಮಾಡಿ ಶೋಧಿಸಿದಂತೆ ಇತ್ತೀಚೆಗೆ ಧಾರವಾಡದ ಪುರಾತತ್ವ ಇಲಾಖೆಯವರು ಇಟ್ಟಂಗಿ, ಗೊಂಬೆ ಪಾತ್ರೆಗಳನ್ನು ಉತ್ಖನನದ ಕಾಲಕ್ಕೆ ಪತ್ತೆ ಹಚ್ಚಿದ್ದು, ಡಾ. ಅ. ಸುಂದರವರು ಶೊಧಿಸಿದ ಬುದ್ಧನ ಕಾಲದ್ದೆನ್ನಲಾದ ೨ - ೩. ನೆಯ ಶತಮಾನದ ಅಶೋಕನ ಧರ್ಮ ಚಕ್ರವಿರುವ ಕಲ್ಲಿನ ವಿಗ್ರಹ[೮] ಇಲ್ಲಿಯ ಕೊಪ್ಪಳದ ಶಾಸನ 'ಬುದ್ಧಸೇನ ಪಂಡಿತರ ಶಿಷ್ಯ ಸಾಧುಸೇನ ಪಂಡಿತನ ಶಿಷ್ಯ ಸಿದ್ಧಸೇನರ ಉಲ್ಲೇಖಗಳು ಬೌದ್ಧಧರ್ಮದ ಅಸ್ತಿತ್ವವನ್ನು ತಿಳಿಸುತ್ತವೆ.[೯] ಕುಕನೂರು ಶಾಸನ ಉದ್ಧತ ಪ್ರಬುದ್ಧ ಬೌದ್ಧ ಬುಧ ಭೋಧಾರಿ ಭೋದಿ ನಿಶ್ಶಿಷ ಶೋಕ್ಷಣಾಬ್ಜಾನಳರ್ ಪ್ರಚಣ್ಡ ವಜ್ರದಂಡರ ಮಂತ್ರಾಧೀಶ್ವರ ತಪೋಧನರಿಗೆ ಚೋಳರ ಸೋಮೇಶ್ವರ ಶಿಷ್ಯ ಈಶ್ವರ ಶೆಟ್ಟಿ ದಾನ ನಿಡಿದ ವಿಷಯ ಉಲ್ಲೇಖಿಸಿದೆ.[೧೦] ಮೌರ್ಯರ ನಂತರ ಕರ್ನಾಟಕದಲ್ಲಿ ಆಳ್ವಿಕೆಗೆ ಬಂದ ಶಾತವಾಹನರ ಕಾಲದ ಮುದ್ರಾಂಕಿತ ನಾಣ್ಯಗಳು ಕೊಪ್ಪಳ ತಾಲೂಕಿನ ಚಿಕ್ಕಸಿಂದೋಗಿಯಲ್ಲಿ ೫೫೫೪ ನಾಣ್ಯಗಳ ರಾಶಿಯೇ ದೊರತಿದೆ ಈ ನಾಣ್ಯಗಳಿದ್ದ ಮಡಕೆಯ ಮೇಲೆ 'ಚಿಂತಸ' ಎಂಬ ಬ್ರಾಹ್ಮಿ ಲಿಪಿಯ ಬರವಣಿಗೆ ಇದೆ. ಲಿಪಿಯುಳ್ಳ ಒಂದು ನಾಣ್ಯದ ಮೇಲೆ ಸಿರಿಸತಕ(ನಿ) ಎಂದಿರುವುದು ಅದರ ಹಿಂಬದಿಯಲ್ಲಿ ವ್ಯಕ್ತವಿದೆ.[೧೧] ಇಂತಹ ಎಲ್ಲಾ ಅಂಶಗಳನ್ನು ತಿಳಿದು ನೋಡಲಾಗಿ ಕ್ರಿ.ಪೂ. ೩ನೆಯ.

ಶತಮಾನದಿಂದ ೭ ನೇಯ ಶತಮಾನದವರೆಗೆ ಕೊಪ್ಪಳ ಜಿಲ್ಲೆಯಲ್ಲಿ ಬೌದ್ಧ ಧರ್ಮದ ಅಸ್ತಿತ್ವವಿರುವುದನ್ನು ಗುರ್ತಿಸಲಾಗಿರುವುದು. ತದ ನಂತರ ಶೈವ ವೈಷ್ಣವ, ಜೈನರ ಪ್ರಭಾವದಿಂದ ಅದು ಕಣ್ಮರೆ ಆಗಿರಬೇಕೆಂದು ಕಾಣುತ್ತದೆ.

## ಜೈನಧರ್ಮ

ಪ್ರಾಚೀನ ಭಾರತದ ಪ್ರಮುಖ ಧರ್ಮಗಳಲ್ಲಿ ಒಂದಾದ ಜೈನಧರ್ಮ ಕ್ರಿ.ಶ.ಪೂ. ೩ನೆಯ ಶತಮಾನದ ಸುಮಾರಿಗೆ ಉತ್ತರ ಭಾರತದಲ್ಲಿ ೧೨ ವರ್ಷಗಳ ಕಾಲ ಭಯಂಕರ ಕ್ಷಾಮ ವ್ಯಾಪಿಸಿರಲು ಮೌರ್ಯ ಚಂದ್ರಗುಪ್ತನು ತಮ್ಮ ಶಿಷ್ಯ ಸಮೂಹದೊಂದಿಗೆ ಜೈನಾಚಾರ್ಯನಾದ ಭದ್ರಬಾಹುಮುನಿಗಳು ಒಂದು ದೊಡ್ಡ ಸಂಘದೊಡನೆ ದಕ್ಷಿಣ ಭಾರತಕ್ಕೆ ಪ್ರಯಾಣ ಬೆಳೆಸಿರುವುದರ ಮುಖಾಂತರ ಬಂದಿತು. ಆಗ ಬಹುಜನ ಶ್ರಾವಕರಿದ್ದ ಗುಂಪು ದಕ್ಷಿಣದ ಶ್ರವಣಬೆಳಗೊಳಕ್ಕೆ ಬರುವಲ್ಲಿ ಈ ಧರ್ಮ ಕರ್ನಾಟಕದಲ್ಲಿ ಕಾಲಿರಿಸಿತೆಂಬ ವಿಚಾರಗಳು ವಿದ್ವಾಂಸರು ಒಪ್ಪಿಕೊಂಡ ಮಾತಾಗಿದೆ. ಆಗ ದಕ್ಷಿಣ ಕರ್ನಾಟಕದಲ್ಲಿ ಶ್ರವಣಬೆಳಗೊಳದ ಬೆಟ್ಟ ಉತ್ತರ ಕರ್ನಾಟಕದ ಭಾಗದಲ್ಲಿ ಕೊಪ್ಪಳ ಮತ್ತು ಬಾದಾಮಿಯ ಗುಡ್ಡದ ಗವಿಗಳು ದಿಗಂಬರರು ವಾಸಮಾಡಲು ತಕ್ಕ ಪರಿಸರವನ್ನು ಒದಗಿಸಿರಬೇಕು. ಪ್ರಾಚೀನ ಕರ್ನಾಟಕದಲ್ಲಿ ಅಲ್ಲಲ್ಲಿ ಶ್ವೇತಾಂಬರರೂ ಇದ್ದದ್ದು ಕಂಡು ಬರುವದು.[೧೨] ಕರ್ನಾಟಕದಲ್ಲಿ ದಿಗಂಬರರ ಜೊತೆಗೆ ಶ್ವೇತಾಂಬರರು ಇದ್ದು ಬಹಳ ಹಿಂದೆಯೇ ಅಂದರೆ ಕ್ರಿ.ಶ.ಪೂ.೨-೩ ನೆಯ ಶತಮಾನಗಳಲ್ಲಿ ಶ್ವೇತಾಂಬರ, ದಿಗಂಬರಗಳೆಂಬ ಎರಡು ಪಂಗಡಗಳಾಗಿ ಮಾರ್ಪಟ್ಟಿದ್ದವು.[೧೩]

ಇಗಾಗಲೇ ತಿಳಿದಿರುವಂತೆ ಜೈನ ಧರ್ಮ ಕದಂಬರ ಕಾಲಕ್ಕೆ ಪ್ರಚಾರಕ್ಕೆ ಬಂದು ರವಿವರ್ಮ ಅರಸನು ಕಾಮ ಜೀನಾಲಯವನ್ನು ನಿರ್ಮಿಸಿ ಅದರ ಪೂಜೆ ಪುನಸ್ಕಾರಕ್ಕೆ ದಾನಕೊಟ್ಟ ಸಂಗತಿಗಳಿವೆ[೧೪] ಹೀಗಾಗಿ ಈ ರಾಜ್ಯವಂಶದ ಧರ್ಮವು ಜೈನವಾಗಿದ್ದಿತು. ಗಂಗರದು ಜೈನ ಸಿಂಹಣಂದ್ಯಾಚಾರ್ಯರ ಆಶೀರ್ವಾದದಲ್ಲಿಯೇ ತಲೆಯೆತ್ತಿದ ರಾಜಮನೆತನ ಮತ್ತು ಜೈನಧರ್ಮದ ಅನುಯಾಯಿಗಳಾಗಿದ್ದರಿಂದ ಅದರ ಬೆಳವಣಿಗೆಯ ಭಾರವನ್ನು ಅವರು ಹೊತ್ತಿದ್ದರು. ಈ ರಾಜರುಗಳ ಆಡಳಿತಾವಧಿ ಜೈನಧರ್ಮದ ಸುವರ್ಣಯುಗ ವೆಂದೇ ಹೇಳಬೇಕು. ಇವರು ಜೈನ ಧರ್ಮಕ್ಕೆ ನೀಡಿದ ವಿಶೇಷ ಪ್ರೋತ್ಸಾಹ ಶ್ರವಣಬೆಳಗೊಳದ ಇತಿಹಾಸದಿಂದ ತಿಳಿಯುತ್ತೇವೆ. ಅಂತೇಯೇ ಇವರು ಕೊಪ್ಪಳದಲ್ಲೂ ಅದರ ಪೋಷಣೆ ಮಾಡಿದ್ದರು. ಗಂಗವಂಶದ ಭೂತಗನ ಪತ್ನಿ ಪದ್ಮಬ್ಬೆ, ಗಂಗ ವಿರೆಗಂಗನ ಮಗಳಾದ ಗೋನಂಬೆ ಕಂತಿ, ಮಾರಸಿಂಗನ ತಂಗಿ ಜೆಜ್ಜಬ್ಬರಸಿ, ಚಂದಿಯಬ್ಬರಸಿ ಮೊದಲಾದವರು ಕೊಪ್ಪಳಕ್ಕೆ ಬಂದು ಸುಗತಿ ಹೊಂದಿದರೆಂದು ಕೊಪ್ಪಳದಲ್ಲಿ ದೊರೆತ ಶಾಸನಗಳಿಂದ ಸ್ಪಷ್ಟಗೊಳ್ಳುತ್ತದೆ. ಜೈನಾಚಾರ್ಯನಾದ ಸಿಂಹ ನಂದಿಯು ಇವರ ಗುರುವು. ಮಾಧವನು ಜೈನ ಗುರುವಾದ ಸಿಂಹ ನಂದಿಯ ಸಹಾಯದಿಂದ ಗಂಗವಾಡಿ ೯೬,೦೦೦ ರಾಜ್ಯವನ್ನು ಸ್ಥಾಪಿಸಿದ್ದು ಇತಿಹಾಸ ಪ್ರಸಿದ್ಧಿಯಾಗಿದೆ. ಆಗ ಆಳುತ್ತಿದ್ದ ಕೊಂಗಣಿ ವರ್ಮ, ಹರಿವರ್ಮ, ಅವನಿತ, ವಿಜಯಕೀರ್ತಿ ಇವರೆಲ್ಲ

ಜೈನರಾಗಿದ್ದರು. ಗಂಗರ ಚಾಮುಂಡರಾಯನೆಂಬ ಪ್ರಸಿದ್ಧ ಮಂತ್ರಿ ಗಂಗರ ರಾಜಕೀಯ, ಧಾರ್ಮಿಕ ಕಾರ್ಯಗಳಿಗೆಲ್ಲಾ ನೇತೃವಾಗಿದ್ದನು. ತನ್ನ ಮುಪ್ಪಿನ ಕಾಲದಲ್ಲಿಯಂತೂ ತನ್ನ ಜೀವನವನ್ನೇ ಜೈನ ಧಾರ್ಮಿಕ ಬೆಳವಣಿಗೆಯ ಪ್ರಚಾರಕ್ಕಾಗಿ ಮೀಸಲಿರಿಸಿದ್ದನ್ನು.

ಬಾದಾಮಿ ಚಾಲಕ್ಯರ ನಂತರ ಬಂದ ರಾಷ್ಟ್ರಕೂಟರ ಕಾಲ ಜೈನಧರ್ಮದ ಉನ್ನತಿಕಾಲವೆಂದು ಹೇಳಬಹುದು. ಏಕೆಂದರೆ ಜಿಲ್ಲೆಯಲ್ಲಿ ಅದರಲ್ಲಿಯೂ ಕೊಪ್ಪಳದಲ್ಲಿ ದೊರೆಯುವ ಶಾಸನಗಳನ್ನು ನೋಡಿದರೆ ರಾಷ್ಟ್ರಕೂಟರ ಕಾಲದಲ್ಲಿ ಕೊಪ್ಪಳ ಜೈನರ ಮಹಾನ್ ತೀರ್ಥ ಕ್ಷೇತ್ರವಾಗಿತ್ತೇಂಬುದು ತಿಳಿದುಬರುತ್ತದೆ, ಅದು ಜಿಲ್ಲೆಯ ತುಂಬೆಲ್ಲಾ ಹರಡಿ ಯಲಬುರ್ಗ, ಮುಧೋಳ, ಆನೆಗುಂದಿ, ರಾಜೂರ, ಆಡೂರ ಇತ್ಯಾದಿ ಸ್ಥಳಗಳಲ್ಲಿ ಪ್ರಚುರಗೊಂಡು ಗಟ್ಟಿಯಾಗಿ ನೆಲೆನಿಂತ್ತಿತೆಂಬುದನ್ನು ಶಾಸನಗಳ ಉಲ್ಲೇಖದಿಂದ ಸ್ಪಷ್ಟಗೊಳ್ಳುತ್ತದೆ. ರಾಷ್ಟ್ರಕೂಟರಂತೆ ಅವರ ಕಾಲದ ಮಾಂಡಳಿಕ ಮನೆತನಗಳು, ಅಧಿಕಾರಿಗಳು, ಸಾಮಾನ್ಯರು ಸಹ ಇಲ್ಲಿಯ ಜೈನಧರ್ಮವನ್ನು ಬೆಳೆಸಿದ ಬಗೆಯನ್ನು ಶಾಸನಗಳೇ ಹೇಳುತ್ತವೆ. ಉದಾಹರಣೆಗಾಗಿ ನೋಡುವದಾದರೆ ರಾಷ್ಟ್ರಕೂಟ ಅವಧಿಯ ಮಾಂಡಳಿಕ ಶಂಕರ ಗಂಡನು ತನ್ನ ಹೆಸರಲ್ಲಿ ಜಯಧೀರ ಜೀನಾಲಯವನ್ನು ಕ್ರಿ.ಶ. ೯೬೪ ರಲ್ಲಿ ಕುಪಣದಲ್ಲಿ ಕಟ್ಟಿಸಿದನೆಂದು ಬೇಟಗೇರಿ ಶಾಸನ ಹೇಳುತ್ತದೆ. ರಾಷ್ಟ್ರಕೂಟ ಅಮೋಘವರ್ಷನ ಮಗಳಾದ ರೇವಕ ನಿಮ್ಮಡಿ ಕೊಪ್ಪಳ ಪ್ರದೇಶದ ಎಡದೊರೆ ನಾಡನ್ನು ಆಳುತ್ತಿದ್ದಳು ಮತ್ತು ಜೈನಧರ್ಮಕ್ಕೆ ಸಾಕಷ್ಟು ಪ್ರೋತ್ಸಾಹ ನೀಡಿದಳು.

## ಬಸದಿ ನಿಶಿಧಿಗೆ ಮತ್ತು ದಾನದತ್ತಿ

ಜಿಲ್ಲೆಯಲ್ಲಿ ದೊರಕಿರುವ ಶಾಸನಗಳಲ್ಲಿ ಕ್ರಿ.ಶ. ೮೮೧ ರ ಕೊಪ್ಪಳ ಶಾಸನವೇ ಜೈನಧರ್ಮದ ಪ್ರಾಚೀನ ಶಾಸನವಾಗಿದೆ.[೧೫] ಇದು ಕೊಣ್ಡ ಕುನ್ದಾನ್ವಯಕ್ಕೆ ಸೇರಿದ ಏಕಚಟ್ಟುಗದ ಭಟ್ಟಾರನ ಶಿಷ್ಯ ಸರ್ವನಂದಿಭಟ್ಟಾರಕನನ್ನು ಉಲ್ಲೇಖಿಸುತ್ತಿದ್ದು, ಇವನು ಊರಿಗೆ ಮತ್ತು ತೀರ್ಥಕ್ಕೆ ಉಪಕಾರಿಯಾಗಿ, ಶಾಸ್ತ್ರದಾನ ಮಾಡುತ್ತಾ ಸನ್ನಡ್ತೆಯುಳ್ಳವನಾಗಿ ಭೂಮಿಯ ಪಾಪಗಳನ್ನು ತೊಳೆದು ತಪಸ್ಸನ್ನು ಮಾಡಿ ಮುಡಿಪಿದುದನ್ನು ಶಾಸನ ತಿಳಿಸುತ್ತದೆ. ಈ ಏಕಚಟ್ಟುಗದ ಬಸದಿಯಮಾನ್ಯಖೇಟದಲ್ಲಿತ್ತೆಂಬ ಸಂಗತಿ ಇನ್ನೊಂದ ಶಾಸನದಿಂದ ತಿಳಿಯುತ್ತದೆ. ಇದರ ನಂತರ ಕ್ರಿ.ಸ. ೮೮೩ ರ ಶಾಸನ[೧೬] ಇಂದ್ರರಾಜನ ದಂಡನಾಥ ಮಾಮರಸನೆಂಬುವನು ಸಿದ್ಧಕುಪಣಕ್ಕೆ ತೀರ್ಥವಂದನಾರ್ಥನಾಗಿ ಬಂದಿದ್ದಾಗ ಕದಂಬರ ಪೆರ್ಮದೇವನೆಂಬುವನು ದಡಿಯಮರಸ ಮಾಡಿಸಿದ (ಕಟ್ಟಿಸಿದ) ಬಸದಿಗೆ ಕಳಸವನ್ನಿಟ್ಟು ದಾನ ನಿಡಿದ ಸಂಗತಿ ತಿಳಿಸುವುದಾಗಿದೆ. ರಾಷ್ಟ್ರಕೂಟರ ಮುಮ್ಮಡಿ ಕೃಷ್ಣ ಆಳುತ್ತಿದ್ದಾಗ ಕ್ರಿ. ಶ. ೯೬೪ರಲ್ಲಿ ಯಾದವ ವಂಶದ ಶಂಕರ ಗಂಡನು ತನ್ನ ಹೆಸರಿನಲ್ಲಿ ಜಯಧೀರ ಜೀನಾಲಯವನ್ನು ಕುಪಣದಲ್ಲಿ ಮಾಡಿಸುತ್ತಾನೆ.[೧೭] ಇವನು ಮಾಡಿಸಿದ ಬಸದಿಗೆ ಮಾಂಡಳಿಕ 'ಕೃತಯುಗಗಳ ಚಾಳುಕ್ಯವಂಶದ ರೊಟ್ಟಯ್ಯನು ಸಾರಸ್ವಗಣದ ನಾಗನಂದಿ ಪಂಡಿತ ಭಟಾರನ ಕಾಲನ್ನುತೊಳೆದು ದಾನ ನೀಡುತ್ತಾನೆ.

ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಶಾಸನಗಳು ಜೈನಧರ್ಮದ ಕುರಿತು ಸಾಕಷ್ಟು ಮಾಹಿತಿ ನೀಡುತ್ತಿದ್ದು ಅಂದು ಜೈನಧರ್ಮವನ್ನು ಉಳಿಸಿ ಬೆಳೆಸಿದ ಪರಿಯನ್ನು ಜಿನದೇವಾಲಯ, ಜಿನಶಿಲ್ಪ ಕೆತ್ತಿಸಿದವರನ್ನು, ಅವುಗಳಿಗೆ ದಾನದತ್ತಿ ನೀಡಿದವರನ್ನು ಹಾಗೂ ಜೈನರ ಸಮಾಜ ಜೀವನದ ಚಿತ್ರಣವನ್ನು ನೀಡುತ್ತವೆ. ಕ್ರಿ. ಶ. ೯೬೮ರಲ್ಲಿ ಗಂಗ ಮಾರಸಿಂಹನ ಅಕ್ಕ ಕುಂದಣ ಸ್ವಾಮಿ ಎಂಬಾಕೆ ಕಾಳಪಾರ್ಯ ಎಂಬುವನಿಗೆ ಧವಳ ವಿಷಯದಲ್ಲಿದ್ದ ಅಡ್ಡ ಊರಿಗೆ ಎಂಬ ಗ್ರಾಮವನ್ನು ನೀಡುತ್ತಾಳೆ. ಇವಳು ಜೈನಧರ್ಮಿಯಳಾಗಿದ್ದು ಧರ್ಮದ ಬಗೆಗಿನ ಅವಳ ಭಕ್ತಿಯ ಬಗ್ಗೆ ವಿವರವಾಗಿ ವರ್ಣಿಸಿದೆ. ಕುಕನೂರಿನ ಶಾಸನವೊಂದು[೧೮] ಗಂಗ ಕಂದರ್ಪನು (ಇಮ್ಮಡಿ ಮಾರಸಿಂಹ) ಜೀನ ಪೂಜಕನಾಗಿದ್ದನು. ಈತನು ತನ್ನ ಶತ್ರುಗಳನ್ನೆಲ್ಲಾ ಸಂಹರಿಸಿ ಸತ್ಯವಾಕ್ಯ ಕೊಂಗಣಿವರ್ಮ ಧರ್ಮ ಮಹಾರಾಜಾಧಿರಾಜ ಪರಮೇಶ್ವರ ಗಂಗಕಂದರ್ಪ ಎಂಬ ಬಿರುದು ಪಡೆದಿದ್ದನ್ನು ಹೇಳುತ್ತದೆ. ಕ್ರಿ. ಶ. ೯೭೧ರಲ್ಲಿ ಮಹೇಂದ್ರ ದೇವನ ಶಿಷ್ಯ ವಾಧೀ ಭಸಿಂಹನು ಚೈತ್ಯಾಲಯವನ್ನು ನಿರ್ಮಿಸಿದ್ದುದನ್ನು ಹೇಳುತ್ತದೆ. ಇದೆ ವರ್ಷದ ಇನ್ನೆರಡು ಶಾಸನಗಳು ಎರೆಯಬ್ಬೆ ಸತ್ತದ್ದನ್ನು ಉಲ್ಲೇಖಿಸುತ್ತಾ ಈ ಎರೆಯಬ್ಬೆ ಗಂಗರಾಜನ ಪತ್ನಿಯೆಂದೂ ಪೊಲೆಯಬ್ಬೆಯ ಮಗಳೆಂದು ಹೇಳಿದೆ. ಯಲಬುರ್ಗಿಯಲ್ಲಿ ಮೂಲಸಂಘದೇಸಿಗಣದ ಮಾದಣ ದಂಡನಾಯಕನು ಬಸದಿ ಕಟ್ಟಿಸಿದ.[೧೯] ಈ ಬಸದಿಗಳಲ್ಲಿ ಕುಪಣ ತೀರ್ಥದ ಎಮ್ಮೆಯರಪ್ರೀತಿಗೌಡ ಹಾಗೂ ಮಾಳವ್ವೆಯರ ಮಗ ಬೊಪ್ಪಣನು ೨೪ ತೀರ್ಥಂಕರ ಪ್ರತಿಮೆ ಮಾಡಿಸಿದ ಹಾಗೆಯೇ ಮಹಾ ಪ್ರಧಾನ ದೇವಣಾರ್ಯನ ಹೆಂಡತಿ ಕಟ್ಟಿಸಿದ ಪಾರ್ಶ್ವನಾಥ ಬಸದಿಗಳು[೨೦] ಮಲ್ಲಸೆಟ್ಟಿ ಮಾಡಿಸಿದ ಜೇನ ಪ್ರತಿಭೆ (ಈಗ ಇದು ಹಂಪೆ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದಲ್ಲಿರುವುದು).[೨೧] ಸೇನಭೋವ ಆ ಚಣ್ಣನ ಮಗ ದೇವಣನು ಪ್ರತಿಷ್ಠಾಪಿಸಿದ ಪಂಚಪರಮೇಷ್ಠಿ ಜೇನ ಪ್ರತಿಮೆ[೨೨] (ಇದು ಈಗ ಹೈದ್ರಾಬಾದ ವಸ್ತುಸಂಗ್ರಹಾಲಯ ದಲ್ಲಿರುವದು) ಮಿಂಡಗುದ್ದಲಿ ಕೇತಿ ಸೆಟ್ಟಿಮಗ ಮಲ್ಲಿಸೆಟ್ಟಿ ಮಾಡಿಸಿದ ಪಾರ್ಶ್ವನಾಥ ದೇವರ ಪ್ರತಿಮೆಯನ್ನು (ಈಗ ಇದು ಲಂಡನ್ನಿನ ಮ್ಯೂಜಿಯಂನಲ್ಲಿದೆ).[೨೩] ಮಾಡಿಸಿ ಅದನ್ನು ಯಲಬುರ್ಗಿಯ ಜೇನಾಲಯದಲ್ಲಿ ಇರಿಸಲಾಗಿತ್ತೆಂದು ತಿಳಿಯಲಾಗಿದೆ. ಅಡೂರ ಶಾಸನ ಜೈನ ಸನ್ಯಾಸಿಗಳು ಕೂಡಿ ಜೈನ ಪ್ರತಿಮೆಗಳನ್ನು ಮಾಡಿಸಿದರೆಂದರೆ[೨೪] ರಾಜೂರ ಶಾಸನ ಬಸದಿಗೆ ಭೂಮಿ ದಾನ ನೀಡಿದ ಕುರಿತು ತಿಳಿಸಿದೆ.[೨೫] ಹೀಗೆ ಸುತ್ತಮುತ್ತಲಿನ ತಾಲೂಕಗಳ ವ್ಯಾಪ್ತಿಯಲ್ಲಿ ಜೈನರ ಪ್ರತಿಮೆಗಳು, ಬಸದಿಗಳು ಇದ್ದ ಉಲ್ಲೇಖಗಳು ಶಾಸನಗಳಿಂದ ತಿಳಿದಂತೆ ಕೊಪ್ಪಳವು ಸಹ ಜೈನ ಧರ್ಮದ ಮಹಾ ತೀರ್ಥವಾಗಿದ್ದು ಐತಿಹ್ಯದ ಪ್ರಕಾರ ಇಲ್ಲಿ ೭೭೨ ಬಸದಿಗಳು ಇದ್ದವೆಂದು ತಿಳಿಯುತ್ತದೆ. ಆದರೆ ಅವೆಲ್ಲವುಗಳು ಇಲ್ಲಿಯೇ ಇರಬಹುದೇ ಎಂದು ಸಂಶಯ ಉಂಟಾಗುತ್ತದೆ. ಶಾಸನಗಳಲ್ಲಿ ೧೨ ಬಸದಿಗಳಿದ್ದ ಉಲ್ಲೇಖ ನಮಗೆ ಸಿಗುತ್ತವೆ.[೨೬] ಅವುಗಳಲ್ಲಿ ತೀರ್ಥಬಸದಿ, ಬಸ್ತಿಕಟ್ಟೆ, ಈಶ್ವರಗುಡಿ, ಅಮೃತೇಶ್ವರ ಬಸದಿಗಳು ಮುಖ್ಯವಾಗಿವೆ. ಹತ್ತಿರದ ಗ್ರಾಮ ಮಾದಿನೂರಲ್ಲಿ ಚಂದ್ರನಾಥ ತೀರ್ಥಂಕರ ಹೆಸರಿನ ಬಸದಿಯಿದೆ.[೨೭] ಇಷ್ಟೊಂದು ಪ್ರಮಾಣದಲ್ಲಿ ಜಿಲ್ಲೆಯಲ್ಲಿ ಜೈನರ ಬಸದಿಗಳು ಕಂಡು ಬರಲು ಕಾರಣವಾದರೆ, ಈ ಪ್ರದೇಶದ ಮೇಲೆ ಆಡಳಿತ ನಡೆಸಿದ ಅರಸರು, ಅಧಿಕಾರಿಗಳು, ಸಾಮಂತರು

ಮತ್ತಿತರರು ನೀಡಿದ ಆಶ್ರಯ, ದಾನದತ್ತಿ, ಪ್ರೋತ್ಸಾಹಗಳು ಮುಖ್ಯವಾಗಿವೆ. ಉದಾ: ನೋಡುವುದಾದರೆ ಗಂಗ ಅರಸ ಭೂತುಗನು ತೀರ್ಥಯಾತ್ರೆ ಮಾಡುತ್ತಾ ಇಟಗಿಗೆ ಬಂದಾಗ ಅಲ್ಲಿಯ ತೀರ್ಥಕ್ಕೆ ದಾನ ದತ್ತಿಗಳನ್ನು ಬಿಟ್ಟಿರುವುದಾಗಿ ಇಟಗಿ ಶಾಸನ ತಿಳಿಸಿದೆ.[೨೮] ಮತ್ತು ಈತನ ಮಗಳಾದ ಕುಂದಣ ಸ್ವಾಮಿಯು ಕುಕನೂರಿನ ಕಾಳಾಚಾರ್ಯನಿಗೆ ಅಡ್ಡ ಊರಿಗೆ ಗ್ರಾಮವನ್ನು ದಾನ ನೀಡಿರುತ್ತಾಳೆ.[೨೯] ಇದೇ ಅರಸನ ಪತ್ನಿ ಪದ್ಮಬ್ಬೆ ಕುಪಣಕ್ಕೆ ಬಂದು ಸನ್ಯಾಸ ಸ್ವೀಕರಿಸಿ ಸುಗತಿ ಸಂದಳೆಂದಿದೆ.[೩೦]

ಇಂದ್ರನಂದಿ ಪಂಡಿತರು, ಮಾಳಿಯಬ್ಬೆ, ವೀರನಂದಿ ಮುನೀಂದ್ರರು ಕೊಪ್ಪಳ ತೀರ್ಥದಲ್ಲಿ ತಪಸ್ಸು ಮಾಡಿ ಆ ಧರ್ಮದ ಏಳ್ಗೆಗಾಗಿ ದಾನಗಳನ್ನು ನೀಡಿದ ಕುರಿತು ಕೊಪ್ಪಳ ಶಾಸನದಲ್ಲಿದೆ.[೩೧] ಇದೇ ರೀತಿ ಶಂಕರಗಂಡನು ಕಟ್ಟಿಸಿದ ಜಯಧೀರ ಜೀನಾಲಯಕ್ಕೆ ರೊಟ್ಟಯ್ಯನೆಂಬುವನು ಕುಕನೂರು ೩೬ರ ಸಾಂತವೊಳ ಗ್ರಾಮದ ಮೂನ್ನೂರು ಮತ್ತರು ಭೂಮಿ ಕೊಪ್ಪಳದ ಶಾಂತಲಾದೇವಿ ಬಸದಿಗೆ ಗೌರಾದೇವಿಯರು, ಇತರರು ಭೂಮಿ ದಾನಮಾಡಿದ್ದರು.[೩೨] ಕೊಪ್ಪಳದಲ್ಲಿ ದಡಿಯಮರಸನು ಮಾಡಿಸಿದ ಬಸಿದಿಯ ಕಳಸಾರೋಹಣಕ್ಕೆ ಮಾದರಸನು ಜೀರ್ಣೋದ್ಧಾರ ಮಾಡಿಸಿ ಮಹಾದಾನ ಮಾಡಿದನು.[೩೩] ಕಲ್ಲೂರು,[೩೪] ಬಳಗೇರಿ, ಕೊಪ್ಪಳ ಕೋಟೆಯ ಶಾಸನಗಳು ಸಹ ಅನೇಕ ದಾನಗಳನ್ನು ನೀಡಿದ ಬಗ್ಗೆ ಉಲ್ಲೇಖಿಸುವವು. ಕ್ರಿ. ಶ. ೯೮೭ರಲ್ಲಿ ಮಲದಾರಿದೇವನ ಶಿಷ್ಯೆ ಚಂಗಬ್ಬೆ ಸುಗತಿಯನ್ನು ಸಾಧಿಸಿದಳು. ಕುಂದಣಸ್ವಾಮಿ ಮತ್ತು ಚಂಗಲದೇವಿಯರಿಬ್ಬರು ಸತ್ತ ಮೇಲೆ ಧರ್ಮ ಕಾರ್ಯವೇ ನಿಂತು ಹೋಯಿತೆಂದು ಶಾಸನ ಹೊಗಳಿದೆ.[೩೫] ಕ್ರಿ. ಶ.೧೦೦೮ರ ಶಾಸನವೊಂದು ಸಾವಿಕುಮಾರ ಎಂಬುವವನು ಬಿಚ್ಚುಕುನ್ದೆ ಗ್ರಾಮದಲ್ಲಿ ನಾಗದೇವ ಬಸದಿಯನ್ನು ಕಟ್ಟಿಸಿ ಹೊಸ ಜಿನಬಿಂಬವನ್ನು ಪ್ರತಿಷ್ಠಾಪಿಸಿ ಪೂಜಿಸಿದನೆಂದು ತಿಳಿಸುತ್ತದೆ. ಈ ನಾಗದೇವನು ಅತ್ತಿಮಬ್ಬೆಯ ಗಂಡನಿರಬಹುದು. ಈ ಬಸದಿಯು ಕೊಪ್ಪಳದ ಚಂದ್ರಬಂಡೆಯ ಪ್ರದೇಶದಲ್ಲಿದ್ದಿರಬೇಕು. ನಾಗದೇವನ ಸವಣ್ಣಾದ ಗಡಿಂಬ ಎಂಬ ಅಳತೆಗೋಲು ಈ ಕಟ್ಟಡದ ಅವಶೇಷಗಳ ಬಳಿ ಪತ್ತೆಯಾಗಿರುವದರಿಂದ ಅದೇ ನಾಗದೇವನ ಬಸದಿಯನ್ನಲಾಗಿದೆ. ಕಲ್ಯಾಣ ಕೀರ್ತಿಮುನಿಯು ಇದನ್ನು ಕೀರ್ತಿಸುತ್ತ ಮುಡಪಿದನೆಂದಿರುವುದು ಮತ್ತು ಕಡುತಪಸ್ಸಿನಿಂದ ಇಂಗುಣಿ ಮರಣದಿಂದ ಸಿಂಹನಂದಿ ಆಚಾರ್ಯರು ಮುಡಪಿದ ಸ್ಥಳದಲ್ಲಿ ಬಸದಿಯನ್ನು ಕಟ್ಟಿಸಿ ಶಾಂತಿನಾಥನ ಪ್ರತಿಷ್ಠೆಯನ್ನು ಬಿಚ್ಚು ಕುನ್ದಿಯಲ್ಲಿ ಮಾಡಿಸಿದವನು ಕಲ್ಯಾಣ ಕೀರ್ತಿಮುನಿ ಎಂದು ಹೇಳುತ್ತದೆ.[೩೬] ಯಲಬುರ್ಗದಲ್ಲಿ ವಿಕ್ರಮಾದಿತ್ಯನ ಮಹಾಪ್ರಧಾನ ತಂತ್ರಾಧಿಷ್ಠಾಯಕ ದೇವಣಾರ್ಯನ ಹೆಂಡತಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸುತ್ತಾಳೆ.[೩೭] ಕಾಲದ ಉಲ್ಲೇಖವಿಲ್ಲದ ಈ ಶಾಸನವು ಕ್ರಿ. ಶ. ೧೨ನೆಯ ಶತಮಾನಕ್ಕೆ ಸೇರಿದೆ. ಕೊಪ್ಪಳದ ಜೀನ ಪೀಠಗಳಲ್ಲಿ ದೊರೆಯುವ ಮೂರು ಶಾಸನಗಳು ೧೨ನೇ ಶತಮಾನಕ್ಕೆ ಸೇರಿದವುಗಳಾಗಿದ್ದು ಸೋಮರಾಯನೆಂಬುವನು ಕುಶಜೀನಾಲಯವನ್ನು ಮಾಡಿಸಿ ಚಂದ್ರಪ್ರಭ ಮತ್ತು ಪಾರ್ಶ್ವನಾಥಬಿಂಬಗಳನ್ನು ನಿರ್ಮಿಸಿದನೆಂದು ಹೇಳುತ್ತದೆ.[೩೮]

ಹಣವಾಳ ಶಾಸನದಲ್ಲಿ ಜಿನಾಲಯ ಜೀರ್ಣೋದ್ಧಾರ ಮಾಡಿದ ಉಲ್ಲೇಖವಿದೆ.[೩೯] ಕ್ರಿ. ಶ.೧೨೦೪ರ ಕೊಪ್ಪಳ ಶಾಸನದಲ್ಲಿ ಯಾದವ ಸಿಂಗಣ ಬಸದಿಯನ್ನು ಕಟ್ಟಿಸಿದ ಉಲ್ಲೇಖವಿದೆ.[೪೦] ಕ್ರಿ.ಶ.೧೩ನೆಯ ಶತಮಾನಕ್ಕೆ ಸೇರಿದ ಮೂರು ಶಾಸನಗಳು ಯಲಬುರ್ಗಾದಲ್ಲಿ ಜೈನಬಸದಿ ಕಟ್ಟಿಸಿದುದ್ದನ್ನು ಹಾಗೂ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದನ್ನು ತಿಳಿಸುತ್ತದೆ.[೪೧] ಕ್ರಿ. ಶ. ೧೩ನೆ ಶತಮಾನಕ್ಕೆ ಸೇರಬಹುದಾದ ಯಲಬುರ್ಗದ ಇನ್ನೊಂದು ಶಾಸನ ಈ ಪ್ರದೇಶದಲ್ಲಿ ಜೈನಧರ್ಮ ಎದುರಿಸಿದ ಕಷ್ಟಕೋಟಲೆಗಳ ಮೇಲೆ ಬೆಳಕು ಚಲ್ಲುವಂತಹದಾಗಿದೆ. ಮುಮ್ಮಡಿಸಿಂಗನ ಭಾದೆಯಿಂದ ಎರಂಬರಿಗೆಯಲ್ಲಿ ಧರ್ಮ ಕೆಟ್ಟಿತ್ತೆಂಬ ಸಂಗತಿಯನ್ನು ತಿಳಿಸುತ್ತದೆ. ಯುದ್ಧಗಳ ಸಮಯದಲ್ಲಿ ಮುಮ್ಮಡಿಸಿಂಗನು ಬಸದಿಗಳನ್ನು ಹಾಳು ಮಾಡಿರಬಹುದು. ಆಗ ಹೊಯ್ಸಳದೇಶ ಮತ್ತು ಕುಂತಳ ದೇಶಕ್ಕೆ ಆಚಾರ್ಯನಾಗಿದ್ದ ರಾಯಾಚಾರ್ಯನು ಜೈನಧರ್ಮವನ್ನು ಉದ್ಧರಿಸಿದಂತೆ ಶಾಸನ ಹೇಳಿದೆ.[೪೨] ಈ ಬಸದಿಯ ಪಾರ್ಶ್ವನಾಥನ ಬಿಂಬವನ್ನು ಮಿಂಡಗುದ್ದಲಿಯಕೇತಿ ಸೆಟ್ಟಿ ಮಾಡಿಸಿದ. ಬಹುಷ ಈ ಜೈನವಿರೋಧಿ ನೀತಿ ಇವರ ರಾಜ್ಯಾಡಳಿತವಿರುವರೆಗೆ ಮುಂದುವರಿದಂತೆ ಕಾಣುತ್ತದೆ. ಇದೆಲ್ಲವನ್ನು ತಿಳಿದಾಗ ೧೩ನೆಯ ಶತಮಾನದ ನಂತರದ ಕಾಲ ಜೈನ ಧರ್ಮದ ಅವನತಿಯ ಕಾಲವೆಂದು ಹೇಳಬಹುದು.

ಹೀಗೆ ಶಾಸನಗಳು ಜೈನ ಧರ್ಮದ ಆಗಮನ, ಬೆಳವಣಿಗೆಯಲ್ಲಿ ಕನ್ನಡಿಗರು ತೋರಿದ ಉದಾರ ಭಾವನೆಗಳನ್ನು ಮತ್ತು ಅದು ಅವನತಿಯತ್ತ ಸಾಗಿದ ಬಗೆಯನ್ನು ತಿಳಿಸುವಲ್ಲಿ ಸಹಾಯಕವಾಗಿವೆ.[೪೩] ಆಗ ಜೈನ ಧರ್ಮವನ್ನು ಉಳಿಸಿಕೊಂಡು ಬರುವುದು ಜೈನರಿಗೆ ಅನಿವಾರ್ಯವಾಗಿರಬೇಕು. ಹೀಗಾಗಿ ಮೋಕ್ಷ, ಪುಣ್ಯ, ಪಾಪಗಳೆರಡನ್ನು ಮೀರಿ ನಿಲ್ಲುವಲ್ಲಿ ಜೀನಧರ್ಮ ಸಮ್ಯಕ ಜ್ಞಾನ ದರ್ಶನ ಚಾರಿತ್ರ್ಯ, ಅನುಸರಿಸಿ ಮೋಕ್ಷ ಅಥವಾ ನಿರ್ವಾಣ ಲಭಿಸುತ್ತದೆಯೆಂದು[೪೪] ಅನೇಕ ಮುನಿಗಳು, ಶ್ರಾವಕ, ಶ್ರಾವಕಿಯರು, ಕಂತಿಯರು, ಸಂಘದ ಗಣಧರರು, ಗಣಧರ ಶಿಷ್ಯರು ಪಾಲಿಸಿಕೊಂಡು ಬಂದ ತತ್ವಗಳು ಮುಖ್ಯವಾಗಿವೆ.

### ಚಾತುರ್ವರ್ಣ ಸಂಘ-ಗಣ-ಗಚ್ಛ-ಅನ್ವಯ- ಸಂಘ

### ಗಣ-ಬಳ್ಳಿ(ಬಳಿ)

ಶಾಸನಗಳಲ್ಲಿ ಉಲ್ಲೇಖ ಬರುವ ಚಾತುರ್ವರ್ಣ ಸಂಘ-ಸೇನ, ನಂದಿ, ದೇವ, ಸಿಂಹ, ಸಮಾನಾರ್ಥವಾಗಿ ಸಂಘ, ಗಣ, ಅನ್ವಯ, ಬಳಿ ಗಣಧರರ ಕೈಯಲ್ಲಿ ಸಿಲುಕಿ ಬದಲಾಗುತ್ತ ಮುನಿಸಂಪ್ರದಾಯದತ್ತ ಸಾಗಿರುವುದನ್ನು[೪೫] ಕೊಪ್ಪಳದಲ್ಲಿ ದೊರಕಿರುವ ಶಾಸನಗಳಿಂದ ಸ್ಪಷ್ಟವಾಗುತ್ತದೆ.

### ಗಚ್ಛ

ಗಣಗಳು ದೊಡ್ಡ ಮುನಿಗಳ ಗುಂಪಾದರೆ ಗಚ್ಛಗಳು ಚಿಕ್ಕಮುನಿಗಳ ಗುಂಪು ಸೂಚಕವಾಗಿವೆ. ಕೊಪ್ಪಳ ಮೂರು ಶಾಸನಗಳಲ್ಲಿ ಪುಸ್ತಕಗಚ್ಛ, ಚಿತ್ರಗಚ್ಛ ಹಾಗೂ ಸರಸ್ವತಿ ಗಚ್ಛಗಳ ಉಲ್ಲೇಖಗಳು ಕಂಡುಬರುವವು.[೪೬] ಈ ಗಚ್ಛದ ಶಾಖೆಗಳೇ ಅನ್ವಯಗಳಾಗಿವೆ. ಕೊಂಡಕುಂದ ಮುನಿಯು ಈ ಅನ್ವಯದ ಗುರು ಆಗಿದ್ದು[೪೭] ಅವನಿಂದ

ಈ ಬಳ್ಳಿ ಬೆಳೆದು ಅವನ ಹೆಸರೆ ಇದಕ್ಕೆ ಬಂದಂತಿದೆ. ಅದನ್ನು ಕೊಪ್ಪಳ ಶಾಸನಗಳು ಕಲಿಕಾಲ ಅನ್ವಯ ಕುಂಡಕುಂದಾನ್ವಯ (ಕೊಂಡ ಕುಂದ) ಮೈಳಾಪ ಅನ್ವಯ ಅಮೈಲಾಪಗಳನ್ನು ಹೆಸರಿಸುತ್ತದೆ. ಮತ್ತೊಂದು ಶಾಸನ ಜೀನಮುನಿ ಕೊಂಡ ಕುಂದಾನ್ವಯ ಪುಸ್ತಕಗಚ್ಛದ ರವಿಚನ್ದ ಅವನ ಶಿಷ್ಯರನ್ನು ಪ್ರಸ್ತಾಪಿಸುತ್ತದೆ.[೪೮]

## ಸಂಘ

ಧಾರ್ಮಿಕ ಸುಧಾರಣೆಯಲ್ಲಿ ಮೂಲ ಸಂಘ[೪೯] ಯಾಪನೀಯ ಸಂಘ, ಧಾರ್ಮಿಕ ಸಂಘ, ಕಿತ್ತೂರು ಸಂಘಗಳು ಮುಖ್ಯ ಪಾತ್ರವಹಿಸಿದಂತೆ ನಂದಿ ಸಂಘ, ದ್ರಾವಿಡ ಸಂಘ,[೫೦] ಮೂಲಸಂಘ,[೫೧]ಗಳು ಮುಖ್ಯವಾಗಿವೆ.

## ಗಣ

ಇದು ಜೈನ ಸಮುದಾಯದ ಸಂಘದ ಶಾಖೆಗಳಲ್ಲೊಂದ್ದಾಗಿದ್ದು. ಆಚಾರ್ಯರ ನೇತೃತ್ವದಲ್ಲಿ ಸೇರುವ ಮುನಿಗಳ ಗಣವಾಗಿದೆ. ಇದರಲ್ಲಿ ಸೇನಗಣ, ಬಲತ್ಕಾರಗಣ, ಬಳಗಾರಗಣ, ದೇಸಿಯ-ದ್ರಾಮಿಳಗಣ, ಪುನ್ನಾಗಗಣ, ವೃಷಮೂಲ ನಂದಿ, ಕವಾಟ, ಸೂರಸ್ತ, ಕಾಣೂರಗಣ ಕಾರೆಯಗಣಗಳು ಬರುತ್ತವೆ. ಜಿಲ್ಲೆಯ ಶಾಸನಗಳು ಕಾಣೂರಗಣ,[೫೨] ಸೂರಸ್ತಗಣ,[೫೩] ಬಳಗಾರಗಣ,[೫೪] ಬಲತ್ಕಾರ ಗಣ,[೫೫] ಸೇನಗಣ,[೫೬] ದೇಸಿಗಣ[೫೭]ಗಳ ಉಲ್ಲೇಖಗಳನ್ನು ನೀಡುವವು.

## ಬಳಿ ಅಥವಾ ಬಳ್ಳಿ

ಗುರುವಿನ ಸ್ಥಾನದ ಹೆಸರಿನಿಂದ ಕಾಣಿಸಿಕೊಳ್ಳುವ 'ಬಲಿ' ಎಂಬುದು ಧಾರ್ಮಿಕದಲ್ಲಿ ವಂಶ ಎಂದು ಬಳಕೆಯಾದರೆ ಗಚ್ಛದಲ್ಲಿ 'ವಲಿ' ಎಂದು ಪ್ರಸ್ತಾಪಗೊಂಡಿದೆ.[೫೮] ಇದರ ಕುರಿತು ಯಲಬುರ್ಗಿಯ ಶಾಸನವೊಂದು ''ಸ್ವಸ್ತಿಶ್ರೀಮೂಲ ಸಂಘ ದೇಶಿಯ ಗಣ ಪುಸ್ತಕಗಚ್ಛದಯಿಂಗಳೇಶ್ವರದ ಬಳ್ಳಿಯ ಮಾಧವ ಚಂದ್ರಭಟ್ಟಾರಕ ಎಂದಿದೆ.[೫೯] ಕೊಪ್ಪಳ ಶಾಸನ ಮೂಲಸಂಘದ ಬಲತ್ಕಾರ ಗಣದ ಬಸದಿಯೊಂದು ಇದ್ದಿರುವುದನ್ನು ಉಲ್ಲೇಖಿಸುತ್ತದೆ.[೬೦] ಹೀಗೆ ವಿವಿಧ ಗಣಗಳ ಮೂಲಕ ಜೈನಧರ್ಮ ಪ್ರಸಾರಗೊಳ್ಳಲು ಕಾರಣೀಭೂತರಾದ ಮುನಿಗಳ ಪಾತ್ರವು ಸಾಂಸ್ಕೃತಿಕ ಚರಿತ್ರೆಯಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುತ್ತದೆ.

## ಮುನಿಗಳು

ದಕ್ಷಿಣ ಭಾರತದ ಇತಿಹಾಸದಲ್ಲಿ ಜೈನಧರ್ಮಕ್ಕೆ ಹೆಸರಾದ ಜೈನ ಕೇಂದ್ರ ಕೊಪ್ಪಳ. ಜೈನಮುನಿಗಳಿಗೆ ಕೇಂದ್ರಸ್ಥಳವಾಗಿತ್ತು. ಅನೇಕ ಮುನಿಗಳು ಇಲ್ಲಿದ್ದುಕೊಂಡು, ದೂರದ ಸ್ಥಳಗಳಿಗೆ ಹೋಗಿ ಜೈನ ಧರ್ಮದ ಸೂತ್ರದಂತೆ ಸಮಾಜದ ವಿವಿಧ ಚಟುವಟಿಕೆಯಲ್ಲಿ ಭಾಗಿಯಾಗುವುದರೊಂದಿಗೆ ಅಲ್ಲೆ ನೆಲೆಸಿ ಜೈನಧರ್ಮದ ತತ್ವಗಳನ್ನು ಬೋಧಿಸುತ್ತಿದ್ದರು. ಈ ಮುನಿಗಳ ವಿವಿಧ ವಿದ್ವತ್ತು ಅಪಾರವಾಗಿತ್ತು. ಇನ್ನು ಕೆಲವರಿಗೆ ಜೈನ ಗ್ರಂಥಗಳಲ್ಲಿ ಮಾತ್ರವಲ್ಲ ಎಲ್ಲಾ ದರ್ಶನಗಳಲ್ಲಿ ಎಲ್ಲಾ ಕಲೆಗಳಲ್ಲೂ ಅನೇಕ ಭಾಷಾ ಸಾಹತ್ಯಗಳಲ್ಲೂ, ವ್ಯಾಕರಣ

ನಿಘಂಟು-ಗಣಿತ, ವಾತ್ಸ್ಯಾಯನ, ಜೋತಿಷ್ಯ, ಶಕುನ, ಛಂದಸ್ಸು, ಮನು, ಗಂಧರ್ವ, ಅಲಂಕಾರ, ಮಹಾಕಾವ್ಯನಾಟಕ, ಅಧ್ಯಾತ್ಮಿಕ, ಸಿದ್ಧಾಂತಗಳಲ್ಲಿ ಅದ್ಭುತವಾದ ಪರಿಶ್ರಮವಿತ್ತು.[೬೧] ಅಂತಹ ಮುನಿಗಳ ಕುರಿತು ಕೊಪ್ಪಳದ ಅನೇಕ ಶಾಸನಗಳು ಅಪಾರ ಮಾಹಿತಿಯನ್ನು ಈ ಕೆಳಗಿನಂತೆ ಒದಗಿಸಿರುವುದನ್ನು ಕಾಣುತ್ತೇವೆ.

ಕುಂದಕುಂದಾನ್ವಯದ ಎಕಚಟ್ಟುಗದ್ದೆ ಭಟ್ಟಾರಕ,[೬೨] ಮೇಗಚಂದ್ರ ಮುನೀಂದ್ರ,[೬೩] ಸಕಳಚಂದ್ರ ಭಟ್ಟಾರಕ,[೬೪] ಕೊಂಡಕುಂದಾನ್ವಯದ ದೇಶಿಗಣ ಪುಸ್ತಕಗಚ್ಛದ ಗೊಲ್ಲಾಚಾರ್ಯನು,[೬೫] ಶ್ರವಣಬೆಳಗೊಳದ ಮೂರು ಶಾಸನಗಳಲ್ಲಿ ವರ್ಣಿಸಲ್ಪಟ್ಟಿದ್ದಾನೆ. ಕೊಂಡಕುಂದ ಅನ್ವಯದೇಸಿಗಣದ ಶ್ರೀಧರಮುನಿ,[೬೬] ಜಟಾಸಿಂಹನಂದಿ,[೬೭] ತ್ರಿಭುವನ ಚಂದ್ರಮುನಿ,[೬೮] ನಾಗನಂದಿ ಪಂಡಿತಭಟಾರ,[೬೯] ವೀರನಂದಿ ಸಿದ್ಧಾಂತ ಭಟಾರ,[೭೦] ಕೊಂಡ ಕುಂದಾನ್ವಯದ ದೇಸಿಗಣದ ಮುಳಧಾರಿ ಮುನೀಶ್ವರ,[೭೧] ಕೊಂಡಕುಂದಾನ್ವಯ ದೇಸಿಗಣದ ಶ್ರೀಧರ ವಿಮುಕ್ತಿ ಭಟ್ಟಾರಕ,[೭೨] ಮಲಧಾರಿದೇವ,[೭೩] ಕೊಂಡಕುಂದಅನ್ವಯ ದೇಸಿಗಣದ ದಿವಾಕರಣಂದಿ ಪಂಡಿತ,[೭೪] ಬಳಗಾರಗಣದ ಗಂಡ ವಿಮುಕ್ತಿ, ದೇವಭಟ್ಟಾರಕ,[೭೫] ನೇಮಿದೇವಮುನಿ,[೭೬] ವರ್ಧಮಾನ ಋಷಿ[೭೭] ಚಂದ್ರಭಟ್ಟಾರಕ[೭೮] ಕೊಂಡಕುಂದಾನ್ವಯ ಬಲತ್ಕಾರಗಣಗ ನೇಮಿಚಂದ್ರ ಭಟ್ಟಾರಕ.[೭೯] ತ್ರಿಕಾಳಯೋಗೀಶ್ವರ ಮುನಿ,[೮೦] ಬಳಗಾರ ಗಣದ ಮೈಲಾಪ ಅನ್ವಯ ಜಯನಂದಿ ಸಿದ್ಧಾಂತ ಮುನಿ[೮೧] ಮೇಘಣಂದಿ ಭಟ್ಟಾರಕ[೮೨] ಕೊಂಡಕುಂದ ಅನ್ವಯ ದೇಸಿಗಣ ಪುಸ್ತಕಗಚ್ಛದ ದೇವೇಂದ್ರ ಮುನೀಶ್ವರ[೮೩] ಮಲಧಾರಿ ಮುನಿ,[೮೪] ಶ್ರೀಧರ ದೇವ,[೮೫] ನರೇಂದ್ರಸೇನ ಪಂಡಿತ ಅವನ ಶಿಷ್ಯ ಸಮಂತಭದ್ರ,[೮೬] ಸೇನಗಣದ ಅಜಿತಸೇನಾಚಾರ್ಯ,[೮೭] ಶ್ರೀಪಾದ ದೇವೇಂದ್ರ ಕೀರ್ತಿಭಟ್ಟಾರಕ,[೮೮] ಶ್ರೀಧರದೇವ,[೮೯] ಸಿಂಹನಂದಿ ಆಚಾರ್ಯ,[೯೦] ಕಲ್ಯಾಣಕೀರ್ತಿಮುನಿ,[೯೧] ಮೌನಿ ಭಟ್ಟಾರಕ,[೯೨] ದೇವಣಂದಿಭಟ್ಟಾರಕ,[೯೩] ಕಾಣೂರ ಗಣದ ವಿಮಳ ನಂದಿ ಭಟ್ಟಾರಕ,[೯೪] ಕೀರ್ತಿವೆತ್ತ ಪದ್ಮನಂದಿ ಸಿದ್ಧಾಂತಿದೇವ,[೯೫] ಕೊಂಡಕುಂದ ದೇಶಿಗಣದ ನಯನಂದಿ ಭಟ್ಟಾರಕ,[೯೬] ಕೊಂಡಕುಂದದೇಶಿಗಣದ ನಯನಂದಿ ಭಟ್ಟಾರಕ,[೯೭] ಕಲ್ಲಂಗೆರೆಯ ಅಭಯನಂದಿ ಪಂಡಿತ,[೯೮] ದೇಶಿಯ ಗಣದ ನಂದಿ,[೯೯] ಬಳಗಾರಗಣದ ವೀರನಂದಿ ಮುನಿ,[೧೦೦] ಕಾಣೂರಗಣದ ಮುನೀಂದ್ರ,[೧೦೧] ಮೂಲಸಂಘ ದೇಶಿಗಣ ಪುಸ್ತಕ ಗಚ್ಛ ಇಂಗಳೇಶ್ವರ ಬಳ್ಳಿಯ ಮಾಧವ ಚಂದ್ರಭಟ್ಟಾರಕ,[೧೦೨] ರಾಜಗುರು ಮಂಡಲಾಚಾರ್ಯ ಮೂಗಣಂದಿ ಸಿದ್ಧಾಂತಿ ಚಕ್ರವರ್ತಿ,[೧೦೩] ರಾಜಗುರುಬಾಳೆಂದು,[೧೦೪] ದ್ರಾವಿಡ ಸಂಘದ ಮುನಿ ಅಜಿತಸೇನ,[೧೦೫] ಚಂದ್ರಸೇನದೇವ,[೧೦೬] ಮೂಲ ಸಂಘಸೇನಗಣದ ದೇವಭಟ್ಟಾರಕ,[೧೦೭] ಅರ್ಹನಂದಿ ಮುನಿಪ,[೧೦೮] ನೇಮಿಚಂದ್ರ ಸಿದ್ಧಾಂತ ಮುನಿ,[೧೦೯] ತ್ರಿವಿದ್ಯಾದಾಮನಂದಿ ಮುನೀಂದ್ರನ ಸರಗತಿಮುನಿ ಹಾಗೂ ಆತನ ವಂಶಾವಳಿಯನ್ನು ಕೊಪ್ಪಳ ಶಾಸನದಲ್ಲಿ ಕಾಣುತ್ತೇವೆ.[೧೧೦] ಹೀಗೆ ಕೊಪ್ಪಳ ಜಿಲ್ಲೆಗೆ ಸಂಬಂಧಿಸಿದಂತೆ ಇನ್ನೂ ಕೆಲವರು ಬೇರೆ ಸ್ಥಳದಿಂದ ಬಂದು ಈ ಪವಿತ್ರ ಸ್ಥಳದಲ್ಲಿ ತಪಸ್ಸು ಮಾಡಿ ಸ್ವರ್ಗಸ್ಥರಾಗಿರುವರು. ಈ ಮುನಿಗಳ ಕೆಲಸ ಕಾರ್ಯವೆನಂದರೆ ಧರ್ಮ ಪ್ರಚಾರ, ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸುವುದು, ಕೆಲವೊಂದು ಅಧಿಕಾರಿಗಳಿಂದ ಊರು ಪಟ್ಟಣಗಳ ಆಡಳಿತವನ್ನು ನಿರ್ವಹಿಸುವುದರಿಂದ ಸಮಾಜದಲ್ಲಿ ಪ್ರಮುಖ

ಸ್ಥಾನ ಹೊಂದಿರುತ್ತಿದ್ದರು. ಇದಲ್ಲದೆ ಜಿನ ಬಿಂಬ ಬಸಿದಿಗಳ ಜೀರ್ಣೋದ್ಧಾರ, ಪ್ರತಿಷ್ಠಾಪನೆ ಮಾಡುತ್ತ ನಿಶಿಧಿಗಳನ್ನು ನಿಲ್ಲಿಸುವುದರೊಂದಿಗೆ ಧಾರ್ಮಿಕ ಮತ್ತು ಸಾರ್ವಜನಿಕ ಕಾರ್ಯಗಳಲ್ಲಿ ಆಸಕ್ತಿ ತಾಳಿ ಅದರಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವದನ್ನು ಶಾಸನಗಳು ಸಾಕಷ್ಟು ಹೊಗಳುತ್ತವೆ.

## ಕಂತಿಯರು (ಆರ್ಯಿಕೆ)

ಜೈನಧರ್ಮದಲ್ಲಿ ಪುರುಷ ಸನ್ಯಾಸಿಗಳನ್ನು ಸವಣರು, ಮುನಿಗಳು, ನಿರ್ಗ್ರಂಥರೆಂದು ಕರೆದ ಹಾಗೆ ಸ್ತ್ರೀ ಸನ್ಯಾಸಿಗಳನ್ನು ಅಜ್ಜಿಕೆ, ಆರ್ಯಿಕೆ ಕಂತಿಯರೆಂದು ಕರೆಯಲಾಗಿದೆ. ಈ ಕಂತಿಯರಿಗೆ ಅನೇಕ ಶಿಷ್ಯೆಯಂದಿರಿದ್ದು ಇವರಿಗೂ ಸಹ ಪ್ರತ್ಯೇಕ ಮಠಗಳಿದ್ದವು. ಆ ಮಠಗಳಲ್ಲಿದ್ದುಕೊಂಡು ಪುರುಷರಿಗೆ ಸಮಾನವಾಗಿ ವಿವಿಧ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳಲ್ಲಿ ಭಾಗಿಗಳಾಗಿ ಕಾರ್ಯವೆಸಗುತ್ತಿದ್ದರು[೧೧೧] ಮತ್ತು ವ್ರತಾಚರಣೆ ಕೈಕೊಳ್ಳುವ ಮೂಲಕ ಅನೇಕಕಂತಿಯರು ಸಲ್ಲೇಖನ ಸಮಾದಿಗಳನ್ನು ಹೊಂದಿ ಮೋಕ್ಷ ಸಂಪಾದನೆ ಸಾಧಿಸಿದ್ದಾರೆ.[೧೧೨] ಅವರಲ್ಲಿ ಕೊಪ್ಪಳ ಜಿಲ್ಲೆ ಶಾಸನೋಕ್ತ ಕಂತಿಯರು ಸೇರಿದ್ದಾರೆ ಅವರ ಕುರಿತು ಇಲ್ಲಿಯ ಶಾಸನಗಳು ಶ್ರೀಧರ ಮುನಿಯ ಶಿಷ್ಯ ಕಂತಿ ಪೊಲಿಯಬ್ಬೆ[೧೧೩] ಕಂತಿ ಪಿಟ್ಟಬ್ಬೆ[೧೧೪] ಕಂತಿ ಎರೆಯಬ್ಬೆ[೧೧೫] ಕಂತಿ ಜಕ್ಕಿಯಬ್ಬೆ[೧೧೬] ಕಂತಿ ಪಿರಿಯಬ್ಬರಸಿ, ಅಸಗಬ್ಬರಸಿ ಮತ್ತು ರೇವಕಬ್ಬೆಯರು[೧೧೭] ನೇಮಿಚಂದ್ರ ಭಟ್ಟಾರಕನ ಶಿಷ್ಯಯರಾದ ನಿಜಕವ್ವೆ, ಇವಳ ಮಗಳು ಜಕ್ಕಿಯಬ್ಬೆ[೧೧೮] ಕಂತಿ ಗೊನಂಬೆ[೧೧೯] ಮಲದಾರಿ ಮುನಿಯ ಶಿಷ್ಯೆ ಕಂತಿ ವೋಲೆಯಬ್ಬೆ[೧೨೦] ಕೋಗಳಿಯ ಕಂತಿ ಪದ್ಮಬ್ಬರಸಿ[೧೨೧] ದೇವಣಂದಿಭಟ್ಟಾರಕನ ಶಿಷ್ಯೆ ಕಂತಿದೇಯಕಬ್ಬೆ[೧೨೨] ಕಂತಿ ಮಾಚಿಕಬ್ಬೆ[೧೨೩] ಕಾಂತಿಕಾಳಬ್ಬೆ[೧೨೪] ಕಂತಿ ಜಾಕಬ್ಬೆ[೧೨೫] ಅಡೂರ ಗ್ರಾಮದ ಮೂಲಸಂಘ ಬಲತ್ಕಾರಗಣದ ಸನ್ಯಾಸಿಯರು ಇನ್ನು ಅನೇಕ ಸನ್ಯಾಸಿಯರು ಜೈನಧರ್ಮಕ್ಕೆ ಸೇವೆ ಸಲ್ಲಿಸಿ ಕೊನೆಗೆ ಧರ್ಮಕ್ಕಾಗಿಯೇ ದೇಹ ಬಿಟ್ಟಿದ್ದಾರೆ.[೧೨೬]

## ಆರಾಧನೆ

ವೈಷ್ಣವ ಧರ್ಮದಲ್ಲಿ ಗರುಡರು, ಶೈವರಲ್ಲಿ ದ್ವಾರಪಾಲಕರು, ಬೌದ್ಧ ಧರ್ಮದಲ್ಲಿ ಬಿಕ್ಷು-ಬಿಕ್ಷುಣಿಯರನ್ನೆ ಬಿಂಬಿಸುವಲ್ಲಿ ತಮ್ಮ ಆರಾಧನೆ ಮೂಲಕ ಧರ್ಮದ ಆದರ್ಶಗಳನ್ನು ಸಾಧಿಸಲು ಪ್ರಯತ್ನಿಸಿದಂತೆ ಜೈನಧರ್ಮದಲ್ಲಿ ತೀರ್ಥಂಕರಿಗೆ ಪೂಜೆ ಸಲ್ಲಿಸುವಾಗ ತೀರ್ಥಂಕರರ ಪಕ್ಕದಲ್ಲಿ ಶಾಸನ ದೇವತೆಗಳೆಂದು ಹೆಸರಾದ ಯಕ್ಷ ಯಕ್ಷಿಣಿಯರನ್ನು ವಿಶೇಷವಾಗಿ ಗೌರವಾಧಾರಗಳಿಂದ ಪೂಜಿಸುತ್ತಿದ್ದರು. ಅಂತಹ ದೃಷ್ಟಾಂತ ಅಡೂರ ಶಾಸನ ತಿಳಿಸುತ್ತದೆ.[೧೨೭]

ಜೈನ ಧರ್ಮ ಸಂಘಟಿತ ಸಮಾಜವೆಂದೆನಿಸಿಕೊಂಡರೂ ಹಿಂದು ಸಮಾಜದಂತೆ ವಿಸ್ತ್ರುತ ಪ್ರಮಾಣದ ಸಾಧು ಸನ್ಯಾಸಿಗಳ ಹಲವಾರು ಪಂಗಡಗಳು, ವರ್ಗಗಳಾದ ಗಣ, ಸಂಘ, ಗಚ್ಚ, ಅನ್ವಯ, ಬಲಿ, ವಂಶ ಮುಂತಾಗಿ ಬೆಳೆದು[೧೨೮] ಜೈನ ಧರ್ಮದ ಬೆಳವಣಿಗೆಯಲ್ಲಿ ಸಕ್ರೀಯ ಪಾತ್ರವಹಿಸಿದ್ದಾರೆ. ಪ್ರಭುವರ್ಗದ ಅರಸರು

ರಾಣಿಯರು ಸಾಮಂತರು ಮಹಾಮಂಡಳೇಶ್ವರರು, ಗಾವುಂಡರು, ದಂಡನಾಯಕರು ಮುಂತಾದವರು ಈ ಧರ್ಮವನ್ನು ಸ್ವಿಕರಿಸಿ ಅದರ ಬೆಳವಣಿಗೆಗಾಗಿ ಶ್ರಮಿಸಿದ ಪ್ರಸ್ತಾಪಗಳು ನಾಡಿನ ಅನೇಕ ಶಾಸನಗಳಲ್ಲಿ ಕಂಡುಬರುವಂತೆ ಈ ಪ್ರದೇಶದಲ್ಲಿ ಸಹ ಕಂಡು ಬಂದಿವೆ. ಆಚಾರ್ಯ ವರ್ಗವು ಸಹ ಜೈನ ಬಸದಿ ಮಠ, ಗ್ರಾಮಗಳಿಗೆ, ಅಧಿಪತಿಗಳಾಗಿ, ಸ್ಥಾನಾಚಾರ್ಯರಾಗಿ, ಉಪಾಸಕರಾಗಿ ತಮ್ಮ ವ್ರತಾಚರಣೆಗಳನ್ನು ನಡೆಸಿದ್ದ ಉದಾಹರಣೆಗಳು ಕಾಣಸಿಗುತ್ತವೆ.[೧೨೯]

ಜೈನ ಧರ್ಮದ ಬೆಳವಣಿಗೆಯಲ್ಲಿ ಸ್ತ್ರೀಯರು ಕೂಡ ಸಮಾನರಾಗಿ ಮಾಡಿದ ಸೇವೆ ಮೆಚ್ಚುತಕ್ಕದ್ದಾಗಿದೆ.[೧೩೦] ಉದಾ: ನೇಮಿನಾಥನ ಮಡದಿ ರಾಜಮತಿ ಅವಳ ಸಮಕಾಲಿನಳಾದ ಚಂದನಬಾಲೆ, ಗಂಗ ಎರಡನೆ ಭೂತಗನ ಮಡದಿ ಶ್ರಾವಕಿ, ಪದ್ಮಬ್ಬರಸಿ[೧೩೧] ದಿವಾಕರಣಂದಿ ಪಂಡಿತ ಭಟ್ಟಾರಕನ ಶಿಷ್ಯೆ ಶ್ರಾವಕಿ ಅಣಿಗಬ್ಬರಸಿ[೧೩೨] ಶ್ರಾವಕಿ ಚಂದಬ್ಬೆ[೧೩೩] ಭೂತುಗನ ಹಿರಿಯ ಮಗಳು ಕುಂದಮರಸಿ,[೧೩೪] ವಿಜಯಕಬ್ಬರಸಿಯ ಮಗಳು ರೇವಕಬ್ಬಿಗಾವುಂಡಿ[೧೩೫] ಇನ್ನು ಮುಂತಾದವರ ಬಗ್ಗೆ ವರ್ಣನೆಗಳು ಸಹ ಕಾಣಸಿಗುತ್ತವೆ.[೧೩೬]

## ಸಮಾಧಿ ಮರಣಗಳು

ಜೈನಧರ್ಮದಲ್ಲಿ ಶ್ರಾವಕ ಆಚರಣೆಗಳಲ್ಲಿ ಅಹಿಂಸೆ, ಸತ್ಯ ಆಚಾರ್ಯ ಮಿತಪರಿಗ್ರಹ ಮತ್ತು ಮಧ್ಯಮಾಂಸ ಮಧು ಮುಂತಾದ ವ್ರತಾಚರಣೆಗಳನ್ನು ಪಾಲಿಸಿದರೆ ಮೋಕ್ಷ ಸಾಧನೆ ಸಿಗುವುದೆಂಬ ನಂಬಿಕೆಗಳಿದ್ದ ಹಾಗೆ ಪವಿತ್ರ ಸ್ಥಳದಲ್ಲಿ ಮರಣವನ್ನಪ್ಪಿದರೆ ಪುಣ್ಯ ಕಾರ್ಯ ಲಭಿಸುವುದೆಂದು ತಿಳಿದು ಸಮಾಧಿ/ಸಲ್ಲೇಖನ ಇಂಗುಣಿ ಮರಣ, ಪಾವಗ್ಗಮರಣ, ಆರಾಧನಾ ಮರಣ[೧೩೭] ಸಲ್ಲೇಖನ ವ್ರತ ಮರಣ[೧೩೮] ಪಮ್ಯಕತ್ವವ್ರತ ಮರಣ[೧೩೯] ಸಮಾಧಿ ಮರಣ[೧೪೦] ಇಂಗುಣಿ ಮರಣ[೧೪೧] ಪಂಡಿತ ಮರಣ[೧೪೨] ಸಾಮಾನ್ಯ ಮರಣದ[೧೪೩] ಮೂಲಕ ದೇಹಬಿಟ್ಟು ಮೋಕ್ಷಪಡೆಯುತ್ತಿದ್ದರು. ಅದಕ್ಕೆ ಕೊಪ್ಪಳ ಪ್ರಸಿದ್ಧ ಜೈನರ ತೀರ್ಥಕ್ಷೇತ್ರವಾಗಿತ್ತೆಂದು ಇಲ್ಲಿಯ ಶಾಸನಗಳಿಂದ ಸ್ಪಷ್ಟಗೊಳ್ಳುತ್ತದೆ. ಕೆಲವರು ಮುಪ್ಪಿನ ಕಾಲದಲ್ಲಿ ವಾಸಿಯಾಗದ ರೋಗಗಳಿಂದ, ಕ್ಷಾಮದಿಂದ ಬೇಸತ್ತು ಧಾರ್ಮಿಕ ವಿಧಿಗನುಗುಣವಾಗಿ ಸಾಯುವುದಕ್ಕೆ ಜೈನರು ಆಸಕ್ತರಾಗಿದ್ದರೆಂದು 'ರತ್ನಕಂಡಕ'ದಲ್ಲಿ ಹೇಳಲ್ಪಟ್ಟಿದೆ.[೧೪೪] ಭೂತುಗರಾಜನ ಮಗಳು ಕುಂದಣಸ್ವಾಮಿ ಆರಾಧನಾ ವಿಧಿಯಿಂದ ರತ್ನತ್ರಯಗಳನ್ನು ಸಾಧಿಸಿ ದೇವಲೋಕಕ್ಕೆ ಸಂದಳು.[೧೪೫] ಮತ್ತೊಬ್ಬ ಮಗಳು ಬಿಜ್ಜಾಂಕಳು ಕೊಪ್ಪಳದಲ್ಲಿ ಆರಾಧನಾ ಮರಣ ಹೊಂದಿದಳು.[೧೪೬] ಕ್ಷಾಮ ಆವರಿಸಿದಾಗ ಕೊಂಡಕುಂದ ಅನ್ವಯ ದೇಸಿಗಣದ ಶ್ರೀಧರಮುನಿ ತನ್ನ ಮುಪ್ಪಿನಲ್ಲಿ ಸನ್ಯಾಸದಿಂದ ಮರಣಹೊಂದಿದಂತೆ[೧೪೭] ಮೇಘಚಂದ್ರ ಮುನಿ,[೧೪೮] ಶ್ರಾವಕಿ ಅಣಿಗಬ್ಬರ್ಸಿ,[೧೪೯] ಪಲ್ಲವರಾಮನ ಮಡದಿಯರಾದ ಪಿರಿಯಬ್ಬರಸಿ, ಅಗಸಬ್ಬರಸಿ ಮತ್ತು ರೇವಕಬ್ಬೆಯರು[೧೫೦] ಕೋಪಣ ತೀರ್ಥದಲ್ಲಿ ಸನ್ಯಾಸ ವ್ರತದಿಂದ ಮರಣ ಸ್ವೀಕರಿಸಿದರು. ನೇಮಿಚಂದ್ರ ಭಟ್ಟಾರಕರ ಶಿಷ್ಯೆಯರು ಹಾಗೂ ಕಂತಿಯರಾದ ನಿಜಕವ್ವೆ ಇವಳ ಮಗಳು ಜಕ್ಕಿಯಬ್ಬೆಯರು[೧೫೧] ತ್ರಿಕಾಳಯೋಗೀಶ್ವರ[೧೫೨] ಭಯ್ಯಾರದ ಕಮ್ಮಯ್ಯ ಹಾಗೂ ಪಿಟ್ಟಕಬ್ಬೆಯರ ಮಗ ಮಾಕಳಯ್ಯ[೧೫೩] ಮಾಘಣಂದಿ

ಭಟ್ಟಾರಕ[೧೫೪] ಹಿರಿಯ ಕಲ್ಲಂಗೇರೆಯ ರೇವಸೆಟ್ಟಿ ಅವನ ಮಗ ನೊಳಂಬ ಸೆಟ್ಟಿ ಕೊಪಣತೀರ್ಥಕ್ಕೆಂದು ಬಂದು ಸನ್ಯಾಸನ ವಿಧಿಯಿಂದ ಮರಣಹೊಂದಿದರೆ, ಪದ್ಮನಂದಿ ಸಿದ್ಧಾಂತಿ ದೇವಮುನಿ,[೧೫೫] ನಯನಂದಿ ಭಟ್ಟಾರಕನ ಶಿಷ್ಯ ದಂಡನಾಯಕ ಗುಣದ ಬೇಡಂಗ,[೧೫೬] ಇಂದ್ರನಂದಿ ಭಟ್ಟಾರಕ,[೧೫೭] ಪ್ರಧಾನ ಬುಧರಾಜನ ಮಡದಿ ಕಲುಬಾಯಿ[೧೫೮] ಹಾಗೂ ದ್ರಾವಿಳ ಸಂಘದ ಅಜೀತಸೇನಾಮುನಿ[೧೫೯]ಯರು ಸಲ್ಲೇಖನ ವ್ರತದಿಂದ ಕೊಪ್ಪಳತೀರ್ಥಕ್ಕೆ ಬಂದು ಮುಡುಪಿದರು.

ಇನ್ನು ಕೆಲವರು ಸಮಾಧಿ ಮರಣ ಹೊಂದಿರುವರು. ಇದು ಅವರು ಹಾರೈಸುತ್ತಿದ್ದ ಆದರ್ಶ ಮರಣವಾಗಿತ್ತು. ಅವರಲ್ಲಿ ಪ್ರಮುಖರೆಂದರೆ ಚಂದ್ರಮುನಿ,[೧೬೦] ಕಂತಿ ಎರೆಯಬ್ಬೆ,[೧೬೧]ಬಳಗಾರ ಗ್ರಾಮದ ಜಾಕಬ್ಬರಸಿ,[೧೬೨] ವಿಜಯಕಬ್ಬರಸಿ,[೧೬೩] ಕೊಗಳಿಯ ಕಂತಿ ಪದ್ಮಬ್ಬರಸಿ,[೧೬೪] ದೇವನ ಕಂಚಬ್ಬರಸಿ,[೧೬೫] ಆಚಣ ಹಾಗೂ ಸೂತವ್ವೆಯರ ಮಗ ಬೊಪ್ಪಸೆಟ್ಟಿಯರು,[೧೬೬] ಮತ್ತು ಹೂವಿನ ಹಾಸಿಗೆಯ ಮೇಲೆ ಮಲಗಿಸಿ ಸಂಪೂರ್ಣವಾಗಿ ಆಹಾರ ತ್ಯಜಿಸಿ ಸಿಂಹನಂದಿ ಇಂಗುಣಿವ್ರತ ಕೈಕೊಂಡು ಮರಣ ಹೊಂದಿದನು.[೧೬೭] ಇದನ್ನು ಇಂಗುಣಿ ಮರಣವೆನ್ನುತ್ತಾರೆ. ಸಲ್ಲೇಖನ ಮರಣದ ಮತ್ತೊಂದು ಪ್ರಭೇದವಾದ ಪಂಡಿತ ಮರಣದ ಉಲ್ಲೇಖವೊಂದು ಬಳಿಗಾರ ಗಣದ ಗಂಡವಿಮುಕ್ತದೇವ ಭಟ್ಟಾರಕನು ಕ್ರಿ.ಶ.೯೭೭ರಲ್ಲಿ ಕೊಪ್ಪಳದಲ್ಲಿ ಮರಣ ಹೊಂದಿರುವುದಾಗಿ ತಿಳಿಯುತ್ತದೆ.[೧೬೮] ಇನ್ನು ಕೆಲವರು ಧಾರ್ಮಿಕ ಕ್ಷೇತ್ರವೇನಿಸಿದ ಕೊಪ್ಪಳ ಆನೆಗೊಂದಿಯಲ್ಲಿ ಬಂದು ಮರಣ ಹೊಂದಿದ ಕುರಿತು ಶಾಸನಗಳು ಉಲ್ಲೇಖ ನೀಡುವವು. ಉದಾಹರಣೆಗಾಗಿ ಚಂದಬ್ಬರಸಿ,[೧೬೯] ಪದ್ಮಬ್ಬರಸಿ,[೧೭೦] ಸೋಮಸೂರಿ,[೧೭೧] ಚಂದಬ್ಬಿ,[೧೭೨] ಗೋನಂಬೆ,[೧೭೩] ದೊರಯ್ಯ,[೧೭೪] ಮಲಧಾರಿಮುನಿ,[೧೭೫] ಚಂಗಲದೇವಿ,[೧೭೬] ಸಿಂಹನಂದಿ ಆಚಾರ್ಯ,[೧೭೭] ಶ್ರೀಮೇಘಚಂದ್ರ, ಸಿದ್ಧಾಂತಭಟ್ಟಾರಕ,[೧೭೮] ಕೊಂಡಕುಂದಾನ್ವಯದ ದೇಸಿ ಗಣದ ನಯನಂದಿಭಟ್ಟಾರಕ,[೧೭೯] ವೀರನಂದಿ ಪಂಡಿತ,[೧೮೦] ಜಾಕಯ್ಯ,[೧೮೧] ಕೋಪಣ ತೀರ್ಥದ ಚಂದಪ್ಪ,[೧೮೨] ಪಾಯಣ್ಣ,[೧೮೩] ಯೋಗಿದೇವ,[೧೮೪] ಮುಂತಾದವರಾಗಿದ್ದಾರೆ. ಇಲ್ಲಿ ಗಮನಿಸುವ ಅಂಶವೆಂದರೆ ಜೈನರು ಧಾರ್ಮಿಕ ಕ್ಷೇತ್ರದಲ್ಲಿ ಜನಸಾಮಾನ್ಯರಿಂದ ಮೊದಲುಗೊಂಡು ಮನ್ನಣೆ ಪಡೆದು ಸಾಂಸ್ಕೃತಿಕ ಕ್ಷೇತ್ರದಲ್ಲಿ ನೀಡಿದ ಕೊಡುಗೆ ಇತಿಹಾಸಕ್ಕೆ ತುಂಬಾ ಉಪಕಾರಿಯಾಗಿದೆ.

೧೧-೧೨ನೆ ಶತಮಾನದ ನಂತರ ಕಾಲದ ಜೈನ ಧರ್ಮದ ಕುರಿತು ಜಿಲ್ಲೆಯ ಬೆರಳೆಣಿಕೆಯಷ್ಟು ಶಾಸನಗಳಲ್ಲಿ ಉಲ್ಲೇಖಗಳು ಕಾಣುತ್ತಿದ್ದು ಆಗ ನಿಧಾನಗತಿಯಲ್ಲಿ ಜೈನಧರ್ಮ ಕೊಪ್ಪಳದಿಂದ ಯಲಬುರ್ಗಿಗೆ ಸ್ಥಳಾಂತರವಾದಂತೆ ತಿಳಿಯುತ್ತದೆ.[೧೮೫] ಏಕೆಂದರೆ ಯಲಬುರ್ಗಾದಲ್ಲಿ ವಿಕ್ರಮಾದಿತ್ಯನ ಮಹಾ ಪ್ರಧಾನ ತಂತ್ರಧಿಷ್ಠಾಯಕ ದೇವಣಾರ್ಯನ ಹೆಂಡತಿ (೧೨ ನೆ ಶತಮಾನ) ಪಾರ್ಶ್ವನಾಥ ಬಸದಿ ಕಟ್ಟಿಸುತ್ತಾಳೆ.[೧೮೬] ಇದಕ್ಕೆ ಸರಿಸಮಾನವಾಗಿ ಕೊಪ್ಪಳದಲ್ಲಿ ಮೂರು ಶಾಸನಗಳಿವೆ. ಅವುಗಳ ಪ್ರಕಾರ ಸೋಮರಾಯನೆಂಬುವನು ಕುಶ ಜೀನಾಲಯವನ್ನು ಮಾಡಿಸಿ ಚಂದ್ರ ಪ್ರಭೆ ಮತ್ತು ಪಾರ್ಶ್ವನಾಥ ಬಿಂಬಗಳನ್ನು ನಿರ್ಮಿಸಿದ ಮೂಲಸಂಘ ಬಲತ್ಕಾರಗಣಕ್ಕೆ ಸೇರಿದ ಬೊಮ್ಮ ಸೆಟ್ಟಿಯಮಗ ಸಾತಿಸೆಟ್ಟಿ ಪುಸ್ಪದಂತ ತೀರ್ಥಂಕರ ಬಿಂಬವನ್ನು

ಮಾಡಿಸಿದನು.[೧೮೭] ಕ್ರಿ. ಶ. ೧೨೩೫ರ ಹಣವಾಳ ಶಾಸನದಲ್ಲಿ ಜಿನಾಲಯವನ್ನು ಜೀರ್ಣೋದ್ಧಾರ ಮಾಡಿದ ಉಲ್ಲೇಖವಿದೆ.[೧೮೮] ಕ್ರಿ. ಶ. ೧೨೪೦ರ ಕೊಪ್ಪಳ ಶಾಸನದಲ್ಲಿ ಯಾದವ ಸಿಂಗಣ ಬಸದಿ ಕಟ್ಟಿಸಿದನೆಂದಿದೆ.[೧೮೯] ಕ್ರಿ.ಶ. ೧೩ನೆ ಶತಮಾನಕ್ಕೆ ಸೇರಿದ ಮೂರು ಶಾಸನಗಳು ಯಲಬರ್ಗಾದಲ್ಲಿದ್ದು ಜೈನಬಸದಿ ಕಟ್ಟಿಸಿದ್ದನು. ಹಾಗೂ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದನ್ನು ಮೂಲಸಂಘ ದೇಸಿಗಣದ ಮಾದಣನಾಯಕ ಯಲಬುರ್ಗಾದಲ್ಲಿ ಬಸದಿ ಕಟ್ಟಿಸಿದನೆಂದು ಮೂಲಸಂಘ ದೇಸಿಗಣದ ಪುಸ್ತಕಗಚ್ಛದಯಿಂಗಳೇಶ್ವರದ ಬಳಿಯ ಮಾಧವಚಂದ್ರ ಭಟ್ಟಾರಕನ ಶಿಷ್ಯ ಆಚಣನಮಗ ದೇವಣಾರ್ಯನೆಂಬುವನು ಶೃತಪಂಚಮಿ ಹಾಗೂ ಸಿದ್ಧಚಕ್ರದನೊಂಪೆಗಾಗಿ ಪಂಚಪರಮೇಷ್ಠಿಗಳ ವಿಗ್ರಹ ಮಾಡಿಸಿರುವುದಾಗಿ ತಿಳಿದುಬಂದರೆ,[೧೯೦] ಕ್ರಿ.ಶ.೧೩ನೆ ಶತಮಾನಕ್ಕೆ ಸೇರಿದ ಈ ಯಲಬುರ್ಗಾ ಶಾಸನದಲ್ಲಿ ಮುಮ್ಮಡಿ ಸಿಂಘನ ಬಾದೆಯಿಂದ ಜೈನಧರ್ಮ ಸಂಕಷ್ಟಕ್ಕೆ ಸಿಲುಕಿ ಈ ಧರ್ಮಕ್ಕೆ ತೊಂದರೆ ಬಂದಿರುವುದಾಗಿ ತಿಳಿಸುತ್ತದೆ. ಮುಮ್ಮಡಿ ಸಿಂಘನು ಆರಂಭದಲ್ಲಿ ಸೇವುಣರ(ಯಾದವರು) ಸಾಮಂತನಾಗಿದ್ದ. ಹೊಸಮಲೆಯ ಅರಸ ಬಹುಶಃ ಎಲಬುರ್ಗ್ಗಿಯ ಸಿಂಧರ ನಂತರ ಈ ಪ್ರದೇಶದಲ್ಲಿ ತನ್ನ ಅಸ್ತೀತ್ವವನ್ನು ಕಂಡುಕೊಂಡು ಕ್ರಿ.ಶ.ಸು.೧೨೭೦ರಿಂದ ಇವರ ರಾಜ್ಯ ಹೊಸಮಲೆಯಲ್ಲಿ ಆರಂಭಗೊಂಡಿರಬೇಕು. ಆಗ ಯುದ್ಧಗಳು ಜರುಗಿದಾಗ ಅದರಲ್ಲಿ ಮುಮ್ಮಡಿ ಸಿಂಗನು ಬಸದಿಗಳನ್ನು ಹಾಳು ಮಾಡಿರಬೇಕು. ಇದಕ್ಕೆ ಪ್ರತಿಯಾಗಿ ಹೊಸಣದೇಶ (ಹೊಯ್ಸಳದೇಶ) ಮತ್ತು ಕುಂತಳದೇಶಕ್ಕೆ ಆಚಾರ್ಯನಾಗಿದ್ದ ರಾಮಾಚಾರ್ಯನು ಜೈನಧರ್ಮವನ್ನು ಉದ್ಧರಿಸಿದಂತೆ ಹೇಳಿದೆ. ಇದೆಲ್ಲಾ ನೋಡಿದರೆ ಜೈನ ಧರ್ಮದ ವಿರೋಧ ನೀತಿ ಇವರ ರಾಜ್ಯಾಡಳಿತವಿರುವವರೆಗೆ ಮುಂದುವರೆದಿರುವಂತೆ ಕಾಣುತ್ತದೆ.[೧೯೧] ಏಕೆಂದರೆ ಇವನ ಮೊಮ್ಮಗ ಕುಮಾರರಾಮ ಕಮ್ಮಟದುರ್ಗವನ್ನು ತನ್ನ ರಾಜಧಾನಿಯಾಗಿ ಮಾಡಿಕೊಳ್ಳಬೇಕೆಂದು ಅಲ್ಲಿದ್ದ ಜೈನರನ್ನು ಓಡಿಸುತ್ತಾನೆ. ಮತ್ತು ಅದಕ್ಕಾಗಿ ಕುರಿ, ಕೋಣ ಕಡಿಸುತ್ತಾನೆ. ಇದರಿಂದ ತಮ್ಮ ಅಹಿಂಸಾವ್ರತಕ್ಕೆ ಭಂಗವುಂಟಾಯಿತೆಂದು ತಿಳಿದು ಜೈನರು ಆ ಸ್ಥಳವನ್ನೇ ತೊರೆದು ಕೊಪ್ಪಳಕ್ಕೆ ಬಂದು ನೆಲೆಸಿರುವುದಾಗಿ ತಿಳಿಯುತ್ತದೆ.[೧೯೨] ನಂತರ ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ಬಳಿಕ ಬಸದಿ, ನಿಶಿಧಿಗಳನ್ನು ಕಟ್ಟಿಸಿ ದಾನ-ದತ್ತಿ ನೀಡಿದ ಅಲ್ಪಸ್ವಲ್ಪ ಮಾಹಿತಿಗಳು ಈ ಭಾಗದ ಕೊಪ್ಪಳ, ಆನೆಗುಂದಿ, ಗಂಗಾವತಿ, ಯಲಬುರ್ಗಿ ಭಾಗದಲ್ಲಿ ಕ್ರಿ. ಶ. ೧೪ನೆ ಶತಮಾನದವರೆಗೆ ಜೈನಧರ್ಮದ ಕುರುಹುಗಳು ಕಾಣುತ್ತವೆ. ನಂತರದ ಕಾಲದಲ್ಲಿ ಈ ಭಾಗದಲ್ಲಿ ಶಾಸನಗಳು ಸ್ಮಾರಕಗಳು ಕಂಡುಬರುವುದಿಲ್ಲವಾದ್ದರಿಂದ ಆ ಧರ್ಮ ಇತರ ಧರ್ಮದೊಂದಿಗೆ ಪೈಪೋಟಿ ಮಾಡದೆ ಹಿಂದೆ ಸರಿದಿರಬೇಕೆಂದು ಕಂಡುಬರುತ್ತದೆ.

ಜಿಲ್ಲೆಯ ಸಮಗ್ರ ಶಾಸನಗಳನ್ನು ಗಮನಿಸಿದಾಗ ಕ್ರಿ. ಶ. ೧೧ನೆಯ ಶತಮಾನದ ಮಧ್ಯಭಾಗದಲ್ಲಿ ಪಾಶುಮತ ಕಾಳಾಮುಖರ ಚಟುವಟಿಕೆಗಳು ಈ ಪ್ರದೇಶದಲ್ಲಿ ಹೆಚ್ಚಿರುವ ಕಾರಣ ಮತ್ತು ಕಲ್ಯಾಣ ಚಾಲುಕ್ಯ ಹಾಗೂ ಹೊಯ್ಸಳ ಅರಸು ಮನೆತನಗಳನ್ನು ಗಟ್ಟಿಯಾಗಿ ಆಶ್ರಯಿಸಿದ್ದ ಜೈನ ಧರ್ಮ ಆ ಮನೆತನಗಳ ಅವನತಿಯ ಕಾಲಕ್ಕೆ, ಶೈವ, ವೈಷ್ಣವ ಪರವಾದ ಹೊಸ ನೀತಿಯಿಂದಾಗಿ ನೆಲ ಹಿಡಿಯಿತು.[೧೯೩] ಆಗ ಸ್ವಮತ ರಕ್ಷಣೆ ಪ್ರಸಾರದ ಭರದಲ್ಲಿ ಅನೇಕ ಜೈನ ಕವಿಗಳು ಪರಮತ ಅದರಲ್ಲೂ ಶೈವವನ್ನು ಟೀಕಿಸಲು ಪ್ರಾರಂಭಿಸಿದರು.

ಹೀಗಾಗಿ ಜೈನ ಧರ್ಮ ರಾಜ ಮನೆತನಗಳ ಆಶ್ರಯ ಕಳೆದುಕೊಂಡು ಹೊಸಧರ್ಮಗಳ ಬೆಳಕಿನಲ್ಲಿ ಕಾಣದಂತೆ ಇತಿಹಾಸದಿಂದ ಹಿಂದೆ ಸರಿಯಿತೆಂದು ಹೇಳಬಹುದಾಗಿದೆ.

## ವೈಷ್ಣವ ಧರ್ಮ

ಕ್ರಿ. ಶ. ೪೫೦ ಕ್ಕಿಂತ ಪೂರ್ವದಲ್ಲಿಯೇ ದಕ್ಷಿಣ ಭಾರತಕ್ಕೆ ಪ್ರವೇಶಿಸಿದ ವೈಷ್ಣವ ಧರ್ಮ ಶೈವ ಧರ್ಮ ಬದಲಾವಣೆ ಕಂಡು ಬಂದ ಸಂದರ್ಭದಲ್ಲಿಯೇ ಕರ್ನಾಟಕದಲ್ಲಿ ಮನ್ನಣೆಗಳಿಸಿತ್ತು.[೯೪] ಕದಂಬರು ಕನ್ನಡವನ್ನಾಳಿದ ಪ್ರಥಮ ಕನ್ನಡಿಗರೆಂದೆನಿಸಿ ವೈಷ್ಣವ ಮತಿಯರಾಗಿದ್ದರು. ಹಾಗೆಯೇ ಬದಾಮಿ ಚಾಲುಕ್ಯರು ಪ್ರಖ್ಯಾತರಾಗಿದ್ದರು. ಅಂದು ಮಂಗಳೇಶನು (ಕ್ರಿ.ಶ.೫೯೬-೬೦೯) ತನ್ನನ್ನು ಮಹಾಭಾಗವತ ಎಂದು ಹೇಳಿಕೊಂಡು ಬಾದಾಮಿಯಲ್ಲಿ ವೈಷ್ಣವ ಗುಹಾಲಯವನ್ನು ಕಟ್ಟಿಸಿರುವ ನಿದರ್ಶನ ಇಂದಿಗೂ ಕಾಣುತ್ತೇವೆ. ಆದರೆ ವೈಷ್ಣವ ಪರ ಚಟುವಟಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ಹೊಯ್ಸಳರ ಆಳ್ವಿಕೆಯ ವ್ಯಾಪ್ತಿಯ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದ್ದುದು ಗಮನಾರ್ಹವಾಗಿದೆ.[೯೫] ಇಲ್ಲಿಂದ ಮುಂದಿನ ಕಾಲದಲ್ಲಿ ನಾಡಿನ ಅನೇಕ ಶಾಸನಗಳಲ್ಲಿ ವಿಷ್ಣು ಸ್ತೂತಿ, ದೇವಾಲಯಗಳ ರಚನೆ, ಅವುಗಳಿಗಾಗಿ ಬಿಟ್ಟ ದಾನಗಳ ವಿವರಗಳು ಶಾಸನಗಳಲ್ಲಿ ಕಾಣುತ್ತೇವೆ.

''ಸಮಸ್ತೂಂಗ ಚಿರಶ್ಚುಂಬಿ ಚಂದ್ರ ಚಾಮರಚಾರವೆತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥ ಜಯತ್ಸಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ನವಂ॥ ದಕ್ಷಿಣೋನ್ನತದಂಷ್ಟ್ರಾಗ್ರ ವಿಶ್ರಾಂತಿ ಭುವನಂ ವಿಪ್ರಃ॥ ಶಿವಾಯನಮಃ॥ ಎಂದು ಶಾಸನದಲ್ಲಿ ಶಿವ-ವಿಷ್ಣುವಿನ ಸ್ತೂತ್ರಗಳ ಉಲ್ಲೇಖ[೯೬] ವೈಷ್ಣವ ಮತಾವಲಂಬಿಗಳಾದ ಬ್ರಾಹ್ಮಣರು ಮತ್ತು ಅವರು ವಾಸಿಸುವ ಅಗ್ರಹಾರ, ಬ್ರಹ್ಮಪುರಿಗಳು ಕಂಡು ಬರುವುದರಿಂದ ಹಾಗೂ ದೇವಾಲಯ, ಮೂರ್ತಿ ಶಿಲ್ಪಗಳ ಉಲ್ಲೇಖಗಳು ಈ ಜಿಲ್ಲೆಯಲ್ಲಿ ನೆಲೆ ನಿಂತ ವೈಷ್ಣವ ಧರ್ಮದ ಮೇಲೆ ಬೆಳಕು ಬಿರುವಲ್ಲಿ ಸಹಾಯಕಾರಿಯಾಗಿವೆ. ಶಾಸನ ಉಲ್ಲೇಖಿತ ಬ್ರಾಹ್ಮಣರು ಅಗ್ರಹಾರದ ಮಹಾಜನರೆನಿಸಿ ಅವರ ಆಡಳಿತ ನೋಡಿಕೊಳ್ಳುವುದರೊಂದಿಗೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಪ್ರತಿಗ್ರಹ ಮೊದಲಾದ ಷಟ್ಕರ್ಮಗಳಲ್ಲಿ ನಿರತರಾಗಿರುತ್ತಿದ್ದರು.

ಅಳವಂಡಿ ಶಾಸನ ಶಿವ, ವಿಷ್ಣು ಲಕ್ಷ್ಮಿ, ನಾರಾಯಣರ ಬಗ್ಗೆ ಪ್ರಸ್ತಾಪಿಸುತ್ತಾ ಚತುರ್ವ್ವೇದಾಧ್ಯಯನದಲ್ಲಿ ನಿರತರಾದ ಬ್ರಾಹ್ಮಣರು ಅವರಿಗಾಗಿ ಹಾಗೂ ಅಲ್ಲಿರುವ ದೇವರ ಪೂಜೆ, ಶಿಕ್ಷಣಕ್ಕಾಗಿ ನೀಡಿದ ದಾನ ದತ್ತಿ ಬಿಟ್ಟ ಕುರಿತು ವರ್ಣಿಸುವುದು.[೯೭] ಅದೇ ಊರಿನ ಇನ್ನೊಂದು ಶಾಸನ ಶಿವ, ವಿಷ್ಣು ದೇವರು ಅಲ್ಲಿಯ ದೇವಾಲಯ ಅರವಟ್ಟಿಗೆ, ಅಗ್ರಹಾರದ ಬಗ್ಗೆ ತಿಳಿಸುತ್ತದೆ.[೯೮] ಮೂದಿನೂರ ಶಾಸನದಲ್ಲಿ ೩೦ ಜನ ಬ್ರಾಹ್ಮಣರು, ಶಿವ, ವಿಷ್ಣು ದೇವರುಗಳ ಹೆಸರಿನ ಉಲ್ಲೇಖ ಅಲ್ಲಿಯ ಕಾಶ್ಯಪಗೋತ್ರದ ಕೇಶವಯ್ಯ ಚಟ್ಟೋಪಾಧ್ಯಾಯರ ಸೋಮಯಾಜಿಯ 'ಬ್ರಹ್ಮಾಂಡಕೃತು' ಎಂಬ ಯಜ್ಞಮಾಡಿ ಚಾಲುಕ್ಯ ಚಕ್ರವರ್ತಿಯಿಂದ ಮಾದಿನೂರು ಗ್ರಾಮ ಉಂಬಳಿಯಾಗಿ ಪಡೆದು ಅದನ್ನು ೨೦ಜನ ಬ್ರಾಹ್ಮಣರಿಗೆ ಪಂಡಿತರಿಗೆ ಹಂಚಿ ವಿಷ್ಣು ಸೂರ್ಯ, ಶಿವ, ತ್ರೈಪುರುಷ

ದೇವಾಲಯವನ್ನು ಕಟ್ಟಿಸಿರುವುದಾಗಿ ವಿವರಿಸಿದೆ.[೧೯೯] ಇದರಂತೆ ಚಾಳುಕ್ಯ ದೊರೆ ತ್ರಿಭುವನಮಲ್ಲ ಕಲ್ಯಾಣದಿಂದ ರಾಜ್ಯಭಾರ ಮಾಡುವಾಗ ಅಗಸ್ತ್ಯಗೋತ್ರದ ಚೌಡಭಟ್ಟನು ವಾಜಪೇಯಯಾಗ ಮಾಡಿದ ಇವನ ಮಗ ಸೋಮಯಾಜಿ ಸೋಮಯಾಗ ಮಾಡಿದನಲ್ಲದೆ ವಿಷ್ಣುದೇವಾಲಯವನ್ನು ಸತ್ರ ಮತ್ತು ಕೆರೆಯನ್ನು ಕಟ್ಟಿಸಿರುವುದಾಗಿ ಕವಲೂರು ಶಾಸನದಲ್ಲಿದೆ.[೨೦೦] ಶಾಂತಕಬ್ಬೆ ಎಂಬುವಳು ತನ್ನ ಪತಿ ತೀರಿದ ಬಳಿಕ ವಿಷ್ಣು ದೇವರ ಧ್ಯಾನ ಮಾಡುತ್ತಾ ವ್ರತಗಳನ್ನು ಆಚರಿಸಿದಳೆಂದು ಉಲ್ಲೇಖಿಸಿದೆ. ಮುಧೋಳ ಶಾಸನವೊಂದು ವಿಷ್ಣು, ಗಣಪತಿ, ಸರಸ್ವತಿ, ಶಿವ ದೇವರುಗಳನ್ನು ಸ್ತುತಿಸುತ್ತ 'ವಿಷ್ಣೋರ್ವೈರಾಹಂ' ಎಂದು ಮಧ್ಯದಲ್ಲಿ ವಿಷ್ಣು ಮೂರ್ತಿ ಜಯಸಿಂಹ ನೃಪಂ।। ಎಂದು ವರ್ಣಿಸುವುದು.[೨೦೧]

ಕುಕನೂರಿನ ಇನ್ನೆರಡು ಶಾಸನಗಳಲ್ಲಿ ವಿಷ್ಣು, ಗಣಪತಿ, ಸರಸ್ವತಿ ಅಗ್ರಹಾರದಲ್ಲಿಯ ಬ್ರಾಹ್ಮಣರ ಕುರಿತು ಉಲ್ಲೇಖಗಳಿವೆ.[೨೦೨] ಇಟಗಿ ಶಾಸನ ಕೂಡಾ ವಿಷ್ಣು, ಶಿವ, ಸರಸ್ವತಿ ಬ್ರಾಹ್ಮಣರ ಬಗ್ಗೆ ತಿಳಿಸುತ್ತಾ ಮಹಾದೇವ ದಂಡನಾಯಕ ಅಗ್ರಹಾರ ಇಟಗಿಯನ್ನು ಆಳುವಾಗ ಅವನ ರಾಣಿಯರು ಕಟ್ಟಿಸಿದ ವೈಷ್ಣವ ದೇವಾಲಯಗಳ ಮಾಹಿತಿಯನ್ನೊದಗಿಸುತ್ತದೆ.[೨೦೩] ಅಂಟೂರಬಾಣಾ ಶಾಸನ ವಿಷ್ಣುಪಾದಾಬ್ಜಷಟ್ಪದ ಕುರಿತಾಗಿ ಹೇಳಿದರೆ,[೨೦೪] ಆನೆಗುಂದಿ ಶಾಸನ ಶಿವನ ಮದುವೆಗೆ ವಿಷ್ಣು, ಬ್ರಹ್ಮ, ಮೊದಲಾದವರು ಬಂದಿರುವದಾಗಿ ವರ್ಣಿಸುವುದು.[೨೦೫] ಈ ಉಲ್ಲೇಖಗಳು ವೈಷ್ಣವ ಧರ್ಮದ ಅಸ್ತಿತ್ವವನ್ನು ಸೂಚಿಸಿದರೆ ಅದರ ಪ್ರಭಾವ ಬೆಳವಣಿಗೆ ಈ ಭಾಗದಲ್ಲಿ ಹೇಗಿತ್ತೆಂದು ತಿಳಿಯಬೇಕಾದರೆ ಅಲ್ಲಿಯ ದೇವಾಲಯಗಳು, ಶಿಲ್ಪಗಳ ಬಗ್ಗೆ ಕೂಡಾ ತಿಳಿಯಬೇಕಾಗುತ್ತದೆ. ಇಟಗಿ, ಸಂಕನೂರು, ಮುಧೋಳ, ಕುಕನೂರು, ರಾಜೂರು, ಕೊಪ್ಪಳ, ಮಾದಿನೂರು, ಅಳವಂಡಿ, ಕವಲೂರು, ಮುಂತಾದ ಕಡೆ ಕಂಡು ಬರುವ ಶಾಸನ ಉಲ್ಲೇಖಗಳು, ವಿಷ್ಣು ಶಿಲ್ಪಗಳು ಮುಖ್ಯವಾಗಿವೆ. ಸಂಕನೂರಿನ ಮಹೇಶ್ವರ ದೇವಾಲಯದ ಮುಖಮಂಟಪದಲ್ಲಿ ಒರೆಯಾಗಿ ನಿಲ್ಲಿಸಲಾದ ವಿಷ್ಣು ಶಿಲ್ಪ ಮುಧೋಳ ಗ್ರಾಮದ ದೇಸಾಯಿಯವರ ತೋಟದ ಭಾವಿಯ ಹತ್ತಿರ ಬಿದ್ದಿರುವ ವಿಷ್ಣು ಶಿಲ್ಪ, ಕುಕನೂರಿನ ಕಲ್ಲೇಶ್ವರ ದೇಗುಲದ ನವರಂಗದಲ್ಲಿಯ ಜನಾರ್ಧನ ವಿಷ್ಣು ಶಿಲ್ಪ, ರಾಜೂರ ಗ್ರಾಮದ ಕೇಶವ ದೇವಾಲಯದ ಹತ್ತಿರದ ಮಾಧವ ವಿಷ್ಣು ಶಿಲ್ಪ, ಕೊಪ್ಪಳದ ಡಣಕಭಾವಿಯ ಮೆಟ್ಟಿಲು ಮೇಲೆ ಇರುವ ವಿಷ್ಣು ಶಿಲ್ಪ, ಬಳೂಟಗಿ ಗ್ರಾಮದ ದುರ್ಗಮ್ಮಾ ದೇವಾಲಯದಲ್ಲಿರುವ ವಿಷ್ಣು ಶಿಲ್ಪ, ಮಣಿದಾಳ ಗ್ರಾಮದ ಚಿಕ್ಕ ದೇವಾಲಯದಲ್ಲಿರುವ ವಿಷ್ಣುವಿನ ಶಿಲ್ಪ, ನವಿಲಹಳ್ಳಿಯ ಮಧ್ಯಭಾಗದಲ್ಲಿ ಹನುಮಂತ ದೇವಾಲಯ ಬಲಭಾಗದಲ್ಲಿರುವ ವಿಗ್ರಹ, ಕವಲೂರಿನಲ್ಲಿ ವೈಷ್ಣವ ದೇವಾಲಯ,[೨೦೬] ಮತ್ತು ಅದೇ ಊರಿನ ಯತೀಶ್ವರ ದೇವಾಲಯದಲ್ಲಿ ವೈಷ್ಣವ ದ್ವಾರಪಾಲಕರ ವಿಗ್ರಹಗಳಿವೆ.[೨೦೭] ಕೊಪ್ಪಳದ ಪಾಂಡುರಂಗ ದೇವಾಲಯದಲ್ಲಿ ಶಂಕಚಕ್ರ ಹಿಡಿದ ವಿಷ್ಣು ಶಿಲ್ಪವಿದೆ.[೨೦೮] ಮಾದಿನೂರಿನ ಪದ್ಮಾವತಿ ದೇವಾಲಯದ ಗೋಡೆಯಲ್ಲಿ ಲಕ್ಷ್ಮೀ ನಾರಾಯಣ (ವಿಷ್ಣು)ರ ಶಿಲ್ಪಗಳಿವೆ.[೨೦೯] ಹೆಮಗುಡ್ಡದ ಕನಕರಾಯನ ದೇವಾಲಯದ ಮುಂಭಾಗದ ಕಂಬಗಳಲ್ಲಿ ಶಂಕ-ಚಕ್ರ ಗದಾಧಾರಿಗಳಾದ ವೈಷ್ಣವ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ.[೨೧೦] ಕುಕನೂರಿನ ಮಹಾಮಾಯ

ದೇವಾಲಯದಲ್ಲಿ ವಿಷ್ಣುವಿನ ಶಿಲ್ಪಗಳಿವೆ.[೨೧೧] ಅದೇ ಊರಿನ ಮಲ್ಲಿಕಾರ್ಜುನ ದೇವಾಲಯದಲ್ಲಿ ಗಜಲಕ್ಷ್ಮಿ, ವಿಷ್ಣು, ಬ್ರಹ್ಮ, ಶಿವನ ಶಿಲ್ಪಗಳಿವೆ.[೨೧೨] ಇದಲ್ಲದೆ ಈ ಧರ್ಮಕ್ಕೆ ಸಂಬಂಧಿಸಿದ ವೈಷ್ಣವ ದೇವಾಲಯಗಳ ಬಗ್ಗೆ ಹೇಳುವುದಾದರೆ ಚಳಗೇರಿಯ ಲಕ್ಷ್ಮಿ-ನಾರಾಯಣರ ದೇವಾಲಯ,[೨೧೩] ತಾವರಗೆರೆಯ ಲಕ್ಷ್ಮಿ-ವೆಂಕಟೇಶ್ವರ ದೇವಾಲಯ,[೨೧೪] ಕೊಪ್ಪಳ ನಗರದ ಕೋಟೆಯ ಒಳಗಿನ ವೆಂಕಟರಮಣ ದೇವಾಲಯ ಇದು ಹಿಂದೆ ಜೈನ ದೇವಾಲಯವಾಗಿದ್ದು ನಂತರ ವೈಷ್ಣವ ಧರ್ಮದ 'ವೆಂಕಟರಮಣ' ದೇವಾಲಯವಾಗಿ ರೂಪಗೊಂಡಿದ್ದು ಇಲ್ಲಿ ಶಂಕಚಕ್ರ ಗದೆ ಹಿಡಿದ ವೆಂಕಟೇಶ್ವರನ ವಿಗ್ರಹ ದೇವಾಲಯದಲ್ಲಿ ಕಾಣುತ್ತೇವೆ.[೨೧೫]

ಆನೆಗೊಂದಿ ಗ್ರಾಮದ ಲಕ್ಷ್ಮೀನರಸಿಂಹ ದೇವಾಲಯದಲ್ಲಿ ಗಣೇಶ ದಶಾವತಾರ ಹಾಗೂ ಕೈಗಳಲ್ಲಿ ಶಂಕ, ಚಕ್ರ, ಪದ್ಮ, ಗದಾ ಹಿಡಿದು ನಿಂತ ವಿಷ್ಣುವಿನ ಶಿಲ್ಪಗಳಿವೆ. ದೇವಾಲಯದ ಎರಡು ಬದಿಗೂ ಸಹ ಚಕ್ರ, ಶಂಕ, ಗದಾ ಹಿಡಿದ ದ್ವಾರಪಾಲಕರ ವಿಗ್ರಹಗಳಿವೆ.[೨೧೬] ಇಟಗಿಯ ಗ್ರಾಮದ ಪಶ್ಚಿಮಕ್ಕೆ ಮೂರ್ತಿನಾರಾಯಣ ದೇವಾಲಯವಿದ್ದು ಈ ದೇವಾಲಯದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರು ಮೂರು ಜನ ಸೇವಕರೊಂದಿಗೆ ನಿಂತಿದ್ದಾರೆ. ಮಹಾದೇವ ದೇವಾಲಯದಲ್ಲಿ ಸಹ ವಿಷ್ಣು, ಕೇಶವ, ಮಾಧವ, ನರಸಿಂಹ, ಗಣೇಶ, ಲಕ್ಷ್ಮಿ, ಸರಸ್ವತಿ ಮುಂತಾದ ಮೂರ್ತಿ ಶಿಲ್ಪಗಳನ್ನು ಮಹಾ ಮಂಟಪದ ಕಂಬಗಳಲ್ಲಿ ಕೆತ್ತಲಾಗಿದೆ.[೨೧೭] ಹೀಗೆ ಅನೇಕ ಶಿಲ್ಪಗಳು, ದೇವಾಲಯಗಳ ಕುರುಹುಗಳು, ವೈಷ್ಣವ ಧರ್ಮದ ಕುರಿತು ಅಪಾರ ಮಾಹಿತಿ ನೀಡುವುದರಿಂದ ವೈಷ್ಣವ ಧರ್ಮ ಈ ಭಾಗದ ಜನರ ಮನ್ನಣೆಗಳಿಸುವಲ್ಲಿ ಯಶಸ್ವಿಯಾಗಿತ್ತೆಂದು ಹೇಳಬಹುದಾಗಿದೆ. ಅನೇಕ ಕಡೆ ಶೈವ ಧರ್ಮ ಮತ್ತು ವೈಷ್ಣವ ಧರ್ಮದ ಮೂರ್ತಿಗಳು ಒಂದೇ ದೇವಾಲಯದಲ್ಲಿ ಇರುವುದರಿಂದ ನಮಗೆ ತಿಳಿದು ಬರುವ ಸಂಗತಿ ಏನೆಂದರೆ ಇವೆರಡು ಧರ್ಮಗಳು ಪ್ರತ್ಯೇಕತೆಯಲ್ಲೂ ಏಕತೆಯನ್ನು ಸಾಧಿಸಿರುವುದು ಸ್ಪಷ್ಟವಾಗುತ್ತದೆ.

## ಶೈವಧರ್ಮ

ಇತಿಹಾಸ ಪೂರ್ವಕಾಲದಿಂದಲೇ ಶೈವ ಧರ್ಮ ಪ್ರಚಾರದಲ್ಲಿತ್ತೆಂದು ಸಂಪ್ರದಾಯ ಪರಂಪರೆಯಿಂದ ತಿಳಿಯುತ್ತದೆ.[೨೧೮] ಸೈಂದವ ಸಂಸ್ಕೃತಿಯಲ್ಲಿ (ಸು ಕ್ರಿ.ಪೂ. ೩೨೫೦-೨೭೫೦) ಅದರ ಹೆಚ್ಚಿನ ಪ್ರಭಾವ ಕಾಣಿಸಿಕೊಂಡು ವೇದಗಳ ಕಾಲಕ್ಕೆ ದೇಶಾದ್ಯಂತ ಪಸರಿಸಿತು. ಅದರ ಪ್ರಭಾವ ಕರ್ನಾಟಕದಲ್ಲಿ ಆಗಿತ್ತೆಂದು ವಿದ್ವಾಂಸರು ಗುರುತಿಸಿದ್ದಾರೆ.[೨೧೯] ಅದು ಶೈವ, ಪಾಶುಪತ, ಕಾಪಾಲಿಕ, ಕಾಳಾಮುಖ, ವಾಚಸ್ಪತಿ, ಶೈವ ಪಾಶುಪತ, ಕಾರುಣಿಕ, ಲಾಕುಳಿ, ಇತ್ಯಾದಿ ವರ್ಗದವರು ಕರ್ನಾಟಕದಲ್ಲಿ ಇದ್ದರು[೨೨೦] ಹೀಗೆ ಸಾಕಷ್ಟು ಪ್ರಮುಖ ಹಾಗೂ ಗಮನಾರ್ಹ ಸಂಖ್ಯೆಯಲ್ಲಿರುವ ಪಾಶುಪತ ಕಾಳಾಮುಖರಬಗ್ಗೆ ಪ್ರಾದೇಶಿಕ ಕ್ಷೆತ್ರದ ಅಧ್ಯಯನದಿಂದ ತಿಳಿದುಕೊಳ್ಳುವುದು ಅವಶ್ಯಕವೆನಿಸುತ್ತದೆ. ಶಿವ ಪುರಾಣ, ವಾಯು ಪುರಾಣ, ಲಿಂಗಪುರಾಣ ಸೂತ್ರಸಂಹಿತೆಗಳಲ್ಲಿ ಉಕ್ತನಾದ ರುದ್ರನ ಅವತಾರನಾದ ಲಕುಲೀಶನು ಪಾಶುಪತ ಶಾಖೆಯ ಸ್ಥಾಪಕನು. ಗುಜರಾತಿನ ಕಾಯಾರೋಹಣದಲ್ಲಿ ಜನಿಸಿದನೆಂದು ತಿಳಿಯುವುದು[೨೨೧] ಬಾದಾಮಿಚಾಲುಕ್ಯರ ಮಕುಟೇಶ್ವರ ದೇವಾಲಯದ ಶಿಲ್ಪಗಳಲ್ಲಿ ಕಾಣಿಸಿಕೊಂಡ ಲಕುಲೀಶನ ವಿಗ್ರಗಳ ಕುರಿತು ಪ್ರಸ್ತಾಪಿಸಿದ ಚಿದಾನಂದ ಮೂರ್ತಿಯವರು ಅವರ

ಪ್ರಾಚೀನತೆ ಕರ್ನಾಟಕದಲ್ಲಿ ಕ್ರಿ.ಶ. ೬ನೆಯ ಶತಮಾನವೆಂದು ಹೇಳಿದ್ದಾರೆ[೨೨೨] ಮುಖದ ಮೇಲೆ ಕಪ್ಪುಗೆರೆಗಳನ್ನು (ಭಸ್ಮವನ್ನು) ಹಚ್ಚಿಕೊಳ್ಳುವ ಮೂಲಕ ಕಾಳಾಮುಖರು ಪಾಶುಪತ ಕಾಳಾಮುಖ, ಕಾಪಾಲಿಕರಲ್ಲಿ - ಪಾಶುಪತ - ಕಾಳಾಮುಖರು ತಮ್ಮ ಸಾತ್ವಿಕ ಆಚರಣೆಗಳಿಂದ ಶಕ್ತಿ, ಪಂಡಿತ, ದೇವ ಎಂಬ ಹೆಸರಿನಿಂದ ಬೆಳಕಿಗೆ ಬಂದಿದ್ದು[೨೨೩] ಶಾಸನಗಳು ಇವರನ್ನು 'ನೈಷ್ಠಿಕ ತಪೋಧನರೆಂದು ಕರೆದಿವೆ. ಜಿಲ್ಲೆಯ ಕುಕನೂರು ಶಾಸನ ಜೇಷ್ಠಾದೇವಿಯ ಸ್ಥಾನಾಚಾರ್ಯನಾಗಿದ್ದ ಕಳೇಶ್ವರಯತಿ ಸೋಮೇಶ್ವರ ನವಮಠದ ಜವಾಬ್ದಾರಿ ಸಿಂಧರ ರಾಜಧಾನಿ ಯರಂಬರವಿ ದೇವಾಲಯಗಳ ಮಠದ ಆಚಾರ್ಯನಾಗಿ ಶೈವ ಸಿದ್ಧಾಂತಿಕಳೇಶ್ವರ ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದ್ದನೆಂದು ಶಾಸನ ವರ್ಣಿಸುತ್ತದೆ.[೨೨೪] ಹಾಗೆಯೇ ಇನ್ನು ಅನೇಕ ಶಾಸನಗಳು ಈ ಮಾತನ್ನು ಪೋಷಿಸುತ್ತಿದ್ದು ಕಾಳಾಮುಖ, ಹಾಗೂ ಪಾಶುಪತರಿಗೂ ಏಕತೆಯನ್ನು ಸಾರುತ್ತವೆ. ಕಲ್ಲೂರಿನ ಶಾಸನ ಅದನ್ನೇ ಪ್ರತಿನಿಧಿಸಿ ಕರಿ ದೇವ ಸ್ವಾಮಿಯ ನೈಷ್ಠಿಕ ತಪೋಧನಹಾರ ದಾನಕ್ಕೆಂದು ಬೆನತೂರ ಸೀಮೆಯ ಭೂಮಿ ಯರಂಬರವಿಯ ಭೂಮಿ ಜೋತೆಗೆ ಗಾಣವನ್ನು 'ಕಾಳಾಮುಖಯತಿ' ಶಿವಶಕ್ತಿ ಪಂಡಿತರ ಕಾಲ ತೊಳೆದು ದಾನ ನಿಡುತ್ತಾನೆ[೨೨೫] ಕುಕನೂರಿನ ಮತ್ತೊಂದು ಶಾಸನ ಸೂಂಡಿಯ ನಗರೇಶ್ವರದ........ ರದಾಚಾಯರ್ । ಮನ್ನೆಯಾವಳಿಯ ತಪೋಧನರನ್ನು ಉಲ್ಲೇಖಿಸುತ್ತಾ ಸೋಮೇಶ್ವರಾಚಾರ್ಯನಿಗೆ ಶಿಷ್ಯನೊಬ್ಬನಿದ್ದು ದೇವಾಲಯಮಠದ ತಪೋಧನರಿಗೆ ಭೂದಾನ ನಿಡಿರುವುದಾಗಿ ತಿಳಿಸಿದೆ.[೨೨೬] ವಿಪ್ರಶಾಸನವೊಂದರಲ್ಲಿ ತುಂಗಭದ್ರಾನದಿಯ ಉತ್ತರಕ್ಕೆ ಇರುವ ಕಿಷ್ಕಂದೆ ಪರ್ವತದಲ್ಲಿ ಯತಿಗಳು ವಾಸಿಸುತ್ತಿದ್ದುದರಬಗ್ಗೆ ವರ್ಣನೆ ಬರುತ್ತಿದ್ದು ಈ ಸ್ಥಾನ ''ನೈಷ್ಠಿಕ ತಪೋಧನರರು'' ವಾಸಿಸುವ ಮೋರಖಂಡಿಯ ಜಾವಿನ ಮಠವಾಗಿತ್ತೆಂದು ಇದು ೩೦ ತೀರ್ಥಗಳಿಂದ ಶೋಭಿಸುತ್ತಿರುವುದಾಗಿ ಹೆಳಿದೆ.[೨೨೭]

ನಮ್ಮ ಅಧ್ಯಯನದ ಪರಮಿತಿಯಲ್ಲಿ ವೀರಶೈವದ ಹಿನ್ನಲೆಯಾಗಿ ಪಾಶುಪತ ಕಾಳಾಮುಖ ಪರಂಪರೆ ಹೆಚ್ಚು ಪ್ರಭಾವಶಾಲಿಯಾಗಿ ಈ ಪ್ರದೇಶದಲ್ಲಿ ಕಂಡು ಬಾರದೆ ಇದ್ದರು ಕರ್ನಾಟಕದಲ್ಲಿ ಮಾತ್ರ ಅದರ ಪ್ರಭಾವ ಸಮಾಜದ ಒಂದು ಘಟಕವಾಗಿ ಬೆಳೆದುಬಂದಿದೆ ಮುಂದೆ ಕಲ್ಯಾಣ ಚಾಲುಕ್ಯರು ವೈಭವದಿಂದ ರಾಜ್ಯಭಾರ ಮಾಡುತ್ತಿದ್ದ ಕಾಲಾವಧಿಯಲ್ಲಿ ಜೈನಧರ್ಮ ಮತ್ತೆ ತನ್ನ ಜನಪ್ರೀಯತೆ ಪಡೆಯುವ ಹವಣಿಕೆಯಲ್ಲಿತ್ತು. ಆಗ ವೈಷ್ಣವ ಧರ್ಮ ಕರ್ನಾಟಕದಲ್ಲಿ ಉತ್ತರ ಭಾಗಗಳಲ್ಲಿ ಶೈವದೊಂದಿಗೆ ಹೊಂದಾಣಿಕೆ ಅನುಸಂಧಾನ ನಡೆಸಿತ್ತು ಮತ್ತು ಸಾಮಾನ್ಯರೊಂದಿಗಿನ ನಿಕಟ ಸಂಬಂಧ ಬೆಳೆಸುವುದರೊಂದಿಗೆ ತನ್ನ ಸ್ಥಾನ ಭದ್ರಪಡಿಸಿಕೊಳ್ಳಲು ಏನೆಲ್ಲಾ ಪ್ರಯತ್ನ ಮಾಡಿ ಯಶಸ್ವಿಯಾಗಿತ್ತು. ಈ ಸ್ಥಾನ ಕಲಚೂರಿಗಳು, ಯಾದವರ ಕಾಲಕ್ಕೂ ಸಡಿಲಗೊಳ್ಳದೆ ಬೆಳೆದುಕೊಂಡು ಬಂದಿತು. ಶೈವ ದೇವಾಲಯಗಳ ಪೂಜೆ, ಪುನಸ್ಕಾರ, ದೇವರ ಅಂಗಭೋಗ, ರಂಗಭೋಗ ಖಂಡಸ್ಪಟಿತ, ಜಿರ್ಣೋದ್ಧಾರ, ತಪೋಧನ ವಿದ್ಯಾರ್ಥಿಗಳ ಆಹಾರ, ಔಷದ ಮೊದಲಾದವುಗಳಿಗೆ ದಾನ ನೀಡುವ ವಿಷಯಗಳು ಪ್ರಬಂಧದಲ್ಲಿ ಆಗಾಗ ಚರ್ಚೆಗೊಳಪಟ್ಟಿದ್ದು ಅದರಲ್ಲಿ ಕಲ್ಯಾಣ ಚಾಲುಕ್ಯರಿಗೆ ಸಿಂಹಪಾಲು ಲಭಿಸಿರುವುದನ್ನು ಕಾಣುತ್ತೇವೆ. ಇಲ್ಲಿ ರಾಜರು, ರಾಣಿಯರು, ಅಧಿಕಾರಿಗಳು ಸಹ ಶೈವ

ಧರ್ಮಾವಲಂಬಿಗಳಾಗಿದ್ದರು. ರಾಷ್ಟ್ರಕೂಟರು ಇದಕ್ಕೆ ಹೊರತಾಗಿರಲಿಲ್ಲವೆಂದು ಗೊತ್ತಾಗುತ್ತದೆ[೨೦೮] ೧೦-೧೧ನೆಯ ಶತಮಾನಕ್ಕೆ ಶ್ರೀಶೈಲ ಪಾಶುಪತ - ಕಾಳಾಮುಖರ ಪ್ರಮುಖ ನೆಲೆಯಾಗಿದ್ದಂತೆ ಕೊಪ್ಪಳ ಜಿಲ್ಲೆಯ 'ಕುಕನೂರು' ಅವರ ಪ್ರಮುಖ ತಾಣವಾಗಿತ್ತು ಅದರಂತೆ ತುಂಗಭದ್ರ ಎಡದಂಡೆಯಲ್ಲಿರುವ ವಿಪ್ರನಾರಾಯಣವು ಸಹ (ಕಿಷ್ಕಂದ ಪರ್ವತ) ಕಾಳಾ ಮುಖಯತಿಗಳು ವಾಸಿಸುವ ಸ್ಥಳವಾಗಿತ್ತೆಂದು ಶಾಸನಗಳಿಂದ ತಿಳಿದುಬರುವುದು.[೨೦೯] ಆನೆಗುಂದಿ ಶಾಸನದ ಪ್ರಕಾರ ಪೌರಾಣಿಕ ಚಿತ್ರಣರೂಪದಲ್ಲಿ ಶಿವನ ಮದುವೆಯ ಬಗ್ಗೆ ತಿಳಿಸುತ್ತಾ ಆ ಸಂದರ್ಭದಲ್ಲಿ ದಾರೆಯೆರೆಯಲು ಮಹಾದೇವನ ಕೈಯಲ್ಲಿನ ಲಾಕುಳವೆ ಬೊಂಬು ಕೊಲನ್ನಾಗಿ ಬಳಸಿಕೊಂಡ ಲಾಕುಳಶೈವರ ಕುರಿತು ಶಾಸನ ಹೇಳುತ್ತದೆ.[೨೧೦] ಪಾಶುಪತ ಶಾಖೆಯ ಸ್ಥಾಪಕನಾದ ಈ ಲಾಕುಳಿಶನು ವಾಯು ಪುರಾಣ, ಶಿವಪುರಾಣ, ಲಿಂಗಪುರಾಣ, ಸೂತ ಸಂಹಿತೆಗಳಲ್ಲಿ ಉಕ್ತನಾಗಿದ್ದು ಅವನು ರುದ್ರನ ಒಂದು ಅವತಾರವಾಗಿ ಕಾಣಿಸಿಕೊಂಡಿದ್ದಾನೆ[೨೧೧] ಕಲ್ಲೂರ ಶಾಸನವೊಂದು ತಪೋಧನ ಆಹಾರ ದಾನಕ್ಕೆ 'ಕಾಳಾ ಮುಖಯತಿ ಶಿವಶಕ್ತಿ ಪಂಡಿತರ' ಕಾಲ ತೊಳೆದು ನೀಡಿರುವುದಾಗಿ ಉಲ್ಲೇಖಿಸಿದೆ.[೨೧೨] ಕುಕನೂರಿನ ಶಾಸನವೊಂದು ಸೋಮೇಶ್ವರ ಪಂಡಿತನೊಬ್ಬನ (ಕಲಿಕಲುಷಪಹರಣ) ವರ್ಣನೆಯನ್ನು ಕೆಳಗಿನಂತೆ ವಿವರಿಸುತ್ತದೆ.

''ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನಧಾರಣ ಸಮಾಧಿ

ಖೂಜಪ-ತಪಂಗೋಪಹಾರಾದಿ ಸಂಪನ್ನರ ಅಖಿಳ ಪ್ರಾಣಿ ಪ್ರಸನ್ನರ್ ಅನೇಕ ತರ್ಕ್ಕ ವ್ಯಾಕರಣ ನಾಟಕ ಭರತ ವಾತ್ಸಾಯ ನಾದಿ ವಿದ್ಯಾಸಾರಸಾರ ವಿಚಾರ ಚತುರಾನನರ್। ಗುಣವಿಶೇಷರ್ ಸ್ವಪರ ಪಾಪಾಪ್ರಕ್ಷನಳ ಮಂತ್ರಾಧೀಶ್ವರರ ನಿಜಹೃದಯ ಕಮಳ ಮಧ್ಯಾಧ್ಯಾಸಿತ ಪರಮೇಶ್ವರರ 'ಕಲಿ ಕಲುಷಪಹರಣ' ಪರಿಣತಾನ್ತ ಕರಣ ಸಂಶುಧಕ್। ಸಾಧುಕುಳ ಪ್ರಸಿದ್ಧರೆನಿಪ ಸೊಂಡಿಯ ನಗರೇಶ್ವರದ ಸೋಮೇಶ್ವರದ..... ಮುನ್ತಿ.... ಇವನು ಗಿರೀಶ ಸಾಂಖ್ಯಮತಮಂ'' ನಿರ್ಮೂಳನ ಮಾಡಿದನೆಂದಿದೆ.[೨೧೩] ಅದೇ ಊರಿನ ಇನ್ನೊಂದು ಶಾಸನ ಸಿದ್ಧಾವಳಿ ದೇವಾವಳಿ ಸಿದ್ಧಾಂತವಳಿ ಶಿವಾಗಮಾವಳಿ ನೆಜೀದಿ 'ಸಿದ್ಧಾಂತಿ ಕಳೇಶ್ವರದೇವಂ।[೨೧೪] ಶೈವ ಸಿದ್ಧಾಂತಾಚಾರ್ಯ, ರಾಜಗುರು, ಮುತಜ್ಞ ತ್ರೈಕಾಲದರ್ಶಿ ಶೈವಾಗಮರ್ ಶಬ್ದಜ್ಞ, ಶಾಸ್ತ್ರಜ್ಞ, ತರ್ಕಜ್ಞ, ಕಾವ್ಯಜ್ಞ ದೈವಜ್ಞ, ಸರ್ಬ್ಬಜ್ಞ ಎಂದು ಕಾವ್ಯಮಯವಾಗಿ ವರ್ಣಿಸುವಲ್ಲಿ ಶೈವಧರ್ಮದ ಬಗ್ಗೆ ಬೆಳಕು ಚಲ್ಲುವ ಪ್ರಮುಖ ಶಾಸನವಾಗಿದೆ. ಇನ್ನೂ ಅನೇಕ ಶಾಸನಗಳಲ್ಲಿ ಉಲ್ಲೇಖಗೊಂಡ ಈ 'ಕಾಳಾಮುಖ' ಸಮಯವನ್ನು 'ಏಕ್ಕೋಟ' ಸಮವೆಂದು ಕಾಳಾಮುಖ ಮಠವನ್ನು ಏಕ್ಕೋಟಿ ಮಠವೆಂದು ಹಾಗೂ ಅಲ್ಲಿಯ ಸ್ಥಾನಾಚಾರ್ಯರನ್ನು ಏಕ್ಕೋಟಿ ಚಕ್ರವರ್ತಿಗಳೆಂದು ಕರೆದಿವೆ[೨೧೫] ಇದನ್ನೇ ಈ ಜಿಲ್ಲೆಯ ಶಾಸನಗಳು ಫಲ ಶೃತಿಯಲ್ಲಿ ''ಈ ಧರ್ಮವನಳಿದಾತರ ಬಾಣ ರಾಸಿ'' ಯೊಳೆಕ್ಕೋಟೆ ತಪೋಧನರ ನಳಿದ ಪಂಚಮಹಾಪಾತಕ್ಕಂ। ಎಂದು ಅಳವಂಡಿ ಶಾಸನ ಉಲ್ಲೇಖಿಸಿದೆ[೨೧೬] ಮಾಧವಾಚಾರ್ಯನ ಸರ್ವದರ್ಶನ ಸಂಗ್ರಹದ ಪ್ರಕಾರ ಪಶುಗಳಲ್ಲಿ 'ವಿಜ್ಞಾನಾಕಲರು', 'ಪ್ರಲಯಾಕಲ', ಮತ್ತು 'ಸಕಲ' ಎಂದು ಮೂರ ಬೇದಗಳೆಂದು ಮತ್ತೆ ವಿಜ್ಞಾನಾಕುಲದಲ್ಲಿ ಎರಡು ಬಗೆಯಲ್ಲಿ

ಸಮಾಪ್ತ 'ಕಲುಷರು', ಅಸಮಾಪ್ತ ಕಲುಷರು ಈ ಸಮಾಪ್ತ ಕಲುಷರು ಪರಮೇಶ್ವರನ ಅನುಗ್ರಹದಿಂದ ವಿದ್ಯೇಶ್ವರ ಪದವಿಗೆ ಬಂದರೆ ಅಸಮಾಪ್ತ ಕಲುಷರು ಮಂತ್ರಗಳಾಗುವರು, ಈ ಮಂತ್ರಗಳು ಏಳುಕೋಟಿ ಮಂತ್ರೇಶ್ವರರು ಏಳುಕೋಟೆಗಳು, ಆದ್ದರಿಂದ ಈ ಮತಕ್ಕೆ ಎಕ್ಕೋಟೆ ಸಮಯವೆಂದು ಕರೆಯಲಾಗಿದೆ.[೨೩೭] ಅದನ್ನೇ ಇಂದಿನ ಮೈಲಾರ ಭಕ್ತರು ಏಳುಕೋಟಿ ಏಳುಕೋಟಿ ಉಘೇ ಎಂದು ಶಿವನ ಹೆಸರನ್ನು ಬಳಸಿ ಜಯಘೋಷಣೆ ಮಾಡುವುದನ್ನು ಕಾಣುತ್ತೇವೆ. ಕಲ್ಲೂರು ಶಾಸನವೊಂದರಲ್ಲಿ ಕಾಳಾ ಮುಖ ಸಂಮನ್ದದ ಶಿವಶಕ್ತಿ ಪಂಡಿತರ ಕಾಲ ತೊಳೆದು ಕಲ್ಲೂರ ತಪೋಧನರಾಹಾರದನಾಕ್ಕೆ ಬೆನತೂರ ಸೀಮೆಯ ಭೂಮಿಯನ್ನು ಬಿಟ್ಟಿರುವುದಾಗಿ ಈ ''ಧರ್ಮಮಂ ಕೆಡಿಸದವರಿಗೆ ವಾರಣಾಸಿಯಲು ಏಳುಕೋಟಿ ಕವಿಲೆಯಮಂ ಏಳುಕೋಟಿ ತಪೋಧನರುಮ ಏಳುಕೋಟಿ ಬ್ರಾಹ್ಮಣರುಮಂಕೊನ್ದ ಪಾತಕರಪ್ಪರು॥ ಎಂದು ಉಲ್ಲೇಖಿಸಿದೆ[೨೩೮] ಕುಕನೂರಿನ ಶಾಸನ ಸಹ ಏಳ್ಕೋಟಿ ತಪೋಧನರುಂ ಕೊನ್ದ ಪಾಪಕಂ''। ಮೂಲಸ್ಥಾನ ದೇವರಾಚಾರ್ಯ್ಯ ವೀರುಪಾಕ್ಷಸ್ವಾಮಿಯ ಬಗ್ಗೆ ತಿಳಿಸಿದೆ.[೨೩೯]

ಬಳಗೇರಿ ಶಾಸನ ಬ್ರಾಹ್ಮಣರು ಏಳ್ಕೋಟೆ ತಪೋಧನರು ಮನಳಿದ ಪಾಪಕ್ಕುಂ ಎಂದಿದೆ.[೨೪೦] ಇವರು ಸಹ ಬ್ರಾಹ್ಮಣರಂತೆ ಯಮ ನಿಯಮ ಸ್ವಾಧ್ಯಾಯ ಧ್ಯಾನಧಾರಣದೊಂದಿಗೆ ಜಪ ಹೋಮಾನುಷ್ಠಾನ ಸಂಪನ್ನರಾಗಿದ್ದರು. ಶಿವನ ಆರಾಧಕನೊಬ್ಬ ತ್ರಿಲೋಕ ಪಂಡಿತನೆಂದು ವರ್ಣಿಸುತ್ತಾ ''ಸಕಳಕಳಾಪಸ್ಮ ತಿವಿದರ ಕಳಂಕೋದಾತ್ತ ಚಿತ್ತಾರಗ್ನಿಷ್ಟೋಮಾದಿಕ ನಿಖಳಯಾಗ ಸಂಪಾದಕರೆನಿಪರು ಕುಕನೂರು ಎಂಬುಧಜನೆಂಗಳು॥ ಆ ಮಹಾ ಅಗ್ರಹಾರದೊಳು ॥ಶಿವಾಯನಮಃ॥ ಕಾವ್ಯ, ನಾಟಕ, ವಿದ್ಯಾಸಾರ ಸಾರ ಚತುರಾನನರ್। ಸ್ವಪರಪಾಪ ಪ್ರಕ್ಷಾಳನ ಮಂತ್ರಾಧೀಶ್ವರರ್। ನಿಜಹೃದಯ ಕಮಳಮಧ್ಯಾಧ್ಯಾಸಿತ ಪರಮೇಶ್ವರರ್। 'ಕಲಿಕಲುಷಾಪಹರಣ' ಪರಿಣತಾನ್ತಃ ಕರಣಸಂಶುದ್ಧರ್। ಸಾದುಕುಳಪ್ರಸಿದ್ಧರೆನಿಪ ಸೊಂಡಿಯ ನಗರೇಶ್ವರದಾಚಾರ್ಯರು। ಮನ್ನೆಯಾವಳಿಯ ತಪೋಧನಿರಿಗೆ ಸೋಮೇಶ್ವರ ಮುನಿಸ್ಸಾಮಾನೀತಳದೊಳ್॥ ಗದ್ದೆ, ಕಮ್ಮ, ಇತ್ಯಾದಿಯಾಗಿ ಬಿಟ್ಟಿರುವುದಾಗಿ[೨೪೧] ಮತ್ತು ಈ ತಪೋಧನ ಕಾಳಾಮುಖರು ಗುರುಗಳಾಗಿದ್ದರೆಂದು ತಿಳಿಯುತ್ತದೆ.[೨೪೨] ಹೀಗೆ ಉಲ್ಲೇಖಿತಗೊಳ್ಳುವ ಲಕುಳಿಶ ಪಾಶುಪತರು, ಕಾಳಾಮುಖ ಪಾಶುಪತರು ದಾನ-ದತ್ತಿ-ದೇವಾಲಯಗಳ ಜೀರ್ಣೋದ್ಧಾರ ಶೈವ ದೇವಾಲಯಗಳನ್ನು ಕಟ್ಟಿಸುವುದನ್ನು ನೋಡಿದರೆ ವೀರಶೈವರೊಂದಿಗಿನ ಅವರ ಸಂಬಂಧವನ್ನು ನಿಕಟಗೊಳಿಸುತ್ತಿರುವ ಕಾಲಗಟ್ಟವನ್ನು ಕಾಣುತ್ತೇವೆ. ಈ ದೇವಾಲಯ ಕಟ್ಟಿಸುವುದು, ದಾನ-ದತ್ತಿಗಳನ್ನು ಸ್ವೀಕರಿಸುವುದು, ಅದನ್ನು ಸಂರಕ್ಷಿಸುವುದು, ಇವರ ಮುಖ್ಯ ಕಾರ್ಯಗಳಾಗಿದ್ದವೆಂದು ಡಾ. ಎಂ. ಎಂ. ಕಲಬುರ್ಗಿಯವರು ಪ್ರಸ್ತಾಪಿಸುತ್ತಾ 'ವಚನರೂಪ ನಕುಲೀಶ ಪಾಶುಪತರ ಕೊಡುಗೆಯಾಗಿದ್ದು ಅದುವೆ ಮುಂದೆ ಬೆಳೆದು ಲಿಂಗಾಯತ ಧರ್ಮವಾಗಿ ಬೆಳೆದು ಪ್ರಚಾರಕ್ಕೆ ಬಂದಿತೆನ್ನುವ ಅವರ ಅಭಿಪ್ರಾಯ[೨೪೩] ಒಪ್ಪಬಹುದೆಂದೆನಿಸುತ್ತದೆ. ಇದನ್ನೇ ಸಮರ್ಥಿಸುತ್ತಾ ಪಾಶುಪತ ಮತ್ತು ವೀರಶೈವ ಪದಗಳು ಸಮಾನಾರ್ಥವಾಗಿ ಬಳಸಲ್ಪಟ್ಟಿರಬೇಕೆಂದು ತಿಳಿಯುತ್ತದೆ.[೨೪೪]

ಸ್ಥಾನಾಚಾರ್ಯರು ವಿದ್ಯಾಪ್ರೇಮಿಗಳಾಗಿದ್ದು, ದೇವಸ್ಥಾನ, ಮಠಗಳಲ್ಲಿನ ತಪೋಧನರು ಮತ್ತು ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಏರ್ಪಾಡು ಮಾಡಿದ್ದಾರೆ. ಹೀಗಾಗಿ ಜನಸಾಮಾನ್ಯರು ಅರಸು ಮನೆತನದಿಂದಲೂ ಗೌರವ ಪಡೆದಿರುವಲ್ಲಿ ಆಶ್ಚರ್ಯವಿಲ್ಲ. ಪ್ರಾಚೀನ ಶಿಕ್ಷಣ ಕೇಂದ್ರದಲ್ಲಿ ಗುರುಗಳಾಗಿ ಅಲ್ಲಿಯ ಸ್ಥಾನಾಚಾರ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಹೀಗಾಗಿ ಶಾಸನಗಳು ಅವರ ಹೆಸರನ್ನು ಲಾಕುಳಕಾಳಾಮುಖ ವಿಶೇಷಣಗಳಿಂದ ಹೊಗಳಿವೆ. ಇವೆರಡರಲ್ಲಿ ಭೇದವಿಲ್ಲವೆಂದು ಕಪಟರಾಳಕೃಷ್ಣರಾಯರು ಲಾಕುಳ ಸಿದ್ಧಾಂತ, ಲಾಕುಳ ಸಮಯ ಏಕ್ಕೋಟಿ ಇತ್ಯಾದಿ ಪರ್ಯಾಯ ಪದಗಳಿಂದ ಕರೆದಿರುವರು.[೨೪೫] ಇಟಗಿ ಶಾಸನದಲ್ಲಿ ೬ನೆಯ ವಿಕ್ರಮಾದಿತ್ಯನ ಕೈಕೆಳಗಿನ ದಂಡನಾಯಕ ಮಹಾದೇವನು ಶೈವ ಆರಾಧಕನಾಗಿದ್ದು ಶಿವದೇವಾಲಯ ಕಟ್ಟಿಸಿದ್ದನು. 'ಕಲಿದೇವ ಇವರ ಕುಲದೈವಿಯಾಗಿದ್ದನೆಂದು ಹೇಳುತ್ತಾ ಆ ದೇವಾಲಯದ ಜವಾಬ್ದಾರಿಯನ್ನು ನಿರ್ವಹಿಸುತ್ತಿರುವುದಾಗಿ ತಿಳಿಸುತ್ತದೆ.[೨೪೬] ಚಾಳುಕ್ಯ ಜಗದೇಕಮಲ್ಲನ ಪತ್ನಿ ಪದ್ಮಲದೇವಿ ಸಹ ಕಲಿದೇವಸ್ವಾಮಿ ದೇವರಿಗೆ ದಾನ ಬಿಟ್ಟಿರುವುದಾಗಿ ಗೋತಗಿ ಶಾಸನ ಹೇಳಿದರೆ.[೨೪೭] ಪುರ ಶಾಸನ ತಪೋಧನರು ಅಲ್ಲಿಯ ಗೌವರೇಶ್ವರ ದೇವರ ಸ್ಥಾನಾಚಾರ್ಯ ಕಾಳೋಜನ ಬಗ್ಗೆ ಉಲ್ಲೇಖಿಸುವುದು[೨೪೮] ಕಲ್ಲೂರ ಶಾಸನ ಸಹ ಕಲಿದೇವರು ತಪೋಧನರು, ಕಾಳಾಮುಖಿಯತಿ ಶಿವಶಕ್ತಿ ಪಂಡಿತರ ಉಲ್ಲೇಖನೀಡಿದೆ.[೨೪೯] ಆನೆಗೊಂದಿಯ ಶಾಸನ ಪರಮೇಶ ಭಾವನಾ ಗೋರವಂಗೆರಳಿಯಂದಿರ್ಕ್ಕರಗೆ ವಿದ್ಯಾಧರ ಕುಲವಿಂತುಂಟು॥ಮ್ರಿಗಧರಭೂಷಣ ಸೊಗಯಪಭಸ್ಮಾಂಗಿನಗರಾಜಸುತೆಯೀಸನ ಪುತ್ರತಗುರಿಯ ಪಣೆಯ ಮೇಗಗ ಅದೆನಿಂದಿರು ಜಗವಂದ್ಯನಪ್ಪಿಲೆ ವಿಘ್ನೇಶ್ವರ॥ ಎಂದು ವಿವಿಧ ಬಗೆಯಾಗಿ ವರ್ಣಿಸುವ ಶಾಸನ ಸಮಗ್ರವಾಗಿ ಶಿವ-ಪಾರ್ವತಿಯರ ಮದುವೆ ಬಗ್ಗೆ ವರ್ಣಿಸುವ[೨೫೦] ಶಾಸನ ಕೃತಾಯುಗದಲ್ಲಿ ದೇವ ಮಾನವರಿಗೆ ವ್ಯತ್ಯಾಸವಿರಲಿಲ್ಲವೆಂಬುದನ್ನು ಹೇಳುತ್ತದೆ. ಷಡ್ದರ್ಶನ ಸಮಯವಾಗಲೀನೋಂಪಿಬ್ರತಗಳಾಗಲಿ ಶಿಕ್ಷೆ-ದೀಕ್ಷೆಯಾಗಲಿ ಇರಲಿಲ್ಲ ಎಂದು ತಿಳಿಸುವುದು ಬಹುತೇಕ೧೩ನೆಯ ಶತಮಾನಕ್ಕಾಗಲೆ ವೀರಶೈವ ಧರ್ಮ ಪ್ರಚಾರದಲ್ಲಿತ್ತೆಂದು ಸ್ಪಷ್ಟವಾಗುತ್ತದೆ. ಕ್ರಿ. ಶ. ೧೧೨೯, ೧೧೩೨, ೧೧೮೫, ೮೬ ರ ಕಲ್ಲೂರಿನ ಶಾಸನಗಳು ಅಲ್ಲಿಯ ಕಲಿದೇವ (ಶಿವ) ರಂಗಭೋಗ, ತಪೋಧನರ ಆಹಾರದಾನ ಇತ್ಯಾದಿಗಾಗಿ ಸುಂಕವೆರ್ಗ್ಗಡೆ ಮಹೇಶ್ವರ ಯರಂಬರಗಿಯ ಆಚಾರ್ಯ ಮಲ್ಲಿಯಬಟ್ಟ, ಮಹಾಪಸಾಯಿತ ಸಣ್ಣಗೇತ ನಾಯಕ್, ಮಹಾಮಂಡಳೇಶ್ವರ ಚಾವುಂಡರಸನ ಮಗ ವೀರಬಿಜ್ಜಲದೇವ ಮುಂತಾದವರು ದಾನ-ದತ್ತಿಗಳನ್ನು ನೀಡುವ ಮೂಲಕ ಶೈವ ಧರ್ಮದ ಬೆಳವಣಿಗೆಗಾಗಿ ಪ್ರೋತ್ಸಾಹಿಸಿದ್ದಾರೆ.[೨೫೧] ಹುಲಗಿ ಶಾಸನವೊಂದು ಪುಲಗೇರಿಯ ಊರೋಡೆಯ ಸೋಮನಾಥನು ರುದ್ರಪದ್ಮವನ್ನು (ಶಿವದೇವಾಲಯ) ಮಾಡಿಸಿದ ಬಗ್ಗೆ ತಿಳಿಸುತ್ತಾ ತ್ರಿಕಾಲದಲ್ಲಿ ಪೂಜಿಸುವ ಆಚಾರ್ಯನಿಗೆ ಅರುಗದ್ಯಾಣ, ಶಿವಧರ್ಮ ಪುರಾಣ ಹೇಳುವವನಿಗೆ ವರ್ಷಕ್ಕೆ ೪ ಗದ್ಯಾಣ ದಾನ ಬಿಟ್ಟಿರುವುದಾಗಿ ತಿಳಿಸುವುದು.[೨೫೨] ಕಲ್ಲೂರ ಶಾಸನ ಬಲ್ಲಾಳದೇವನ ಹಿರಿಯ ರಾಣಿ ರೆಮ್ಮಲದೇವಿ ಹರಿಹರ ದೇವರಿಗೆ ಹೊಲದಾನ ಬಿಡುತ್ತಾಳೆ.[೨೫೩] ೧೨೬೮ರಲ್ಲಿ ವಶಿಷ್ಟಗೋತ್ರದ ಯಮಕರಸನ ಮಗ ಮಲ್ಲಯ್ಯನು ನಾನೂರು ಜನರ ಅಪ್ಪಣೆ ಪಡೆದು ಚಾವರಾಜ, ಕೇಶವ ದೇವರ ಹಿಂದಿನ ಸಾಮ್ಯವನ್ನು ಮತ್ತು ಆಸ್ಥಾನದ ಆಚಾರ್ಯವನ್ನು

ಪಡೆಯುತ್ತಾನೆ.[೨೫೪] ಮಾದಿನೂರಿನ ಧರ್ಮನಾಯಕ ಕೇಶವದೇವನು ಸೋಮನಾಥದೇವರ ಮೂಲಸ್ಥಾನಕ್ಕೆ ನಿತ್ಯೋಪಹಾರಕ್ಕೆ ಊರ ಮಧ್ಯ ಕಟ್ಟಿಸಿದ ತ್ರೈಪುರುಷ ದೇವಾಲಯಕ್ಕೆ ವಿವಿಧ ದಾನ ಬಿಟ್ಟಿರುವುದಾಗಿ ವರ್ಣಿಸಿದೆ.[೨೫೫]

ಹೀಗೆ ಶೈವ ಧರ್ಮ ಬೆಳವಣಿಗೆಯಲ್ಲಿ ಲಾಕುಳ ಶೈವರ ಕುರಿತು ಅದನ್ನು ಸ್ವೀಕರಿಸಿದ ಅರಸರು, ಅಧಿಕಾರಿಗಳು, ರಾಣಿಯರು ಅನೇಕ ದೇವಾಲಯಗಳನ್ನು ಕಟ್ಟಿಸಿ ನೀಡಿದ ದಾನ-ದತ್ತಿಗಳು ಅದನ್ನು ನಿರ್ವಹಿಸುವಲ್ಲಿ ಸ್ಥಾನಾಚಾರ್ಯರು ವಹಿಸಿದ ಪಾತ್ರ ಇತ್ಯಾದಿಯಾಗಿ ತಿಳಿಸಿರುವ ಶಾಸನಗಳು ಸ್ಥಾನಾಚಾರ್ಯರಲ್ಲಿ ಹೆಸರಾದ ಗುರುಗಳು, ಅರಸರಿಂದ ಮನ್ನಣೆ ಪಡೆದು ರಾಜಮನೆತನಗಳಲ್ಲಿದ್ದು ರಾಜರಿಗೆ ರಾಜನೀತಿಗಳ ಬಗ್ಗೆ ಮಾರ್ಗದರ್ಶನ ಮಾಡುತ್ತಿದ್ದರು. ಮತ್ತು ಅನೇಕರಿಗೆ ವಿದ್ಯೆಯನ್ನು ಕಲಿಸಿ ಅವರನ್ನು ಸುಶಿಕ್ಷಿತರನ್ನಾಗಿ ಮಾಡುತ್ತಿದ್ದರಿಂದ ಸಮಾಜದಲ್ಲಿ ಅವರನ್ನು ಗೌರವದಿಂದ ಕಾಣುತ್ತಿದ್ದರು. ಹೀಗಾಗಿ 'ರಾಜಗುರುಗಳಾಗಿ' ಹೆಸರಾಗಿರುವುದು ಕಾಣುತ್ತೇವೆ.[೨೫೬] ಇದನ್ನು ಜಿಲ್ಲೆಯ ಶಾಸನಗಳು, ಪಂಡಿತ ವರ್ಗ, ಪಂಡಿತಗುರುಗಳೆಂದು ಮತ್ತು ಅವರು ಹೊಂದಿದ ಶಿಷ್ಯರ ಕುರಿತು ಉಲ್ಲೇಖಿಸಿವೆ. ಅಂದಿನ ರಾಜಸತ್ತೆಯಲ್ಲಿ ಕಾಳಾಮುಖ ಗುರುಗಳು ವಹಿಸಿದ ಪಾತ್ರ ಅವರು ಹೊಂದಿದ ಶಿಷ್ಯ ಪರಂಪರೆ ಕುರಿತು ಶಾಸನಗಳು ತಿಳಿಸಿವೆ.[೨೫೭]

ಕುಕನೂರಿನ ಶಾಸನ ಸೋಮೇಶ್ವರ ಪಂಡಿತನ ವರ್ಣನೆಯನ್ನು ''ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ, ಧ್ಯಾನ ಧಾರಣ, ಸಮಾಧಿ, ಜಪ ಷಡಂಗೋಪಹಾರಾದಿ ಸಂಪನ್ನರ ಅಖಿಳಪ್ರಾಣಿ ಪ್ರಸನ್ನರ ಅನೇಕ ತರ್ಕ ವ್ಯಾಕರಣ ನಾಟಕ ಭರತ ವಾತ್ಸಾಯನಾದಿ ವಿದ್ಯಾ ಸಾರಸಾರ ವಿಚಾರ ಚತುರಾನನರ್॥ ಸಕಳ ಜಗತ್ಕರ್ತೃ ತ್ರಿನಯನ ಪ್ರಚಂಡ ಮಾರ್ತಂಡರ್ ಗಿರಿವಜ್ರದಂಡರ್ ಸುಜನಜನ ಜನಿತ ಸಂತೋಷರ್ '' ಎಂದು ವಿಶೇಷಣದಿಂದ ವರ್ಣಿಸುತ್ತ ಆತನ ಪಾಂಡಿತ್ಯವನ್ನು ಹೊಗಳಿದೆ.[೨೫೮] ಅದೇ ಊರಿನ ಮತ್ತೊಂದು ಶಾಸನ ಕಳೇಶ್ವರ ಮುನಿಯನ್ನು ಕುರಿತು ''ಅರಿಯದ ಸಿದ್ಧಾಂತನಱಿಯದ ಮಂತ್ರಗಳಱಿವಿನೆಱಿವಿನ ಕಣಿಯೆನಿಸಿದಂ ಕಳೇಶ್ವರ ದೇವ। ಸಿದ್ಧಾವಳಿ ದೇವ್ಯಾವಳಿ, ಸಿದ್ಧಾಂತವಳಿ, ಶಿವಾಗಮಾವಳಿ ನೆಱೆದಿ ಸಿದ್ಧಾಂತಿಕಳೇಶ್ವರ ಬುಧನುದ್ಧರಿಸಿ ಜಲಕ್ಕನಾದವು ಬ್ರ್ಪಿರತಳದೊಳು ಸಕಳೋರ್ವ್ವರೆ ಮೆಚ್ಚಲು ಮಾಂತ್ರಿಕ ತಾಂತ್ರಿಕ ಯಾಂತ್ರಿಕ ಕರ್ಕ್ಕಳಂ ಮೆಚ್ಚಿಸಿ ಮಾಂತ್ರಿಕನೆನೆ ತಾಂತ್ರಿಕನೆನೆ ಯಾಂತ್ರಿಕನೆನೆ ಧರೆ ಸೊಗಯಿಪಂ ಕಳೇಶ್ವರದೇವಂ॥ ಶಿವ ಸಿದ್ಧಾಂತಾಚಾರ್ಯ, ರಾಜಗುರು, ಮಂತಜ್ಞ, ತ್ರೈಕಾಲದರ್ಶಿ, ಶೈವಾಗಮರ್, ಶಬ್ದಜ್ಞ, ಶಾಸ್ತ್ರಜ್ಞ, ತರ್ಕಜ್ಞ, ಕಾವ್ಯಜ್ಞ, ದೈವಜ್ಞ, ಸರ್ಬಜ್ಞ... ನೆನೆದುದೇ ದೈವಂ,'' ಎಂದುದೆ ಮಂತ್ರಂ ಎಂದು ಹೊಗಳಿದೆ.[೨೫೯] ಇದೇ ರೀತಿಯಾಗಿ ಅನೇಕ ಶಾಸನಗಳು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಇದೇ ಒಕ್ಕಣೆಯನ್ನು ಬಳಸಿ ಘನತೆಯಿಂದ ಬಾಳಿದ ಯತಿಗಳು ಮತ್ತು ಅವರ ಶಿಷ್ಯರ ಕುರಿತು ಉಲ್ಲೇಖಿಸಿದ್ದು ಅವುಗಳ ಕುರಿತಾಗಿ ಈ ಕೆಳಗಿನ ಪಟ್ಟಿಯಲ್ಲಿ ನೋಡಲಾಗಿದೆ.

| | ಮುನಿ ಹೆಸರು | ಕಾಲ | ಊರು | ಶಾಖೆ | ಸ್ಥಾನಿಕ ಸ್ಥಳ | ಶಿಷ್ಯರು |
|---|---|---|---|---|---|---|
| ೧. | ಸಿದ್ಧೇಶ್ವರ ಸಂಕರಾಶಿ ಭಟಾರ | ೯೯೧ | ತಳಕಲ್ಲು | - | ಕಾಲದಾಲೂರ | ಅಮೃತರಾಶಿ ಭಟಾರ |
| ೨. | ಅಮೃತರಾಶಿಭಟಾರ | - | ತಳಕಲ್ಲು | - | - | ಸೂರ್ಯಾಭರಣಭಟಾರ |
| ೩. | ಜಗವಿನ್ದ ಪಂಡಿತ | ೧೦೦೨ | ಬಳಗೇರಿ | - | ಶೋಭನೇಶ್ವರ | |
| ೪. | ಲೋಕಾಭರಣ | ೧೦೦೪ | ಬಳಗೇರಿ | - | ಶೋಭನೇಶ್ವರ | |
| ೫. | ಚೋಳಪಂಡಿತ | ೧೦೦೫ | ಕುಕನೂರು | - | ಪೊಸಮಠ | ಅಗಸ್ತ್ಯಜೀಯ |
| ೬. | ಚಳೇಶ್ವರ | ೧೦೫೯ | ವಿಪ್ರ | | ಮೋರಖಂಡಿಯ ಜಾದಿನಮಠ | - |
| ೭. | ಮಲಯಾಳಪಂಡಿತ | ೧೧೯೪ | ವಿಪ್ರ | - | ಸಿದ್ದೇಶ್ವರ | - |
| ೮. | ಶಿವಶಕ್ತಿ ಪಂಡಿತ | ೧೧೯೮ | ಕಲ್ಲೂರು | | ಕಾಳಾಮುಖ ಕಲಿದೇವಸ್ವಾಮಿ | - |
| ೯. | ದೇವರಾಸಿಪಂಡಿತ | ೧೧೧೩ | ಸಂಕನೂರು | - | - | - |
| ೧೦. | ಸಂಕರಾಸಿ ಪಂಡಿತ | ೧೧೨೩ | ಮಂಕಲ್ಕೇರಿ | - | ಮಲ್ಲೇಶ್ವರದೇವ | - |
| ೧೧. | ರುದ್ರಶಕ್ತಿ ಪಂಡಿತ | ೧೧೨೫ | ಕಲ್ಲೂರು | - | - | - |
| ೧೨. | ಮರುಳಾನಂದದೇವರು | ೧೧೪೩ | ಕುಕನೂರು | - | - | - |
| ೧೩. | ಮೊಲ್ಲೆಯ ಬಮ್ಮಯ್ಯ | ೧೧೫೪ | ಕುಕನೂರು | - | ಕಲಿದೇವಸ್ವಾಮಿ | - |
| ೧೪. | ಸಿದ್ಧಾಂತಿಕ ಕಳೇಶ್ವರಯತಿ | ೧೧೭೮ | ಕುಕನೂರು | ಸೊಂಡಿಯ ಕಾಳಾಮುಖ | ಮಹಾಮಾಯ | ಸೋಮೇಶ್ವರ |
| ೧೫. | ಸೋಮೇಶ್ವರ | | ಕುಕನೂರ | ಸೊಂಡಿಯ, ಕಾಳಾಮುಖ | ಮಹಾಮಾಯ, | ವಿಗ್ರೇಶ್ವರ |
| ೧೬. | ವಿಗ್ರೇಶ್ವರ | | ಕೂಕನೂರ | ಸೊಂಡಿಯ ಕಾಳಾಮುಖ | ಮಹಾಮಾಯ | ಯೋಗೇಶ್ವರ |
| ೧೭. | ಯೋಗೇಶ್ವರ | | ಕೂಕನೂರ | ಸೊಂಡಿಯ | ಕಳೇಶ್ವರ | |
| ೧೮. | ಮೊಲ್ಲೆಯ ಬಮ್ಮಯ್ಯ | ೧೧೮೫ | ಕಲ್ಲೂರು | - | ಗಣಮಠ | - |
| ೧೯. | ಸೋಮೇಶ್ವರ ಪಂಡಿತ | ೧೧೮೫ | ಕಲ್ಲೂರು | - | ಸೋಮೇಶ್ವರಮಠ | - |
| ೨೦. | ಸೋಮೇಶ್ವರ ಪಂಡಿತ | ೧೨ನೆ ಶ. | ಕಲ್ಲೂರು | - | - | - |
| ೨೧. | ದೇವರಾಸಿಪಂಡಿತ | ೧೨ನೆ ಶ. | ಪುರ | - | ಸೋಮೇಶ್ವರ ಮಠ | - |
| ೨೨. | ವಿರುಪಾಕ್ಷ ಸ್ವಾಮಿ | ೧೨೩೧ | ಕುಕನೂರು | - | ಕಲ್ಲೇಶ್ವರದ ಆಚಾರ್ಯ | - |

ಯರಂಬರಗಿ ಕುಳಾಗ್ನಿ ಆಚಾರ್ಯ ಮಲ್ಲಯ್ಯ, ಸಂಕನೂರಿನ ಆಚಾರ್ಯ ದೇವರಾಸಿ ಪಂಡಿತ, ಬಳಗೇರಿ ಸೋಬನರಸಾಚಾರ್ಯ, ತಳಕಲ್ಲಿನ ಸಿದ್ಧೇಶ್ವರ ಸಂಕರಾಶಿಭಟಾರನ ಶಿಷ್ಯ ಅಮೃತರಾಶಿಮುನಿ, ಪುರದ ದೇವರಾಸಿ ಪಂಡಿತರು, ಆನೆಗುಂದಿಯ ಸೋವಿಯಕ್ಕಳು ಮಂಡಳಾಚಾರ್ಯನಾದ ಲಳಿತಕೀರ್ತಿ ಭಟ್ಟಾರನ

ಶಿಷ್ಯರು[೨೬೦] ನಾನಾ ಮೂಲಗಳಿಂದ ಆಗಮ ಮೂಲದ ಅನೇಕ ಶೈವ ಧರ್ಮಗಳಲ್ಲಿ ಕಾಳಾಮುಖ ಶೈವವು ಕರ್ನಾಟಕದಲ್ಲಿ ತುಂಬ ಪ್ರಸಿದ್ಧಿ ಪಡೆದಿತ್ತು. ಮುಂದೆ ವೀರಶೈವ ಧರ್ಮ ಪ್ರವರ್ಧಮಾನವಾದಂತೆ ಅದರಲ್ಲಿ ಇದು ಕರಗಿಹೋಯಿತು. ಈ ಧರ್ಮದ ಯತಿಗಳು ಈ ರೀತಿ ದೇವಾಲಯಗಳ ಸ್ಥಾನಿಕರಾಗಿ ದೇವಾಲಯಗಳಿಗೆ ಹೊಂದಿಕೊಂಡಿರುವ ಮಠದ ಉಸ್ತುವಾರಿ ನಿರ್ವಹಣೆ ವಿದ್ಯಾದಾನ ಮುಂತಾದವುಗಳನ್ನು ಅಳವಡಿಸಿಕೊಂಡು ಕಾಳಾಮುಖ ಶೈವಧರ್ಮಕ್ಕೆ ಅಪಾರ ಕೊಡುಗೆಯನ್ನು ಕೊಟ್ಟಿದ್ದಾರೆನ್ನಬಹುದು.

## ವೀರಶೈವ ಧರ್ಮ

ವೀರಶೈವ ಮಹಾವೃಕ್ಷದ ಬೇರುಗಳು ಕಾಲಕಳೆದಂತೆ ಅತ್ಯಂತ ಆಳದಲ್ಲಿ ಬೆಳೆಯುತ್ತಾ ಬಂದಿರುವುದು ಸ್ಪಷ್ಟವಾಗುತ್ತದೆ. ಕ್ರಿಸ್ತ ಪೂರ್ವ ಮೂರು ಸಾವಿರ ವರ್ಷಗಳಷ್ಟು ಪ್ರಾಚೀನವೆನಿಸಿದ, ಹರಪ್ಪಾ ಮಹೇಂಜೋದಾರೋ ಅವಶೇಷಗಳಲ್ಲಿ ಇದರ ಉಗಮ ಕಾಣುವಂತೆ ಅಲ್ಲಿ ದೊರೆತ ಕಿರಿಯ (ಲಿಂಗಗಳನ್ನು) ಇಂದಿನ ವೀರಶೈವರು ಧರಿಸುವ ಇಷ್ಟಲಿಂಗಗಳನ್ನು ಹೋಲುತ್ತವೆ. ಮಹಾಭಾರತದಲ್ಲಿ ಉಲ್ಲೇಖಿತವಾದ ಒಂದು ಪಾಶುಪತವು ಅತ್ಯಂತ ಪ್ರಾಚೀನವಾಗಿದ್ದು ಇಂದಿನ ವೀರಶೈವಕ್ಕೆ ತೀರ ಹತ್ತಿರವೆನಿಸುತ್ತದೆ.[೨೬೧] ಶೈವ ಧರ್ಮದ ಬೆಳವಣಿಗೆಯಲ್ಲಿ ಬಹುಶಃ ಪರಿಪೂರ್ಣತೆಯನ್ನು ಸಾಧಿಸಿದ ಶಾಖೆಯೆಂದರೆ ವೀರಶೈವ ಧರ್ಮ ಎನ್ನಬಹುದು. ಎಲ್ಲಾ ಶೈವ ಸಿದ್ಧಾಂತಗಳ ಒಳ್ಳೆಯ ಅಂಶಗಳನ್ನು ತನ್ನಲ್ಲಿ ಸಮಾವೇಶಗೊಳಿಸಿಕೊಂಡು ವ್ಯಾಪಕವಾದ ಒಂದು ತತ್ವ ಸಿದ್ಧಾಂತವನ್ನು ಆಚರಣೆಯ ಮಾರ್ಗವನ್ನೂ ಇದು ರೂಪಿಸಿಕೊಂಡಿತೆಂದು ಕಾಣುತ್ತದೆ. ೧೨ನೆಯ ಶತಮಾನದಲ್ಲಿ ಅಂದರೆ ಬಸವಣ್ಣನವರ ಕಾಲದಲ್ಲಿ ಇದು ನಿರ್ದಿಷ್ಟವಾದ ಒಂದು ಸ್ವರೂಪವನ್ನು ಪಡೆದು, ಸರ್ವ ಸಮಾನತೆಯ ತನ್ನ ಆಶಯವನ್ನು ಬಹುದೊಡ್ಡ ಪ್ರಮಾಣದಲ್ಲಿ ಈಡೇರಿಸುವ ಶಕ್ತಿಯುತವಾದ ಧರ್ಮವಾಗಿ ಪರಿಣಮಿಸಿತೆಂಬ ವಿಚಾರದಲ್ಲಿ ಸಂದೇಹವಿಲ್ಲವಾದರೂ ಬಸವಣ್ಣನವರಿಂದಲೇ ಈ ಧರ್ಮ ಸ್ಥಾಪಿತವಾಯಿತೆಂದು ಹೇಳುವಂತಿಲ್ಲ. ಅವರಿಗಿಂತ ಹಿಂದೆಯೇ ಈ ಧರ್ಮ ಅಸ್ತಿತ್ವದಲ್ಲಿತ್ತೆಂಬುದಕ್ಕೆ ಸ್ಪಷ್ಟವಾದ ಆಧಾರಗಳಿವೆ.

ವೀರಶೈವ ಧರ್ಮದ ಉಗಮ-ವಿಕಾಸದ ಕುರಿತು ಅನೇಕ ಸಂಶೋಧನೆಗಳು ಆಗಿದ್ದರಿಂದ ಅಷ್ಟೇನು ಸಮಸ್ಯೆಯಾಗಿ ಉಳಿದಿಲ್ಲ. ಪಾಶುಪತ ಕಾಳಾಮುಖದ ಒಂದು ಪಂಗಡ ಅಭಿನವೀಕರಣದತ್ತ ಒಲವು ತೋರಿ ಹೊಸತನವನ್ನು ಮೈಗೂಡಿಸಿಕೊಂಡು ಅಭಿನವ ಪಾಶುಪತದ ಮುಂದುವರಿಕೆಯ ರೂಪವೇ ವೀರಶೈವವಾಗಿದೆ. ಇದು ಆಗಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ಕ್ಷೇತ್ರದಲ್ಲಿ ಹೊಸ ತಾತ್ವಿಕ ವಿಚಾರ ಹಾಗೂ ಸಾಮಾಜಿಕ ದೃಷ್ಟಿಕೋನವನ್ನು ರೂಪಿಸಿಕೊಂಡಿದೆ. ಹೀಗಾಗಿ ಡಾ. ಹಿರೇಮಲ್ಲೂರ ಈಶ್ವರನ್‌ರವರು ಲಿಂಗಾಯತ ಧರ್ಮದ ವಿಕಸನದ ದಾರಿಯಲ್ಲಿ ಸಂಸ್ಥೀಕರಣದ ಅವಸ್ಥೆ ಎಂದು ಕರೆದಿದ್ದಾರೆ.[೨೬೨]

ನಾವು ಗಮನಿಸಬೇಕಾದ ಅಂಶವೆಂದರೆ ಹೊಸ ಧೋರಣೆಯನ್ನು ತಾಳಿದ ಅಭಿನವ ಪಾಶುಪತ ಅಥವಾ ವೀರಶೈವ ಹಿಂದಿನ ಕಾಳಾಮುಖ ಪಾಶುಪತ ಪಂಥದೊಂದಿಗೆ ಬೆರೆತು ಮುಂದುವರೆಯಿತೆಂಬುದನ್ನು. ಕಲ್ಯಾಣ

ಕ್ರಾಂತಿ ನಡೆದು ಶರಣರು ಮತ್ತು ಅವರ ವಂಶಜರು ಕಲಚೂರಿಗಳ ಸಾಮ್ರಾಜ್ಯದ ಗಡಿಯನ್ನು ದಾಟಿ ದಕ್ಷಿಣಕ್ಕೆ ಹೋದರು. ಹೋಗುವಾಗ ತಮಗೆ ಅನುಕೂಲವಾದ ಸ್ಥಳಗಳಲ್ಲಿ ದೇವಸ್ಥಾನ ಮಠ ಮಾನ್ಯಗಳನ್ನು ಕಟ್ಟಿಕೊಂಡರು. ಉದಾ: ಬಸವಣ್ಣನ ವಂಶಜರು ಬಸವಾಪಟ್ಟಣದಲ್ಲಿ, ನೆಲುವಿಗೆಯ ಶಾಂತಯ್ಯನ ಕುಟುಂಬದವರು ಅರ್ಜುನವಾಡದಲ್ಲಿ ನೆಲೆ ನಿಂತರು.[೨೬೩] ಹಾಗೆಯೆ ೧೨ನೆಯ ಶತಮಾನದ ಉತ್ತರಾರ್ಧದಿಂದ ೧೩ನೆಯ ಶತಮಾನದವರೆಗೆ ಪಾಶುಪತ ಕಾಳಾ ಮುಖರು ಪ್ರಭಾವಶಾಲಿಗಳಾಗಿ ದೇವಾಲಯ ಮಠಗಳಲ್ಲಿ ತಮ್ಮ ಚಟುವಟಿಕೆ ಮುಂದುವರೆಸಿಕೊಂಡು ಹೋದುದು ಶಾಸನಗಳಿಂದ ತಿಳಿದು ಬರುವುದು. ಇದರಿಂದ ೧೨ನೆಯ ಶತಮಾನದಲ್ಲಿ ವೀರಶೈವ ಧರ್ಮ ವ್ಯಾಪಕ ಪ್ರಭಾವ ಬೀರಿ ಶೈವ ಧರ್ಮದ ಬೆಳವಣಿಗೆಯಲ್ಲಿ ಮಹತ್ತರವಾದ ಪರಿಪೂರ್ಣತೆಯನ್ನು ಸಾಧಿಸಿದ ಶಾಖೆಯಾಗಿದೆ.[೨೬೪] ಮುಂದೆ ಬಸವಣ್ಣನವರ ವಚನ ಸಾಹಿತ್ಯ ಕಾಲದಲ್ಲಿ ಶರಣರ ಹೊಸ ವಿಚಾರಗಳು ಒಬ್ಬರಿಂದೊಬ್ಬರಿಗೆ ಹರಡಿ ಕಲ್ಯಾಣದ ಕೀರ್ತಿ ಎಲ್ಲೇಡೆ ಹಬ್ಬಿತು. ಅಂದಿನ ರಾಜ, ಅಧಿಕಾರಿ, ಅಗ್ರಹಾರ, ಮಠ ಹಾಗೂ ವ್ಯಾಪಾರಿಗಳಿಂದ ಸುಲಿಗೆಗೊಳಗಾದ ಜನಸಾಮಾನ್ಯರು ವೀರಶೈವ ಧರ್ಮವನ್ನು ಸ್ವೀಕರಿಸಿದರು ಅಲ್ಲದೇ ಬಸವ ಮಾರ್ಗ ಹುಡಕಿಕೊಂಡು ನಾನಾ ಭಾಗಗಳಿಂದ ಬಂದರು. ಇದರಿಂದ ಸಾಮಾಜಿಕ ಕ್ಷೇತ್ರದಲ್ಲಿ ಬದಲಾವಣೆ ಆಗಿ ಹೊಸ ಸಮಾಜದ ಹೋರಾಟ ಶಕ್ತಿಗಳೆ ರೂಪಗೊಂಡವು.[೨೬೫] ಬಸವಣ್ಣನವರ ಪ್ರಭಾವಕ್ಕೊಳಗಾಗಿ ಬೇರೆ ಬೇರೆ ನಾಡಿನ ವಿವಿಧ ವರ್ಗದ ಜನರು, ರಾಜಮನೆತನಗಳ ರಾಜರು ವೀರಶೈವರಾಗಿದ್ದಾರೆ. ಆದರೆ ಅದರ ಸಂಖ್ಯೆ ವಿರಳ.[೨೬೬]

ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಜೈನಧರ್ಮದವರು, ಇತರ ಜನಾಂಗದವರು, ವರ್ತಕರು, ರಾಜರು, ರಾಣಿಯರು, ಅಧಿಕಾರಿಗಳು, ಈ ಶೈವಧರ್ಮ ಸ್ವೀಕರಿಸಿ ಶೈವ ಸಿದ್ಧಾಂತವನ್ನು ಒಪ್ಪಿ ಅನೇಕ ಶೈವ ದೇವಾಲಯಗಳನ್ನು ಕಟ್ಟಿಸಿರುವುದು, ದಾನ ದತ್ತಿಗಳನ್ನು ನೀಡಿರುವುದನ್ನು ಗಮನಿಸಿದರೆ ಅವರು ವೀರಶೈವ ಧರ್ಮವನ್ನು ಸ್ವೀಕರಿಸಿದ್ದರೆಂಬುದಕ್ಕೆ ಸ್ಪಷ್ಟ ಆಧಾರ ಒದಗಿಸುತ್ತವೆ. ಉದಾಹರಣೆಗಾಗಿ ನೋಡುವುದಾದರೆ ಕುಕನೂರಿನ ನವಮಠದ ಆಚಾರ್ಯಪಟ್ಟವನ್ನು ಪಡೆದ ಸೋಮೇಶ್ವರ, ಯರಂಬರವಿಯ ಮೂಲಸ್ಥಾನದ ಸಿಂಗೇಶ್ವರ, ರಾಜೇಶ್ವರ, ಚೌಡೇಶ್ವರ, ವಿಕ್ರಮೇಶ್ವರ ದೇವಾಲಯಗಳ ಮಠದ ಆಚಾರ್ಯಪಟ್ಟ ಪಡೆದ ಇತನು ಮಹಾಮಂಡಳೇಶ್ವರ ಸಿಂಧರಾಜ ಪೆರ್ಮಾಡಿಗೂ ಅವನ ಮಂಡಳೇಶ್ವರ ಭಾವುಂಡನಿಗೂ ಗುರುವಾಗಿದ್ದ ಕಳೇಶ್ವರ ಮುನಿ ಶೈವ ಸಿದ್ಧಾಂತವನ್ನು ಒಪ್ಪಿಕೊಂಡನೆಂದು ಶಾಸನ ವರ್ಣಿಸುತ್ತದೆ. ಈ ಮುಂಚೆ ಇತ ಜೈನ ಮುನಿಯಾಗಿದ್ದಿರಬೇಕೆಂದು ತಿಳಿಯುತ್ತದೆ.[೨೬೭] ಆನೆಗುಂದಿ ಶಾಸನ ಷಡ್ದರ್ಶನ ನೋಂಪಿಬ್ರತ ಉಲ್ಲೇಖ ಶಿವ ಪಾರ್ವತಿಯರ ಮದುವೆ ವರ್ಣನೆ ನೀಡುವುದರೊಂದಿಗೆ ಶೈವ ಧರ್ಮಕ್ಕೆ ಕನ್ನಡಿ ಹಿಡಿದಂತಿದೆ.[೨೬೮] ಹೀಗೆ ಕೊಪ್ಪಳ ಜಿಲ್ಲೆಯ ಶಾಸನಗಳು ವೀರಶೈವ ಧರ್ಮದ ಕುರಿತು ಸ್ಪಷ್ಟವಾದ ಚಿತ್ರಣವನ್ನು ನೀಡುವುದಿಲ್ಲವಾದರೂ ಶೈವ ದೇವಾಲಯಾಗಳು ದಾನ ದತ್ತಿ ನೀಡಿದ ಕುರಿತು ತಿಳಿಸುವ ಕೆಲವು ಶಾಸನಗಳ ಮಾಹಿತಿಯಿಂದ ವೀರಶೈವ ಧರ್ಮ ಈ ಪ್ರದೇಶದಲ್ಲಿ ಸ್ವಲ್ಪ ಮಟ್ಟಿಗೆ ತನ್ನ ಪ್ರಭಾವ ಬೀರಿತ್ತೆಂದು ತಿಳಿಯುತ್ತದೆ. ಕ್ರಿ.ಶ.೧೧೫೩ರ ಕಲ್ಲೂರು ಶಾಸನ

ಕಲ್ಲೂರ ಮೊಲ್ಲೆಯ ಭಮ್ಮಯ್ಯ ಕಲಿದೇವನ ಪಾದಾರಾಧಕನಾಗಿದ್ದು, ಯಲಬುರ್ಗಿ ಸಿಂಧರ ವಂಶದ ಛಾವುಂಡ ರಾಜನ ಹೆಂಡತಿ ಕಲಿದೇವ ಆರಾಧಕ ಬಮ್ಮಯ್ಯನ ದೇಹತ್ಯಾಗವೃತ್ತಿಗಾಗಿ ಆರುಮತ್ತರ ಹೊಲ ಮಾನ್ಯವಾಗಿ ನೀಡುತ್ತಾಳೆಂದರೆ ಕ್ರಿ.ಶ.೧೧೮೫ರ ಮತ್ತೊಂದು ಶಾಸನ ಛಾವುಂಡರಾಯನ ಮಗ ವೀರ ಬಿಜ್ಜಲದೇವನು ಪ್ರಥಮ ವೃತ್ತಿಯಾಗಿ ಅಲ್ಲಿನ ಗಣಮಠಕ್ಕೆ ಇನ್ನೂರಮತ್ತರು ಭೂಮಿಯನ್ನು ದಾನವಾಗಿ ನೀಡಿದಂತೆ ತಿಳಿಸುವುದು. ಇಲ್ಲಿ ವೀರಬಿಜ್ಜಳನ ಹೆಸರೇ ಸೂಚಿಸುವಂತೆ ಆತ ವೀರಶೈವ ಧರ್ಮದ ಆರಾಧಕನಾಗಿರಬೇಕೆಂದು ತಿಳಿಯುತ್ತದೆ. ಅದರಂತೆ ಕಲ್ಲೂರಿನ ಬೊಮ್ಮಣ್ಣನ ಕುರಿತು ಪುರಾಣ ಪ್ರಕಟವಾಗಿದೆ. ರೋಣದಲ್ಲಿ ಸಹ ಇವನ ಹೆಸರಿನ ಕಟ್ಟೆಯಿದೆ. ಕ್ರಿ.ಶ. ೧೨೩೧ರ ಕುಕನೂರಿನ ಶಾಸನದಲ್ಲಿ ವಿರುಪಾಕ್ಷ ಸ್ವಾಮಿಯ ಉಲ್ಲೇಖ ಬಂದಿದ್ದು ಇತ ಕಲ್ಲೇಶ್ವರದ ಆಚಾರ್ಯನಾಗಿದ್ದ ಮತ್ತು ವೀರಶೈವ ಧರ್ಮೀಯನಾಗಿದ್ದನೆಂದು ತಿಳಿಸಿದರೆ, ಕ್ರಿ.ಶ.೧೧೭೮ರ ಶಾಸನ ಕುಕನೂರು ಶೈವಧರ್ಮದ ಶಕ್ತಿ ಪೀಠವಾಗಿತ್ತೆಂದು ವರ್ಣಿಸುವುದು. ''ಶಿವಲಿಂಗಗಳ್‌ಸ್ವಯಂಭೂ ಪ್ರಭುತೆಯನಿಸಿ ವೊಂಬತ್ತರ್ಿಂನಲ್ ಶಕ್ತಿಪೀಠ। ಭುವಸ್ತುತ್ಯಂಗಳೊಂಬತ್ತೆನಲಿದು ಶಿವಶಕ್ತಿಸ್ಫುರಿತ್ಸ-ಂಪುಟಕ್ಷೇತ್ರವೆನುತ್ತಂ ಸಿದ್ಧಯೋಗೇಶ್ವರವರ ಸಹಜಾಯೋಗಿನೀ ವ್ರಾತವತ್ಯುತ್ಸವದಿಂದಲ್ಲಿಂದವೆಂದು ತೊಲಗೆರನಲದಾರ್ ಬಣ್ಣಿಸರ್ ಕುಕನೂರು''॥ ಎಂದಿದೆ.

ಅದೇ ರೀತಿ ಜಿಲ್ಲೆಯ ಇಟಗಿಯ ಶಾಸನ ಹುಲಗಿ ಶಾಸನಗಳು ಶೈವಧರ್ಮದ 'ಮಹಾದೇವ' (ಶಿವ) ದೇವಾಲಯ, ನಿರ್ಮಾತೃ ಮಹಾದೇವನ ವಂಶಾವಳಿ ಹುಲಗಿಯ ಸೋಮೇಶ್ವರ ದೇವಾಲಯದ ನಿರ್ಮಾಪಕ ಸೋಮನಾಥನ ವಂಶಾವಳಿಗಳು ವೀರ ಶೈವ ಧರ್ಮಕ್ಕೆ ನಿದರ್ಶನವಾಗಿವೆ. ಅದರಂತೆ ಕವಲೂರು, ಅಳವಂಡಿ, ಮಾದಿನೂರು, ಹುಲಗಿ, ಕೊಪ್ಪಳ, ಕಲ್ಲೂರು, ಬಳಗೇರಿ, ಕುಕನೂರು, ಸಂಕನೂರು, ಮುಧೋಳು, ತಳಕಲ್ಲು, ಇಟಗಿ, ಗೋತಗಿ, ಪುರ, ಚಳಗೇರಿ ಅಂಟೂರಠಾಣ, ವಿಪ್ರ, ಹಿರೇಜಂತಕಲ್ಲು, ಆನೆಗುಂದಿ, ಗ್ರಾಮಗಳ ಶಾಸನಗಳಲ್ಲಿ ಶೈವ ದೇವಾಲಯ ಮತ್ತು ಶೈವ ದೇವರುಗಳ ಉಲ್ಲೇಖಗಳು ಬರುತ್ತಿದ್ದು[೨೧೯] ಇವೆಲ್ಲಾ ಆಧಾರಗಳು ಶೈವಧರ್ಮದ ಬೆಳವಣಿಗೆಯ ಸೂಚಕಗಳಾಗಿವೆ. ಇದೇ ಕಾಲಾವಧಿಯಲ್ಲಿ ಕಲ್ಯಾಣದಲ್ಲಿ ಶರಣ ಕ್ರಾಂತಿ ತೀವ್ರಗೊಂಡು ಹೊಸ ಮಾರ್ಗ, ಉನ್ನತ ವಿಚಾರಗಳು, ಸಾಮಾಜಿಕ ಕ್ರಾಂತಿ, ವಚನ ಸಾಹಿತ್ಯದ ಕ್ರಾಂತಿಗಳು, ವೀರಶೈವ ಧರ್ಮದ ಪ್ರಸಾರಕ್ಕೆ ಕಾರಣವಾದವು. ಈ ಪ್ರದೇಶದಲ್ಲಿ ಆಳಿದ ಸಿಂಧರು ಕಲಚೂರಿಗಳ ಚರಿತ್ರೆಯನ್ನು ಗಮನಿಸಿದರೆ ವೀರ ಶೈವ ಧರ್ಮವನ್ನು ಒಪ್ಪಿ ಅದರಂತೆ ನಡೆದಿರುವಂತೆ ಕಾಣುತ್ತದೆ.[೨೨೦] ಆದರೆ ರಾಜಧರ್ಮಕ್ಕನುಗುಣವಾಗಿ ದೇವಾಲಯ ಮುಂತಾದವುಗಳನ್ನು ನಿರಾಕರಿಸಲು ಅವರಿಂದ ಸಾಧ್ಯವಾಗಿರಲಿಕ್ಕಿಲ್ಲ. ಕಲ್ಯಾಣ ಕ್ರಾಂತೀಯ ಬಳಿಕ ವಚನ ಸಾಹಿತ್ಯದ ರಕ್ಷಣೆ ಮಠ, ದೇವಾಲಯಗಳೇ ಮಾಡತೊಡಗಿರುವುದು ಕಾರಣವಾಗಿರಬೇಕು. ಹರಿಹರ, ರಾಘವಾಂಕರ ಕಾರ್ಯಕ್ಷೇತ್ರ ಕೊಪ್ಪಳ ಜಿಲ್ಲೆಯ ಹತ್ತಿರ ಹಂಪೆಯಾಗಿದ್ದು ಅದು ಬಲ್ಲಕುಂದೆ ನಾಡಿಗೆ ಸೇರಿತ್ತು. ಈ ಬಲ್ಲಕುಂದೆ ನಾಡಿಗೆ ಕೊಪ್ಪಳ ಜಿಲ್ಲೆ ಸೇರಿತ್ತೆಂಬುದನ್ನು ಇಲ್ಲಿ ಗಮನಿಸಬೇಕು. ನಂತರ ಶರಣರು ಕಲಚೂರಿ ಸಾಮ್ರಾಜ್ಯ ಬಿದ್ದು ಉಳವಿ ಶ್ರೀಶೈಲಕ್ಕೆ ಹೋದರು. ಕೆಲವರು ಕುರಗೋಡು ಸಿಂಧರ

ಆಶ್ರಯ ಬಯಸಿ ಹಂಪಿಗೆ ಬಂದು ನೆಲೆಸಿದರು. ಹೀಗೆ ಶರಣರ ವಚನ ಸಾಹಿತ್ಯ ಹಂಪಿಗೆ ಬಂದುದರಿಂದ ಹರಿಹರ-ರಾಘವರಿಗೆ ಅವರ ಚರಿತ್ರೆ ಬಹು ಸುಲಭವಾಗಿ ಕೈಗೆಟುಕಲು ಸಾಧ್ಯವಾಗಿರಬೇಕು.

ಜಿಲ್ಲೆಯ ಶಾಸನಗಳನ್ನು ಗಮನಿಸಿದರೆ ಕ್ರಿ. ಶ. ೧೨ನೆಯ ಶತಮಾನದಿಂದೀಚೆಗೆ ಇಲ್ಲಿ ಧಾರ್ಮಿಕ ಚಟುವಟಿಕೆಗಳು ಬಹು ಚುರುಕಾಗಿ ನಡೆದಿವೆ. ಅದಕ್ಕೆ ಕಾರಣ ಅಗ್ರಹಾರಗಳ ಸ್ಥಾಪನೆ, ವೈದಿಕ ಹಾಗೂ ಜೈನ ಧರ್ಮಗಳು ಒಂದಕ್ಕೊಂದು ಪೂರಕವಾಗಿ ದೇವಾಲಯ ಅಥವಾ ಬಸದಿಗಳ ನಿರ್ಮಾಣವನ್ನು ಕೈಗೊಂಡಿವೆ. ಬಹುತೇಕ ಶಾಸನಗಳಲ್ಲಿ ಮಹಾ ಜನರ ಉಲ್ಲೇಖ ಮತ್ತು ಬೆರಳೆಣಿಕೆಯಷ್ಟು ಶಾಸನಗಳಲ್ಲಿ ಕಾಳಾಮುಖ ಯತಿಗಳ ಪ್ರಸ್ತಾಪಗಳು ಕಂಡುಬರುತ್ತವೆ. ಕಾಳಾಮುಖ ಯತಿಗಳು ದೇವಾಲಯಗಳ ಸ್ಥಾನಿಕರಾಗಿದ್ದರು. ಹಾಗೂ ಅದರ ಆಗುಹೋಗುಗಳನ್ನು ನೋಡಿಕೊಳ್ಳುತ್ತಿದ್ದರು. ಮಹಾಜನರು ದೇವಾಲಯದ ಪೂಜಾಕೈಂಕರ್ಯ ಹಾಗೂ ಗ್ರಾಮದ ಆಗು ಹೋಗುಗಳನ್ನು ನೋಡಿಕೊಳ್ಳುತ್ತಿದ್ದರು. ಕೆಲವು ಶಾಸನಗಳಲ್ಲಿ ಕಾಳಾಮುಖ ಯತಿಗಳ ತಪಸ್ಸಿನ ಕುರಿತು ವರ್ಣಿಸಿರುವುದನ್ನು ಕಾಣುತ್ತೇವೆ. ಬಹುತೇಕ ಈ ಯತಿಗಳ ಪ್ರಭಾವ ಮುಂದೆ ೧೫ ನೇ ಶತಮಾನದವರೆಗೆ ಮುಂದುವರಿದದ್ದು ತಿಳಿದು ಬರುತ್ತದೆ. ಕ್ರಿ. ಶ. ೧೨ನೇ ಶತಮಾನದ ಕರ್ನಾಟಕದಲ್ಲಿ ಬಸವಣ್ಣನವರ ಪ್ರಭಾವದಿಂದ ಬಸವ ಮತದ ಪ್ರಭಾವ ನಾಡಿನಾದ್ಯಂತ ಕಾಣಿಸಿಕೊಂಡು ವಿಜಯನಗರ ಅರಸರ ಕಾಲದಲ್ಲಿ ಶೈವ, ವೈಷ್ಣವ ಧರ್ಮಗಳು ಪ್ರಮುಖವಾಗಿದ್ದರೂ ಜೈನ ಮತ್ತು ಬೌದ್ಧ ಧರ್ಮಕ್ಕೂ ಸಹ ಅಲ್ಪ ಸ್ವಲ್ಪ ನೆಲೆ ಇದ್ದಿರಿವುದಾಗಿ ತದನಂತರ ಅನೇಕ ಮಿಶ್ರ ಪಂಥಗಳು, ದೇವರುಗಳು ಜಿಲ್ಲೆಯ ಜನರ ಜೀವನದಲ್ಲಿ ಹಾಸುಹೊಕ್ಕಾಗಿ, ೧೫ನೇ ಶತಮಾನದ ನಂತರ ಮುಸಲ್ಮಾನರ ಆಗಮನದ ಬಳಿಕ ಇಸ್ಲಾಂ ಧರ್ಮವು ತನ್ನ ಪ್ರಭಾವಬೆಳೆಸಿಕೊಂಡಿತು. ಮುಸ್ಲಿಮರ ದಾಳಿಗೆ ಹಿಂದು ಧರ್ಮದ ದೇವಾಲಯಗಳು ಶತ್ರುಗಳ ದಾಳಿಗೆ ಭಗ್ನ ಗೊಂಡಿರುವುದಾಗಿ ಅಲ್ಲಿಯ ಸ್ಮಾರಕಗಳಾದ ಶಾಸನಗಳು, ಮೂಲ ಶಿಲ್ಪಿಗಳು, ದೇವಾಲಯಗಳು, ಜೀವಂತ ಸಾಕ್ಷಿಗಳಾಗಿ ಕುಂಡುಬರುತ್ತವೆ.

## ಅಡಿಟಿಪ್ಪಣಿಗಳು

೧. ದಿಕ್ಷಿತ, ಜಿ. ಎಸ್. ಹಾಗೂ ರಿತ್ತಿ, ಶ್ರೀನಿವಾಸ, ಸಂಗಡಿಗರು. (ಸಂ), : ೨೦೦೦, ಆಚಾರ್ಯ ಸೋಮದೇವ ವಿರಚಿತ ನೀತಿವಾಕ್ಯಾಮೃತಂ, ಪು-೨, ಹಂಪಿ, ಕನ್ನಡ ವಿಶ್ವವಿದ್ಯಾಲಯ.
೨. ಕೊಪ್ಪಾ. ಎಸ್. ಕೆ., ೧೯೯೦, 'ತರ್ದವಾಡಿನಾಡು ಒಂದು ಅಧ್ಯಯನ', ಪು-೨೫೫, ಪ್ರತಿಭಾ ಪ್ರಕಾಶನ ಇಂಡಿ.
೩. ನಾರಾಯಣ. ಪಿ. ವಿ., ೧೯೮೩, 'ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ', ಪು-೩೮೩, ಗದಗ.
೪. ಎಲಿಗಾರ ಚನ್ನಕ್ಕ., ೧೯೯೦ 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ', ಪು-೯೨, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೫. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೨೮, ಕೊಪ್ಪಳ (ಕೊ.ತಾ.) ಕ್ರಿ. ಪೂರ್ವ ೩ ನೇ ಶತಮಾನ, ಪು-೩೭.
೬. ಸೇಲೆತ್ತೊರೆ, ಬಿ. ಎ., *Mediaval Jainism*, ಪು- ೪೦೭.

೭. ಅದೇ, ಪು-೧೮೮-೧೯೧.

೮. ವೃಷಬೇಂದ್ರಸ್ವಾಮಿ, ಎಸ್. ಎಮ್. ಮತ್ತು ಇತರರು., ೧೯೭೬, *ಗವಿದೀಪ್ತಿ*, ಪು-೧೫೭-೧೫೮, ಕೊಪ್ಪಳ.

೯. ದೇವರಕೊಂಡಾರೆಡ್ಡಿ. (ಸಂ)., ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ*, ಕೊಪ್ಪಳ (ಕೊ.ತಾ.) ಕ್ರಿ.ಶ. ೯೭೫, ಪು-೭೨, ಹಂಪಿ.

೧೦. ಅದೇ, ನಂ-೫೧, ಕುಕನೂರು (ಯ.ತಾ.), ಕ್ರಿ.ಶ.೧೦೦೫, ಪು-೨೨೪.

೧೧. ಕೆ. ಎಂ. ಸುರೇಶ ಮತ್ತು ಸಂಗಡಿಗರು., ೨೦೦೧ *ಕರ್ನಾಟಕ ದೇವಾಲಯ ಕೋಶ, ಕೊಪ್ಪಳ ಜಿಲ್ಲೆ*, ಪ್ರಸ್ಥಾವನೆ ಪು-೨೦, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೧೨. *Annual Report* of the Mysore Archaeology Department for year 1923, ಪು-೧೦-೧೧.

೧೩. ಚಿದಾನಂದ ಮೂರ್ತಿ. ಎಂ., ೧೯೭೯, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪು-೭೧ ಮೈಸೂರ ವಿ.ವಿ. ಮೈಸೂರ.

೧೪. ರಮೇಶ ಕೆ.ವಿ. ಮತ್ತು ಇತರರು. (ಸಂ), *ಶ್ರೀಕಂಠಿಕಾ*.

೧೫. ದೇವರಕೊಂಡಾರೆಡ್ಡಿ. (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ, ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ*, ನಂ-೪೫, (ಕೊ.ತಾ.) ಕ್ರಿ ಶ. ೮೮೧, ಪು-೪೬, ಹಂಪಿ.

೧೬. ಅದೇ, ನಂ-೩೪, ಕೊಪ್ಪಳ (ಕೊ.ತಾ.), ಕ್ರಿ.ಶ. ೮೮೩, ಪು-೪೦.

೧೭. ಅದೇ, ನಂ-೧೧, ಉಪ್ಪಿನ ಬೇಟಗೇರಿ (ಕೊ.ತಾ.), ಕ್ರಿ.ಶ. ೯೬೪, ಪು-೨೨.

೧೮. ಅದೇ, ನಂ-೫೬, ಕುಕನೂರ (ಯ.ತಾ.), (ಗಂಗ ಮನೆತನ) ಪು-೨೩೯.

೧೯. ಅದೇ, ನಂ-೪, ಯಲಬುರ್ಗಿ (ಯ.ತಾ.), ೧೨ ನೇ ಶತಮಾನ, ಪು-೧೬೧.

೨೦. ಅದೇ, ನಂ-೧, ಯಲಬುರ್ಗಿ (ಯ.ತಾ.), ಕ್ರಿ.ಶ. ೧೨ ನೇ ಶತಮಾನ, ಪು-೧೬೦.

೨೧. ಅದೇ, ನಂ-೬, ಯಲಬುರ್ಗಿ (ಯ.ತಾ.), ಕ್ರಿ.ಶ. ೧೨ ನೇ ಶತಮಾನ, ಪು-೧೬೨.

೨೨. ಅದೇ, ನಂ-೫, ಯಲಬುರ್ಗಿ (ಯ.ತಾ.), ಕ್ರಿ.ಶ. ೧೨ ನೇ ಶತಮಾನ, ಪು-೧೬೨.

೨೩. ಅದೇ, ನಂ-೬, ಯಲಬುರ್ಗಿ (ಯ.ತಾ.), ಕ್ರಿ.ಶ. ೧೩ ನೇ ಶತಮಾನ, ಪು-೧೬೨.

೨೪. ಅದೇ, ನಂ-೭೨, ಅಡೂರ (ಯ.ತಾ.), ಕ್ರಿ.ಶ. ೧೨ ನೇ ಶತಮಾನ, ಪು-೨೭೨.

೨೫. ಅದೇ, ನಂ-೭೦, ರಾಜೂರ (ಯ. ತಾ), ಕ್ರಿ. ಶ. ೧೨ ನೇ ಶತಮಾನ, ಪು-೨೭೩.

೨೬. ವೃಷಬೇಂದ್ರಸ್ವಾಮಿ, ಎಸ್. ಎಮ್. ಮತ್ತು ಇತರರು., ೧೯೭೬, *ಗವಿದೀಪ್ತಿ*, ಪು-೨೧೯, ಕೊಪ್ಪಳ.

೨೭. ದೇಸಾಯಿ, ಪಿ.ಬಿ., ೧೯೫೭, *Jainism in South India and Some Epigraphs* p.204, Sollapur.

೨೮. ದೇವರಕೊಂಡಾರೆಡ್ಡಿ. (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ*, ನಂ-೬೫, ಇಟಗಿ (ಯ.ತಾ.), ಕ್ರಿ. ಶ. ೯೩೯, ಪು-೨೫೮.

೨೯. ಅದೇ, ನಂ-೫೬, ಕುಕನೂರ (ಯ. ತಾ), ಕ್ರಿ. ಶ. ೯೬೮, ಪು-೨೩೮-೨೩೯.

೩೦. ಅದೇ, ನಂ-೧೧೮, ಕೊಪ್ಪಳ (ಕೊ. ತಾ), ಕ್ರಿ. ಶ. ೯೭೩, ಪು-೧೧೩.

೩೧. ಅದೇ, ನಂ-೧೨೭, ಕೊಪ್ಪಳ (ಕೊ. ತಾ), ಕ್ರಿ. ಶ. ೧೦೫೧, ಪು-೧೨೭.

೩೨. ಪಾಟೀಲ ಚೆನ್ನಬಸಪ್ಪ, ಎಸ್., ೧೯೯೮, *Inscriptions of Karnataka* (*Koppal District*), Vol-3, No. 256, Uppinabetageri (ಕೊ.ತಾ.) ಕ್ರಿ.ಶ. ೯೬೪, ಪು-೨೯೭, ಮೈಸೂರ.

೩೩. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೩೪, ಕೊಪ್ಪಳ (ಕೊ.ತಾ), ಕ್ರಿ. ಶ.೮೮೩, ಪು-೪೦.

೩೪. ಅದೇ,ನಂ-೧೫, ಕಲ್ಲೂರ (ಯ.ತಾ.) ಕ್ರಿ. ಶ.೧೧೨೯, ಪು- ೧೭೨.

೩೫. ಅದೇ, ನಂ-೮೩, ಕೊಪ್ಪಳ (ಕೊ. ತಾ), ಕ್ರಿ. ಶ. ೯೮೭, ಪು-೬೮.

೩೬. ಅದೇ, ನಂ- ೬೨, ಕೊಪ್ಪಳ (ಕೊ. ತಾ), ಕ್ರಿ. ಶ. ೧೦೦೮, ಪು-೫೬.

೩೭. ಅದೇ, ನಂ -೧, ಯಲಬುರ್ಗಿ (ಯ. ತಾ), ಕ್ರಿ. ಶ. ೧೨ನೆ ಶತಮಾನ, ಪು-೧೬೦.

೩೮. ಅದೇ, ನಂ-೩೬, ೩೭, ಕೊಪ್ಪಳ (ಕೊ. ತಾ), ಕ್ರಿ. ಶ.೧೨ನೆ ಶತಮಾನ. ಪು-೪೧, ೪೭ .

೩೯. ಅದೇ, ನಂ-೧೦೯, ಹಣವಾಳ (ಗಂ.ತಾ),ಕ್ರಿ. ಶ. ೧೨೩೭, ಪು-೩೮೯.

೪೦. ಅದೇ, ನಂ- ೩೮, ಕೊಪ್ಪಳ (ಕೊ. ತಾ), ಕ್ರಿ. ಶ. ೧೨೪೦, ಪು-೪೨.

೪೧. ಅದೇ, ನಂ -೧, ೪, ೫, ಯಲಬುರ್ಗಿ (ಯ. ತಾ), ಕ್ರಿ. ಶ. ೧೩ನೆ ಶತಮಾನ, ಪು-೧೬೦ - ೧೬೨.

೪೨. ಅದೇ, ನಂ -೧, ೪, ೫ ಯಲಬುರ್ಗಿ (ಯ. ತಾ), ಕ್ರಿ. ಶ. ೧೩ನೆ ಶತಮಾನ, ಪು-೧೬೦ - ೧೬೩.

೪೩. ಅದೇ, ಪುಸ್ತಾವನೆ ಪು-೩೯-೪೦.

೪೪. ಶಿರೂರ, ಬಿ.ವ್ಹಿ., ೧೯೭೬, ಶ್ರವಣಬೆಳ್ಗೊಳ ರಾಜಕೀಯ ಸಾಹಿತ್ತಿಕ ಸಾಂಸ್ಕೃತಿಕ ಮಹತ್ವ, ಪು-೨೯೭, ಕ.ವಿ.ವಿ. ಧಾರವಾಡ.

೪೫. ಚಿದಾನಂದ ಮೂರ್ತಿ. ಎಂ., ೧೯೭೯, ಕ. ಶಾ. ಸಾಂ. ಅ., ಪು-೮೫, ಮೆಸೂರ.

೪೬. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೧೧, ಉಪ್ಪಿನಬೇಟಗೇರಿ, ಕ್ರಿ. ಶ. ೯೬೪, ಪು-೨೨, ಕೊಪ್ಪಳ೧೧೧ (ಕೊ.ತಾ.), ೧೦ ನೆ ಶತಮಾನಾ .

೪೭. ಹಂಪಾನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೧೦೬, ಕೊಪ್ಪಳ(ಕೊ.ತಾ.), ಕ್ರಿ.ಶ. ೧೩೪೬, ರತ್ನತ್ರಯ ಪ್ರಕಾಶನ ಮೈಸೂರ.

೪೮. ಅದೇ, ಕೊಪ್ಪಳ - ೭೫ (೮೮೧-೮೨); ನಂ - ೧೯, (ಕ್ರಿ. ಶ. ೧೧ನೆ ಶತಮಾನ); ನಂ-೭೯, ಪು-೬೨ (೧೦೦೨).

೪೯. ದೇವರಕೊಂಡಾರೆಡ್ಡಿ (ಸಂ) : ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ಪ್ರಸ್ಥಾವನೆ ಪು-೩೩-೪೩,.

೫೦. ಅದೇ, ನಂ-೩೧, ಕೊಪ್ಪಳ (ಕೊ. ತಾ), ಕ್ರಿ. ಶ. ೧೩೪೬, ಪು-೩೮.

೫೧. ಚಿದಾನಂದ ಮೂರ್ತಿ.ಎಂ., ೧೯೭೯, ಕ. ಶಾ. ಸಾಂ. ಅ., ಪು-೮೭, ಮೆಸೂರ .

೫೨. ಹಂಪಾನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೪, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೨೫, ಪು-೨೪, ರತ್ನತ್ರಯ ಪ್ರಕಾಶನ ಮೈಸೂರ.

೫೩. ದೇವರಕೊಂಡಾರೆಡ್ಡಿ, (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ಉಪ್ಪಿನ ಬೇಟಗೇರಿ, (ಕೊ.ತಾ.), ಕ್ರಿ. ಶ. ೯೬೪, ಪು-೨೨.

೫೪. ಹಂಪಾನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೩, ಕೊಪ್ಪಳ (ಕೊ.ತಾ.), ಕ್ರಿ.ಶ. ೯೭೭, ರತ್ನತ್ರಯ ಪ್ರಕಾಶನ ಮೈಸೂರ.

೫೫. ಅದೇ, ನಂ-೧, ಕೊಪ್ಪಳ (ಕೊ. ತಾ), ಕ್ರಿ. ಶ. ೯೯೧.

೫೬. ಅದೇ, ನಂ-೩, ಕೊಪ್ಪಳ (ಕೊ. ತಾ) ಕ್ರಿ. ಶ. ೧೨ನೆ ಶತಮಾನ.

೫೭. ಅದೇ, ನಂ-೪೧, ಕೊಪ್ಪಳ (ಕೊ. ತಾ) ಕ್ರಿ. ಶ. ೧೦ನೆ ಶತಮಾನ .

೫೮. ಶಿರೂರ, ಬಿ.ವ್ಹಿ., ೧೯೭೬, ಶ್ರವಣಬೆಳ್ಗೊಳ ರಾಜಕೀಯ ಸಾಹಿತ್ಯಿಕ ಸಾಂಸ್ಕೃತಿಕ ಮಹತ್ವ, ಪು-೩-೬ ಧಾರವಾಡ.

೫೯. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೬, ಯಲಬುರ್ಗಿ (ಯ. ತಾ), ೧೩ನೇ ಶತಮಾನ, ಪು-೧೬೩ .

೬೦. ದೇಸಾಯಿ, ಪಿ. ಬಿ : "*Jainism in South India and Some Epigraphs*, No.25, 1100 A.D. Sollapur.

೬೧. ಎಲಿಗಾರ ಚೆನ್ನಕ್ಕ., ೧೯೯೦, ಕ. ಶಾ. ಸಾ. ಅ, ಪು-೮೨, ಧಾರವಾಡ .

೬೨. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೭೫, ಕೊಪ್ಪಳ (ಕೊ. ತಾ), ಕ್ರಿ. ಶ. ೮೮೧-೮೨ ಮೈಸೂರ.

೬೩. ಅದೇ, ನಂ-೧೬, ಕೊಪ್ಪಳ, ಕ್ರಿ. ಶ. ೧೦ನೇ ಶತಮಾನ .

೬೪. ಅದೇ, ನಂ-೩೦, ಕೊಪ್ಪಳ, ಕ್ರಿ. ಶ. ೧೦ನೇ ಶತಮಾನ.

೬೫. ಅದೇ, ನಂ-೪೧, ಕೊಪ್ಪಳ, ಕ್ರಿ. ಶ. ೧೦ನೇ ಶತಮಾನ.

೬೬. ಅದೇ, ನಂ-೬೭, ಕೊಪ್ಪಳ, ಕ್ರಿ. ಶ. ೧೦ನೇ ಶತಮಾನ.

೬೭. ಅದೇ, ನಂ-೭೭, ಕೊಪ್ಪಳ, ಕ್ರಿ. ಶ. ೧೦ನೆ ಶತಮಾನ.

೬೮. ಅದೇ, ನಂ-೧೩, ಕೊಪ್ಪಳ, ಕ್ರಿ. ಶ. ೧೦ನೇ ಶತಮಾನ.

೬೯. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ -೧೧, ಉಪ್ಪಿನ ಬೇಟಗೇರಿ (ಕೊ.ತಾ), ಕ್ರಿ. ಶ. ೯೬೪, ಪು-೨೨, ಹಂಪಿ.

೭೦. ಅದೇ, ನಂ-೧೦, ಉಪ್ಪಿನಬೇಟಗೇರಿ, ಕ್ರಿ.ಶ. ೯೬೪, ಪು-೨೨.

೭೧. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೩೩, ಕೊಪ್ಪಳ, ೯೭೧, ಪು-೯೨, ಮೈಸೂರ.

೭೨. ಅದೇ, ನಂ-೩೩, ಕೊಪ್ಪಳ, ಕ್ರಿ. ಶ. ೯೭೧.

೭೩. ಅದೇ, ನಂ-೪೦, ಕೊಪ್ಪಳ, ಕ್ರಿ. ಶ. ೯೭೨ .

೭೪. ಅದೇ, ನಂ-೬೩, ಕೊಪ್ಪಳ, ಕ್ರಿ. ಶ. ೯೭೭.

೭೫. ಅದೇ, ನಂ-೩, ಕೊಪ್ಪಳ, ಕ್ರಿ. ಶ. ೯೭೭.

೭೬. ಅದೇ, ನಂ-೩೪, ಕೊಪ್ಪಳ, ಕ್ರಿ. ಶ. ೯೮೩ .

೭೭. ಅದೇ, ನಂ-೫೪, ಕೊಪ್ಪಳ, ಕ್ರಿ. ಶ. ೯೮೭.

೭೮. ಅದೇ, ನಂ-೧೨, ಕೊಪ್ಪಳ, ಕ್ರಿ. ಶ. ೯೮೭ .

೭೯. ಅದೇ, ನಂ-೨, ಕೊಪ್ಪಳ, ಕ್ರಿ. ಶ. ೯೯೧.

೮೦. ಅದೇ, ನಂ-೨೧, ಕೊಪ್ಪಳ, ಕ್ರಿ. ಶ. ೯೯೭.

೮೧. ಅದೇ, ನಂ-೧೯, ಕೊಪ್ಪಳ, ಕ್ರಿ. ಶ. ೧೧ನೇ ಶತಮಾನ .

೮೨. ಅದೇ, ನಂ-೨೨, ಕೊಪ್ಪಳ, ಕ್ರಿ. ಶ. ೧೧ನೇ ಶತಮಾನ.

೮೩. ಅದೇ, ನಂ-೩೨, ಕೊಪ್ಪಳ, ಕ್ರಿ. ಶ. ೧೧ನೇ ಶತಮಾನ.

೮೪. ಅದೇ, ನಂ-೪೮, ಕೊಪ್ಪಳ, ಕ್ರಿ. ಶ. ೧೧ನೇ ಶತಮಾನ .

೮೫. ಅದೇ, ನಂ-೬೧, ಕೊಪ್ಪಳ, ಕ್ರಿ. ಶ. ೧೧ನೇ ಶತಮಾನ.
೮೬. ಅದೇ, ನಂ-೬೫, ಕೊಪ್ಪಳ, ಕ್ರಿ. ಶ. ೧೧ನೇ ಶತಮಾನ.
೮೭. ಅದೇ, ನಂ-೬೫, ಕೊಪ್ಪಳ, ಕ್ರಿ. ಶ. ೧೧ನೇ ಶತಮಾನ.
೮೮. ಅದೇ, ನಂ-೭೬, ಕೊಪ್ಪಳ, ಕ್ರಿ. ಶ. ೧೧ನೆ ಶತಮಾನ.
೮೯. ಅದೇ, ನಂ-೩೫, ಕೊಪ್ಪಳ, ಕ್ರಿ. ಶ. ೧೦೦೧.
೯೦. ಅದೇ, ನಂ-೯೯, ಕೊಪ್ಪಳ, ಕ್ರಿ. ಶ. ೧೧೦೮.
೯೧. ಅಣ್ಣಿಗೇರಿ ಎ.ಎಂ. ಮತ್ತು ಮೆವುಂಡಿ ಮಲ್ಲಾರಿ., ೧೯೬೧, ಶಾಸನಸಾಹಿತ್ಯ ಪರಿಚಯ, ನಂ-೧೮, ಕೊಪ್ಪಳ, (ಕೊ.ತಾ) ಕ್ರಿ.ಶ. ೧೦೨೦, ಧಾರವಾಡ.
೯೨. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೯, ಕೊಪ್ಪಳ, ಕ್ರಿ. ಶ. ೧೦೨೦, ಮೈಸೂರ.
೯೩. ಅದೇ, ನಂ-೪, ಕೊಪ್ಪಳ, ಕ್ರಿ. ಶ. ೧೦೨೫.
೯೪. ಅದೇ, ನಂ-೯, ಕೊಪ್ಪಳ, ಕ್ರಿ. ಶ. ೧೦೨೫.
೯೫. ಅದೇ, ನಂ-೧೫, ಕೊಪ್ಪಳ, ಕ್ರಿ. ಶ. ೧೦೨೮.
೯೬. ಅದೇ, ನಂ-೪೩, ಕೊಪ್ಪಳ, ಪು-೧೧೪-೧೧೫.
೯೭. ಅದೇ, ನಂ-೬೨, ಕೊಪ್ಪಳ, ಕ್ರಿ. ಶ. ೧೦೩೧.
೯೮. ಅದೇ, ನಂ-೫೨, ಕೊಪ್ಪಳ, ಕ್ರಿ. ಶ. ೧೦೫೦.
೯೯. ಅದೇ, ನಂ-೫೨, ಕೊಪ್ಪಳ, ಕ್ರಿ. ಶ. ೧೦೫೦.
೧೦೦. ಅದೇ, ನಂ-೫೨, ಕೊಪ್ಪಳ, ಕ್ರಿ. ಶ. ೧೦೫೦.
೧೦೧. ಅದೇ, ನಂ-೨೩, ಕೊಪ್ಪಳ, ಕ್ರಿ. ಶ. ೧೦೬೭.
೧೦೨. ಪಾಟೀಲ ಚೆನ್ನಬಸಪ್ಪ, ಎಸ್., ೧೯೯೮, *Inscriptions of Karnataka (Koppal District)* Vol-3, ನಂ-೩೯೦, (ಯ.ತಾ.) ೧೨ ನೇ ಶತಮಾನ.
೧೦೩. ಅದೇ, ನಂ-೩೯೦, (ಯ.ತಾ.) ಕ್ರಿ.ಶ. ೧೨ ನೇ ಶತಮಾನ.
೧೦೪. ಅದೇ,ನಂ- ೩೯೨, (ಯ.ತಾ.) ಕ್ರಿ.ಶ. ೧೨ ನೇ ಶತಮಾನ.
೧೦೫. ಅದೇ, ಎತನಹಟ್ಟಿ (ಕೊ.ತಾ.) ಕ್ರಿ.ಶ. ೧೧೯೪.
೧೦೬. ಹಂಪನಾಗರಾಜ., ೧೯೯೮, ಕೊಪ್ಪಳ ಶಾಸನಗಳು, ನಂ-೭೪, (ಕೊ.ತಾ.) ಕ್ರಿ.ಶ. ೧೩ ನೆ ಶತಮಾನ, ಮೈಸೂರ, ೧೦೭. ಅದೇ, ನಂ-೮೩, ಕ್ರಿ. ಶ. ೧೩ನೆ ಶತಮಾನ.
೧೦೮. ಅದೇ, ನಂ-೫೧, ಕ್ರಿ. ಶ. ೧೨೦೪,
೧೦೯. ಅದೇ, ನಂ-೫೫, ಪು-೧೪೨.
೧೧೦. ಅದೇ, ನಂ-೧೦೯, ಕ್ರಿ.ಶ. ೧೧ನೆ ಶತಮಾನ ಪು.೧೦೪.
೧೧೧. ಚಿದಾನಂದಮೂರ್ತಿ, ಎಂ., ೧೯೭೯, ಕ.ಶಾ.ಸಾಂ.ಅ, (ಜೈನ ಧರ್ಮದ ಅಧ್ಯಾಯ) ಪು-೮೩, ಮೈಸೂರ.
೧೧೨. ಹಂಪನಾಗರಾಜಯ್ಯ., ೧೯೯೮ ಕೊಪ್ಪಳ ಶಾಸನಗಳು, ನಂ-೧೮, ಮೈಸೂರ.
೧೧೩. ಅದೇ, ನಂ-೬೭, ಕ್ರಿ. ಶ. ೧೦ನೆ ಶತಮಾನ.
೧೧೪. ಅದೇ, ನಂ-೨೬, ಕ್ರಿ. ಶ. ೯೭೧.
೧೧೫. ಅದೇ, ನಂ-೨೬, ಕ್ರಿ. ಶ. ೯೭೧.

೧೧೬. ಅದೇ, ನಂ-೨೧ ಕ್ರಿ. ಶ. ೯೯೭.

೧೧೭. ಅದೇ, ನಂ-೩೯ ಕ್ರಿ. ಶ. ೯೮೯.

೧೧೮. ಅದೇ, ನಂ-೨ ಕ್ರಿ. ಶ. ೯೯೧.

೧೧೯. ಅದೇ, ನಂ-೫೩ ಕ್ರಿ. ಶ. ೯೯೨.

೧೨೦. ಅದೇ, ನಂ-೪೮ ಕ್ರಿ. ಶ. ೧೧ನೆ ಶತಮಾನ.

೧೨೧. ಅದೇ, ನಂ-೩೫ ಕ್ರಿ. ಶ. ೧೦೦೧.

೧೨೨. ಅದೇ, ನಂ-೪, ಕ್ರಿ. ಶ. ೧೦೨೫.

೧೨೩. ಅದೇ, ನಂ-೧೫ ಕ್ರಿ. ಶ. ೧೦೨೮.

೧೨೪. ಅದೇ, ನಂ-೫೨ ಕ್ರಿ. ಶ. ೧೦೫೦.

೧೨೫. ಪಾಟೀಲ ಚೆನ್ನಬಸಪ್ಪ, ಎಸ್., ೧೯೯೮, *Inscriptions of Karnataka (Koppal District)* Vol-3,-ನಂ-೩೨೨, ಅಡೂರ (ಯ.ತಾ.).

೧೨೬. ಪಾಟೀಲ ಚೆನ್ನಬಸಪ್ಪ, ಎಸ್., ೧೯೯೮, *Inscriptions of Karnataka (Koppal District)* Vol-3,-ನಂ- ೩೨೨, ಅಡೂರ (ಯ.ತಾ.),

೧೨೭. ಮುನಿ, ಉತ್ತಮ ಕಮಲ ಜೈನ., *Jain Sects and Schools*, ಪು. ೪.

೧೨೮. ದೇವರಕೊಂಡಾರೆಡ್ಡಿ. (ಸಂ), ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ*, ಪುರವಣಿ ಪು-೪೧,೪೨,೪೩, ಹಂಪಿ.

೧೨೯. ಹಂಪನಾ ಕಮಲಾ., ೧೯೮೧, ಅನೇಕಾಂತವಾದ, ಪು-೨೫-೨೬ ಮೈಸೂರ.

೧೩೦. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೪೦, ಕ್ರಿ. ಶ. ೯೭೨, ಮೈಸೂರ.

೧೩೧. ಅದೇ, ನಂ-೬೩ ಕ್ರಿ.ಶ. ೯೭೭.

೧೩೨. ಅದೇ, ನಂ-೮ ಕ್ರಿ.ಶ. ೯೮೭.

೧೩೩. ಅದೇ, ನಂ-೬ ಕ್ರಿ.ಶ. ೧೦ ನೇ ಶತಮಾನ.

೧೩೪. ಅದೇ ನಂ-೪೫ ಕ್ರಿ.ಶ. ೯೯೮.

೧೩೫. ಹಂಪನಾ ಕಮಲಾ., ೧೯೮೧, ಅನೇಕಾಂತವಾದ, ಪು-೩೪, ಮೈಸೂರ.

೧೩೬. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು ನಂ-೬ ಕ್ರಿ.ಶ. ೧೦ನೆ ಶತಮಾನ, ಮೈಸೂರ.

೧೩೭. ಅದೇ, ನಂ-೬೭ ಕ್ರಿ.ಶ. ೧೦ನೇ ಶತಮಾನ.

೧೩೮. ಪಾಟೀಲ ಚೆನ್ನಬಸಪ್ಪ, ಎಸ್., ೧೯೯೮, *Inscriptions of Karnataka (Koppal District)* Vol-3, ನಂ-೪೨, ಆನೆಗುಂದಿ, ಕ್ರಿ.ಶ. ೧೨ ನೇ ಶತಮಾನ.

೧೩೯. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೧೩. ಕೊಪ್ಪಳ, ಕ್ರಿ.ಶ. ೯೩೪.

೧೪೦. ಅಣ್ಣಿಗೇರಿ ಎ.ಎಂ. ಮತ್ತು ಮೆವುಂಡಿ ಮಲ್ಲಾರಿ., ೧೯೬೧ ಶಾಸನಸಾಹಿತ್ಯ ಪರಿಚಯ, ನಂ-೧೮, ಕೊಪ್ಪಳ, (ಕೊ.ತಾ) ಕ್ರಿ.ಶ. ೧೦೦೯, ೧೦೧೭, ಧಾರವಾಡ.

೧೪೧. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೩ (ಕೊ.ತಾ.), ಕ್ರಿ.ಶ.೯೭೭.

೧೪೨. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೨೮ (ಕೊ.ತಾ.), ಕ್ರಿ.ಶ. ೧೦ನೇ ಶತಮಾನ.

೧೪೩. ಚಿದಾನಂದ ಮೂರ್ತಿ .ಎಂ., ೧೯೭೯, ಕ. ಶಾ. ಸಾಂ. ಅ., ಪುಟ-೯೧, ಮೆಸೂರ.

೧೪೪. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೬, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦ನೆ ಶತಮಾನ.
೧೪೫. ಅದೇ, ನಂ-೬೦, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೦೯ ಶತಮಾನ.
೧೪೬. ಅದೇ, ನಂ-೬೭, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦ನೇ ಶತಮಾನ.
೧೪೭. ಅದೇ, ನಂ-೧೬, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦ನೆ ಶತಮಾನ.
೧೪೮. ಅದೇ, ನಂ-೬೩, ಕೊಪ್ಪಳ (ಕೊ.ತಾ.), ಕ್ರಿ.ಶ. ೯೭೭.
೧೪೯. ಅದೇ, ನಂ-೩೯, ಕೊಪ್ಪಳ (ಕೊ.ತಾ.), ೯೮೯.
೧೫೦. ಅದೇ, ನಂ-೨, ಕೊಪ್ಪಳ (ಕೊ.ತಾ.), ಕ್ರಿ.ಶ. ೯೯೧.
೧೫೧. ಅದೇ, ನಂ-೨೧, ಕೊಪ್ಪಳ (ಕೊ.ತಾ.), ಕ್ರಿ.ಶ. ೯೯೭.
೧೫೨. ಅದೇ, ನಂ-೧೭, ಕೊಪ್ಪಳ (ಕೊ.ತಾ.), ಕ್ರಿ.ಶ. ೯೯೮.
೧೫೩. ಅದೇ, ನಂ-೫, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೨೩, ೧೦೨೪, ೧೦೩೯.
೧೫೪. ಅದೇ, ನಂ-೧೫, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೨೮.
೧೫೫. ಅದೇ, ನಂ-೧೫, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೨೮.
೧೫೬. ಅದೇ, ನಂ-೧, ಕೊಪ್ಪಳ (ಕೊ.ತಾ.), ಕ್ರಿ.ಶ. ೧೦೩೧.
೧೫೭. ಪಾಟೀಲ ಚೆನ್ನಬಸಪ್ಪ, ಎಸ್., ೧೯೯೮, *Inscriptions of Karnataka (Koppal District)* Vol-3, ನಂ-೪೨, ಆನೆಗುಂದಿ, ಕ್ರಿ.ಶ. ೧೨ ನೆ ಶತಮಾನ ಆನೆಗುಂದಿ (ಗ.ತಾ) ಕ್ರಿ.ಶ. ೧೨ ನೇ ಶತಮಾನ ಮತ್ತು (ಕೊ.ಶಾ), ನಂ-೧೫, ಪು-೫೦.
೧೫೮. ಅದೇ, ನಂ-೨೫೭, ಯತ್ನಟ್ಟಿ (ಕೊ.ತಾ), ಕ್ರಿ.ಶ. ೧೧೯೪.
೧೫೯. ಅದೇ, ನಂ-೧೩ ಕೊಪ್ಪಳ (ಕೊ.ತಾ), ಕ್ರಿ.ಶ. ೯೩೪.
೧೬೦. ಅದೇ, ನಂ-೨೬ ಕೊಪ್ಪಳ (ಕೊ.ತಾ), ಕ್ರಿ.ಶ. ೯೭೧.
೧೬೧. ಅದೇ, ನಂ-೭ ಕೊಪ್ಪಳ (ಕೊ.ತಾ), ಕ್ರಿ.ಶ. ೯೯೮.
೧೬೨. ಅದೇ, ನಂ-೪೫ ಕೊಪ್ಪಳ (ಕೊ.ತಾ), ಕ್ರಿ.ಶ. ೯೯೮.
೧೬೩. ಅದೇ, ನಂ-೩೫ ಕೊಪ್ಪಳ (ಕೊ.ತಾ), ಕ್ರಿ.ಶ. ೧೦೦೧.
೧೬೪. ಅದೇ, ನಂ-೪೭ ಕೊಪ್ಪಳ (ಕೊ.ತಾ), ಕ್ರಿ.ಶ. ೧೦೨೩.
೧೬೫. ಅದೇ, ನಂ-೫೧ ಕೊಪ್ಪಳ (ಕೊ.ತಾ), ಕ್ರಿ.ಶ. ೧೨೦೪.
೧೬೬. ಅಣ್ಣಿಗೇರಿ ಎ. ಎಂ. ಮತ್ತು ಮೇವುಂಡಿ ಮಲ್ಲಾರಿ., ೧೯೬೧, ಶಾ. ಸಾ. ಪರಿಚಯ, ನಂ-೧೮, ಕೊಪ್ಪಳ (ಕೊ.ತಾ), ಕ್ರಿ. ಶ. ೧೦೦೯, ಧಾರವಾಡ.
೧೬೭. ಡಾ. ಚಿದಾನಂದಮೂರ್ತಿ, ಎಂ., ೧೯೭೯, ಕ.ಶಾ.ಸಾಂ.ಅ, ಪು-೯೪, ಮೈಸೂರು.
೧೬೮. ಹಂಪನಾಗರಾಜಯ್ಯ., ೧೯೯೮, ಕೊಪ್ಪಳ ಶಾಸನಗಳು, ನಂ-೩, ಕೊಪ್ಪಳ (ಕೊ.ತಾ), ಕ್ರಿ.ಶ. ೯೭೭.
೧೬೯. ಅದೇ, ನಂ-೨೮, ಕೊಪ್ಪಳ (ಕೊ.ತಾ), ಕ್ರಿ.ಶ. ೧೦ನೇ ಶತಮಾನ.
೧೭೦. ಅದೇ, ನಂ-೪೦ ಕೊಪ್ಪಳ (ಕೊ.ತಾ), ಕ್ರಿ.ಶ. ೯೭೨.
೧೭೧. ಅದೇ, ನಂ-೯೮ ಕೊಪ್ಪಳ (ಕೊ.ತಾ), ಕ್ರಿ.ಶ. ೯೮೩.
೧೭೨. ಅದೇ, ನಂ-೮ ಕೊಪ್ಪಳ (ಕೊ.ತಾ), ಕ್ರಿ.ಶ. ೯೮೭.

೧೭೩. ಅದೇ, ನಂ-೫೩ ಕೊಪ್ಪಳ (ಕೊ.ತಾ), ಕ್ರಿ.ಶ. ೯೯೨.

೧೭೪. ಅದೇ, ನಂ-೬೧ ಕೊಪ್ಪಳ (ಕೊ.ತಾ), ಕ್ರಿ.ಶ. ೧೦ನೇ ಶತಮಾನ.

೧೭೫. ಅದೇ, ನಂ-೪೮ ಕೊಪ್ಪಳ (ಕೊ.ತಾ), ಕ್ರಿ.ಶ. ೧೧ ನೇ ಶತಮಾನ.

೧೭೬. ಅದೇ, ನಂ-೨೭ ಕೊಪ್ಪಳ (ಕೊ.ತಾ), ಪು-೧೧೪.

೧೭೭. ಅದೇ, ನಂ-೯ ಕೊಪ್ಪಳ (ಕೊ.ತಾ), ಕ್ರಿ.ಶ. ೧೦೦೮.

೧೭೮. ಅದೇ, ನಂ-೬೨ ಕೊಪ್ಪಳ (ಕೊ.ತಾ), ಕ್ರಿ.ಶ. ೧೦೩೧.

೧೭೯. ಅದೇ, ನಂ-೪೩ ಕೊಪ್ಪಳ (ಕೊ.ತಾ), ಕ್ರಿ.ಶ. ೧೦೩೧.

೧೮೦. ಅದೇ, ನಂ-೫೨ ಕೊಪ್ಪಳ (ಕೊ.ತಾ), ಕ್ರಿ.ಶ. ೧೦೫೦.

೧೮೧. ಅದೇ, ನಂ-೪೬ ಕೊಪ್ಪಳ (ಕೊ.ತಾ), ಕ್ರಿ.ಶ. ೧೦೬೫.

೧೮೨. ಅದೇ, ನಂ-೭೪ ಕೊಪ್ಪಳ (ಕೊ.ತಾ), ಕ್ರಿ.ಶ. ೧೩ನೇ ಶತಮಾನ.

೧೮೩. ಅದೇ, ನಂ-೮೩ ಕೊಪ್ಪಳ (ಕೊ.ತಾ), ಕ್ರಿ.ಶ. ೧೩ನೇ ಶತಮಾನ.

೧೮೪. ಅದೇ, ನಂ-೬೫ ಕೊಪ್ಪಳ (ಕೊ.ತಾ), ಕ್ರಿ.ಶ. ೧೧ನೇ ಶತಮಾನ.

೧೮೫. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ ಜಿಲ್ಲೆ, ನಂ-೫೨, ಕೊಪ್ಪಳ (ಕೊ.ತಾ), ೧೧-೧೨ ನೇ ಶತಮಾನ, ಪು. ೫೦, ಹಂಪಿ.

೧೮೬. ಅದೇ, ನಂ-೧ ಯಲಗಬುರ್ಗಿ (ಯ. ತಾ), ಪು-೧೬೦.

೧೮೭. ಅದೇ, ನಂ- ೩೬-೩೭, ಕೊಪ್ಪಳ (ಕೊ. ತಾ), ಕ್ರಿ. ಶ. ೧೨ನೆ. ಶತಮಾನ, ಪು-೪೧-೪೨.

೧೮೮. ಅದೇ, . ನಂ - ೧೦೯ ಹಣವಾಳ (ಗ. ತಾ), ಕ್ರಿ. ಶ. ೧೩೩೫, ಪು-೩೮೯.

೧೮೯. ಅದೇ, ನಂ - ೩೮, ಕೊಪ್ಪಳ (ಕೊ. ತಾ), ಕ್ರಿ. ಶ. ೧೨೪೦, ಪು-೪೨.

೧೯೦. ಅದೇ, ನಂ - ೧,೪,೫, ಯಲಬುರ್ಗಿ (ಯ. ತಾ), ಪು-೧೬೧-೧೬೨.

೧೯೧. ಅದೇ, ನಂ-೪, ಯಲಬುರ್ಗಿ, ಪು-೧೬೧ ಮತ್ತು ನಂ -೬, ಯಲಬುರ್ಗಿ, ಪು-೧೬೨.

೧೯೨. ಅದೇ, ಪ್ರಸ್ಥಾವನೆ ಕುಮಾರರಾಮನ ಸಾಂಗತ್ಯಗಳು೧, ಪು-೩೯.

೧೯೩. ಅದೇ, ಪ್ರಸ್ತಾವನೆ, ಪು-೪೦.

೧೯೪. ಚಿದಾನಂದಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೨೫೮, ಮೈಸೂರು.

೧೯೫. ರಾಘವಾಚಾರ ಎಸ್. ಎಸ್., ತತ್ವ ಕರ್ನಾಟಕದ ಪರಂಪರೆ, ಸಂ-೧, ಪು-೨೫೮.

೧೯೬. ದೇವರಕೊಂಡಾರೆಡ್ಡಿ (ಸಂ) : ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ-೨, ಕೊಪ್ಪಳ. ಜಿಲ್ಲೆ, ನಂ. ೪೦, ಕುಕನೂರು, ನಂ. ೬೭, ಇಟಗಿ (ಯ.ತಾ), ಕ್ರಿ.ಶ. ೧೧೬೩, ೧೧೦೮, ಪು-೨೦೫, ೨೦೯, ೨೫೯, ಹಂಪಿ.

೧೯೭. ಅದೇ, ನಂ-೬, ಅಳವಂಡಿ (ಕೊ.ತಾ), ಕ್ರಿ. ಶ. ೧೦೬೧, ಪು-೧೨.

೧೯೮. ಅದೇ, ನಂ- ೮, ಅಳವಂಡಿ (ಕೊ.ತಾ), ಕ್ರಿ. ಶ. ೧೧೫೭, ೧೧೯೦, ೧೨೬೮, ಪು-೧೬.

೧೯೯. ಅದೇ, ನಂ. ೨೬, ಮಾದಿನೂರ (ಕೊ.ತಾ), ಕ್ರಿ. ಶ. ೯೭೩, ೧೧೩೬, ೧೧೯೦, ಪು-೩೧.

೨೦೦ ಅದೇ, ನಂ. ೧, ಕವಲೂರ (ಕೊ.ತಾ), ಕ್ರಿ. ಶ. ೧೦೯೭, ಪು-೧ ಮತ್ತು ಅದೇ ಊರಿನ ಮತ್ತೊಂದು ಶಾಸನ ಕ್ರಿ. ಶ. ೧೧೭೭- ೭೯, ೮೬, ಪು. ೪.

೨೦೧. ಅದೇ, ನಂ. ೨೯, ಮುಧೋಳ (ಯ.ತಾ), ಕ್ರಿ.ಶ. ೧೧೫೪, ಪು-೧೮೪.

೨೦೨. ಅದೇ, ನಂ- ೩೮- ೫೬, ಕುಕನೂರು (ಯ.ತಾ), ಪು-೧೯೭-೨೫೦.

೨೦೩. ಅದೇ, ನಂ-೬೭, ಇಟಗಿ (ಯ.ತಾ), ಕ್ರಿ. ಶ. ೧೧೦೮, ೧೨, ೧೩ ಪು-೨೫೯.

೨೦೪. ಅದೇ, ನಂ-೨೮ , ಅಂಟೂರತಾಣಾ (ಕು. ತಾ), ಕ್ರಿ. ಶ. ೧೧೯೫, ಪು-೩೦೮.

೨೦೫. ಅದೇ, ನಂ-೧೮, ಆನೆಗುಂದಿ (ಗ.ತಾ), ಕ್ರಿ.ಶ. ೧೩ ನೆ ಶತಮಾನ, ಪು. ೩೨೩ .

೨೦೬. ಕೆ. ಎಂ. ಸುರೇಶ ಮತ್ತು ಸಂಗಡಿಗರು., ೨೦೦೧, 'ಕರ್ನಾಟಕ ದೇವಾಲಯ ಕೋಶ', ಕೊಪ್ಪಳ ಜಿಲ್ಲೆ, ನಂ-೧೩, ಕವಲೂರು, ೧೨, ೧೩ನೇ ಶತಮಾನ, ಪು-೩೯.

೨೦೭. ಅದೇ, ನಂ-೧೭, ಕವಲೂರು, ೧೨, ೧೩ನೇ ಶತಮಾನ, ಪು-೪೨ .

೨೦೮. ಅದೇ, ನಂ-೩೧, ಕೊಪ್ಪಳ, ೧೨, ೧೩ನೇ ಶತಮಾನ, ಪು-೫೩.

೨೦೯. ಅದೇ, ನಂ-೪೮, ಮಾದಿನೂರು, ೧೨, ೧೩ನೇ ಶತಮಾನ, ಪು-೬೮ .

೨೧೦. ಅದೇ, ನಂ-೬೦, ಹೇಮಗುಡ್ಡ, ೧೩ನೇ ಶತಮಾನ, ಪು-೧೩೦ .

೨೧೧. ಅದೇ, ನಂ-೧೨, ಕುಕನೂರು, ೧೩ನೇ ಶತಮಾನ, ಪು-೧೫೩.

೨೧೨. ಅದೇ, ನಂ-೧೩, ಕುಕನೂರು, ೧೨ ನೇ ಶತಮಾನ, ಪು-೧೫೬ .

೨೧೩. ಅದೇ, ನಂ-೧೩, ಚಳಗೇರಿ ಕ್ರಿ.ಶ.೧೧೭೨, ಪು-೧೪.

೨೧೪. ಅದೇ,ನಂ-೧೭,ತಾವರೆಗೇರೆ, ಕ್ರಿ.ಶ. ೧೨ನೆ ಶತಮಾನ, ಪು-೧೭.

೨೧೫. ಅದೇ, ನಂ-೨೨, ಕೊಪ್ಪಳ, ಕ್ರಿ.ಶ. ೧೨, ೧೩ನೆ ಶತಮಾನ, ಪು-೪೭ .

೨೧೬. ಅದೇ,ನಂ-೭,ಆನೆಗೊಂದಿ , ಕ್ರಿ.ಶ.೧೩ನೆ ಶತಮಾನ, ಪು-೮೮.

೨೧೭. ಅದೇ, ನಂ-೧,೨,ಇಟಗಿ, ಕ್ರಿ.ಶ. ೧೧೧೨,೧೧೧೨, ಪು-೧೩೫, ೧೩೯.

೨೧೮. ನಂದಿಮಠ ಎಸ್.ಸಿ.., ಮಠ ಸಮಾಜ ಸಂಸ್ಕೃತಿ, ಕರ್ನಾಟಕದ ಪರಂಪರೆ, ಸಂ-೧, ಪು-೧೮೦ .

೨೧೯. ಚಿದಾನಂದ ಮೂರ್ತಿ ಎಂ., ೧೯೭೯, ಕ.ಶಾ.ಸಾಂ.ಅ., ಪು-೧೨೫, ಮೈಸೂರು .

೨೨೦. ಕಪಟರಾಳ ಕೃಷ್ಣರಾಯರು., ೧೯೫೫, ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು-೬೩-೬೭, ಧಾರವಾಡ .

೨೨೧. ಹಿರೇಮಠ ಚನ್ನಬಸವಯ್ಯ., ೧೯೯೫, ಕುರುಗೋಡಿನ ಸಿಂದರು, ಪು-೨೪೮, ಕೊಪ್ಪಳ.

೨೨೨. ಚಿದಾನಂದ ಮೂರ್ತಿ ಎಂ., ೧೯೭೯, ಕ.ಶಾ.ಸಾಂ.ಅ., ಪು-೧೪೧, ಮೈಸೂರು.

೨೨೩. ಅದೇ, ಪು-೧೪೮,

೨೨೪. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂ. ೨, ಕೊಪ್ಪಳ ಜಿಲ್ಲೆ, ನಂ-೫೨, ಕುಕನೂರು (ಯ.ತಾ), ಕ್ರಿ. ಶ. ೧೧೭೮, ಪು-೨೨೮, ಹಂಪಿ.

೨೨೫. ಅದೇ, ನಂ -೧೭, ಕಲ್ಲೂರು (ಯ.ತಾ), ಕ್ರಿ. ಶ. ೧೧೯೮, ೧೧೨೫, ಪು-೧೭೫ .

೨೨೬. ಅದೇ, ನಂ- ೫೧, ಕುಕನೂರು (ಯ.ತಾ), ಕ್ರಿ. ಶ. ೧೦೦೫, ಪು-೨೨೭.

೨೨೭. ಅದೇ, ನಂ. ೨, ವಿಪ್ರ (ಗ.ತಾ), ಕ್ರಿ. ಶ. ೧೦೫೯, ಪು-೩೧೫.

೨೨೮. ಹಿರೇಮಠ ಚನ್ನಬಸವಯ್ಯ ., ೧೯೯೫, ಕುರುಗೋಡಿನ ಸಿಂದರು, ಪು. ೨೪೯, ೨೫೦, ಕೊಪ್ಪಳ.

೨೨೯. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂ. ೨, ಕೊಪ್ಪಳ ಜಿಲ್ಲೆ, ನಂ. ೨, ವಿಪ್ರ(ಗ.ತಾ),ಕ್ರಿ. ಶ. ೧೦೫೯, ಪು-೩೧೫, ಹಂಪಿ.

೨೩೦. ಅದೇ, ನಂ-೧೮, ಆನೆಗುಂದಿ (ಗ.ತಾ.), ಕ್ರಿ. ಶ. ೧೩ನೇ ಶತಮಾನ, ಪು-೩೨೩.

೨೩೧. ಕೊಪ್ಪಾ, ಎಸ್. ಕೆ., ೧೯೯೦, ತ. ನಾ. ಒ. ಅ., ಪು-೨೭೦, ಇಂಡಿ,

೨೩೨. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂ. ೨, ಕೊಪ್ಪಳ ಜಿಲ್ಲೆ, ನಂ. ೧೭ ಕಲ್ಲೂರು (ಯ.ತಾ), ಕ್ರಿ. ಶ. ೧೦೯೮, ೧೧೨೫, ಪು-೧೭೪, ಹಂಪಿ.

೨೩೩. ಅದೇ, ನಂ-೫೧, ಕುಕನೂರು (ಯ.ತಾ), ಕ್ರಿ. ಶ. ೧೧೦೫, ಪು-೨೨೪.

೨೩೪. ಅದೇ, ನಂ-೫೨, ಕುಕನೂರು (ಯ.ತಾ), ಕ್ರಿ. ಶ. ೧೧೭೮, ಪು-೨೨೮.

೨೩೫. ಹಿರೇಮಠ ಚನ್ನಬಸವಯ್ಯ., ೧೯೯೫, ಕುರುಗೋಡಿನ ಸಿಂದರು, ಪು.೨೫೦, ಕೊಪ್ಪಳ.

೨೩೬. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂ. ೨, ಕೊಪ್ಪಳ ಜಿಲ್ಲೆ, ನಂ. ೬, ಅಳವಂಡಿ (ಕೊ. ತಾ), ಕ್ರಿ. ಶ. ೧೦೬೧, ಪು-೧೫.

೨೩೭. ಹಿರೇಮಠ ಚನ್ನಬಸವಯ್ಯ., ೧೯೯೫, ಕುರುಗೋಡಿನ ಸಿಂದರು, ಪು-೨೫೦, ಕೊಪ್ಪಳ.

೨೩೮. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂ. ೨, ಕೊಪ್ಪಳ ಜಿಲ್ಲೆ, ನಂ೧೭, ಕಲ್ಲೂರು (ಯ.ತಾ), ಕ್ರಿ. ಶ. ೧೦೯೮, ಪು-೧೭೪.

೨೩೯. ಅದೇ, ನಂ. ೩೮, ಕುಕನೂರು (ಯ.ತಾ), ಕ್ರಿ. ಶ. ೧೧೦೭, ೩೨, ೫೭, ಪು-೨೦೦.

೨೪೦. ಅದೇ, ನಂ. ೩೭, ಬಳಗೇರಿ (ಯ.ತಾ), ಕ್ರಿ. ಶ. ೧೦೦೨, ಪು - ೧೯೭.

೨೪೧. ಅದೇ, ನಂ. ೫೧, ಕೂಕ್ಕನೂರು (ಯ.ತಾ), ಕ್ರಿ. ಶ. ೧೦೦೫, ಪು-೨೨೫-೨೭.

೨೪೨. ಗೋಪಾಲರಾವ ಎಚ್. ಎಸ್., ೧೯೯೩, ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪು-೧೮೫, ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರು.

೨೪೩. ಕಲಬುರ್ಗಿ ಎಂ. ಎಂ., ನಕುಲೀಶ ಪಾಶು ಪತರು ಮತ್ತು ವಚನ ಸಾಹಿತ್ಯ ಮಾರ್ಗ, ಸಂ-೨, ಪು-೧೯೮, ಧಾರವಾಡ.

೨೪೪. ಮಲ್ಲಪ್ಪಾ. ಡಿ. ಎನ್., ೧೯೮೨, ಶೈವ-ವೀರಶೈವ ಧರ್ಮ ವಿಕಾಸ; ಅಧ್ಯಯನ ಶಂಭಾಜೋಷಿಯವರ ಅಭಿನಂದನ ಗ್ರಂಥ, ಪು-೬೨೪-೨೫, ಬೆಂಗಳೂರು.

೨೪೫. ಕಪಟರಾಳ ಕೃಷ್ಣರಾಯರು., ೧೯೫೫, ಕರ್ನಾಟಕಲಾಕುಳ ಶೈವರ ಇತಿಹಾಸ, ಪು-೫, ಧಾರವಾಡ-

೨೪೬. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂ. ೨, ಕೊಪ್ಪಳ ಜಿಲ್ಲೆ, ನಂ೬೭, ಇಟಗಿ (ಯ.ತಾ)ಕ್ರಿ. ಶ. ೧೧೦೮-೧೩, ಪು-೨೫೯, ಹಂಪಿ.

೨೪೭. ಅದೇ, ನಂ. ೩, ಗೋತಗಿ (ಕೊ.ತಾ), ಕ್ರಿ. ಶ. ೧೦೨೪, ಪು-೨೭೯.

೨೪೮. ಅದೇ, ನಂ. ೧೩, ಪುರ (ಕೊ.ತಾ), ಕ್ರಿ. ಶ. ೧೨ ನೇ ಶತಮಾನ, ಪು-೨೮೯.

೨೪೯. ಅದೇ, ನಂ. ೧೭ ಕಲ್ಲೂರು (ಯ.ತಾ), ಕ್ರಿ.ಶ.೧೦೯೮, ಪು-೧೭೫.

೨೫೦. ಅದೇ, ನಂ. ೧೮, ಆನೆಗುಂದಿ (ಗ.ತಾ), ಕ್ರಿ. ಶ. ೧೩ನೆ ಶತಮಾನ, ಪು-೩೨೬.

೨೫೧. ಅದೇ, ನಂ. ೧೬, ೧೫, ೧೩, ೧೨, ಕಲ್ಲೂರು (ಯ.ತಾ), ಪು-೧೭೩-೧೭೭.

೨೫೨. ಅದೇ, ನಂ. ೧೪೮, ಹುಲಗಿ (ಕೊ.ತಾ), ಕ್ರಿ. ಶ.೧೦೮೮, ಪು-೧೪೬.

೨೫೩. ಅದೇ, ನಂ-೩, ಕವಲೂರು (ಕೊ.ತಾ), ಕ್ರಿ. ಶ. ೧೧೭೭-೭೯, ೮೦, ೮೬, ಪು-೬.

೨೫೪. ಅದೇ, ನಂ- ೮, ಅಳವಂಡಿ (ಕೊ.ತಾ), ಕ್ರಿ. ಶ. ೧೧೫೭, ೧೨, ೬೮, ಪು-೧೭.

೨೫೫. ಅದೇ, ನಂ-೨೬, ಮಾದಿನೂರು (ಕೊ.ತಾ), ಕ್ರಿ.ಶ. ೧೧೩೬, ೧೧೯೦, ಪು-೩೨.

೨೫೬. ಹಿರೇಮಠ ಚನ್ನಬಸವಯ್ಯ., ೧೯೯೫, ಕುರುಗೋಡಿನ ಸಿಂದರು, ಪು-೨೫೪, ಕೊಪ್ಪಳ.

೨೫೭. ಈ ಶಿಷ್ಯ ಪರಂಪರೆ, ಗುರುಗಳ ಬಗ್ಗೆ ಪ್ರಬಂಧದ ಸಾಮಾಜಿಕ, ಶಿಕ್ಷಣ ಅಧ್ಯಾಯದಲ್ಲಿ ಚರ್ಚಿಸಿದ್ದರಿಂದ ಪ್ರಮುಖವಾದವುಗಳನ್ನು ಮಾತ್ರ ಇಲ್ಲಿ ವಿವರಸಲಾಗಿದೆ.

೨೫೮. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂ. ೨, ಕೊಪ್ಪಳ ಜಿಲ್ಲೆ, ನಂ ೫೧, ಕುಕನೂರು (ಯ.ತಾ), ಕ್ರಿ. ಶ. ೧೦೦೫, ಪು-೨೨೪.

೨೫೯. ಅದೇ, ನಂ-೫೨, ಕುಕನೂರು (ಯ. ತಾ), ಕ್ರಿ. ಶ. ೧೧೭೮, ಪು-೨೨೮.

೨೬೦. ಅದೇ, ನಂ-೧೩, ಪುರ-೧೫, ಕಲ್ಲೂರ-೩೮, ಕುಕನೂರ-೫೮, ಮುಂತಾದ ಶಾಸನಗಳಲ್ಲಿ ಉಲ್ಲೇಖಗಳಿವೆ.

೨೬೧. ಹಿರೇಮಠ ಆರ್. ಸಿ., ವೀರಶೈವದ ಪ್ರಾಚೀನತೆ, ವೀರಶೈವ ದರ್ಶನ, ಪು-೧.

೨೬೨. ಹಿರೇಮಲ್ಲೂರ ಈಶ್ವರನ್., ೧೯೮೧, ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ, ಪು-೮೫, ಮೈಸೂರು.

೨೬೩. ನಾರಾಯಣ ಪಿ.ವಿ., ೧೯೮೩, ವಚನಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಗದಗ.

೨೬೪. ತಿಪ್ಪೇರುದ್ರ ಸ್ವಾಮಿ, ಎಚ್., ೧೯೬೯, ವಚನಗಳಲ್ಲಿ ವೀರಶೈವ ಧರ್ಮ, ಪು- ೬೫, ಧಾರವಾಡ.

೨೬೫. ರುದ್ರಪ್ಪಾ, ಜಿ.., ವೀರಶೈವಧರ್ಮ ಕರ್ನಾಟಕ ಪರಂಪರೆ, ಸಂ-೧, ಪು-೧೬೦.

೨೬೬. ಕಲಬುರ್ಗಿ ಎಂ. ಎಂ., ವೀರಶೈವ ಅರಸು ಮನೆತಗಳು ಮಾರ್ಗ, ಸಂ-೨, ಪು-೪೦೩-೪೦೪.

೨೬೭. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವ ವಿದ್ಯಾಲಯ ಶಾಸನ ಸಂ. ೨, ಕೊಪ್ಪಳ ಜಿಲ್ಲೆ, ನಂ ೫೨, ಕುಕನೂರು (ಯ. ತಾ), ಕ್ರಿ. ಶ. ೧೧೭೮, ಪು-೨೨೯.

೨೬೮. ಅದೇ, ನಂ-೧೮, ಆನೆಗುಂದಿ (ಗ.ತಾ), ೧೩ನೇ ಶತಮಾನ, ಪು-೩೨೫.

೨೬೯. ಶೈವ ದೇವಾಲಯಗಳ ವಿವರಣೆ ಕುರಿತು ಈ ಪ್ರಬಂಧದ ದೇವಾಲಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ

೨೭೦. ಹಿರೇಮಠ ಚನ್ನಬಸವಯ್ಯ., ೧೯೯೫, ಕುರುಗೋಡಿನ ಸಿಂದರು, ಪು-೨೫೮, ಕೊಪ್ಪಳ.



Chapter - 8

## ಅಧ್ಯಾಯ - ಎಂಟು

# ಆರ್ಥಿಕ ವ್ಯವಸ್ಥೆಯ ಇತಿಹಾಸ

ಪ್ರಾಚೀನ ಕೊಪ್ಪಳ ಪ್ರದೇಶದ ಅರ್ಥ ವ್ಯವಸ್ಥೆಯ ವಿವಿಧ ಮುಖಗಳ ಪರಿಚಯ ಮಾಡಿಕೊಳ್ಳಲು ಶಾಸನಗಳು ವಿಪುಲವಾದ ಸಾಮಗ್ರಿಗಳನ್ನು ಒದಗಿಸುತ್ತವೆ. ಆ ಒಂದು ಸಮಗ್ರ ಚಿತ್ರಣ ದೊರೆಯ ಬೇಕಾದರೆ ಅರ್ಥ ವ್ಯವಸ್ಥೆಯ ದೃಷ್ಟಿಯಿಂದಲೇ ಶಾಸನಗಳನ್ನು ಅಭ್ಯಾಸ ಮಾಡಬೇಕು. ಆದರೆ ನಮ್ಮ ಈ ಅಧ್ಯಯನದಲ್ಲಿ ಒಂದೆರಡು ಕೊರತೆಗಳು ಎದ್ದು ಕಾಣುತ್ತವೆ. ಪ್ರಾಚೀನ ಕೊಪ್ಪಳ ಪ್ರದೇಶ (ಜಿಲ್ಲೆ)ದ ಸಂಸ್ಕೃತಿಯ ಹಲವು ಮುಖಗಳನ್ನೊಳಗೊಂಡ ನಮ್ಮ ಅಧ್ಯಯನವು ಅರ್ಥ ವ್ಯವಸ್ಥೆಯನ್ನರಿಯುವುದಕ್ಕಾಗಿ ಎಷ್ಟು ಆಳಕ್ಕೆ ಹೋಗಬಹುದು ಅಷ್ಟು ಆಳಕ್ಕೆ ಹೋಗಿಲ್ಲ ಮತ್ತು ಹೋಗಲು ಸಾಧ್ಯವಿಲ್ಲ. ಏಕೆಂದರೆ ದೊರೆತ ಶಾಸನ ಮತ್ತು ಸಾಹಿತ್ಯ ಆಕರಗಳ ದಾಖಲೆಗಳ ಜೊತೆಗೆ ನಮ್ಮ ಅಧ್ಯಯನವು ಕ್ರಿ.ಶ. ೧೩೩೬ ರ ಗಡಿಯಾಗಿಸಿಕೊಂಡು ವಿವಿಧ ಅಧ್ಯಾಯಗಳನ್ನು ಚರ್ಚಿಸಿದಂತೆ ಆರ್ಥಿಕ ವ್ಯವಸ್ಥೆಯ ಬಗ್ಗೆ ಕೂಡಾ ಚರ್ಚಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

### ೧. ಭೂಸಂಪತ್ತು

ಒಂದು ನಾಡಿನ ಅರ್ಥ ವ್ಯವಸ್ಥೆಯು ಅಲ್ಲಿ ದೊರಕುವ ಭೌಗೋಳಿಕ ಸಂಪನ್ಮೂಲಗಳು ಅವನ್ನು ದೊರಕಿಸಿಕೊಳ್ಳುವ ಅಲ್ಲಿಯ ಜನರ ದುಡಿಮೆಯ ಮೇಲೆ ರೂಪಿತಗೊಳ್ಳುತ್ತದೆ. ಇದರಿಂದಾಗಿ ಆರ್ಥಿಕ ಅಭಿವೃದ್ಧಿ ನಾಡಿನ ನೈಸರ್ಗಿಕ ಸಂಪನ್ಮೂಲಗಳ ಪ್ರಮಾಣ ಗುಣಮಟ್ಟ ಹಾಗೂ ಅವುಗಳನ್ನು ಬಳಸಿಕೊಳ್ಳುವ ಸಾಮರ್ಥ್ಯಕ್ಕೆ ಅನುಗುಣವಾಗಿ ನಿರ್ಧರಿಸಲ್ಪಡುತ್ತದೆ. ಜಿಲ್ಲೆಯ ಶಾಸನಗಳಲ್ಲಿ ಬರುವ ಭೂದಾನ ವರ್ಣನೆಗಳ ಉಲ್ಲೇಖ ಉತ್ಪ್ರೇಕ್ಷೆಯೆನಿಸಿದರು, ಅಂದಿನ ಪ್ರಾಕೃತಿಕ ಸಮೃದ್ಧಿಯನ್ನು ಪರಿಚಯಿಸುತ್ತವೆ. ಜನರು ತಮ್ಮ ಜೀವನ ನಿರ್ವಹಣೆ ಹಾಗೂ ಆರ್ಥಿಕ ಸಫಲತೆಗೆ ನೈಸರ್ಗಿಕ ಸಂಪತ್ತಾದ ಭೂಮಿಯನ್ನು ಆಶ್ರಯಿಸಿಕೊಂಡಿರುವುದು ಕಂಡುಬರುತ್ತದೆ. ಪ್ರಕೃತಿದತ್ತವಾಗಿ ಬಂದ ಮಣ್ಣು, ನೀರು, ಖನಿಜ, ಅರಣ್ಯ ಸಂಪತ್ತುಗಳು ಭೂಮಿಯಲ್ಲಿ ಸಮಾವೇಶಗೊಳ್ಳುತ್ತವೆ. ಹೀಗಾಗಿ ಭೂಮಿ ಅರ್ಥವ್ಯವಸ್ಥೆಯಲ್ಲಿ ಅತ್ಯಂತ ಮಹತ್ವ ಪಡೆದುಕೊಳ್ಳುತ್ತದೆ.

### ಭೂ ಪ್ರಕಾರಗಳು

ಭೂಮಿಯನ್ನು ವ್ಯವಸಾಯ ಯೋಗ್ಯ ಭೂಮಿ, ವ್ಯವಸಾಯಕ್ಕೆ ಯೊಗ್ಯವಲ್ಲದ (ಬೀಳು) ಭೂಮಿ ಎಂದು ಎರಡು ಬಗೆಯಾಗಿ ವಿಂಗಡಿಸಲಾಗಿರುವುದು. ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಸಾಮಾನ್ಯವಾಗಿ ಶಾಸನಗಳು 'ಕ್ಟೆಯ್' ಎಂದು, ಮಳೆಯನ್ನು ಅವಲಂಬಿಸಿ ಸಾಗುವಳಿ ಮಾಡುವ ಭೂಮಿಯನ್ನು ದೇವಮಾತೃಕವೆಂದು, ಹಳ್ಳ, ನದಿ, ಕೆರೆ, ಬಾವಿಗಳಲನ್ನು ಅವಲಂಬಿಸಿರುವುದನ್ನು ನದಿಮಾತೃಕವೆಂದು ವಿಂಗಡಿಸಲಾಗಿದೆ.[೧] ದೇವಮಾತೃಕದಲ್ಲಿ ಗದ್ದೆ[೨] ಹೊಲ[೩]ಗಳನ್ನು ಹೆಸರಿಸಬಹುದು. ಜಿಲ್ಲೆಯ ಮಾದಿನೂರು

(ನಂ ೨೬ ಕ್ರಿ.ಶ.೯೭೩) ಶಾಸನದಲ್ಲಿ ಸೋಮನಾಥ ದೇವರ ಜೀರ್ಣೋದ್ಧಾರಕ್ಕಾಗಿ ಮತ್ತರು ಮೂರು, ಮತ್ತರು ಇಪ್ಪತ್ತೇಳು, ಮಾರಕಬ್ಬೆಯ ತುಂಬಿದ ಪಡುವಲಾ ಮಾನ್ಯದೋಳಗಣ ಗದ್ದೆಯ ಕಮ್ಮ೦ ನೂರೈವತ್ತು ಅಂಗಭೋಗ ರಂಗಭೋಗ ನಿವೇದ್ಯಕ್ಕೆ ತೆರೆಹಳ್ಳದ ಮೇಲೆ ತೋಟಗಳ್ದೆಯ ಕಮ್ಮ-೭೦೦ ಮತ್ತ೦ ಗರ್ದೆ ಕಮ್ಮ ೨೫೦ ಜಕ್ಕೆ ವಿಷ್ಣು ದೇವರ ಗರ್ದ್ದೆಯಿಂ ನೈವೇದ್ಯಕ್ಕೆ ಬಿಟ್ಟಗರ್ದ್ದೆ ಕಮ್ಮ ೪೧೦ ಭೂಮಿ ಬಿಟ್ಟಿದ್ದನ್ನು ಹೇಳುತ್ತದೆ. ಇಲ್ಲಿ ತೋಟ, ಗದ್ದೆ, ಹಣ, ಜೊತೆಯಾಗಿಯೇ ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ. ಬಳಗೇರಿ ಶಾಸನ ಅಲ್ಲಿಯ ಸೋಬನೇಶ್ವರ ದೇವರಿಗೆ ತೋಟವನ್ನು ಭೂದಾನವಾಗಿ ನೀಡಿದ ಬಗ್ಗೆ ತಿಳಿಸುವುದು.[೪] ಕುಕನೂರಿನ ಶಾಸನ ಹೊಲ ಮತ್ತು ಅದರ ಮೇರೆಗಳನ್ನು ಉಲ್ಲೇಖಿಸುತ್ತದೆ.[೫] ವಿಪ್ರ ಶಾಸನ ತುಂಗಭದ್ರಾನದಿಯ ದಡದ ಗಳ್ದೆ ಮತ್ತರು ತೋಟಗಳನ್ನು ಚಳೇಶ್ವರದೇವರಿಗೆ ಬಿಟ್ಟ ಕುರಿತು ತಿಳಿಸುತ್ತದೆ.[೬] ಅಳವಂಡಿಯ ಊರ ಪಶ್ಚಿಮಕ್ಕೆ ಇರುವ ತೋಟ ಪೂರ್ವಕ್ಕೆ ಬಾವಿ, ಕಲ್ಲದೇಗುಲ, ವಸತಿ ಸತ್ರಕ್ಕೆ ೧೮ ಮತ್ತರು, ದೇವರಿಗೆ ೫ ಮತ್ತರು ಮಠಕ್ಕೆ ಎರೆಯಮತ್ತರು, ತೀರ್ಥದ ಕೆರೆ, ಭಾವಿಗಳು, ಊರ ಹೊರವಲಯದ ಭೂಮಿ ತೋಟಗಳನ್ನು ದಾನಮಾಡಿದ ವಿಷಯ ದೊಂದಿಗೆ ನದಿ ಮಾತ್ರಿಕೆಯ ಉಲ್ಲೇಖ ಕಾಣುತ್ತೇವೆ.[೭] ಕಲ್ಲೂರ ಕಲಿದೇವ ಸ್ವಾಮಿಯ ಗಣ ಮಠಕ್ಕೆ ೨೦೦ ಮತ್ತರು ಭೂಮಿ ದಾನ ನೀಡಿದರೆ[೮] ಕವಲೂರದಲ್ಲಿ ವಿಷ್ಣುದೇವಾಲಯ, ಸತ್ರ ಮತ್ತು ಕೆರೆಯನ್ನು ಕಟ್ಟಿಸಿರುವುದಾಗಿ ತಿಳಿಯುವುದು[೯]. ಹೆಸರೂರ ಶಾಸನದಲ್ಲಿ ೪ ಮತ್ತರು ಗದ್ದೆ, ಎಲೆಯ ತೋಟದ ಉಲ್ಲೇಖವಿದೆ[೧೦], ಕುಕನೂರಿನ ಮತ್ತೊಂದು ಶಾಸನದಲ್ಲಿ ರುದ್ರಾದಿತ್ಯಪೈಸಾಸರು ಕೆರೆ ಕಟ್ಟಿಸಿ ಆ ಕೆರೆಯ ಗರ್ದ್ದೆ ಮತ್ತರು-೩ ಮನೆಯ ದೇವರ ಸತ್ರಕ್ಕೆ ಗರ್ದ್ದೆ ಕಮ್ಮ-೫೦೦ ಕೆರೆಯ ಗರ್ದ್ದೆ ಮತ್ತರ - ೧ ಇತ್ಯಾದಿಯಾಗಿ ಉಲ್ಲೇಖಗಳು ನೀಡುವುದು[೧೧] ಮುಧೋಳದಲ್ಲಿ ಸಿರಿಯಾರ ಹೊಲಮೇರೆಯೋಡವಿನ ಕೊತ್ತುರ ಹೊರೆಯಣ ಕವಿಲೆಯಕಲ್ಲು, ಕಸುವಿನಹಳ್ಳ ನೀರ್ವ್ವರಿವಿಡಿದ ಸಿರಿವೂರ ಕರುವೆಗೆಯ್ಯ ಬೇದವಟ್ಟೆಯ ಹೊಲ ಕುಕನೂರಿನ ಮಲ್ಲಿಕಾರ್ಜುನ ದೇವರಿಗೆ ಬಿಟ್ಟಿರುವುದಾಗಿ ಮುಧೋಳ ಶಾಸನದಿಂದ ತಿಳಿಯುವುದು[೧೨] ಚಳಗೇರಿ ಶಾಸನ ಕೆರೆ, ಹೊಲ, ಭೂಮಿಗಳನ್ನು ಕಲ್ಲಂಗೇರೆಯ ಲಕ್ಷ್ಮೀನಾರಾಯಣ ದೇವರಿಗೆ ಬಿಟ್ಟ ವಿಷಯ ತಿಳಿಸುವುದು.[೧೩] ಇದೇ ಊರಿನ ೧೧೭೨ ರ ಶಾಸನ ಹರಳು ಭೂಮಿಯ ಬಗ್ಗೆ, ಕುಕನೂರಿನ-೧೧೭೮ ರ ಮತ್ತೊಂದು ಶಾಸನ ಭೂಮಿ, ತೋಟ, ಹೊಲ, ಹಳ್ಳ, ಕೆರೆಗಳ ಬಗ್ಗೆ ಉಲ್ಲೇಖಿಸುವುದು. ಪುರದ ಶಾಸನ[೧೪] ಅಯವತ್ತೊಕ್ಕಲು ಭೂಮಿಯನ್ನು ಆ ಊರಿನ ಗೌರವೇಶ್ವರ ದೇವರಂಗ ಭೋಗ ಪಂಚ ಪರ್ವ್ವ ನೈವೇದ್ಯಭೋಜನ, ಅತಿಥಿ ಬ್ರಾಹ್ಮಣ ತಪೋಧನರ ನಿತ್ಯ ಆಹಾರದಾನಕ್ಕೆ ಬ್ರಹ್ಮಪುರಿಯ ಬ್ರಾಹ್ಮಣರ ವೇತನಕ್ಕೆ ದಾನ ನೀಡಿದ್ದಾಗಿ ತಿಳುಸುತ್ತದೆ. ರಾಜೂರ ಶಾಸನ ಗದ್ದೆಕಮ್ಮ ೨೦೦, ಕಿಸು ಮತ್ತರು ಎರಡು ಕೆಂಪುಣ್ಣಿನ೧೦ ಮತ್ತರ ಎರೆಹೋಲ ಅಲ್ಲಿಯ ಬಸದಿ ಜಿರ್ಣೋದ್ಧಾರಕ್ಕೆ ಬಿಟ್ಟರೆಂದಿರುವುದು.[೧೫] ಗೊತಗಿ ಶಾಸನ ಕರಿಯನೆಲ-೫೪ ಮತ್ತರು ಭೂಮಿ, ೪೫೦ ಕಮ್ಮ ತೊಂಟಗಳನ್ನು ಜಗದೇಕ ಮಲ್ಲನಪತ್ನಿ ಪದ್ಮಲದೇವಿಯು ಕರಡಿಕಲ್ಲು -೩೦೦ ಬಳಿಯ ಗೋವನ್ತಿಗೆಯ ಕಲಿದೇವಸ್ವಾಮಿಗೆ ಬಿಡುತ್ತಾಳೆಂದು ಉಲ್ಲೇಖಿಸುತ್ತದೆ.[೧೬] ಇಟ್ಟಿಗೆಯ ಶಾಸನ ಸಹ ಹೋಲ ಭೂಮಿ, ಕಮ್ಮಗಳನ್ನು ಮಹದೇವ ದಂಡನಾಯಕನು ಬಿಟ್ಟ ಬಗ್ಗೆ ವರ್ಣಿಸುವುದು[೧೭] ಹರಿಹರ

ಮಹಾರಾಯರು ಅನಾದಿ ಅಗ್ರಹಾರವಾದ ಕುಕನೂರಿನ ಅಗ್ರಹಾರದ ಜೀರ್ಣೋದ್ಧಾರ, ಮಹಾನೈವೇದ್ಯ, ಚೈತ್ರ ಪವಿತ್ರ, ಪರ್ವ, ತಿಥಿಗಳು ಇತ್ಯಾದಿಗಾಗಿ ಎರೆಭೂಮಿ ೪೦೦ ಖಂಡುಗದ ಬೀಜುವರಿ ಭೂಮಿಗೆ ಗೌಡಕಿಯ ಪ್ರಭುತ್ವವನ್ನು ನೀಡುತ್ತಾನೆ.[೧೮] ಹುಲಗಿ ಶಾಸನವೊಂದರಲ್ಲಿ ಆರನೆಯ ವಿಕ್ರಮಾದಿತ್ಯನು ಕಲ್ಯಾಣದಲ್ಲಿ ಆಳುವಾಗ ಚಾವೇದಿಭಟ್ಟನ್ನು ಹುಲಗೆಯಂಬ ಪುರವನ್ನು ತ್ರೈಳೊಕ್ಯಮಲ್ಲನಿಂದ ಪಡೆದು ತುಂಗಭದ್ರಾ ನದಿಯಿಂದ ಸೀಳುನಾಲೆಯೊಂದನ್ನು ಹೂವಿನ ತೋಟಗಳಿಗೆ, ಹೊಲಗಳಿಗೆ ಅನುಕೂಲ ಕಲ್ಪಿಸಿರುವಂತೆ ಕಂಡುಬರುವುದು[೧೯] ಹೀಗೆ ಜಿಲ್ಲೆಯ ಶಾಸನಗಳು ದೇವ ಮಾತೃಕಾ, ನದಿ ಮಾತೃಕ ಭೂಮಿಗಳ ಬಗ್ಗೆ ತಿಳಿಸುವಲ್ಲಿ ಹಿಂದೆ ಬಿದ್ದಿಲ್ಲವೆಂದು (ಸ್ಪಷ್ಟಗೊಳ್ಳುತ್ತದೆ) ಹೇಳಬಹುದಾಗಿದೆ.

**ಪ್ರಕಾರಗಳು**

ಈಗಾಗಲೆ ಗದ್ದೆ, ತೋಟ, ಭೂಮಿ, ಹೊಲ, ಹೆರಳು ಭೂಮಿ, ಕರಿಎರೆ ಭೂಮಿ, ಮತ್ತರು, ಕಮ್ಮ ಎಂದು ಶಾಸನಗಳು ಉಲ್ಲೇಖಿಸಿದ್ದು ಇವುಗಳ ಉಲ್ಲೇಖದಿಂದ ಭೂಮಿಯ ಪ್ರಕಾರಗಳನ್ನು[೨೦] ಅರಿಯಲು ಸಾಧ್ಯವಾಗಿದೆ. ಸಾಮಾನ್ಯವಾಗಿ ಇಳಿಜಾರುವಿನ ಕಡೆಗಳಲ್ಲಿ ಮಳೆ ನೀರು ಹರಿದು ನೀರು ನಿಲ್ಲುವಲ್ಲಿ ಗದ್ದೆ ಮಾಡುವುದು ಈಗಲು ನಮ್ಮ ಹಳ್ಳಿಯಲ್ಲಿ ನಡೆದುಬಂದಿದೆ. ಶಾಸನಗಳಲ್ಲಿ ಗದ್ದೆಗೆ ಪ್ರತಿಯಾಗಿ ಪೊಲ, ಹೊಲ, ಒಕ್ಕಲು, ಕೆಯ್ ಎಂದು ಬಳಕೆಯಾಗಿವೆ. ಭೂಮಿಯನ್ನು ಸಾಗುವಳಿಯ ಆಧಾರದ ಮೇಲೆ ನೀರುಣಿಸುವ ಪದ್ಧತಿಗನುಗುಣವಾಗಿ ಹರಳು ಮತ್ತರು ಭೂಮಿ, ಎರೆ ಹೊಲಮಣ್ಣಿನ ಭೂಮಿ ಕರಿಯ ಹೊಲ, ಕಿಸು ಮತ್ತರು, ಕೆರೆಯ ಕೆಳಗಿನ ಗದ್ದೆ, ಹಳ್ಳದ ಕೆಳಗಿನ ಹೊಲ, ಇತ್ಯಾದಿಯಾಗಿ ಮಣ್ಣಿನ ಗುಣಧರ್ಮದ ಮೇಲೆ ಪ್ರಾಚೀನರು ವಿಂಗಡನೆಮಾಡಿಕೊಂಡಿದ್ದು ಗೊತ್ತಾಗುವುದು. ಗದ್ದೆಗಳಲ್ಲಿ ಪ್ರಧಾನವಾಗಿ ಕಬ್ಬು, ಭತ್ತ ಬೆಳೆಯುತ್ತಿರುವುದಾಗಿ ತೋಟ ಇದು ಹೆಚ್ಚು ನೀರಿನ ಆಶ್ರಯವಿರುವ ಭೂಮಿಯಾಗಿದೆ. ಇಲ್ಲಿ ಹೂಗಳು, ಹಣ್ಣುಗಳು, ಎಲೆ, ತೆಂಗು, ಬಾಳೆ, ಮಾವು, ಮಲ್ಲಿಗೆ, ಸಂಪಿಗೆ, ನೇರಲು, ಹಲಸು, ಅಡಿಕೆ ಇತ್ಯಾದಿಗಳನ್ನು ಬೆಳೆಯಲಾಗುತ್ತಿದ್ದು. ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲಿ ಜೋಳ, ಹುರಳಿ, ನವಣೆ ಮುಂತಾದವುಗಳು ಬೆಳೆಯುತ್ತಿರುವುದಾಗಿ ಶಾಸನಗಳಿಂದ ತಿಳಿದು ಬರುವುದು. ಜಿಲ್ಲೆಯ ಪುರ ಶಾಸನವೊಂದರಲ್ಲಿ ಬಾಳೆ, ತೆಂಗು, ಹಲಸು, ಮಾವು, ನಿಂಬೆ, ಹೆಜ್ಜೋಳು, ಅರನೇರಲು, ಕಿತ್ತಾಳೆ, ಪಾಪು, ಹೂಗಳಾದ ಸಂಪಿಗೆ, ಇರುವಂತಿಗೆ, ಸೇವಂತಿಗೆ, ಮಲ್ಲಿಗೆ, ಜಾಜಿ, ಪಾಪ, ಕಣಗಿಲೆ, ಕೊಂಚಿವಾಳ, ಬೆಲ್ಲವತ್ತ, ದವಸ, ಅಡಿಕೆ, ಅರಸಿನ, ಮೆಣಸಿನ ತೋಟಗಳ ಉಲ್ಲೇಖಗಳು ನೀಡುವ ಈ ಭಾಗದ ಮುಖ್ಯ ಶಾಸನ ಇದಾಗಿದೆ. [೨೧] ಹೂವಿನ ತೋಟ, ಭೂಮಿ, ಹೊಲ, ಗದ್ದೆ, ಅಡಿಕೆ, ಎಲೆ, ಭತ್ತ, ಅನ್ನ, ಹೆಸರು, ದವಸ ಧಾನ್ಯಗಳನ್ನು ಅಳೆಯುವಮಾನಗಳ ಉಲ್ಲೇಖ, ನೀರಾವರಿ ಬೆಳೆಗೆ ತುಂಗಾನದಿ ನೀರಿನ್ನು ಬಳಕೆಮಾಡಿಕೊಂಡು ನೀರಾವರಿ ಪದ್ಧತಿಗೆ ಅಳವಡಿಸಿಕೊಂಡಿರುವ ಬಗ್ಗೆ ಹುಲಗಿ ಶಾಸನ ಬೆಳಕು ಚಲ್ಲುವುದು. ಇಟಗಿ ಕೂಕನೂರು[೨೨] ಶಾಸನಗಳು ಕೂಡಾ ಬಾಳೆ, ತೆಂಗು, ಅಡಿಕೆ ಹಣ್ಣು ಕಾಯಿಗಳ ತೋಟ, ಗದ್ದೆ, ಹೊಲ, ಭೂಮಿಗಳ ಉಲ್ಲೇಖಗಳು ನೀಡುತ್ತಿದ್ದರಿಂದ ಅಲ್ಲಿಯ ಸಮಗ್ರ ವ್ಯವಸಾಯ ಪದ್ಧತಿ

ತಿಳಿಯಲು ಸಹಾಯಕವಾಗಿದೆ. ಒಟ್ಟನಲ್ಲಿ ಹೇಳುವದಾದರೆ ಕೊಪ್ಪಳ ಜಿಲ್ಲೆಯ ನೆಲವು ಸಹ ತೋಟ, ಗದ್ದೆ ನೀರಾವರಿಗೆ ಹೆಸರಾಗಿತ್ತೆಂದು ಸ್ಪಷ್ಟಗೊಳ್ಳುತ್ತದೆ.

## ವ್ಯವಸಾಯ

ಕರ್ನಾಟಕ ಮೊದಲಿನಿಂದಲು ವ್ಯವಸಾಯ ಪ್ರದಾನಕ್ಕೆ ಹೆಸರಾದ ರಾಜ್ಯವಾಗಿದೆ. ವ್ಯವಸಾಯವನ್ನು ಅವಲಂಬಿಸಿದ ಜನರಿಗೆ ಸಹಾಯಕವಾದ ಪ್ರಾಣಿಗಳು , ಬೆಳೆಯುವ ಬೆಳೆಗಳು, ನೀರಾವರಿ, ಅಲ್ಲಿಯ ಭೂಮಿ ಇತ್ಯಾದಿಗಳ ಕುರಿತು ಶಾಸನಗಳು ಉಲ್ಲೇಖಿನಮಾಡುತ್ತವೆ. ಮುಷ್ಯನ ಪ್ರತಿ ಹಂತದಲ್ಲಿ ಅವನ ಸಹಾಯಕ್ಕೆ ಪ್ರಾಣಿಗಳ ಅನುಕೂಲತೆ ಹೆಚ್ಚಾಗಿ ಅವುಗಳು ಆತನಿಗೆ ಪವಿತ್ರ ವಸ್ತುಗಳಾಗಲು ಕಾರಣವಾಗಿವೆ. ಕೃಷಿಯ ಪ್ರತಿಯೊಂದು ಕಾರ್ಯ ಚಟುವಟಿಕೆಗಳು ಪ್ರಾಣಿಗಳ ಸಹಾಯದಿಂದಲೇ ನಡೆಯುತ್ತಿದ್ದವು. ಹೀಗಾಗಿ ಕೌಟಿಲ್ಯನು ಎತ್ತು ಬಿತ್ತುಗಳ ಬಗ್ಗೆ ಪ್ರಸ್ತಾಪಿಸುತ್ತಾ ಬೇಸಾಯದ ಖರ್ಚಿನ ಹಣವನ್ನು ರಾಜನಾದವನು ಕೊಡುವುದರೊಂದಿಗೆ ಒಕ್ಕಲುತನವನ್ನು ದಂಡ, ವಿಷ್ಟ, ತೆರಿಗೆಗಳಿಂದ ನಾಶವಾಗದಂತೆ ರಕ್ಷಿಸಬೇಕೆನ್ನುತ್ತಾನೆ.[೨೩] ಈ ಕೃಷಿ ವ್ಯವಸ್ಥೆ ವ್ಯಾಪಾರ, ಉದ್ಯೋಗ , ಕೈಗಾರಿಕೆಗಳಂತ ವಿವಿಧ ಚಟುವಟಿಕೆಗಳಿಗೆ ಪೂರಕವಾಗಿದ್ದಿತು. ಆದ್ದರಿಂದ ಆಗಿನ ರಾಜರು ಒಕ್ಕಲುತನದ ಅಭಿವೃದ್ಧಿಯೇ ನಾಡಿನ ಅಭಿವೃದ್ಧಿ ಎಂಬಂತೆ ನಾವು 'ರೈತನೇ ದೇಶದ ಬೆನ್ನೆಲುಬು' ಎಂದು ಬಗೆದಿದ್ದೇವೆ. ಕರ್ನಾಟಕದ ಮುಕ್ಕಾಲು ಭಾಗ ಶಾಸನಗಳು ದಾನದ ವಸ್ತುಗಳಲ್ಲಿ ಭೂಮಿಗೆ ಪ್ರಾಶಸ್ತ್ಯ ನೀಡಿವೆ ಎಂಬುದು ನಮ್ಮ ಶಾಸನಗಳಿಂದ ಸಾಬಿತುಗೊಳ್ಳುತ್ತದೆ. ದಾನಗಳಲ್ಲಿ ಅಷ್ಟೊಂದು ಪ್ರಾಮುಖ್ಯ ಪಡೆದ ಭೂಮಿಯ ಕುರಿತು ಶಾಸನಗಳು ಅದನ್ನು ಕಾಪಾಡುವವರಿಗೆ ಪುಣ್ಯ ತಟ್ಟುವುದು ಕೆಡಿಸುವವರಿಗೆ ಪಾಪ ತಟ್ಟುವುದು ಎಂದು ಫಲಶೃತಿಗಳಲ್ಲಿ ಹೇಳಿವೆ. ಕಲ್ಲೂರ ಶಾಸನವೊಂದು ಸೋಮೇಶ್ವರನ ಆಳ್ವಿಕೆಯಲ್ಲಿ ಸಾಮಂತರಾದ ಸಿಂಧವಂಶದ ವೀರಬಿಜ್ಜಲದೇವ ಮತ್ತು ವಿಕ್ರಮಾದಿತ್ಯದೇವರು ಎರಬರವಿ ನೆಲೆವೀಡಿನಲ್ಲಿದ್ದಾಗ, ಸಾಮಂತ ಅಧಿಕಾರಿಗಳು ಕಲ್ಲೂರ ಕಲಿದೇವ ಸ್ವಾಮಿಯ ಅಂಗಭೋಗ, ಖಂಡ ಸ್ಪುಟಿತ, ಜೀರ್ಣೋದ್ಧಾರ, ತಪೋಧನರ ಆಹಾರ ದಾನಕ್ಕೆ ಭೂಮಿಯನ್ನು ಬಿಡುತ್ತಾರೆ. ಇದನ್ನು ಸಮಸ್ತ ಪ್ರಜೆಗಳು ಪಾಲಿಸುವರು ಹೀಗೆ ಪ್ರತಿಪಾಳಿಸಿದವರ್ಗ್ಗೆ ವಾರಣಾಸಿ ಕುರುಕ್ಷೇತ್ರದಲು ಸಾವಿರ ಮಾನಸ ಬ್ರಾಹ್ಮಣರಿಗೆ ಸಾವಿರ ಕವಿಲೆಗಳಾ ಕೊಡಿನಲು ಕೊಳೆಗಿನಲು ಪೊನ್ನಲು ಬಳ್ಳಿಯಲು ಕಟ್ಟಿ ಕಂಚಿನ ಕಂಡಲು ಸಹಿತ ದಾನ ಮಾಡಿದ ಫಲವಕ್ಕುಂ ಯಿನ್ತಿ ಧರ್ಮನಳಿದವರ್ಗ್ಗೆ ಅಷ್ಟೇ ಪಾಪ ತಟ್ಟುವುದೆಂದು ವರ್ಣಿಸುವುದು.[೨೪] ಅದರಂತೆ ಸಂಕನೂರು ಮುಧೋಳ, ಬಳಗೇರಿ, ಕುಕನೂರು, ಇಟಗಿ, ತಳಕಲ್ಲು, ಮಂಕಲ್ಕೇರಿ, ಹೆಸರೂರು, ಗೋತಗಿ, ಪುರ, ಹನುಮನಾಳ, ಅಂಟೂರುತಾಣ, ವಿಪ್ರ, ಆನೆಗುಂದಿ ಶಾಸನಗಳು ಉಲ್ಲೇಖಿಸುತ್ತವೆ. ಮುಧೋಳ ಶಾಸನ ವ್ಯವಸಾಯವನ್ನು ಮಾಡುವ ಒಕ್ಕಲಿಗರು, ಅವರು ಬೆಳೆದ ದವಸ ದಾನಗಳ ವ್ಯಾಪಾರ ಮಾಡುವ ವ್ಯಾಪಾರಿಗಳು. ಅವರು ತೂಗುವ, ಅಳೆಯುವ ಮಾಪನಗಳು ಒಕ್ಕಲುತನಕ್ಕೆ ಬಳಸುವ ಎತ್ತು, ಬಂಡಿ (ಚಕ್ಕಡಿ)ಗಳ ಬಗ್ಗೆ ಮಾಹಿತಿ ನೀಡುವುದು.[೨೫] ಇಲ್ಲಿ ಉಲ್ಲೇಖಿಗೊಂಡಿರುವ ಇನ್ನಿತರ ಶಾಸನಗಳಾಧಾರದಿಂದ

ಭೂಮಿ, ತೋಟ, ಭಾವಿ, ನೀರಾವರಿ, ನದಿ, ಹಳ್ಳ, ಹಣ್ಣು ಕಾಳು, ಗದ್ದೆ, ಹೊಲ[೨೬] ಇತ್ಯಾದಿಗಳು ಕೃಷಿ ವ್ಯವಸಾಯವನ್ನು ಕುರಿತು ಬೆಳಕುಚೆಲ್ಲುವ ಅಂಶಗಳಾಗಿವೆ.

**ಬೆಳೆಗಳು**

ಹೊಲಗಳಲ್ಲಿ ಬೆಳೆಯುವ ಜೋಳ, ಹೆಸರು, ನವಣೆ, ಸಜ್ಜೆ ಗದ್ದೆಗಳಲ್ಲಿ ಬೆಳೆಯುವ ಕಬ್ಬು, ತೆಂಗು, ಅಡಕೆ, ಭತ್ತ, ತೋಟಗಳಲ್ಲಿ ಬೆಳೆಯುವ ಹೂ, ಹಣ್ಣುಗಳು, ಎಲೆ, ಮೆಣಸು, ಶುಂಠಿ, ಮಾವು, ಲಿಂಬೆ, ಬಾಳೆ, ಹಲವು, ಮೆಣಸು, ಹುಣಸೆ, ಪಪ್ಪಾಯಿ ಇತ್ಯಾದಿಗಳ ಕುರಿತು ಕಲ್ಲೂರ ಶಾಸನ[೨೭] ಅಡಿಕೆ, ಮೆಣಸು, ಅರಿಸಿಣ, ಅಲ್ಲ, ಧನರಿ, ಮಳವೆ, ಜೋಳ, ಹೂದೋಟಗಳನ್ನು ಹೆಸರಿಸುವದು ಹೆಸರೂರ ಶಾಸನ[೨೮] ಎಲೆಯ ತೋಟವನ್ನು ಕುಕನೂರು ಶಾಸನ[೨೯] ಹಿಟ್ಟು, (ಜೋಳ) ಮಾವು, ಕದಳಿಬನ, ನೇರಲಕಾಯಿ, ಹುಣಸೆ, ಹತ್ತಿ, ಸಜ್ಜೆಗಳ ಉಲ್ಲೇಖಮಾಡುತ್ತದೆ. ಇಟಗಿ ಶಾಸನ[೩೦] ಮಾವಿನ ತೋಟವನ್ನು ಹೆಸರಿಸುವುದು. ಸಮಕಾಲಿನ ವಚನ ಸಾಹಿತ್ಯದಲ್ಲಿ ಇವುಗಳ ಸ್ಪಷ್ಟವರ್ಣನೆ ಕಾಣುತ್ತೇವೆ[೩೧] ಹೂದೋಟ, ಹಣ್ಣುಗಳು ಬೆಳೆಯುವ ತೋಟಗಳ ಬಗ್ಗೆ ಹೆಚ್ಚಿನ ಮಾಹಿತಿ ಕಂಡುಬರುತ್ತಿದ್ದು, ಬೇಡರು ತಮ್ಮ ದೇವತೆಗಳನ್ನು ಪೂಜಿಸಲು ಹೆಣ್ಣು ಮಕ್ಕಳು ಹೂವನ್ನು ತಲೆಗೆ ಮುಡಿಯಲು ದೇವರಿಗೆ ಅರ್ಪಿಸಲು ತಿನ್ನಲು-ಹಣ್ಣುಗಳನ್ನು ಬೆಳೆಯುತ್ತಿರುವುದಾಗಿ ನಯಸೇನನು ಹೇಳುತ್ತಾನೆ.[೩೨]

**ಕೊಪ್ಪಳ ಜಿಲ್ಲೆಯ ಶಾಸನ ಉಲ್ಲೇಖಿತ ಭೂಮಿಗಳ ಸಂಕ್ಷಿಪ್ತ ಸೂಚಿ**

೧. ಎರೆ ಭೂಮಿ : ಕಪ್ಪು ಭೂಮಿ

೨. ಎರೆಗದ್ದೆ : ಎರೆ ಭೂಮಿಯ ಗದ್ದೆ

೩. ಗದ್ದೆ : ಮಳೆಗಾಲದಲ್ಲಿ ಸಾಗುವಳಿಯಾಗುವ ಗದ್ದೆ, ಭತ್ತ ಬೆಳೆಯುವ ಭೂಮಿ.

೪. ಕಿಸು : ಕೆಂಪು ಮರಳು ಭೂಮಿ ಮಸಾರಿ ಭೂಮಿ (ಕಿಸುಕಾಡು)

೫. ಕೆಯ್ : ಕೆಯಿ, ಹೊಲ, ಗದ್ದೆ, ಸಾಗುವಳಿಯ ಭೂಮಿ.

೬. ತೋಟ, ತೊಂಟ, ಇದು ಹೆಚ್ಚಾಗಿ ನೀರಾವರಿಯಿಂದ ಬೆಳೆಯುವ ವೀಳ್ಯದೆಲೆ, ಅಡಿಕೆ, ತೆಂಗು, ಬಾಳೆ, ಹೂವು ಇನ್ನಿತರ ಹಣ್ಣುಗಳು ಬೆಳೆಯುವ ನೆಲವಾಗಿದೆ.

೭. ಪೂದೋಟ : ಹೂವಿನ ತೋಟ.

೮. ಪೊಲ : ಹೊಲ - ಒಕ್ಕಲುತನದ ಭೂಮಿ.

೯. ಮಳವೆ : ಭೂಮಿಯಒಂದು ವಿಧ.

೧೦. ಹರಳು : ಕಲ್ಲು ಭೂಮಿ

೧೧. ವೊಕ್ಕಲು : ಒಕ್ಕಲುತನ ಭೂಮಿಯ ಗುತ್ತಿಗೆ.

೧೨. ಮಣ್ಣು : ಒಕ್ಕಲುತನದ ಭೂಮಿ.

೧೩. ಕಟಿ : ಕಟ್ಟೆ, ಆಣೆಕಟ್ಟು

೧೪. ಭೂಮಿ : ವ್ಯವಸಾಯಕ್ಕೆ ಬಳಸಿಕೊಳ್ಳುವ ನೆಲ.

೧೫. ಸವುಳು ಭೂಮಿ : ನೀರು ನಿಲ್ಲುವ ಜೋಗು ಪ್ರದೇಶ ವ್ಯವಸಾಯಕ್ಕೆ ಯೋಗ್ಯವಲ್ಲದ ಭೂಮಿ.

೧೬. ಕೆರೆಯ ಏರಿನ ನೆಲ : ಕೆರೆಯ ಹತ್ತಿರ ಇರುವ ಫಲವತ್ತಾದ ಭೂಮಿ.

## ನೀರಾವರಿ

ನೀರಾವರಿ ಪದ್ಧತಿ ಮುಖ್ಯವಾಗಿ ಕೆರೆ, ಕಟ್ಟೆ, ಬಾವಿಗಳನ್ನು ಅವಲಂಭಿಸಿತ್ತು. ಹೊಳೆ ಹಳ್ಳಗಳು ಕ್ವಚಿತ್ತಾಗಿ ಬಳಕೆಯಾಗುತ್ತಿದ್ದವು. ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಮಳೆಯನ್ನು ಅವಲಂಬಿಸದೆ ನಮ್ಮ ಪ್ರಾಚೀನರು ಜಲಸಂಪತ್ತಿನಿಂದಾಗಿ ನೀರಾವರಿ ಪದ್ಧತಿಯನ್ನು ಅಳವಡಿಸಿಕೊಂಡಿದ್ದರು. ಇದನ್ನು ವ್ಯವಸಾಯ ದಲ್ಲಿ ಇಳುವರಿಗಾಗಿ ಮಾಡಿಕೊಂಡಿದ್ದರೆ, ಮಿಕ್ಕುಳಿದವರು ಕೆರೆ, ಕಟ್ಟೆ ಭಾವಿಗಳನ್ನು ಕಟ್ಟಿಸುವುದರಿಂದ ಪುಣ್ಯಕರ ಶ್ರೇಯಸ್ಕರವೆಂದು ನಂಬಿದ್ದರು. ಈ ಮನೋಭಾವದ ಫಲವಾಗಿ ನಾಡಿನುದ್ದಗಲಕ್ಕೂ ಶಾಸನಗಳು ಇವುಗಳ ಬಗ್ಗೆ ಉಲ್ಲೇಖಿಸಿರುವುದನ್ನು ಕಾಣುತ್ತೇವೆ.

ತುಂಗಭದ್ರಾ ನದಿಯನ್ನು ಬಳಸಿಕೊಂಡಂತೆ ಕೊಪ್ಪಳ ಜಿಲ್ಲೆಯ ಪ್ರದೇಶದಲ್ಲಿರುವ ಜನರು ಇದೇ ನದಿಯ ನೀರನ್ನು ನೀರಾವರಿಗಾಗಿ ಬಳಸಿಕೊಂಡ ಬಗ್ಗೆ ಹುಲಗಿ ಶಾಸನದಲ್ಲಿ ''ಭರದಿಂದ ತುಂಗಭದ್ರಾ ನದಿಯ ಥಟ ಮನಾರೈದುಮಿಂ ಬಾಗಿರಲು ವಾರಿಜನಾ(ಳಂ) ಸೇಮ್ಬಿನೊಲ್ಲೆಳ್ವಪೊಲವೆಯ ವದಿಂ ತನ್ನ ನೀಕಾಲುರುಮ್ಯಂ ಬಡೆಯಲು ವಿಸ್ತಾರ ಮಾಗಲು ರವಿ ಶಸಿಧರೆ ನಕ್ಷತ್ರ ಮಾಮೇರು ನಿಲ್ವನ್ನೆಗ ನೋಡಾರಂಭ ಬ್ರಿಂದಂ ಒಸೆದು ತಣಿಯಲುಂ ತನ್ನ ಚಾವೇದಿ ಭಟ್ಟಂ''[೩೩] ಎಂದು ತುಂಗಾ ನದಿಯಿಂದ ಸೀಳುನಾಲೆಯ ಮೂಲಕ ನೀರಿನಕಾಲುವೆ ತಂದ ಬಗ್ಗೆ ಪರವೀರ ತೋಟ, ಹೂವಿನ ತೋಟ, ಗುಯ್ಯಲ ತೋಟ, ಎಲೆ, ಅಡಿಕೆಯ ತೋಟಗಳ ಕುರಿತು ವಿವರಿಸುವುದು. ಕರ್ನಾಟಕದಲ್ಲಿ ಪ್ರಾಚೀನಕಾಲದಿಂದಲೇ ಕೆರೆಕಟ್ಟಿಸುವ ಪದ್ಧತಿ ಜಾರಿಯಲ್ಲಿತ್ತು. ಜಿಲ್ಲೆಯ ಅಳವಂಡಿ ಗ್ರಾಮದ ಕುರುವರ ಗುಲ್ಗಿಮಯ್ಯನು ಊರ ಪಶ್ಚಿಮಕ್ಕೆ ತೋಟ, ಪೂರ್ವಕ್ಕೆ ಬಾವಿ, ಕಲ್ಲದೇಗುಲ ಕಟ್ಟಿಸಿ ಅವುಗಳಿಗೆ ದಾನ ದತ್ತಿಗಳನ್ನು ಬಿಟ್ಟು ತೀರ್ಥದ ಕೆರೆಯಲ್ಲಿ ಸ್ನಾನ ಮಾಡಿ ಮೋಕ್ಷ ಪಡೆದಿರುವುದಾಗಿ ಶಾಸನ ವಿವರಿಸುವುದು.[೩೪] ಅಂಟೂರ ಠಾಣಾದಲ್ಲಿ ಸೋಮೇಶ್ವರ ಭಟ್ಟೋಪಾಧ್ಯಾಯನು ಪೆಂದೆಯಕೆರೆ, ಸತ್ರ, ಶಾಲೆಕಟ್ಟಿಸಿ ದಾನಧರ್ಮಗಳನ್ನು ಕೊಡುತ್ತಾನೆ.[೩೫] ಕವಲೂರಿನ ಚೌಡಭಟ್ಟನೆಂಬುವವನು ವಾಜಪೇಯ ಯಾಗವನ್ನು ಮಾಡಿದ ಇವನ ಮಗ ಸೋಮಯಾಜಿ ಸೋಮಯಾಗ ಮಾಡಿ ವಿಷ್ಣು ದೇವಾಲಯ ಸತ್ರ, ಮತ್ತು ಕೆರೆಯನ್ನು ಕಟ್ಟಿಸಿದನು.[೩೬] ಕುಕನೂರಿನ ಶಾಸನಗಳು ನೀರಾವರಿಗಾಗಿ ಮೊಗಣಗೆಯ ಗರ್ದೆ ಏರಣಗೆಕೆಯ ಗರ್ದೆಯಲ್ಲಿ ಸಬ್ಬಯನ ಕೆರೆ, ಕಡಲಗೆಯ ಕೆರೆ, ಫೈಸಾಸರ ಕೆರೆ, ದೇವಯ್ಯನಕೆರೆಗಳ ಕುರಿತು ಉಲ್ಲೇಖಿಸುತ್ತಿದ್ದು ಅಲ್ಲಿ ಅನೇಕ ಕೆರೆಗಳಿದ್ದಿರುವುದಾಗಿ ತಿಳಿಸುತ್ತವೆ.[೩೭] ಕುಕನೂರ ಪಕ್ಕದ ಕವಲೂರಿನಲ್ಲಿ ಚೌಡ ಶೆಟ್ಟಿಯ ಕೆರೆ, ಕುಸುವನ ಕೆರೆ, ಗರೂರ ಹಳ್ಳದ ಮೂಡಣ ತಟದಾನೆ, ಪೌಳಕೆರೆ, ಕುಕನೂರಿನ ಭಾಗದಲ್ಲಿ ಬರುವ ಕೆರೆಗಳು, ಹೊಲ, ತೋಟ, ಭೂಮಿ, ಗದ್ದೆಗಳ ಬಗ್ಗೆ ಉಲ್ಲೇಖಿಸುತ್ತಾ ಶಾಸನ

'' ಶ್ರೀಮನ್ಮಹಾಗ್ರಹಾರವಸಾಮಾನ್ಯ ಕೂಕ್ಕನೂರುಮಿಗೆ ಸೋಗಯಿಸುಗುಂ ॥ ಸಾರ ನಾಲ್ವತ್ತೆಂಟು ಕೆರೆಗಳಿರೆಬಳಸಿ ಬೆಳೆದ ಬಾಳೆಯಸುಖದಿಂಸಾರಂಗದ ತನಿವಂಣ್ಗಳಿನೋರಂತಿರೆ ಕುಕನೂರು ಕಣ್ಣೇ ಸದಿಕ್ಕು ತೋಟಗಳು, ಬಿದಿಗಳು, ಕಟ್ಟಡಗಳು, ಬನಗಳಿರೇ ಶೋಭಿಸುತ್ತಿರಲು'' ಎಂದು ವರ್ಣನೆ ಮಾಡಿದರೇ, ಕವಲೂರಿನ ಶಾಸನ ಯಡೆಹಳ್ಳಿಯ ಕೆರೆಯ ನಾಲ್ಕು ಗುಡ್ಡಗಳ ಮಧ್ಯದ ಪೋಲದಲ್ಲಿ (ಹೊಲ) ಕೆರೆ ಕಟ್ಟಿಸಿರುವುದಾಗಿ ತಿಳಿಸುತ್ತದೆ.[೩೮] ಆರನೇ ವಿಕ್ರಮಾದಿತ್ಯನ ದಂಡನಾಯಕ ಮಹದೇವನು ಇಟ್ಟಿಗೆಯಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿ ತೋಟ, ಗದ್ದೆ, ಭೂಮಿ, ದಾನಬಿಟ್ಟನು. ಇದಕ್ಕೆಲ್ಲ ಕಾರಣವಾದ ಕೆರೆಯ ಕುರಿತು ಶಾಸನ '' ನಾನಾ ವಿಧ ವಿಧನುತಂ ದೇಚಿರಾಜಂ ವಿಶಿಷ್ಠಾಧಾರಂ ತಾತ್ಪರ್ಯ್ಯದಿಂ ಕಟ್ಟಿಸಿದ ಕೆರೆಯಪಯಜೂ ವಿಸ್ತಾರದಿಂ ಕುಳಿಯ ಕೇರೆಯ ನೀಳವಸುಗೆಯ ಮಾವಿನ ತೋಟ ಮತ್ತರು,''[೩೯] ಎಂದು ಉಲ್ಲೇಖಿಸಿದೆ. ಕೊಪ್ಪಳ ತಾಲೂಕಿನ ಬೈರಾಪೂರ ಶಾಸನ ರುದ್ರಪಾದ ದೇವರ ತೋಂಟದತೆಯಿಂ ಸರ್ವನಮಸ್ಯವಾಗಿ ೪೦೦ ನಿರ್ಮ್ಮಿದ್ಯವಾಗಿ ಕೆರೆಯ ನೀರಲೂ ಮಾತೆದಾರಿಬಿಟ್ಟರೆಂದು ಹೇಳುತ್ತದೆ.[೪೦] ಕುಷ್ಟಗಿ ತಾಲೂಕಿನ ಪುರ ಶಾಸನದಲ್ಲಿ ಕೆರೆಯನ್ನು ಕಟ್ಟಿಸಿ ಪುರದ ಪ್ರತಾಪ ದೇವರಾಯನಿಗೆ ಪುಣ್ಯವಾಗಬೇಕೆಂದು ಓಹಿಲಾಪುರದ ಹೊಲದ ಒಳಗೆ ತೋಟ ಬನದಾಯದಲ್ಲಿ ಕೆರೆಯನ್ನು ಕಟ್ಟಿಸಿದಂತೆ ಹೇಳಿದೆ.[೪೧] ಕಲ್ಲೂರಿನ ಶಾಸನವು ಕಲ್ಲಕೆರೆ ಇಳ್ಳಂಗೆರೆಯ ಕೆರೆಯ ಉಲ್ಲೇಖ ನೀಡುತ್ತದೆ.[೪೨] ಅದೇ ರೀತಿ ಆಳವಂಡಿ, ಕವಲೂರು, ಮುಧೋಳು, ಯಲಬುರ್ಗಿ, ಕುಕನೂರು, ಇಟಗಿ, ಪುರ, ವಿಪ್ರ, ಆನೆಗೊಂದಿ, ಮಾದಿನೂರು, ಅಂಟೂರತಾಣ, ಹನುಮನಾಳ, ಬಳಗೇರಿ, ಸಂಕನೂರು ಶಾಸನಗಳಲ್ಲಿ ಭಾವಿಗಳ ಉಲ್ಲೇಖವಿದ್ದು ಬಾವಿ-ಕೆರೆಗಳಿಂದ ಅಂದು ನೀರಾವರಿ ಸೌಲಭ್ಯ ಮಾಡಿಕೊಂಡಿರುವುದನ್ನು ಕಾಣುತ್ತೇವೆ.

ಅದರಂತೆ ನೈಸರ್ಗಿಕ ಜಲಸಂಪತ್ತಿನಿಂದ ಹುಟ್ಟಿಕೊಂಡ ಹಳ್ಳ-ಕೊಳ್ಳಗಳು ಸಹ ಜನಜೀವನದಲ್ಲಿ ಮಹತ್ವದ ಪಾತ್ರ ವಹಿಸಿವೆ. ಇಂಥ ಹಳ್ಳಗಳ ಕುರಿತು ಮಾದಿನೂರು ಶಾಸನ ತೆರಹಳ್ಳದ ಮೇಲೆ ತೋಟಗಳ್ದೆ ಕಮ್ಮ ಎಂದರೆ,[೪೩] ಕಲ್ಲೂರ ಶಾಸನ ಬಾವಿಯಹಳ್ಳ ,ತಾರೆಯಹಳ್ಳಗಳನ್ನು ಹೇಸರಿಸುತ್ತದೆ. ಅಂದರೆ ಬಾವಿಯಿಂದ ನೀರು ಜರಿಯಿಂದ ಹುಟ್ಟಿಕೊಂಡು ಅವುಗಳ ಆಶ್ರಯದಿಂದ ಬೆಳೆದ ತೋಟಗಳನ್ನು ಮಾಡಿಕೊಂಡಿದ್ದನ್ನು ಹೇಳುತ್ತದೆ..[೪೪] ಕುಕನೂರಿನ ಶಾಸನ[೪೫] ಗರೂರಹಳ್ಳ, ಮಾದೆಯಹಳ್ಳ ಹಿರೇಹಳ್ಳ, ಬಳಂಗರೆಯ ಹಳ್ಳದ ಮಧ್ಯದ ನಟ್ಟಕುಸುವನ ಕೆರೆಯನ್ನು ಉಲ್ಲೇಖಿಸುವುದು. ಈ ಕೆರೆ-ಹಳ್ಳ, ಬಾವಿ, ನದಿ ನೀರಿನ ಆಶ್ರಯದಿಂದ ತೋಟಗಳಲ್ಲಿ ತೆಂಗು, ಬಾಳೆ, ವೀಳ್ಯೆದೆಲೆ, ಅಡಿಕೆ, ವಿವಿಧ ಹಣ್ಣುಗಳಾದ ಮಾವು, ಹಲಸು, ಕಿತ್ತಳೆ, ಅರಳೆ, ನೇರಳೆ, ಪಾಪು, ನಿಂಬೆ, ಮಲ್ಲಿಗೆ, ಕೇದಿಗೆ, ನೈದಿಲೆ, ಸಂಪಿಗೆ, ಇರುವಂತಿಗೆ, ಸೇವಂತಿಗೆ, ಜಾಜಿ, ಕಣಗಿಲೆಗಳನ್ನು ಬೆಳೆದರೆ, ಗದ್ದೆಗಳಲ್ಲಿ ಭತ್ತ, ಕಬ್ಬುಗಳನ್ನು ಒಣ ಬೇಸಾಯದಲ್ಲಿ ಜೋಳ, ಸಜ್ಜೆ, ಹೆಸರು, ಹುಣಸೆ ಇತ್ಯಾದಿಗಳು ಬೆಳೆಯುತ್ತಿರುವುದಾಗಿ ತಿಳಿದು ಬರುವುದು. ಇವೆಲ್ಲವುಗಳನ್ನು ಆದಾಯ ರೂಪದಲ್ಲಿ ದೇಣಿಗೆ ರೂಪದಲ್ಲಿ ಸಾರ್ವಜನಿಕ ಚಟುವಟಿಕೆಗಳು ನಡೆಯಲು ದಾನವಾಗಿ ಬಿಡುತ್ತಿದ್ದರು. ಅನೇಕ ಶಾಸನಗಳಲ್ಲಿ ಎಣ್ಣೆ-ಗಾಣಗಳ ಪ್ರಸ್ತಾಪಗಳಿದ್ದು, ಎಣ್ಣೆ ಬೀಜಗಳನ್ನು ಸಹ ಬೆಳೆಯುತ್ತಿದ್ದರೆಂದು ತಿಳಿಯಲು ಅವಕಾಶವಿದೆ.

## ಭೂಸ್ವಾಮ್ಯ

ಮಾನವನ ಬಹುಪಾಲು ಸಂಪತ್ತು ಭೂಮಿ ಆಗಿದೆ. ಹೀಗಾಗಿ ಅವನ ದುಡಿಮೆ, ಉತ್ಪಾದನೆ, ಅಭಿವೃದ್ಧಿಗಳು ಆತನು ಸ್ವತಂತ್ರವಾಗಿ ಹೊಂದಿರುವ ಭೂಸ್ವಾಮ್ಯ ಮಾಲಿಕತ್ವವನ್ನು ಅವಲಂಬಿಸಿವೆ. ಅವರಲ್ಲಿ ರೈತನು ನಿಜವಾದ ಒಡೆಯ, ರಾಜನಲ್ಲವೆಂಬುದನ್ನು[೪೬] ಭೂಮಿ, ಹೊಲ, ಗದ್ದೆ, ತೋಟಗಳನ್ನು ದೇವಾಲಯಗಳಿಗೆ ಶಿಕ್ಷಣ, ಸಾರ್ವಜನಿಕ ಚಟುವಟಿಕೆಗಳಿಗಾಗಿ ದಾನ ಬಿಟ್ಟಿರುವುದನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ಕುಕನೂರು ಶಾಸನ ಚೌಡ ಶೆಟ್ಟಿಯ ಕೆರೆಯ ಭೂಮಿ, ಸುಬ್ಬಯ್ಯನ ಕೆರೆ ಮತ್ತರು ದೇವಯ್ಯನ ಕೆರೆಯ ಹೊಲ, ಕುಕನೂರು ೩೦ರೊಳಗಿನ ಬೇನತೂರ ಹೊಲದ ಮೇರೆಯಲ್ಲಿರುವ ವಿವಿಧ ಭೂಮಿಯನ್ನು ಸಂಕಮದೇವನ ದಂಡನಾಯಕನು ದಾನ ನೀಡಿದರೆಂದು ಹೆಸರಿಸುತ್ತದೆ.[೪೭] ಇಟಗಿ ಶಾಸನ ದೇಚಿರಾಜನು ತಾನು ಕಟ್ಟಿಸಿದ ಕೆರೆಯ ನೀಳ ವಸುಗೆಯ ಮಾವಿನ ತೋಟ ಮತ್ತರು, ಆವೂರಿನ ಮೂಡಲು ಜಕ್ಕಿಯರ ಕೆರೆಯ ತೋಟಮತ್ತರು[೪೮] ನೀಡಿದ್ದನ್ನು, ಅಳವಂಡಿ ಶಾಸನ ರುದ್ರದೇವರ ತೋಟ ಊರ ಪಶ್ಚಿಮದ ತೋಟ ಬರ್ಮಯ್ಯನು ವಸತಿ ಸತ್ರಕ್ಕೆ ೧೮ ಮತ್ತರು[೪೯] ನೀಡಿದ್ದನ್ನು, ಉಪ್ಪಿನ ಬೆಟಗೇರಿ ಶಾಸನ ರೊಟ್ಟಯ್ಯನೆಂಬುವನು ೬ ಮತ್ತರು ಭೂಮಿಯನ್ನು ನಾಗಪಂಡಿತ ಭಟ್ಟಾರರ ಕಾಲ ತೊಳೆದು ಬಿಟ್ಟರು[೫೦] ಸೋವಿಯಣ್ಣನು ತಳಕಲ್ಲು ನಾಗಲೇಶ್ವರ ದೇವಾಲಯಕ್ಕೆ ಭೂಮಿ ದಾರೆ ಎರೆದಿದ್ದನ್ನು[೫೧] ಬಳಗೇರಿಯ ಸೋಬನರಸು ಅಲ್ಲಿಯ ದೇವರಿಗೆ ಭೂಮಿ ಧಾರೆ ಎರೆದಿದ್ದನು.[೫೨] ಚಾಳುಕ್ಯ ಅರಸ ಜಗದೇಕಮಲ್ಲನ ಪತ್ನಿ ಪದ್ಮಲದೇವಿ ಕರಡಿಕಲ್ಲು ೩೦೦ ರ ಬಳಿಯ ಗೋವಂನ್ತಿಗೆಯಕಲಿದೇವ ಸ್ವಾಮಿಗೆ ಕರಿಯನೆಲಂ ಮತ್ತರು ೫೪, ಕಮ್ಮ ೪೫೦ ತೋಟ ಮತ್ತು ಭೂಮಿ ದಾನ ನೀಡಿದ್ದನ್ನು[೫೩] ಚಳಗೇರಿ ಊರಿನ ಸೀಮೆಯ ವಿವಿಧ ಕೆರೆಯ ಮೇಲಿನ ಹೊಲಗಳನ್ನು ಅಲ್ಲಿಯ ಲಕ್ಷ್ಮೀನಾರಾಯಣ ದೇವರಿಗೆ ಬಿಟ್ಟಿರುವುದಾಗಿ,[೫೪] ಆರನೆಯ ವಿಕ್ರಮಾದಿತ್ಯರ ಆಳ್ವಿಕೆಯ ಅಧೀನದಲ್ಲಿ ರಾಜೂರು ಬಸದಿಯ ಜೀರ್ಣೋದ್ಧಾರಕ್ಕೆ ಗದ್ದೆ ಕಮ್ಮ ೨೦೦ ಮತ್ತರು ಭೂಮಿ ದಾನಬಿಟ್ಟಿರುವುದಾಗಿ ತಿಳಿಯುತ್ತದೆ.[೫೫] ಈ ರೀತಿಯ ದಾನ ದತ್ತಿಗಳನ್ನು ಅರಸರು, ರಾಣಿಯರು ಅಧಿಕಾರಿಗಳು, ವ್ಯಕ್ತಿಗಳು ತಮ್ಮ ಒಡೆತನದಲ್ಲಿಯ ಭೂಮಿಗಳನ್ನು ಬಿಡುತ್ತಿದ್ದರು. ಇದು ಅವರಿಗಿದ್ದ ಭೂಮಿಯ ಮೇಲಿನ ಸ್ವಾಮ್ಯದ ಕುರಿತ ಹೇಳಿಕೆಯನ್ನು ಸಮರ್ಥಿಸುತ್ತದೆ.[೫೬] ಭೂಮಾಲಿಕತ್ವ ಹೊಂದಿದವರು ರೈತರಾಗಿರಬೇಕೆಂದೇನು ಇರಲಿಲ್ಲ. ವಿವಿಧ ವೃತ್ತಿಗಳನ್ನು ಹೊಂದಿದ, ರೈತರಲ್ಲದ ಜನರು ವ್ಯವಸಾಯಕ್ಕೆ ತಮ್ಮ ಭೂಮಿಯನ್ನು ಗುತ್ತಿಗೆಯ ಆಧಾರದ ಮೇಲೆ ಕೊಡುತ್ತಿರಬೇಕು. ಫಲ ಬರಲಿ ಇಲ್ಲವೆ ಬಾರದಿರಲಿ ಒಪ್ಪಂದ ಮಾಡಿಕೊಂಡಂತೆ ಭೂ ಸಾಗುವಳಿ ಮಾಡಿದವ ಧಾನ್ಯವನ್ನು ಕೊಡುವುದಕ್ಕೆ ''ಕಟಗುತ್ತಿಗೆ'' ಎಂದು ಸಮಕಾಲಿನ ವಚನಗಳಲ್ಲಿ ಪ್ರಸ್ತಾಪಗೊಂಡಿರುವುದನ್ನು ಕಾಣುತ್ತೇವೆ.[೫೭] ಹೀಗೆ ಸಾರ್ವಜನಿಕ ಚಟುವಟಿಕೆಗಳಿಗೆ ಬಿಟ್ಟ ಆಸ್ತಿಗಳಿಗೆ ಆಯಾ ಊರುಗಳ ಪ್ರಭುಗಳು, ಮಹಾಜನರು, ನಾಡ ಅಧಿಕಾರಿಗಳು, ಸಂಘ ಶ್ರೇಣಿ ಮೊದಲಾದವರು ಮಾಲಿಕತ್ವ ಮೇಲ್ವಿಚಾರಣೆಯನ್ನು ಹೊಂದಿರುತ್ತಿದ್ದರು. ಈ ಆಸ್ತಿಯನ್ನು ಹಾಳು ಮಾಡಿದವರಿಗೆ ಅಪಹರಿಸಿದವರಿಗೆ ಪಾಪ ತಟ್ಟುವುದು ಕಾಪಾಡಿದವರಿಗೆ ಪುಣ್ಯಲಭಿಸುವುದೆಂದು ಶಾಸನಗಳ ಫಲಶೃತಿಗಳಲ್ಲಿ ವಿವರಿಸಿದ್ದು ಕಾಣುತ್ತವೆ.

**ದನಕರುಗಳು**

ವ್ಯವಸಾಯ ಪ್ರಧಾನವಾದ ನಮ್ಮ ನಾಡಿನಲ್ಲಿ ಭೂಮಿಯ ಬಗ್ಗೆಯಿರುವ ಪವಿತ್ರಭಾವನೆಯೇ ಹಸು-ಎತ್ತುಗಳಿಗೂ ಅನ್ವಯಿಸುತ್ತದೆ. ಎತ್ತುಗಳು ಹೊಲದ ಉಳುಮೆಗೆ, ಸರಕುಸಾಗಾಣಿಕೆಗೇ, ರೈತರಿಗೆ, ವ್ಯಾಪಾರಿಗಳಿಗೆ ಸಹಾಯಕವಾಗಿರುತ್ತಿದ್ದವು. ಆಕಳು ಹಾಲು ಕೊಡುವ ತಾಯಿ ಸ್ವರೂಪದಂತಿದ್ದು, ಅವುಗಳನ್ನು ಅಪಹರಿಸುವುದು ಮಹಾಪಾಪವೆಂದು ಅವುಗಳನ್ನು ಸಂರಕ್ಷಿಸುವುದು ಆಯಾ ಊರಿನಜನರ ಕರ್ತವ್ಯವೆಂದು ಬಗೆದಿದ್ದರು. ಗೋಹತ್ಯ ಮಹಾಪಾಪವೆನಿಸಿದ್ದು ಬಿಟ್ಟದಾನ, ಬರೆಯಿಸಿದ ಶಾಸನಗಳನ್ನು ಪ್ರತಿಪಾಲಿಸಿದವರಿಗೆ ''ಸಾವಿರಾರು ಬ್ರಾಹ್ಮಣಗಳ ಸಾವಿರ ಆಕಳುಗಳು ಕೋಡುಂ ಕೊಳಗುವಂ ಹೊನ್ನಲು ಕಟ್ಟಿಸಿ ದಕ್ಷಿಣೆ ಸಹಿತ ದಾನವಂಕೊಟ್ಟ ಪಳವಕ್ಕು ವೀ ಧರ್ಮಕ್ಕೆ ಕಂಟಕವಾಗಿ ಕೆಡಿಸಿದವನಾ ವಾರಣಾಸಿಯ ತಡಿಯಲಾ ಸಹಸ್ರ ಬ್ರಾಹ್ಮಣರುಮಂ ಸಹಸ್ರ ಕವಿಲೆಯಮಂ ಸ್ವಹಸ್ತದಿಂ ಕೊಂದಮಹಾಪಾತಕನಕ್ಕು'' ಎಂದು ಈ ಜಿಲ್ಲೆಯ ಅನೇಕ ಶಾಸನಗಳ ಫಲಶೃತಿಗಳಲ್ಲಿ ಅಂದಿನ ಜನರು ಕಂಡಿರುವರು. ಶಾಸನಗಳು ಅದನ್ನು ' ತುರುಗೋಳ್' ಎಂದು ಗುರುತಿಸಿವೆ [೫೮] ಕೆಲವು ಸಂದರ್ಭಗಳಲ್ಲಿ ಹಸುಗಳನ್ನು ಕಳ್ಳರು ಹಿಡಿದುಕೊಂಡು ಹೋದಾಗ ಅವುಗಳನ್ನು ಹಿಂತಿರುಗಿಸುವಲ್ಲಿ ಹೋರಾಡಿ ಸತ್ತ ವೀರನ ಒಂದು ಉಲ್ಲೇಖ ಜಿಲ್ಲೆಯ ಶಾಸನದಲ್ಲಿದೆ. ಆದರೆ ಶಾಸನವೀರದ ವೀರಗಲ್ಲಗಳು ಕೂಡಾ ದೊರಕುತ್ತವೆ. ಸಾರಿಗೆ ವ್ಯವಸ್ಥೆಯಲ್ಲಿ ದನಕರುಗಳ ಪಾತ್ರದ ಕುರಿತು ಕಲ್ಲೂರ [೫೯] ಶಾಸನವೊಂದು '' ಕುಕನೂರಿನ-೩೦ ರೊಳಗಿನ ಕಲ್ಲೂರ ಗುಡಿಯ ಬೀಡಿಗಂ ಅಡಿಕೆ ಮೆಣಸು ಧಸರಿಯ ಮಳವೆ, ಸೀರೆಯ ಮಳವೆ, ಹಡವಿನ ಮಳವೆ, ಅರಸಿನದ ಮಳವೆ, ಅಲ್ಲದ ಮಳವೆ, ನೀಲಿಯಕೊಡ ಎತ್ತಿನಲು, ಕತ್ತೆಯಲು, ಕೋಣನಲು, ಏನಹೇರಿ ಬಂದಡಂ ಹೆಜ್ಜುಙಂಕ ಬೀರವಣ ವಡ್ಡ ರಾವುಳ ಸಹಿತ ಹತ್ತಕ್ಕೊಂದು ದೇವರಿಗೆ ದಾನಬಿಟ್ಟಿದ್ದನ್ನು'' ಹೇಳಿದರೆ, ಮುಧೋಳು ಶಾಸನ[೬೦] ಒಕ್ಕಲಿಗರು ಎತ್ತು, ಕತ್ತೆ ಕೋಣವನ್ನು ಬಳಸಿಕೊಂಡು ಅವುಗಳ ಮೇಲೆ ವಿವಿಧವಸ್ತುಗಳನ್ನು ಹೇರಿಕೊಂಡು ವ್ಯಾಪಾರಕ್ಕೆ ಹೋಗುತ್ತಿದ್ದರೆಂದು ತಿಳಿಸುತ್ತದೆ. ಅದರಂತೆ ಹನುಮನಾಳ ಶಾಸನ ಸಿಂಗಗಾಮುಂಡನು ತಂಬುಲಿಗಸಾಸಿರ್ವರ ಎತ್ತೂ -ದನಕರುಗಳನ್ನು ಕಳ್ಳರಿಂದ ಬಿಡಿಸಿ ತಂದಿರುವುದಾಗಿ ವಿವರಿಸುವುದು [೬೧] ಈ ದನಕರುಗಳು ಸಂತಾನಾಭಿವೃದ್ಧಿಗಾಗಿ, ಆಕಳು, ಎಮ್ಮೆ, ಆಡು ಕುರಿಗಳು ಹಾಲು ಹೈನುಗಳ ಸಲುವಾಗಿ ಸಾಕುತ್ತಿದ್ದರೆಂದು ಶಾಸನಗಳಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಇವುಗಳ ಕುರಿತು ಉಲ್ಲೇಖಮಾಡಿರುವದನ್ನು ಅರಿಯಬಹುದು.

**ಕೈಗಾರಿಕಾ ಉತ್ಪಾದನೆ**

ಅರ್ಥ ವ್ಯವಸ್ಥೆಯಲ್ಲಿ ಭೂಮಿಗಿರುವಷ್ಟೇ ಪ್ರಾಧಾನ್ಯತೆ ಕೈಗಾರಿಕೆಗಳಿದೆ. ಪ್ರಾಚೀನರು ವ್ಯವಸಾಯ ಹಾಗೂ ಭೂ ಮೂಲದ ಕಚ್ಚಾ ಪದಾರ್ಥಗಳನ್ನು ಶುದ್ಧವಸ್ತುಗಳನ್ನಾಗಿ ಮಾಡುವಲ್ಲಿ ಕೈಗಾರಿಕೆಗಳಿಗೆ ಹುಟ್ಟು ಹಾಕಿದ್ದರು.[೬೨] ಅರ್ಥವ್ಯವಸ್ಥೆಯಲ್ಲಿ ಭೂಮಿಗಿರುವಷ್ಟೆ ಪ್ರಾಮುಖ್ಯತೆ ಕೈಗಾರಿಕೆಗಳಿಗಿತ್ತೆಂದು ಸಾವಿರಾರು ವರ್ಷಗಳಿಂದಲೂ ಬೆಳೆದುಬಂದ ಪ್ರಮುಖ ಕೈಗಾರಿಕೆಗಳಲ್ಲಿ ಉಪ್ಪು ತಯಾರಿಕೆ, ಎಣ್ಣೆ, ಬೆಲ್ಲ-ಸಕ್ಕರೆ ಮುಂತಾದ ಉತ್ಪಾದನೆಗಳು ಮುಖ್ಯ ಪಾತ್ರವಹಿಸಿದ್ದವೆಂದು ಶಾಸನಗಳಿಂದ ತಿಳಿಯುತ್ತದೆ.

## ಎಣ್ಣೆ ತಯಾರಿಕೆ

ಎಣ್ಣೆ ಅಡುಗೆ ಮಾಡಲು, ದೇವರ ನಂದಾದೀಪ ಉರಿಸಲು ಅವಶ್ಯಕವಾಗಿದ್ದರಿಂದ ಅದನ್ನು ತಯಾರಿಸುವ ಗಾಣಗಳು ಹಳ್ಳಿಯಲ್ಲಿ ಹುಟ್ಟಿಕೊಂಡಿರಬೇಕು. ಅಂತೆಯೇ ಗಾಣೆದೆಣ್ಣೆ ತಯಾರಿಸುವ ಗಾಣಿಗರು, ಗಾಣಗಳು ಅದನ್ನು ಅಳೆಯುವ ಮಾಪನಗಳು, ಮಾರುವ ತೆಲ್ಲಿಗರು, ಅವರದ್ದೇ ಆದ ಸಂಘ ಇತ್ಯಾದಿಯಾಗಿ ಶಾಸನಗಳಲ್ಲಿ ಉಲ್ಲೇಖ ಕಂಡುಬರುತ್ತದೆ. ಜಿಲ್ಲೆಯ ಅಂಟೂರತಾಣ ಶಾಸನವೊಂದು ದಿಂಡೋವಳಿಯ ಪರ್ವ್ವದ ಅಂಗಡಿಯಲೆಣ್ಣೆಮಾನ ೧ ನಂದಾದೀಪಕ್ಕೆ ಗಾಣದಲರ್ದ ಸೊಳಸೆಗೆಣ್ಣೆ ಅದನ್ನು ತಯಾರಿಸುವ ತೆಲ್ಲಿಗರ ಉಲ್ಲೇಖ ನೀಡುವುದು.[೬೩] ಇಟಗಿಯ ಶಾಸನ ದೇವರ ನಂದಾದೀಪಕ್ಕೆ ತೆಲ್ಲಿಗರು ಮನೆಯ ಸಹಿತ ಗಾಣ ೨ ಬಿಟ್ಟಿರುವುದಾಗಿ.[೬೪] ಕುಕನೂರಿನ ಶಾಸನ ಉಲ್ಲೇಖಿಸುತ್ತದೆ ಮತ್ತು ಮಲ್ಲಿಕಾರ್ಜುನ ದೇವರ ನಂದಾದೀಪ ದಿನನಿತ್ಯ ಉರಿಯಲು ೨ ಗದ್ಯಾಣ ಹಾಗೆಯೇ ಗಾಣಕ್ಕೆ ತೆರಿಗೆಯಿಂದ ಮನ್ನಾಮಾಡಿ ಗಾಣ ೧ ಬಿಟ್ಟರೆಂದು ಹೇಳುತ್ತದೆ.[೬೫] ಇದಲ್ಲದೆ ಮಾದಿನೂರ,[೬೬] ಅಳವಂಡಿ,[೬೭] ಚಳಗೇರಿ,[೬೮] ಪುರ,[೬೯] ಅಳವಂಡಿ,[೭೦] ಇಟಗಿ,[೭೧] ಪುರ,[೭೨] ಕಲ್ಲೂರ,[೭೩] ತಳಗೇರಿ,[೭೪] ಅಂಟೂರತಾಣಾದ[೭೫] ಶಾಸನಗಳು ಸಹ ಹೇಸರಿಸುತ್ತಿದ್ದು ತೆಲ್ಲಿಗರನ್ನು, ಗಾಣಗಳನ್ನು, ಅವರ ಸಂಘಗಳನ್ನು, ಅವರ ಅಂಗಡಿಗಳನ್ನು ಕುರಿತು ಹೇಳುವಲ್ಲಿ ಅಂದು ಎಣ್ಣೆ ಉತ್ಪಾದನೆಯು ಅಂದು ಬೃಹತ್ ಪ್ರಮಾಣದಲ್ಲಿ ತಯಾರಿಸಲಾಗುತ್ತಿತ್ತೆಂದು ಗೋತ್ತಾಗುತ್ತದೆ.

ಹೀಗೆ ಎಣ್ಣೆಯ ಬಳಕೆ ಅಂದು ಸಾರ್ವತ್ರಿಕವಾಗಿದ್ದರಿಂದ ಅದರ ಗಾಣಗಳು ಎಲ್ಲ ಗ್ರಾಮಗಳಲ್ಲಿದ್ದಿರುವುದಾಗಿ ಗಾಣಕ್ಕೆ ತೆರಿಗೆಯಿಂದ ಮನ್ನಾಮಾಡಿ ಗಾಣ ೧ ಬಿಟ್ಟರೆಂಬ ಅಂಶ, ಎಣ್ಣೆಗಾಣದ ಕೈಗಾರಿಕೆಯಿಂದ ಸರಕಾರಕ್ಕೆ ತೆರಿಗೆ ಬರುತ್ತಿತ್ತೆಂದು, ತೆಲ್ಲಿಗರು ವಾಸಿಸುವ ಸ್ಥಳ 'ತೆಲ್ಲಿಗಗೇರಿ' ಯಾಗಿದ್ದವೆಂದು 'ತೆಲ್ಲಿಗರೈವತ್ತೊಕ್ಕಲು' ಅವರು ಕಟ್ಟಿಕೊಂಡ ಸಂಘಗಳಾಗಿದ್ದವೆಂದು ತಿಳಿದುಬರುತ್ತದೆ.

## ಬೆಲ್ಲ ಸಕ್ಕರೆಗಳು

ಪುರ[೭೬] ಆನೆಗೊಂದಿ[೭೭] ಶಾಸನಗಳು ಬೆಲ್ಲದ ಬಗ್ಗೆ ಉಲ್ಲೇಖ ನೀಡುವುದರಿಂದ ಬೆಲ್ಲ ಸಕ್ಕರೆಗಳು ಸಹ ನಿತ್ಯದ ಆಹಾರ ಪಾನೀಯಗಳಾಗಿದ್ದವೆಂದು ಮತ್ತು ಅಂದು ಇವುಗಳನ್ನು ಉತ್ಪಾದಿಸುತ್ತಿದ್ದರೆಂದು ಗೊತ್ತಾಗುತ್ತದೆ.

## ಉಪ್ಪು ತಯಾರಿಕೆ

ಮನುಷ್ಯನ ಜೀವನಾಂಶಕ ಪದಾರ್ಥಗಳಲ್ಲೊಂದಾದ ಉಪ್ಪು ಕೂಡಾ ಆಹಾರ ಪದಾರ್ಥಗಳಲ್ಲಿ ಅತ್ಯವಶ್ಯಕವಾಗಿತ್ತು '' ಉಪ್ಪಿಗಿಂತ ರುಚಿಯಿಲ್ಲ ತಾಯಿಗಿಂತ ಬಂಧುವಿಲ್ಲ'' ಎಂಬ ಗಾದೆ ಮನೆಮಾತಾಗಿತ್ತೆಂದು ಈ ಮೇಲೆ ಉಲ್ಲೇಖಿತ ಶಾಸನಗಳಿಂದ ತಿಳಿದು ಬರುತ್ತದೆ. ಉಪ್ಪು ತಯಾರಿಕೇಯ ನೇರ ಉಲ್ಲೇಖ ಶಾಸನಗಳಲ್ಲಿ ದೊರೆಯುವದಿಲ್ಲವಾದರೂ ಬೇರೆ ಬೇರೆ ಪದಾರ್ಥಗಳ ಕುರಿತು ಹೇಳುವಾಗ ಶಾಸನಗಳಲ್ಲಿ ಉಪ್ಪಿನ ವಿಷಯ ಬರುತ್ತದೆ. ಹೀಗಾಗಿ ಅಂದು ಉಪ್ಪನ್ನು ತಯಾರಿಸುತ್ತಿದ್ದರಿಂದು ಹೇಳಲು ಅವಕಾಶವಿದೆ.

## ಬಟ್ಟೆ ತಯಾರಿಕೆ

ಇಲ್ಲಿಯ ಪುರ ಶಾಸನ ಮಗ್ಗದ ಕುರಿತು [೭೮] ಅಂಟೂರರಾಣಾದ ಶಾಸನ ಹತ್ತಿ ಮತ್ತು ನೂಲಪರ್ವಕ್ಕೆ ನೂಲುಹುಣ್ಣಿಮೆಯ ಹಬ್ಬಕ್ಕೆ ಯೊಕ್ಕಲಲೊಂದು ನೂಲು ಕಳುಹಿದರೆಂದು[೭೯] ಕ್ರಿ.ಶ. ೧೨೬೮ ರ ಅಳವಂಡಿ ಶಾಸನ ಬಟ್ಟೆಯ ಕುರಿತು, ಕ್ರಿ.ಶ. ೧೧೨೫ ರ ಕಲ್ಲೂರ ಶಾಸನ ಸೀರೆಯ ಮಳವೆಯ ಬಗ್ಗೆ ಉಲ್ಲೇಖಿಸುತ್ತವೆ. ಅದೇ ರೀತಿ ೧೧೩೬ ರ ಮಾದಿನೂರು ಶಾಸನ ಬಟ್ಟೆಯನ್ನು, ಮುಧೋಳ ಶಾಸನ ಮಗ್ಗದಿಂದ ತಯಾರಿಸಲ್ಪಟ್ಟ ಸೀರೆಯ ದಿಂಡಿನ ಭಂಡಿಗೆ ಪಣ ೧ ಜವುಳದ ಸೀರೆಗೆ ವೀಸ ೧ ರ ಉಲ್ಲೇಖಗಳು[೮೦] ನೋಡಲಾಗಿ ಬಟ್ಟೆತಯಾರಿಸುವ ಕೈಗಾರಿಕೆ ಮತ್ತು ಅದರ ವ್ಯಾಪಾರ ಈ ಭಾಗದಲ್ಲಿ ನಡೆಯುತ್ತಿರುವುದಾಗಿ, ವ್ಯಾಪಾರಿಗಳು ತೆರಿಗೆಯಿಂದ ಸುಂಕದ ಆದಾಯವನ್ನು ದಾನಗಳ ರೂಪದಲ್ಲಿ ದೇವಾಲಯಗಳಿಗೆ ಬಿಟ್ಟಿರುವುದಾಗಿ ತಿಳಿದುಬರುತ್ತದೆ. ಸಮಕಾಲಿನ ವಚನ ಸಾಹಿತ್ಯದಲ್ಲಿ ಹತ್ತಿಯಿಂದ ರಾಟೆಯಲ್ಲಿ ನೂಲು ತೆಗೆಯುತ್ತಿದ್ದ ಉಲ್ಲೇಖನೀಡುತ್ತದೆ. ರಾಟೆಯನ್ನು ಕೈಯಲ್ಲಿ ಹಿಡಿದು ತಿರುಗಿಸುತ್ತಾ ನೂಲು ತೆಗೆಯುತ್ತಿದ್ದರೆ ಆ ನೂಲು ಕದಿರಿನಲ್ಲಿ ಸುತ್ತಿಕೊಳ್ಳುತ್ತಿತ್ತು. ಹೀಗೆ ನೂತ ನೂಲನ್ನು ನೆಯ್ಗೆಯವರಿಗೆ ಮಾರುತ್ತಿದ್ದರು. ಈ ನೂಲಿನಿಂದ ವಸ್ತ್ರವನ್ನು ತಯಾರಿಸುವವರು ಜೇಡರಾಗಿದ್ದು, ಅವರಲ್ಲಿ ವಚನಕಾರ ಜೇಡರದಾಸಿಮಯ್ಯ ಪ್ರಮುಖನಾಗಿದ್ದನೆಂಬುದನ್ನು ವಚನಗಳಿಂದ ತಿಳಿದುಬರುತ್ತದೆ.[೮೧] ನೂಲನ್ನು ನೇಯುವುದಕ್ಕಾಗಿ ಮಗ್ಗವನ್ನು ಬೆಳೆಸುತ್ತಿರುವುದಾಗಿ ಪುರ ಶಾಸನ ಮಗ್ಗದ ಬಗ್ಗೆ ಉಲ್ಲೇಖಿಸಿರುವುದನ್ನು ಇಲ್ಲಿ ಗುರುತಿಸಲಾಗಿದೆ. ಇದಲ್ಲದೆ ಕಮ್ಮಾರರು, ಬಡಿಗರು, ಕುಂಬಾರರು, ಮಾಲೆಗಾರರು (ಮಾಲೆ ತಯಾರಿಸುವರು) ಎಲೆ ಮಾರುವ ತಂಬುಲಿಗರು ಕೂಡಾ ಸಮಸ್ತ ಜನರಿಗಾಗಿ ಬೇಕಾಗುವ ವಸ್ತುಗಳನ್ನು ತಯಾರಿಸಿ ಪೂರೈಸುತ್ತಿರುವುದಾಗಿ ತಿಳಿದುಬರುತ್ತದೆ.

## ಗಣಿ ಕೈಗಾರಿಕೆ

ಪ್ರಾಚೀನ ಮತ್ತು ಮಧ್ಯ ಕಾಲಿನ ಕರ್ನಾಟಕದ ಪ್ರಾಚೀನರ ಚರಿತ್ರೆಯನ್ನು ಅಧ್ಯಯನ ಮಾಡಿದಾಗ ಪ್ರಾಚೀನರು ಕಬ್ಬಿಣ, ಚಿನ್ನ, ಬೆಳ್ಳಿ, ಕಂಚು, ತಾಮ್ರ, ಸೀಸ ಇತ್ಯಾದಿ ಲೋಹಗಳನ್ನು ಅರಿತಿರುವುದನ್ನು ನವಶಿಲಾಯುಗದಿಂದಲೇ ತಿಳಿಯುತ್ತೇವೆ.[೮೨] ಇದು ಇತಿಹಾಸ ಕಾಲದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಬೆಳೆದು ಕೊಂಡು ಬಂದಿತ್ತು.[೮೩] ಶಾಸನಗಳು ನಾಣ್ಯಗಳ ಕುರಿತು ಹೆಸರಿಸುತ್ತಿದ್ದು, ಇದರಿಂದ ಲೋಹಗಳ ಗಣಿಗಳು ನಾಡಿನ ಬೇರೆ ಬೇರೆ ಭಾಗಗಳಲ್ಲಿದ್ದಂತೆ ಕೊಪ್ಪಳ ಜಿಲ್ಲೆಯಲ್ಲಿರುವದನ್ನು ನಾವು ಅಲ್ಲಗಳೆಯುವಂತಿಲ್ಲ. ಇವು ರಾಜ್ಯದ ಆದಾಯವನ್ನು ಹೆಚ್ಚಿಸುವ ಪ್ರಮುಖ ಕೈಗಾರಿಕಾ ಘಟಕಗಳಾಗಿದ್ದವು.

## ಸಾಲದ ಮತ್ತು ಮಾರಾಟದ ಸೌಲಭ್ಯ

ವಸ್ತುಗಳನ್ನು ಮಾರಾಟ ಮಾಡುವ ಸಂದರ್ಭದಲ್ಲಿ, ವ್ಯಾಪಾರ, ಉದ್ಯೋಗ ಮಾಡುವಾಗ ಸಾಲದ ಅವಶ್ಯಕತೆಉಂಟಾಗುತ್ತಿತ್ತು. ಆಗ ಜನರು ಶ್ರೀಮಂತರಿಂದ ಬಡ್ಡಿರೂಪದಲ್ಲಿ ಸಾಲ ಪಡೆದು ಬಡ್ಡಿ

ನೀಡುತ್ತಿರುವುದಾಗಿ[೮೪] ಶಾಸನಗಳಿಂದ ತಿಳಿದುಬರುತ್ತದೆ. ಅಳವಂಡಿ ಶಾಸನವು ''ಪೊಯ್ದ ಶೆಟ್ಟಿಯಂ ಗಡಿಯಾ ತೆಂಕಣಂ ಗಡಿ - ೧, ತೆಲ್ಲಗಗೇರಿಯ ತಲೆಯಂಗಡಿಳ, ಮತ್ತಂ ಕೇಸಿಮಣ್ಣಿನ ಕೆಯ್ಯಲು ನಾನೂರ್ವರು ವರ್ಷಕ್ಕೆ ಹೊಂಗೆಪಣ - ವಡ್ಡ ಬಡ್ಡಿಯಂ ಕೊಂಡ ಗದ್ಯಾಣ ೧೭೨ ಕ್ಕೆ ಹೊನ್ನ ದೇವರಂಗ ಭೋಗಮಂ'' ಎಂಬ ನಿದರ್ಶನವು ಅಂದು ಬಡ್ಡಿವ್ಯವಹಾರ ನಡೆಯುತ್ತಿತ್ತೆಂಬುದಕ್ಕೆ ಸಾಕ್ಷಿ ಒದಗಿಸುತ್ತದೆ.[೮೫]

## ವಾಣಿಜ್ಯ ವ್ಯವಹಾರ

ಗ್ರಾಮಗಳ ಹಾಗೂ ಊರು, ಪುರಗಳಲ್ಲಿರುವ ಸಂತೆಗಳು, ಅಂಗಡಿಗಳು ವಾಣಿಜ್ಯ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ರೈತರು ತಾವು ಬೆಳೆದ ವಸ್ತುಗಳನ್ನು ಸಂತೆಗಳಲ್ಲಿ ತಂದು ಮಾರಾಟ ಮಾಡಿ ಅಂಗಡಿಗಳಲ್ಲಿ ತಮಗೆ ಬೇಕಾದ ವಸ್ತುಗಳನ್ನು ಖರೀದಿಸುತ್ತಿದ್ದರು. ವ್ಯಾಪಾರಿಗಳು ಸಹ ರೈತರಿಂದ ಪಡೆದ ದವಸ ಧಾನ್ಯಗಳನ್ನು ಎತ್ತು, ಕತ್ತೆ, ಕೋಣ, ಚಕ್ಕಡಿಗಳ ಮೇಲೆ ಹೊತ್ತುಕೊಂಡು ಹೋಗಿ ಸಂತೆಗಳಲ್ಲಿ ಮಾರಾಟ ಮಾಡುತ್ತಿರುವುದಾಗಿ[೮೬] ಕೊಪ್ಪಳ ಜಿಲ್ಲೆಯ ಶಾಸನಗಳು ಉಲ್ಲೇಖಿಸಿವೆ. ಅಳವಂಡಿ ಶಾಸನ ಕಡಬಗೇರಿಯಲ್ಲಿಯ ಬಡಗಲಂಗಡಿ, ಪೊಯ್ದಶೆಟ್ಟಿಯಂಗಡಿ, ತೆಂಕಣಂಗಡಿ, ತಲೆಯಂಗಡಿಗಳನ್ನು ಹೆಸರಿಸಿದರೆ, [೮೭]ಅಂಟೂರಠಾಣ ಶಾಸನ ಅಂಗಡಿ, ಸಂತೆಯಲ್ಲಿ ವ್ಯಾಪಾರಮಾಡುವ ವಿವಿಧ ವೃತ್ತಿವುಳ್ಳ ವ್ಯಾಪಾರಸ್ಥರ ಬಗ್ಗೆ ತಿಳಿಸುವದು.[೮೮] ಹನುಮನಾಳ ಶಾಸನ ತಾಂಬುಲಿಗ ಸಾಸಿರ್ವರು ವ್ಯಾಪಾರಕ್ಕಾಗಿ ಎತ್ತುಗಳನ್ನು ಬಳಸಿಕೊಂಡ ವ್ಯಾಪಾರಿಗಳನ್ನು ಉಲ್ಲೇಖಿಸುತ್ತದೆ. [೮೯] ಹೆಸರೂರ ಶಾಸನ ಅಂಗಡಿ, ವ್ಯಾಪಾರ ಮಾಡುತ್ತಿರುವ ಶೆಟ್ಟಿಗಳ ಬಗ್ಗೆ ತಿಳಿಸುವುದು [೯೦] ಕಲ್ಲೂರ [೯೧] ಮತ್ತು ಮುಧೋಳು [೯೨] ಶಾಸನಗಳು ದವಸ ಧಾನ್ಯಗಳನ್ನೆ ವ್ಯಾಪಾರಕ್ಕೆ ಕೊಂಡೆಯುವ ಬುಟ್ಟಿ, ಸಾಂಬರ ಪದಾರ್ಥಗಳನ್ನು ಹೊತ್ತೊಯ್ಯುವಾಗ ಎತ್ತು, ಕತ್ತೆ, ಕೋಣಗಳನ್ನು, ಅವರು ಬಳಸುವ ಅಳತೆಮಾಪನಗಳನ್ನು, ನಾಣ್ಯಗಳನ್ನು ಉಲ್ಲೇಖಿಸುವವು. ಕುಕನೂರು ಶಾಸನ [೯೩] ಅಂಗಡಿ-ಸಂತೆಗಳನ್ನು ಚಳಗೇರಿ ಶಾಸನ [೯೪] ಸಂತೆ ಅಂಗಡಿಗಳಲ್ಲಿ ಮಾರಲ್ಪಡುವ ಎಣ್ಣೆ, ದವಸಧಾನ್ಯಗಳನ್ನು, ಜೋಳ, ಭತ್ತ, ಅಡಿಕೆ, ಎಲೆ, ಅರಸಿನ, ಮೆಣಸು, ರಾಸ, ಪಂಚವಣ್ಣಿಕೆ, ಸಜ್ಜೆ, ಬಾಳಿ, ತೆಂಗು, ಹಲವು, ಮಾವು, ನಿಂಬೆ, ಅರೆನೆರಲು ಕಿತ್ತಾಳೆ ಬಗ್ಗೆ ಹೇಳಿದರೆ, ಪುರಶಾಸನ [೯೫] ಕಣಗಿಲೆ, ಕೊಂಚವಾಳ, ಬೆಲ್ಲ, ಸೇವಂತಿಗೆ, ಮಲ್ಲಿಗೆ ಸಂಪಿಗೆಯ ಮಾರಾಟದ ಬಗ್ಗೆ ತಿಳಿಸುವುದು.

ರಾಜಧಾನಿ ಪಟ್ಟಣ(ಕಂಪಣ) ಗಳಂತಹ ಪ್ರಮುಖ ಸ್ಥಳಗಳು ವಾಣಿಜ್ಯ ಕೈಗಾರಿಕೆಗಳ ಉತ್ಪಾದನೆಯ ಮುಖ್ಯ ಸ್ಥಳಗಳಾಗಿದ್ದವು [೯೬] ಈ ಭಾಗದಲ್ಲಿ ಕುಕನೂರು, ಇಟಗಿ, ಮಾದಿನೂರು , ಕರಡಿಕಲ್ಲು, ಅಳವಂಡಿ, ಕವಲೂರು, ಕಲ್ಲೂರು, ಗೋತಗಿ, ಅಂಟೂರಠಾಣ, ಆನೆಗುಂದಿ ಗ್ರಾಮಗಳು ಪ್ರಾಚೀನ ಕಾಲದಲ್ಲಿ ವ್ಯಾಪಾರದ ಮುಖ್ಯ ಕೇಂದ್ರಗಳಾಗಿದ್ದವು. ಆನೆಗುಂದಿಯ ಶಾಸನವೊಂದು ೧೮ ಪಟ್ಟಣಗಳು, ೧೮ ಜಾತಿಗಳ ಉಲ್ಲೇಖ ನೀಡುತ್ತಿದ್ದು[೯೭] ಈ ಪಟ್ಟಣಗಳ ಬೀದಿಗಳಲ್ಲಿ ಅಂಗಡಿಗಳು ಸಂತೆಗಳು ಇರುತ್ತಿದ್ದ ಬಗ್ಗೆ ಉಲ್ಲೇಖ ನೀಡುತ್ತದೆ. ಕುಕನೂರು ಶಾಸನ ಸಂತೆ, ಬೀದಿ ಕಟ್ಟಡಗಳು ೧೮ ಕೇರಿಗಳ ವರ್ಣನೆ ನೀಡುವುದು.[೯೮] ಮುಧೋಳ ಶಾಸನ

ಐಯ್ಯಾವೊಳೆ ಐನೂರ್ವ್ವರು, ಎಂಟನಾಡ ಹದಿನಾರು ಸಮಸ್ತ ಮುಮ್ಮ ರಿದಂಡಗಳು ನಾನಾ ದೇಶಿಗಳೆಂಬ ಬೇರೆ ಬೇರೆ ವ್ಯಾಪಾರಿ ಸಂಘದವರು ಮುಧುವೊಳಲದಲ್ಲಿ ಸಭೆ ಸೇರಿ [೯೯] ಆ ಗ್ರಾಮದ ಗವರೇಶ್ವರ ದೇವರ ಅಂಗಭೋಗ, ಜೀರ್ಣೋದ್ಧಾರಕ್ಕಾಗಿ ಸುಣ್ಣ ಬಳೆಯಲು, ಗಂಧ, ಕುಂಕುಮ, ಕರ್ಪೂರ ಮುಂತಾದವುಗಳನ್ನು ನಡೆಯುವಂತಾಗಲು ತಾವು ಸಂತೆಯಲ್ಲಿ ತೂಗುವ, ಎಣಿಸುವ ಸಮಸ್ತ ಧಾನ್ಯವನ್ನು ಮಾರಿದಲ್ಲಿ ಚಿನ್ನ ಕಾಣಿ ಎರಡು, ಸಿರೆಯದಿಂಡಿನ ಬಂಡಿಯೊಂದಕ್ಕೆ ೧ ಪಣ, ಎತ್ತಿನ ಮೇಲಿನ ಮಳವೆಗಳ ವೀಸ ಇತ್ಯಾದಿಯಾಗಿ ದೇವರಿಗೆ ಬಿಟ್ಟ ದೃಷ್ಟಾಂತಗಳು ನಿಜಕ್ಕೂ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ಸರಕುಗಳನ್ನು ಪ್ರಾಣಿಗಳ ಬೆನ್ನಮೇಲೆ ಹೇರಿಕೊಂಡು ಒಂದೆಡೆಯಿಂದ ಮತ್ತೊಂದೆಡೆಗೆ ವ್ಯಾಪಾರರ್ಥವಾಗಿ ಸಾಗಿಸುತ್ತಿದ್ದುದೂ ಉಂಟು. ಹೀಗೆ ಉಪಯೋಗಕ್ಕೆ ಬರುತ್ತಿದ್ದ ಪ್ರಾಣಿಗಳೆಂದರೆ ಎತ್ತು, ಕೋಣ, ಕತ್ತೆಗಳನ್ನು ಬಳಸಿಕೊಂಡು, ಬಂಡಿಗಳ ಮೇಲೆ ಹೇರನ್ನು ಹೇರಿಕೊಂಡು ವ್ಯಾಪಾರಕ್ಕಾಗಿ ಊರಿಂದೂರಿಗೆ ಹೋಗುತ್ತಿದ್ದರು.[೧೦೦]

## ವರ್ತಕರು

ಮಾನವ ಜನಾಂಗದ ಆರ್ಥಿಕ ಬದುಕನ್ನು ರೂಪಿಸಿದ ಹಲವಾರು ಅಂಶಗಳಲ್ಲಿ ವರ್ತಕರು ಮತ್ತು ವರ್ತಕ ಸಂಘಗಳು ಮುಖ್ಯವೆನಿಸಿವೆ. ಏಕೆಂದರೆ ಈ ವರ್ತಕರು ಕೈಕೊಂಡ ವ್ಯಾಪರ ವೃತ್ತಿಯಿಂದ ಸಮಾಜದ ಜೀವನ ಸ್ಥಿತಿ, ನಾಡಿನ ಆರ್ಥಿಕ ಪರಿಸ್ಥಿತಿಗಳು ಒಂದು ಆಕಾರ ಪಡೆಯುತ್ತವೆ.[೧೦೧] ಈ ವಸ್ತು ನಿಷ್ಠತೆಯನ್ನು ಹೊತ್ತು ನಿಂತಿರುವ ಶಾಸನಗಳು ಮಾತ್ರ ಕಾವ್ಯ ಸಾಹಿತ್ಯಕ್ಕಿಂತ ಪ್ರಯೋಜನಕಾರಿಯೆನಿಸಿವೆ ಎಂದು ತಿಳಿಯಬೇಕಾದರೆ ನಾವು ನಾಡಿನ ಪ್ರತಿ ಜಿಲ್ಲೆಯ ಪ್ರಾದೇಶಿಕ ಶಾಸನಗಳನ್ನು ಅಧ್ಯಯನಮಾಡಿದಾಗ ಸ್ಪಷ್ಟಗೊಳ್ಳುತ್ತದೆ.

ಆ ಹಿನ್ನೆಲೆಯಲ್ಲಿ ಶಾಸನಗಳನ್ನು ಅಧ್ಯಯನಿಸಿದಾಗ ವ್ಯಾಪಾರವನ್ನೇ ವೃತ್ತಿಯಾಗಿಸಿಕೊಂಡ, ಸೆಟ್ಟಿ-ಬಣಂಜಿಗ, ಸೆಟ್ಟಿಗುತ್ತ್, ನಖರರು, ಮುಮ್ಮುರಿದಂಡ, ವಡ್ಡವ್ಯವಹಾರಿ, ಗವರೆಗಾತ್ರಿಗ, ಸೆಟ್ಟಿಕಾರ, ಹಲರು, ಎಳಮೆ ಸಾಲಿಕೆ ಬಲ್ಲಾಳುಗಳು ಸಂಘ ರಚಿಸಿಕೊಳ್ಳದ ವಿನಿಮಯ ವರ್ತಕರಾಗಿದ್ದಾರೆ. ಆದುದರಿಂದ ಇವರೆಲ್ಲರನ್ನು ಪ್ರತ್ಯೇಕವಾಗಿ ಪರಿಗಣಿಸಿ ನೋಡಬೇಕಾಗುತ್ತದೆ ಎಂದು ತಿಳಿದ ವಿದ್ವಾಂಸರು ಉತ್ಪಾದನೆ - ವಿನಿಮಯ ಕಾರ್ಯಗಳೆರಡನ್ನು ಮಾಡುವ ಕುಂಬಾರ, ಅಕ್ಕಸಾಲಿ, ಮಾದಿಗ, ಸಮಗಾರ, ಮೇದಾರ, ಮುಂತಾದವರು ಉತ್ಪಾದಕ ವರ್ತಕರಾಗಿದ್ದಾರೆ. ವರ್ತಕ ಸಂಘಗಳಲ್ಲಿ ಅಯ್ಯಾವೊಳೆ ಐನೂರ್ವರು, ತಂಬುಲಿಗ ಸಾಸಿರ್ವರು, ಹಂಜಮಾನಗಳು ವಿನಿಮಯ (ವರ್ತಕ) ಸಂಘಗಳಾಗಿಯೂ ತೆಲ್ಲಿಗರೈವತ್ತೊಕ್ಕಲು, ಮಾಲೆಗಾರ ನಾಲ್ವತ್ತೊಕ್ಕಲು, ತೋಟಗರೈನೂರ್ವರು, ಸಾಲೆಸಾಸಿರ್ವರು, ಅಥವಾ ಸಮಯ ಸಾಸಿರ್ವರು, ಜಿಪ್ಪಿಗ ಗೊತ್ತಳಿ, ಕುರುಬಸೇಣಿ, ಕಂಚಗಾರ ಗೊತ್ತಳಿಗಳು ಉತ್ಪಾದಿಕ ವಿನಿಯಮ ಸಂಘಗಳಾಗಿಯೂ ಗುರ್ತಿಸಿದ್ದಾರೆ.[೧೦೨]

## ವಿನಿಮಯ ವರ್ತಕರು

ಬಣಂಜಿಗ ಸಂಸ್ಕೃತದ ವಣಿಜಗವಾಗಿದ್ದು ಶ್ರೇಷ್ಠ ಎನ್ನುವ ಪದಗಳ ಕನ್ನಡ ರೂಪ ಬಣಂಜಗವಾಗಿದೆ. ಸೆಟ್ಟಿ ಮೂಲದಲ್ಲಿ ವಣಿಜವೃತ್ತಿ ಸೂಚಿಯಾಗಿ ನಂತರ ಜಾತಿ ಸೂಚಕವಾಗಿ ಬೆಳೆದು ಬಂದಿರುವಂತೆ ಶಾಸನಗಳ

ಅಧ್ಯಯನದಿಂದ ಕಾಣಲು ಸಾಧ್ಯವಾಗಿದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಶಾಸನಗಳು ಇವರನ್ನು ಬಣಂಜಿಗ, ವೀರಬಣಂಜಿಗ ಸೆಟ್ಟಿಯರೆಂದು ಗುರ್ತಿಸಿವೆ. ವರ್ತಕರ ಸಮಾನರ್ಥ ಶಬ್ದಗಳ ವ್ಯಾಪಾರ ವೃತ್ತಿಯನ್ನು ಜೀವನೋಪಾಯದ ಸಾಧನವನ್ನಾಗಿಸಿಕೊಂಡವರು ಬಣಂಜಿಗರು ಅಥವಾ ಶೆಟ್ಟಿಗರು ಇವರು ತಮ್ಮ ಸರಕುಗಳನ್ನು ಎತ್ತು, ಕತ್ತೆ, ಕೋಣಗಳ ಮೇಲೆ ಹೇರಿಕೊಂಡು ತಲೆಯ ಮೇಲೆ ಹೊತ್ತುಕೊಂಡು ಹೋಗಿ ಸಂತೆ-ಪಟ್ಟಣಗಳಲ್ಲಿ ವ್ಯಾಪಾರ ವ್ಯವಸಾಯ ಮಾಡುತ್ತಿರುವುದಾಗಿ ಉಲ್ಲೇಖಿಸಿದರೆ [೧೦೩] ಇಲ್ಲಿಯ ಕಲ್ಲೂರ ಶಾಸನವೊಂದು ಭಮ್ಮದೇವನಾಯಕನೆಂಬುವನು ಕುಕನೂರು ೩೦ ರಲ್ಲಿ ಯಾವ ಸ್ಥಳದಲ್ಲಾದರು ದೇವಾಲಯದ ಬಯಲಿಗೆ ಅಡಿಕೆ, ಮೆಣಸು ಸಿರೆಮಳವೆ ಅರಸಿನ ಮಳವೆ, ಅಲ್ಲದ ಮಳವೆ, ನೀಲಿಯ ಕೋಡ, ಎತ್ತು ಕತ್ತೆ, ಕೋಣ ಮುಂತಾದವುಗಳ ಮೇಲೆ ಹೊತ್ತು ಬಂದು ವ್ಯಾಪಾರ ಮಾಡುತ್ತಿದ್ದರೆ ಅದಕ್ಕೆ ಒಂದು ದಶವಂದವಾಗಿ ಸುಂಕ ನೀಡಬೇಕೆಂದು ಮತ್ತು ಸುಂಕವನ್ನು ಅಧಿಕಾರಿ ಜಕ್ಕರಾಜನು ಆಕರಿಸುತ್ತಿದ್ದನೆಂದು ಹೇಳುತ್ತದೆ. [೧೦೪] ಮುಧೋಳ ಶಾಸನ ಅಯ್ಯಾವೊಳೆ ಐನೂರ್ವರು, ಎಂಟನಾಡ ಪದಿನಾರು, ಸಮಸ್ತ ಮುಮ್ಮುರಿದಂಡಗಳು, ನಾನಾ ದೇಶಿಗಳು ಸೇರಿ ಮಹಾನಾಡಾಗಿದ್ದು ಮುಧೋಳದ ಗವರೇಶ್ವರ ದೇವರಂಗಭೋಗ ಮಾಟಕೂಟದ ಜೀರ್ಣೋದ್ಧಾರ, ಸುಣ್ಣ ಬಳೆಯಲು ಗಂಧ, ಕರ್ಪೂರ, ಕುಂಕುಮ ಮುಂತಾದವು ನಡೆಯುವಂತಾಗಲು ದೇವರಿಗೆ ದಾನ ನೀಡುತ್ತಾರೆ. ತಾವು ಅಳೆಯುವ, ತೂಗುವ, ಎಣಿಸುವ ಸಮಸ್ತ ಧಾನ್ಯವನ್ನು ಮಾರಿದಲ್ಲಿ ಚಿನ್ನದ ಕಾಣಿ ಎರಡು ಸೇರೆಯದಂಡಿನ ಬಂಡಿಯೊಂದಕ್ಕೆ ಒಂದು ಪಣ, ಎತ್ತಿನ ಮೇಲಿನ ಮಳವೆಗೆ ಐದು ವೀಸ, ಕತ್ತೆಯ ಮೇಲಿನ ಮಳವಿಗೆ ಎರಡು ವೀಸ ತಲೆಯ ಮೇಲೆ ತರುವ ಜವಳಿಯ ಸೀರೆಗೆ ಒಂದು ವೀಸವನ್ನು ದೇವರಿಗೆ ಬಿಟ್ಟಿರುವರು. [೧೦೫]

ಈ ವ್ಯಾಪಾರಿಗಳು ಸರಕು ಹೇರುವ ಬಣಂಜಿಗ, ಹೇರುವ ಸೆಟ್ಟಿಗರು ವ್ಯಾಪಾರ ನಿರ್ವಹಿಸುವ ವರ್ತಕರ ಗುಂಪಿಗೆ ಸೇರುತ್ತಾರೆ. ಇಲ್ಲಿ ಉಲ್ಲೇಖಿಸ್ಪಟ್ಟ ಎಂಟನಾಡ ಹದಿನಾರು ಜನ ಶೆಟ್ಟಿಗರೆಂದು ತಿಳಿಯುತ್ತದೆ. [೧೦೬] ಕೂಕನೂರಿನ ಶಾಸನ ಅಂತಃ ಸೆಟ್ಟಿಯರಲ್ಲೊಬ್ಬನಾದ ಈಶ್ವರ ಸೆಟ್ಟಿಯ ಬಗ್ಗೆ, [೧೦೭] ಅಂಟೂರರಾಣ ಶಾಸನ [೧೦೮] ಸೆಟ್ಟಿಯರು ಮುಮ್ಮುರಿ ದಂಡ ಕಟಕದ ಗಾತ್ರಗ ಸೋರಹಜಕ್ಕಿಸೆಟ್ಟಿ, ಸೆಟ್ಟಿಯಣ, ಬಾದಾಮಿಯ ಬಲದೇವ ಕೋಟೆಯಲ್ಲಮ ಕೊಡೆಯಬಮ್ಮಸೆಟ್ಟಿ, ಹೆಟ್ಟಿಯ ಮಾಳಿಸೆಟ್ಟಿ, ಕೋಣಂಗೇರಿಯಯ್ಯಿಸೆಟ್ಟಿ, ರೇವಗೆತಿ ಸೆಟ್ಟಿ, ಸಿಂಗೆಯಗೇತಿಸೆಟ್ಟಿ, ಕರಿಯ ಕೇತಿಸೆಟ್ಟಿ, ಮಣ್ಣಿಕದಾಸೆಸೆಟ್ಟಿ, ಹಗಲ ಕಲೆಯ ಬಾಚಿಸೆಟ್ಟಿ, ಮೇಗಣಗೆರೆಯ ಚಂಡಿಸೆಟ್ಟಿ, ಹರಿಯಪಸೆಟ್ಟಿ, ಚಾಳಯ್ತ ವಯ್ಯಾ್ಮಸೆಟ್ಟಿ, ಹಳ್ಳಯನ ಸೋವಿಸೆಟ್ಟಿ ಹಾವೇರಿಯ ಸೇನಭೋವ ಸೆಟ್ಟಿಯವರೆ ಪ್ರಮುಖವಾಗಿ ಗಾತ್ರಿಗ ಸಾಸಿರ್ವ್ವರ ಕಯ್ಯಲು ಗಾತ್ರರ್ಕ್ಕೆ ಪಣಮಂ ಪಡೆದು ಗಾತ್ರಿಗರ ಕಯ್ಯಲು ದಾರಾಪೂರ್ವಕಂ ಮಾಡಿಸಿಕೊಣ್ಡಂ ॥ ಎಂಬ ಅನೇಕ ಸೆಟ್ಟಿಗಳ ವಿವರಣೆ ನೀಡುವುದು. ಅದರಂತೆ ಹನುಮನಾಳ ಶಾಸನವು ಸಹ ವೀರ ಬಣಂಜುಧರ್ಮ ಸೇರಿದ ಮಲೆಯರು, ಸಿಂಗಿ ಸೆಟ್ಟಿ, ಕೇತಿಸೆಟ್ಟಿ, ರೇಯವಗೇತಿಸೆಟ್ಟಿ, ಮಂಗಲದ ಕಲೆಯ ಬಾಚಿ ಸೆಟ್ಟಿ ಬಾದಾಮಿಯ ಬಾತಿದೇವ ಸೆಟ್ಟಿ, ಹಾವೇರಿಯ ಹೆಚಿಸೆಟ್ಟಿ, ತಿಳವಳ್ಳಿಯ ಕಲಿಯಮ್ಮ ಸೆಟ್ಟಿ, ಮೊತ್ತಕಾರ ಸಿರಿಯಸೆಟ್ಟಿ, ಕಾಬಿಯ ಕೇತಿ ಸೆಟ್ಟಿ ಕೆರವೂರ ಎಡವಚಟ್ಟ ಸೆಟ್ಟಿ, ಸಿಗ್ಗಾವೆಯ

ಭರವಸೆಟ್ಟಿ ನಿಟ್ಟಿ ಸಿಂಗಿಯ ಬಬ್ಬುಳ ಸಿರಿಸೆಟ್ಟಿ ತುಗೆರೆಯ ಹೊರಿಸೆಟ್ಟಿ ಹುದ್ದಮನ ಸೋವಿಸೆಟ್ಟಿ. ಗಾಂಜಿವೂರ ಅರಿಯ ಪಲ ಸೆಟ್ಟಿ ರಾಜಪೂರ ನಾಗುಲಸೆಟ್ಟಿ ಚಮಣ್ಣಯ್ಯಸೆಟ್ಟಿಯನ್ತಿನಿಬರುಂ ತಂಬುಲಿಗ ಸಾಸಿರ್ವರು ಗವರೆಯ ಗಾತ್ರಿಗರು ಅಷ್ಟೇಶಸೆಟ್ಟಿಯರು ಸೇರಿ ಕಿಸು ಕಾಡೆಪ್ಪತ್ತರ ಬಳಿಯ ಬಾಡದ ಆಲುಂಗೇರಿಯ ಸಿಂಗಗಾಮುಂಣ್ಡಂ ಎಂಬ ವೀರನುಕೂಡಿಕೊಂಡು ತಂಬುಲಿಗ ಸಾಸಿರ್ವ್ವರ ಎತ್ತು ಮುಂತಾದವುಗಳನ್ನು ಕಳ್ಳಕಾಕರಿಂದ ಬಿಡಿಸಿ ತಂದಾಗ ನೀಡಿದ ದಾನದ ವಿಷಯವನ್ನು ತಿಳಿಸುತ್ತದೆ.[೧೦೯] ಈ ಶಾಸನದಲ್ಲಿ ಉಲ್ಲೇಖಬರುವ ವೀರ ಬಣಜು ಧರ್ಮಕ್ಕೆ ಸೇರಿದ ವಿವಿಧ ಶೆಟ್ಟಿಗಳ ಕುರಿತು ಉಲ್ಲೇಖಿಸುತ್ತದೆ. ಶೈವಕ್ಕೆ ಉಪಾಧಿಯಾಗಿದ್ದಂತೆ ಬಣಂಜು ಪದಕ್ಕೆ ವೀರ ಎಂಬುದು ಉಪಾದಿಯಾಗಿದೆ. ವೀರಬಣಂಜುದವರೆ ವೀರಶೈವರಾದರೆಂದು ಇದು ೧೨ ನೇ ಶತಮಾನದ ಶಾಸನಗಳಲ್ಲಿ ದಟ್ಟವಾಗಿ ಕಾಣಿಸಿಕೊಂಡಿರುವುದು ಕಾಣುತ್ತೇವೆ. [೧೧೦]

ಡಾ. ಬಿ.ರ್. ಹಿರೇಮಠರು ಬೀರವಣಿಗ ಪದದ ಮುಂದೆ ನಾಯಕ ಎಂಬ ಪದದ ಆಧಾರವಾಗಿಟ್ಟುಕೊಂಡು ಅದು ನಾಯಕವೆಂದು ವಾದಿಸುತ್ತ ಅವರು ವ್ಯಾಪಾರಿಗಳಾಗಿರದೆ ಅಧಿಕಾರಿಗಳಾಗಿದ್ದರೆಂದು ಹೇಳಿರುವುದು ಇಲ್ಲಿ ಗಮನಿಸಬೇಕು. ಪುರ ಶಾಸನ ತಿಳಿಸುವ ಕೆಳವಾಡಿ ನಾಡ ಹಿರಿಯ ಬೀರವಣಿಗ ಕವಡೆಯ ಕೇತಿಸೆಟ್ಟಿ ಸಮಸ್ತ ಬೀರವಣಿಗರು ಪ್ರಸ್ತಾಪ [೧೧೧] ಶಿವಪೂರ ಶಾಸನದಲ್ಲಿ ಉಲ್ಲೇಖ ಬರುವ ಮಹಾನಾಡ ಸೆಟ್ಟಿ ಪಟ್ಟಣ ಸ್ವಾಮಿಗಳು, ವಿವಿಧ ಸೆಟ್ಟಿಗುತ್ತರು ಸರಕು ಸಾಗಿಸಿಕೊಂಡು ಪಟ್ಟಣಗಳಿಗೆ ಹೋಗಿ ವ್ಯಾಪಾರ ಕೈಗೊಳ್ಳುತ್ತಿದ್ದರೆಂಬ ಅಂಶ [೧೧೨] ಕ್ರಿ.ಶ. ೧೨ ನೇ ಶತಮಾನದ ಪುರ ಶಾಸನದಲ್ಲಿ ಬಿಟ್ಟಿ ಸೆಟ್ಟಿಯ ದಾಮಿಸೆಟ್ಟಿಯು ಕವತಿಯ ಕೇತಿ ಸೆಟ್ಟಿ ಆಯವತ್ತೊಕ್ಕಲು ಕೆಳವಾಡಿ ನಾಡ ಮನ್ನೆಯಶೆಟ್ಟರು ನಾನಾದೇಶಿಯ ಮುಮ್ಮುರಿ ದಂಡಗಳ ಉಲ್ಲೇಖಬರುವದು.[೧೧೩] ಅದೇ ರೀತಿ ಕೊಪ್ಪಳ ಶಾಸನವು[೧೧೪] ''ಯಕ್ಷಿಯುಪದೇಶದ ಸಾಗರ ದತ್ತ ಸೆಟ್ಟಿ ಸಂಜನಿತ ಮಹೋದಯ ಕುಪಣದೊಳ್ಗೆರದಿಂದ್ರನ ವೈಭವಕ್ಕೆ ಮೇಲಸೆವಿಭುಭೋಪ್ಪಸೆಟ್ಟಿ ನಿಲೆಮಾಡಿದ ನಲೆ ಪುನಪ್ರತಿಷ್ಠಯಿಂ'' ಎಂದು ಹೊಗಳಿದೆ. ಹಾಗೆಯೇ ಇಳಿಯಾಳ ಜಿದ್ದಿ ಸೆಟ್ಟಿಯ ಮಗ ನಾಗಸೆಟ್ಟಿಯನ್ನು ಹೆಸರಿಸಿದೆ[೧೧೫] ಕೊಪ್ಪಳದ ಇನ್ನೊಂದು ಶಾಸನ ಚೊಕ್ಕ ವೊಡೆಯ ನಾಕಿ ಸೆಟ್ಟಿ ಮಗ ಪಟ್ಟಣಸ್ವಾಮಿ ಪಾಯಕಣ್ಣ[೧೧೬] ಆನೆಗುಂದಿಯ ಗೊವಿಸೆಟ್ಟಿಯ ಸೊಸೆ ಸೊವಿಯಕ್ಕೆ[೧೧೭] ಮುಂತಾದವರ ಶಾಸನ ಉಲ್ಲೇಖಗಳು ಬಣಜಿಗರು ಕಟ್ಟಿಕೊಂಡ ಸಂಘ ಅದರ ಸದಸ್ಯರನ್ನು ಅವರು ಕೈಕೊಂಡ ವ್ಯಾಪಾರಿಗಳ ಕುರಿತು ಹೇಳುತ್ತವೆ. ಇವೆಲ್ಲ ಸಾರ್ವತ್ರಿಕ ಸಂಘಗಳಲ್ಲಿ ಗ್ರಾಮ ಸೀಮಿತ ಬಣಜಿಗರ ಸಂಘ ಇಲ್ಲವೆ ಬಣಂಜಿಗರು ಐಯ್ಯಾವೊಳೆ ಐನೂರ್ವರ ವರ್ತಕ ಸಂಘದ ವಂಶಸ್ಥರೋ ಸಂಪ್ರದಾಯದವರೋ ಅಥವಾ ಆ ಸಂಘದ ಸದಸ್ಯರಾಗಿರಬೇಕು.

## ನಕರರು

ನಕರರೆಂದು ಶಾಸನಗಳಲ್ಲಿ ಹೆಸರಾದ ಇವರನ್ನು ಕೆಲವು ಕಡೆ ಅಂಗಡಿ ಸೆಟ್ಟಿಯರೆಂದು ಕರೆಯಲಾಗುತ್ತಿದೆ.[೧೧೮] ಇಲ್ಲಿಯ ಅಂಟೂರ ತಾಣಾ ಶಾಸನ ಉಲ್ಲೇಖಿಸುವ [೧೧೯] ಗಾಮುಣ್ಡಗಳು, ಆಯ್ಯೊರ್ವ್ವರು ಶ್ರೀನಖರಂಗಳು ತಂಬುಲಿಗ ಸೆಟ್ಟಿ ಸಾಸಿರ್ವರು, ತೆಲ್ಲಿಗರು, ಮೊಲೆಗಾರರು ಮೇದರು,

ನಾನ್ನೂರು ಹಾಲು ಉಗರು ಇವರೆಲ್ಲ ಸಂತೆ, ಪೇಟೆಗಳಿಗೆ ಬಂದು ವಿವಿಧ ಸರಕುಗಳನ್ನು ಖರೀದಿಸಿ ಸ್ಥಿರವಾದ ಅಂಗಡಿ ಇಲ್ಲವೆ ಮಳಿಗೆಗಳಲ್ಲಿಟ್ಟು ಮಾರುವ ವ್ಯಾಪಾರಿಗಳಾಗಿದ್ದರೆಂದು ಗೊತ್ತಾಗುತ್ತದೆ.[೧೨೦] ಐನೂರ್ವರು ಎಂಬ ಪದ ಸಂಘಸೂಚಿಯಾಗಿರುವುದರಿಂದ ನಕರವರ್ತಕ ಸಂಘಗಳಲ್ಲಿ ಇದು ಒಂದಾಗಿತ್ತೆಂದು ಸ್ಪಷ್ಟಗೊಳ್ಳುತ್ತದೆ.[೧೨೧] ಕುಕನೂರಿನ ಶಾಸನ 'ನಕರ ಸಮೂಹ ಸಾಧಿಷ್ಠತಂ' ಎಂದು ಹೇಳುವುದನ್ನು ಗಮನಿಸಿದರೆ[೧೨೨] ಈ ಜಿಲ್ಲೆಯಲ್ಲಿ ನಖರರ ಸಮೂಹಗಳಿದ್ದಿರುವುದಾಗಿ ತಿಳಿಯುತ್ತದೆ. ಗ್ರಾಮ ಮತ್ತು ಪಟ್ಟಣಗಳ ಆರ್ಥಿಕಾಭಿವೃದ್ಧಿ, ಧಾರ್ಮಿಕ ಅಭಿವೃದ್ಧಿಯಲ್ಲಿ ಈ ನಖರರು ಮುಖ್ಯ ಪಾತ್ರವಹಿಸಿದ್ದರೆಂದು ಗಮನಿಸಬೇಕಾಗಿದೆ.

## ಮುಮ್ಮುರಿದಂಡ

ಮುಮ್ಮುರಿದಂಡವೆಂಬುದು ವ್ಯಾಪಾರಿಗಳ ಸೈನ್ಯವೆಂಬ ಅಭಿಪ್ರಾಯವನ್ನು ವಿದ್ವಾಂಸರು ವ್ಯಕ್ತಪಡಿಸಿರುವರಾದರೂ ವ್ಯಾಪಾರಿ ವರ್ತಕರಾಗಿದ್ದರೆಂದು ಡಾ. ಬಿ.ಆರ್. ಹಿರೇಮಠರು ಹೇಳಿರುವುದು ಒಪ್ಪಬಹುದಾಗಿದೆ. ಮುಮ್ಮುರಿದಂಡರು ವ್ಯಾಪಾರಿ ಧರ್ಮಕ್ಕೆ ಬದ್ಧರಾದವರಾದುದರಿಂದ ಇವರನ್ನು ಸಮಯ ಮುಮ್ಮುರಿದಂಡಂ ಪಟ್ಟಣ ಸ್ವಾಮಿಗಳಾಗಿ ಪ್ರಖ್ಯಾತರಾಗಿದ್ದ ವಿಷಯ, ಸ್ಥಳದ ಮುಮ್ಮುರಿದಂಡ, ತಳ ಸಮಸ್ತ ಮುಮ್ಮುರಿದಂಡ ಇತ್ಯಾದಿಗಳು ಶಾಸನಗಳಲ್ಲಿ ಉಲ್ಲೇಖಗಳಿದ್ದು ಅಂಟೂರತಾಣಾ ಶಾಸನ[೧೨೩] ಮುಮ್ಮುರಿದಂಡ ಹಸಗಲೊಂದು ಬಾಳಿಹತ್ತಿ ಸತ್ತಿಯಲು ಎಂದು ಉಲ್ಲೇಖಿಸಿದರೆ, ಹನುಮನಾಳ ಶಾಸನ,[೧೨೪] ಶ್ರೀಮದ್‌ಯ್ಯೊರ್ವರಳಸ್ವಾಮಿಗಳು ಅಷ್ಟಾದಸ ಪಟ್ಟಣಮುಂ ದ್ವಾತ್ರಿಂಸವೇಳಾವುರಮುಂ ಎಂದು ಮುಧೋಳ ಶಾಸನ,[೧೨೫] ಶ್ರೀಮದ್ ಐ್‌ವೊಳೆಯಯ್ನಾರ್ವ್ವರು ಎಂಟನಾಡ ಪದಿನಱುವರುಂ ಸಮಸ್ತ ಮುಮ್ಮುರಿದಂಡ ನಾನಾದೆಶಿಯರುಂ ಮಹಾನಾಡಾಗಿದ್ದು೯ ಎಂಬುದನ್ನು ಗಮನಿಸಿದಾಗ ಇವರು ಅಯ್ಯಾವೊಳೆ ಐನೂರ್ವರ ವಂಶದವರೆಂದು ಸ್ಪಷ್ಟಗೊಳ್ಳುವುದು, ಪುರ ಶಾಸನದಲ್ಲಿ ಮುಮ್ಮುರಿದಂಡಗಳು ಅಡಿಕೆ, ಅರಿಸಿನ, ಮೆಣಸು ಮೊದಲಾದವುಗಳ ವ್ಯಾಪಾರ ಮಾಡುತ್ತಿರುವುದಾಗಿ ಉಲ್ಲೇಖ ನೀಡುತ್ತದೆ.[೧೨೬] ಶಿವಪುರ ಶಾಸನ ಮಹಾನಾಡ ಪಟ್ಟಣ ಸ್ವಾಮಿಗಳು ತಾವು ವ್ಯಾಪಾರ ಮಾಡುವ ದವಸಧಾನ್ಯಗಳನ್ನು ಬಿಟ್ಟರೆಂದಿರುವುದು.[೧೨೭] ಪುರ ಶಾಸನ[೧೨೮] ಅಗ್ರಹಾರ ಸಿಂಧನೂರು, ಮಾದಿನೂರು, ನಿಡಗೋಳ ಮುಂತಾದ ಸ್ಥಳೀಯ ಮುಮ್ಮುರಿದಂಡರ ಸಮಸ್ತ ನಾನಾದೇಶಿ ಮುಮ್ಮುರಿದಂಡಗಳು ಮಹಾನಾಡಾಗಿ ದೇವಸಭೆ ಬ್ರಹ್ಮಸಭೆ, ರಾಜ ಸಭೆಯ ಸನ್ನಿಧಾನದಲ್ಲಿ ಸಮಸ್ತರು ಪ್ರಶಸ್ತಿ ಸಹಿತಂ ಸಭೆ ಸೇರಿದ್ದರೆಂದು ಹೇಳುತ್ತದೆ. ಇಲ್ಲಿ ಉಲ್ಲೇಖಗೊಂಡ ನಾನಾದೇಶಿ ಎಂಬುದು ಒಂದು ನಾಡಿನಲ್ಲಿರುವ ಬೇರೆ ಬೇರೆ ಪ್ರದೇಶಗಳಲ್ಲಿಯ ವ್ಯಾಪಾರಿಗಳ ಸಂಘವೆಂದು ಗೊತ್ತಾಗುತ್ತದೆ. ದೇಶಿಯ ವ್ಯಾಪಾರಸ್ಥರ ಸಂಘಗಳ ಉಲ್ಲೇಖಗಳು ಯಲಬುರ್ಗಿ ಶಾಸನದಿಂದ ತಿಳಿಯುತ್ತದೆ. ಇವರ ಕುರಿತು ಕೊಪ್ಪಳ ಜಿಲ್ಲೆಯ ಶಾಸನಗಳಿಂದ ಸ್ಪಷ್ಟವಾಗದೆ ಇದ್ದರು ನೆರೆಯ ಜಿಲ್ಲೆಗಳಾದ ರಾಯಚೂರ, ಬಳ್ಳಾರಿ, ಧಾರವಾಡ, ಬಿಜಾಪೂರ ಜಿಲ್ಲೆಯ ಶಾಸನಗಳಲ್ಲಿ ಸಿಗುವ ಉಲ್ಲೇಖಗಳಿಂದ ಆಯ್ಯಾವೊಳೆ ಐನೂರ್ವರು ನಾಡಿನುದ್ದಗಲಕ್ಕೂ ಸಂಚರಿಸಿ ತಮ್ಮ ವ್ಯಾಪರ ವೃತ್ತಿಯಿಂದ ಹೆಸರಾಗಿದ್ದರೆಂದು ತಿಳಿದುಬರುವುದು.

## ವಡ್ಡ ವ್ಯವಹಾರಿ

ಇದರ ಅರ್ಥ ವೃದ್ಧ> ವಡ್ಡ> ಹಿರಿಯ ವ್ಯಾಪಾರಿ ಎಂದಾಗಿದ್ದು[೧೨೯] ಇವರು ವ್ಯಾಪಾರಿಗಳಿಗೆ ಹಣ ಒದಗಿಸುವ ಹುಂಡಿ ಅಥವಾ ಬಡ್ಡಿ ವ್ಯವಹಾರ ಮಾಡುವ ವರ್ಗವೆಂದು,[೧೩೦] ಅಲ್ಲದೆ ಸಂತೆ ಪೇಟೆಗಳಿಗೆ ಹೋಗಿ ವ್ಯಾಪಾರ ಮಾಡುವವರಾಗಿದ್ದರು. ಇವರ ಸ್ಪಷ್ಟತೆಯ ಬಗ್ಗೆ ಜಿಲ್ಲೆಯ ಶಾಸನಗಳಲ್ಲಿ ಎದ್ದು ಕಾಣದಿದ್ದರು, ಕುಕನೂರ ಶಾಸನದಲ್ಲಿ ವಡ್ಡಪುರಿಗೆ ಗ್ರಾಮದ ವಾರ್ಷಿಕ ಆದಾಯರ್ಕೆ ದಿನಾರಗಳೆಂದು[೧೩೧] ಅಳವಂಡಿ ಶಾಸನ ಹೊನ್ನಬಡ್ಡಿ, ವಡ್ಡಬಡ್ಡಿ[೧೩೨] ಎಂದು, ಕಲ್ಲೂರ ಶಾನದಲ್ಲಿ ವಡ್ಡರಾವುಳ ಸಹಿತ ಹತ್ತಕ್ಕೊಂದರಂತೆ ಅದಕ್ಕೆ ಅರಿಸಿಣ, ಮೆಣಸು, ಮಳವೆ, ಸೀರೆ ಮಳವೆ ಇತ್ಯಾದಿಗಳ ಮೇಲಿನ ಹೆರ್ಜುಂಕ, ಬೀರವಣ ಹೆರ್ಜುಂಕ ಬೀರವಣ ವಡ್ಡರಾವುಳ ಕುಕನೂರ-೩೦ರಲ್ಲಿ ದಾನವಾಗಿ ಬಿಟ್ಟರೆಂಡಿದೆ.[೧೩೩] ಇತರ ವ್ಯಾಪಾರಿಗಳಿಂದ ಇವರ ಪದ್ಧತಿಗಳು ಭಿನ್ನವಾಗಿದ್ದವೆಂದು ತೋರುತ್ತದೆ.

## ಗವರೆ-ಗಾತ್ರಿಗರು

ಇವರು ಕತ್ತೆ, ಕೋಣ, ಎತ್ತು ಮೊದಲಾದ ಪ್ರಾಣಿಗಳ ಮೇಲೆ ವಿಳ್ಯದೆಲೆ ಹೇರಿಕೊಂಡು ಊರಿಂದೂರಿಗೆ ಹೋಗಿ ಎಲೆಯ ವ್ಯಾಪಾರಮಾಡುವ ವರ್ತಕರಾಗಿದ್ದರು.[೧೩೪] ಜಿಲ್ಲೆಯ ಅಂಟೂರತಾಣಾದ ಎರಡು ಶಾಸನಗಳು ವೀಳ್ಯದೆಲೆಯ ತೋಟಗಳ್ ತಂಬೂಲಿಗ ಸಾಸಿರ್ವರು ಎಂದು ಉಲ್ಲೇಖಿಸುವದರೊಂದಿಗೆ (ವೀಳ್ಯದೆಲೆ ಬೆಳೆಯುವರ ಸಂಘ) ಅವುಗಳ ಮೇಲೆ ವಿಧಿಸುವ ಬಿರುವಣೆಗೆಯಂ ಎಂಬ ಹಾಲಉಗುರು, ಗವರೆಗಳು, ಕಟಕದ ಗಾತ್ರಿಗದ ಜಕ್ಕಿಸೆಟ್ಟಿ, ಮಾಳಿಸೆಟ್ಟಿ, ಬಮ್ಮಿಸೆಟ್ಟಿ ದಾಸಿಸೆಟ್ಟಿ ಮುಂತಾದ ಅಧಿಕಾರ ವರ್ಗದವರು, ಗಾತ್ರಗ ಸಾಸಿರ್ವರ ಕಯ್ಯಲು ಗಾತ್ರರ್ಕ್ಕೆ ಪಣಮಂಪಡೆದು ಗಾತ್ರಿಗರ ಕಯ್ಯಲು ದಾರಾಪೂರ್ವ್ವಕ್ಕಂ ಮಾಡಿಸಿಕೊಣ್ಡಂ'' ಎಂದಿದೆ.[೧೩೫] ಹನುಮನಾಳ ಶಾಸನ ತಂಬೂಲಿಗ ಸಾಸಿರ್ವರು, ಗವರೆಯರು ಗಾತ್ರಿಗರು ಆಶೇಷ ಸೆಟ್ಟಿಗಳು ಸೇರಿ ಕಿಸುಕಾಡೆಪ್ಪತ್ತರ ಬಳಿಯ ಬಾಡದ ಆಲಂಗೆರೆಯ ಸಿಂಗಗಾವುಂಡನಿಗೆ ತಂಬುಲಿಗರ ವ್ಯಾಪಾರಕ್ಕೆಂದು ಬಳಸುತ್ತಿದ್ದ ಎತ್ತುಗಳನ್ನು ಕಳ್ಳರು ಅಪಹರಿಸಿಕೊಂಡುಹೋದಾಗ ಅವುಗಳನ್ನು ಕಳ್ಳರಿಂದ ಬಿಡಿಸಿದನೆಂದು ಅದರ ಪ್ರಯುಕ್ತ ಸಿಂಗಗಾವುಂಡನಿಗೆ ದಾನ ನೀಡಿದರೆಂದಿದೆ.[೧೩೬] ಪುರ,[೧೩೭] ಕುಕನೂರು,[೧೩೮] ಅಂಟೂರತಾಣಾ, ಹನುಮನಾಳ ಮುಧೋಳ್[೧೩೯] ಶಾಸನಗಳಲ್ಲಿ ಗವರೆಗಳು ಪೂಜಿಸುವ ಗವರೇಶ್ವರ ದೇವರ ಮತ್ತು ಆ ದೇವರಿಗೆ ವಿವಿಧ ದಾನಗಳನ್ನು ನೀಡಿದಂತೆ ಶಾಸನಗಳು ಹೇಳುತ್ತವೆ.

## ೨. ಉತ್ಪಾದಕ-ವಿನಿಮಯ ವರ್ತಕರು

ಗೃಹಕೈಗಾರಿಕೆಗಳ ಮೂಲಕ ತಾವೇ ಉತ್ಪಾದಿಸುವ ವಸ್ತುಗಳನ್ನು ಸ್ವತಃ ತಾವೇ ಮಾರಾಟ ಮಾಡುವ ವರ್ತಕರು ಎರಡನ್ನು ಮೇಳವಿಸಿಕೊಂಡ ಇವರು ವಿನಿಮಯ ವರ್ತಕರಿಂದ ಬಿನ್ನವಾಗಿದ್ದಾರೆ.[೧೪೦] ಅವರಲ್ಲಿ ಬಡಿಗರು, ಕಮ್ಮಾರರು, ಚಮ್ಮಾರರು, ಕುಂಬಾರರು, ಮೇದರು (ಬಿದಿರುಬುಟ್ಟಿಗಳನ್ನು ತಯಾರಿಸುವವರು)

ಅಕ್ಕಸಾಲಿಗರು, ಮಾದಿಗರು, ಸಮಗಾರರು, ಉಪ್ಪಾರರು, ತಾವು ತಯಾರಿಸಿದ ವಸ್ತುಗಳನ್ನು ಸಂತೆಗಳಿಗೆ, ಪಟ್ಟಣಗಳಿಗೆ ಒಯ್ದು ಮಾರುತ್ತಿದ್ದ ಬಗ್ಗೆ ಅಂಟೂರಠಾಣಾ ಶಾಸನ[೧೪೧] ಮಾದಿನೂರು,[೧೪೨] ಕುಕನೂರು,[೧೪೩] ಪುರ,[೧೪೪] ಮುಧೋಳ,[೧೪೫] ಆನೆಗೊಂದಿ,[೧೪೬] ವಿಪ್ರ[೧೪೭] ಶಾಸನಗಳು ಉಲ್ಲೇಖಿಸುತ್ತವೆ. ಆದರೆ ಅವರ ವಿವರಣೆ ಮಾತ್ರ ನೀಡುವುದಿಲ್ಲ ಇವರು ದೇವರು-ದೇವಾಲಯಗಳಿಗೆ ಕೊಟ್ಟ-ದಾನ ದತ್ತಿಗಳನ್ನು ಗಮನಿಸಿದಾಗ ಇವರು ವಿವಿಧ ವಸ್ತುಗಳ ಉತ್ಪಾದಕರಾಗಿದ್ದರೆಂಬ ವಿಷಯ ತಿಳಿಗೊಳ್ಳುತ್ತದೆ.

### ವರ್ತಕ ಸಂಘಗಳು

ವೃತ್ತಿಗಳು ಹುಟ್ಟಿ ಬೆಳೆದ ತರುವಾಯವೇ ಸಂಘಗಳ ರಚನಾ ಕಾರ್ಯ ಆರಂಭಗೊಳ್ಳಲಿಲ್ಲ. ಅವರವರ ಸಮಸ್ಯೆಗಳು ಕಾಣಿಸಿಕೊಂಡಂತೆ ಸಂಘಗಳನ್ನು ರಚನೆಗೊಂಡಿರುವುದಾಗಿ ವೇದಕಾಲಗಳಿಂದ ಕುರುಹಗಳು ಕಾಣಿಸಿಕೊಳ್ಳುತ್ತವೆ. ನಂತರ ಮಧ್ಯಕಾಲಿನ ಹೊತ್ತಿಗೆ ಅವುಗಳ ಸಂಖ್ಯೆ ಹೆಚ್ಚಿಗಿದ್ದು ಸಂಘಕ್ಕೆ ಪರ್ಯಾಯವಾಗಿ ಕೊತ್ತಳಿ, ಒಕ್ಕಲು, ಓಟ್ಟು ಸೇಣಿ ಇತ್ಯಾದಿ ಬಳಕೆಯಾದರೆ ಈ ಸಂಘ ಸೂಚಿ ಪದಗಳ ಪೂರ್ವ ಸ್ಥಾನದಲ್ಲಿ ಶಾಸನಗಳು ಅವರ ವೃತ್ತಿಗಳಬಗ್ಗೆ ಉಲ್ಲೇಖಿಸುವದನ್ನು ಕಾಣುತ್ತೇವೆ. ಉದಾ : ತಂಬುಲಿಗ ಸಾಸಿರ್ವರು, ತೆಲ್ಲಿಗರೈವತ್ತೊಕ್ಕಲು, ಸೇಣಿಗ ಗೊತ್ತಳಿ ಮುಂತಾಗಿ ಕಂಡುಬಂದಿವೆ. ಇವುಗಳನ್ನು ಕೂಡಾ ಆಯಾ ವೃತ್ತಿಗನುಸಾರವಾಗಿ ಉತ್ಪಾದಕ ಸಂಘ, ವಿನಿಮಯ ಸಂಘ, ಉತ್ಪಾದಕ-ವಿನಿಮಯ ಸಂಘ ಇತರೆ ಸಂಘಗಳಾಗಿ ವಿದ್ವಾಂಸರು ಗುರ್ತಿಸಿರುವುದನ್ನು ಕಾಣುತ್ತೇವೆ.[೧೪೮]

### ತಂಬುಲಿಗ ಸಾಸಿರ್ವರು

ವ್ಯವಸಾಯದಲ್ಲಿ ಎಲೆತೋಟಗಳ ಮಹತ್ವ ಪಡೆದುಕೊಳ್ಳಲು ಅಂದಿನ ಎಲೆಯ ವ್ಯಾಪಾರವು ಕೂಡಾ ಕಾರಣವಾಗಿರಬೇಕೆಂಬ ಅಂಶ ಶಾಸನಗಳಿಂದ ತಿಳಿದು ಕೊಳ್ಳಬಹುದಾಗಿದೆ. ತಂಬುಲಿಗ ಸಾಸಿರ್ವರು, ತಂಬುಲಿಗ ಸೆಟ್ಟಿಗಳು[೧೪೯] ಎಲೆ೧೦೦, ನಾಲ್ಕುನೂರು ಹಾಲವುಗರು[೧೫೦] ಎಂಬ ಉಲ್ಲೇಖಗಳು ಈ ಭಾಗದ ಶಾಸನಗಳಲ್ಲಿ ಕಂಡುಬರುವುದರಿಂದ ತಂಬುಲಿಗ ಸಾಸಿರ್ವ್ವರ್ ಇತಿಹಾಸ ಅರಿಯಲು ಕೊಪ್ಪಳ ಜಿಲ್ಲೆಯ ಶಾಸನಗಳು ಹೊರತಾಗಿಲ್ಲವೆನ್ನಬಹುದು. ಎಲೆ ನಾಲ್ನೂರ್ವರು ಎಲೆಯ ಒಡೆಯರಾದರೆ ಹಾಲುವುಗುರು ನಾಲ್ನೂರುಗಳು ಎಲೆಕೊಯ್ಯುವ ಕೆಲಸ ಮಾಡುವ ಆಳುಗಳಾದರೆ, ಎಲೆಗಳನ್ನು ಸಂಗ್ರಹಿಸಿ, ಹೊತ್ತಮಾರುವವರು ತಂಬುಲಿಗ ಸಾಸಿರ್ವ್ವರು ಮತ್ತು ಗವರೆ-ಗಾತ್ರಿಗರಾಗಿದ್ದರು.[೧೫೧] ವಿಳ್ಯದೆಲೆಯ ವ್ಯಾಪಾರ ಮಾಡುವವರಾಗಿದ್ದರು. ಇವರಲ್ಲಿ ವಿಳ್ಳೆದೆಲೆ ವ್ಯಾಪಾರ ಮಾಡುವ ತಂಬುಲಿಗರು ಕಟ್ಟಿಕೊಂಡ ಸಂಘವೇ ತಂಬುಲಿಗ ಸಾಸಿರ್ವರದ್ದೆಂದು ಗುರ್ತಿಸಲಾಗಿದೆ.[೧೫೨] ಈ ವಿಷಯಗಳ ಮೇಲೆ ಜಿಲ್ಲೆಯ ಅಂಟೂರಠಾಣ ಶಾಸನ ತಂಬುಲಿಗ ಸಾಸಿರ್ವರು, ಸೆಟ್ಟಿಗಳು, ವಿಳ್ಯೆಮಾರುವವ ಗಾತ್ರಿಗ ಸೋರಹಜಕ್ಕಿ ಸಿದ್ದಿಯಣ್ಣ ತಾವು ಮಾರಿದ ವೀಳ್ಯೇದೆಲೆಗೆ ಹೊಂಗೆ ಯೇಲೆಯ್ದುತ್ತೇಲೆಂಕೊಟ್ಟರೆಂದಿದೆ.[೧೫೩] ಹನುಮನಾಳ ಶಾಸನ ತಂಬುಲಿಗ ಸಾಸಿರ್ವ್ವರು ಗವರೆಯರು, ಗಾತ್ರಿಗ ಬೀರರುಂ ಬೀರುವಣಿಗರುಂ ವಿಳ್ದೆಲೆಯ ಹಲವಾರು ಗ್ರಾಮಗಳ ವ್ಯಾಪಾರಿ ಸೆಟ್ಟಿಗಳನ್ನು ಉಲ್ಲೇಖಿಸಿದೆ.[೧೫೪]

ಹೆಸರೂರ ಶಾಸನ ಎಲೆಹೆರುವ ಸೆಟ್ಟಿಯರು ಎಲೆಯ ತೋಂಟದ ೫೦೦ ತಂತ್ರರು ಊರೊಡೆಯರ ಕುರಿತಾಗಿ,[೧೫೫] ಕಲ್ಲೂರ ಶಾಸನ ವಿಳ್ಯೇದೆಲೆಯ ಕಟ್ಟುಗಳ ಮೇಲಿನ ತೇರಿಗೆಯಾದ ಬೀರವಣಿಗ, ವಡ್ಡರಾವುಳ ಸಹಿತ ಹತ್ತಕ್ಕೊಂದರಂತೆ ಬಿಟ್ಟರೆಂದಿದೆ.[೧೫೬] ಮುಧೋಳ ಶಾಸನ ಗವರೆಗಳ ಬಗ್ಗೆ,[೧೫೭] ಚಳಗೇರಿ ಶಾಸನ ಎಲೆಸಾಸಿರ್ವ್ವರನ್ನು[೧೫೮] ಆಳವಂಡಿ ಶಾಸನ ತಂಬುಲಿಗರು ಸೇರಿ ಮಹಾಜನರಿಗೆದಾನ ಮಾಡಿದ ವಿಷಯವನ್ನು ಉಲ್ಲೇಖಿಸುತ್ತದೆ.[೧೫೯] ಪುರ ಶಾಸನ ಬೀರವಣಿಗ ಕವಡಿಯ ಕೇತಿಸೆಟ್ಟಿ ಸಮಸ್ತ ಬೀರವಣಿಗರು ಬೀರುವಣದಲ್ಲಿ ಕೊಟ್ಟ ಗದ್ಯಾಣ-೧ ತೇರಿಗೆ ಬಿಟ್ಟರುವುದಾಗಿ ತಿಳಿಸುವುದು.[೧೬೦] ಹೀಗೆ ಆರ್ಥಿಕ ಮುನ್ನಡೆ ವೃತ್ತಿ ಸಂವರ್ಧನೆ, ಜೀವನ ನಿರ್ವಹಣೆ ಹಾಗೂ ಸಮಾಜದ (ವೀಳ್ಯೆದೆಲೆ) ಅವಶ್ಯಕತೆ ಪೂರೈಕೆಗಾಗಿ ತಂಬುಲಿಗ ಸಾಸಿರ್ವರು ಎಲೆಗಳ ವ್ಯಾಪಾರ ನಡೆಸುತ್ತಿದ್ದರು. ಅಲ್ಲದೆ ತಮ್ಮ ಅನುಕೂಲಕ್ಕಾಗಿ ಸಂಘಗಳನ್ನು ಕಟ್ಟಿಕೊಂಡಿರುವುದಾಗಿ ಶಾಸನಗಳ ಅಧ್ಯಯನದಿಂದ ತಿಳಿದುಬರುತ್ತದೆ.

## ಮಾಲೆಗಾರ ಕೊತ್ತಾಳಿಸಂಘ

ದೇವರ ತೋಟ ಇಲ್ಲವೆ ಸ್ವಂತ ತೋಟದಲ್ಲಿ ಹೂವಿನ ಗಿಡಗಳನ್ನು ಬೆಳೆಸಿ, ಬಾಸಿಂಗ, ದಂಡೆ ಮಾಲೆಗಳನ್ನು ತಯಾರಿಸಿ ಕರಂಡಿಗೆ ಹೆಡಿಗೆಗಳಲ್ಲಿಟ್ಟುಕೊಂಡು ಸಂತೆ-ಪೇಟೆಗಳಲ್ಲಿ ಹೋಗಿ ಮಾರಾಟಮಾಡುವವರು ಮಾಲೆಗಾರರೆಂದು[೧೬೧] ಇವರು ಕೂಡ ತಮ್ಮ ಹಿತಕ್ಕಾಗಿ ಸಂಘ ಕಟ್ಟಕೊಂಡಿದ್ದರೆನ್ನಲಿಕ್ಕೆ ಇಲ್ಲಿಯ ಅಂಟೂರತಾಣಾ ಶಾಸನ ಮಾಲೆಗಾರರ ಕೊತ್ತಾಳಿ ಸಂಘದ ಬಗ್ಗೆ ತಿಳಿಸುವುದು.[೧೬೨] ಅದರಂತೆ ಕುಕನೂರು ಶಾಸನ ದೇವರ ಹೂದೋಟಕ್ಕೆ ಮಾಲೆಗಾರರಿಗೆ ಇನ್ತಿನಿಬರ ಜೀವಿತಂ ಬಡ್ಡಿಯಲು ನಡೆಯುವಂತಾಗಿ ಕೊಟ್ಟಹೂವಿನ ತೋಟ ವೆಂದರೆ,[೧೬೩] ಪುರ ಶಾಸನ ಮಾಲೆಗಾರರು ಬೆಳೆಯುವ ಜಾಜಿ, ಸಂಪಿಗೆ, ಸೇವಂತಿಗೆ, ಇರುವಂತಿಗೆ, ಮಲ್ಲಿಗೆ, ಕಣಗಿವೆ, ಕೊಚವಾಳ, ಹಾದರಿ ಇತ್ಯಾದಿ ಹೂಗಳ ಬಗ್ಗೆ ಮಾಹಿತಿ ನೀಡುವಲ್ಲಿ[೧೬೪] ಅವರ ಇರುವಿಕೆಯನ್ನು ಅರಿಯಲು ಸಾಧ್ಯವಾಗಿದೆ.

## ಜೇಡ ಗೊತ್ತಾಳಿ ಪಟ್ಟಸೇಣಿ

ಇದು ನೂಲುನೆಯುವ ನೇಕಾರರ ಸೂಚಕ ಪದವಾಗಿದ್ದು, ಈ ನೇಕಾರರು ಆಯಾ ಗ್ರಾಮಗಳಲ್ಲಿ ಸಂಘಗಳನ್ನು ರಚಿಸಿ ಕೊಂಡಿದ್ದರು ಅವುಗಳು ಸಾಲಿಗೆಸಾಸಿರ್ವ್ವರು ಅಥವಾ ಸಮಯ ಸಾಸಿರ್ವ್ವರೆಂದು ಹೊರನಾಡಿನ ಶಾಸನಗಳಿಂದ ವ್ಯಕ್ತವಾಗುವುದು.[೧೬೫] ಅದರ ಪರ್ಯಾಯಪದವಾದ **ಗೊತ್ತಾಳಿ, ಸೇಣಿ, ಲಾಳಿ,** ಕುರಿತು ಅಂಟೂರತಾಣಾ ಶಾಸನ ತಿಳಿಸಿದರೆ,[೧೬೬] ಮುಧೋಳ ಶಾಸನ ಅವರು ನೂಲುವ ಮಗ್ಗ (ಲಾಳಿ) ನೂಲಿದ ನೂಲು ಸಿರೆಯ ಬಗ್ಗೆ ಉಲ್ಲೇಖಿಸುವದು.[೧೬೭] ಈ ನೇಕಾರರಲ್ಲಿಯೇ ನಯವಾದ ವಸ್ತ್ರ (ಬಟ್ಟೆ)ವನ್ನು ನೇಯುವವರನ್ನು ಶಾಸನಗಳು ಪಟ್ಟಸಾಲಿಗ ಅಥವಾ ಪಟ್ಟಗಾರರೆಂದು ಕರೆಯುತ್ತವೆ. ಇದರ ಕುರಿತು ಕೊಪ್ಪಳ ತಾಲೂಕಿನ ಹಲಗೇರಿ ಶಾಸನ ಪಟ್ಟಗಾರಗೆಯ್ಯಪಡು ಎಂದಿದೆ.[೧೬೮] ಇಷ್ಟು ಬಿಟ್ಟರೆ ಹೆಚ್ಚಿನ ವಿಷಯಗಳನ್ನರಿಯಲು ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಕಂಡು ಬರುವುದಿಲ್ಲವಾದ್ದರಿಂದ ಈ ಭಾಗದಲ್ಲಿ ಬಟ್ಟೆಯ ಉತ್ಪಾದನೆ ಅಷ್ಟೊಂದು ಇರಲಿಲ್ಲವೆಂದು ತೋರುತ್ತದೆ.

## ಗಳೆಯ ಮೂನ್ನುರ್ವರು

ಕುಕನೂರು ಶಾಸನ ವೊಂದರಲ್ಲಿ ಗಳೆಯ ಮೂನ್ನುರ್ವರ ಉಲ್ಲೇಖವಿದ್ದು ಇವರು ತೋಟದಲ್ಲಿ ಕೆಲಸಮಾಡುವವರ ಒಕ್ಕೂಲವೆಂದು ತಿಳಿದುಬರುತ್ತದೆ. ಇವರು ಸಹ ಪ್ರಾಚೀನ ಕಾಲದಲ್ಲಯೇ ಸಂಘವನ್ನು ಕಟ್ಟಿಕೊಂಡು ತಮ್ಮ ಹಿತವನ್ನು ಕಾಪಾಡಿಕೊಂಡಿರುವುದನ್ನು ಕಾಣುತ್ತವೆ.[೧೭೯]

## ತೋಟಗರ್ರೈನೂರ್ವರು

ಇದೊಂದು ತೋಟವನ್ನು ಮಾಡುವ ತೋಟಗಾರರ ಮಾಲಿಕರ ಗುಂಪಾಗಿದ್ದು ಇವರು ತಮ್ಮ ತೋಟಗಳಲ್ಲಿ ಅಡಕೆ, ತೆಂಗು, ಬಾಳೆ, ನಿಂಬೆ, ಅರಸಿಣ, ಮೆಣಸು, ಧನರಿ, ಅಲ್ಲ, ಬೆಲ್ಲ, ಕಾಯಿ ಪಲ್ಲೆ ವಿವಿಧ ರೀತಿಯ ಹೂ ಗಿಡಗಳನ್ನು ನೆಟ್ಟು ತೋಟ ಮಾಡುತ್ತಿರುವುದಾಗಿ ಇವರು ಕೂಡಾ ತೋಟಗರ್ರೈನೂರ್ವರೆಂಬ ಸಂಘ ರಚನೆ ಮಾಡಿಕೊಂಡಿರವುದಾಗಿ ಗುರ್ತಿಸಲಾಗಿದೆ.[೧೮೦] ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಈ ಸಂಘದ ಬಗ್ಗೆ ಉಲ್ಲೇಖಗಳಿರದೆ ಇದ್ದರು, ಅವುಗಳನ್ನು ಬೆಳೆಯುವ ತೋಟಗಳು ಕೆಲಸಮಾಡವ ತೋಟಗಾರರ ಕುರಿತು ಕಲ್ಲೂರು,[೧೮೧] ಪುರ,[೧೮೨] ಚಳಗೇರಿ,[೧೮೩] ಕುಕನೂರು, ಇಟಗಿ, ಮಾದಿನೂರು, ಅಳವಂಡಿ ಶಾಸನಗಳಲ್ಲಿ ಕಾಣಿಸಿಕೊಂಡಿರುವವು.

ಆರ್ಥಿಕ ರಂಗದಲ್ಲಿ ಮುಖ್ಯವಾಗಿ ತೋಟಗಳಲ್ಲಿ ವಿವಿಧ ಬಗೆಯಲ್ಲಿ ತಮ್ಮ ಸಾಧನೆಗೈದು ಸಂಘಗಳನ್ನು ಕಟ್ಟಿಕೊಂಡು ಸಂತೆ-ಅಂಗಡಿ, ಪೇಟೆ, ಪಟ್ಟಣಗಳಲ್ಲಿ ವ್ಯಾಪಾರ ನಡೆಸುತ್ತಿರುವುದಾಗಿ ಶಾಸನಗಳ ಅಧ್ಯಯನದಿಂದ ನಮ್ಮ ಅರಿವಿಗೆ ಬಂದಿರುವುದರಿಂದಲೆ, ನಾವು ಇಂದಿನ ಸಮಾಜದಲ್ಲಿ ಕೂಡಾ ಇಂತ ವ್ಯವಸ್ಥೆಯನ್ನು ಅಳವಡಿಸಿಕೊಂಡುಬಂದಿರುವದನ್ನು ಕಾಣುತ್ತೇವೆ.

## ಪಟ್ಟಣ

ಜನಸಂಖ್ಯೆ ಹೆಚ್ಚಿದಂತೆ ನಗರಗಳು ಅನೇಕ ವೈವಾಟುಗಳಿಂದ ಪಟ್ಟಣಗಳಾಗಿ ರೂಪುಗೊಂಡಿರಬೇಕು.[೧೮೪] ಈ ಪಟ್ಟಣಗಳಲ್ಲಿ ಸಂತೆಗಳುನೆರೆದು ವ್ಯಾಪಾರ ಚಟುವಟಿಕೆಗಳು ಜರುಗುತ್ತಿದ್ದವು. ಅವುಗಳನ್ನು ವ್ಯವಸ್ಥಿತವಾಗಿ ನೆರೆಯಿಸುವ ಕಾರ್ಯಗಳು ಆಳುವ ಪ್ರಭುಗಳ ಇಚ್ಛೆಯಂತೆ ನಡೆಯುತ್ತಿದ್ದವು. ಇದರ ಕುರಿತು ಅಳವಂಡಿ ಶಾಸನ ಸಂತೆ ನಡೆಯಲು ಬೇಕಾಗುವ ಅಂಗಡಿ, ತೆಲ್ಲಿಗರಂಗಡಿ ಬಗ್ಗೆ ಹೇಳಿದರೆ,[೧೮೫] ಅಂಟೂರಠಾಣಾ ಶಾಸನ ಅಲ್ಲಿ ವ್ಯಾಪಾರ ಮಾಡುವ ಮಾಲಿಗರು, ನಖರರು, ತಂಬುಲಿಗರು, ತೆಲ್ಲಿಗರು, ಮೇದರರು, ಕಮ್ಮಾರರು, ಬಡಿಗರು, ಅಕ್ಕಸಾಲಿಗರು, ಅಯ್ಯೂರ್ವರ ಅಂಗಡಿ, ಸಂತೆಗಳ ಕುರಿತು ಹೇಳುತ್ತದೆ.[೧೮೬] ಚಳಗೇರಿ ಶಾಸನ ಸಿರಿವಾಗಿಲ ಸಾರೆ (ಬಟ್ಟೆ) ಅಂಗಡಿ[೧೮೭] ಮುಧೋಳ ಶಾಸನ ದಶ ಪಟ್ಟಣರುಂ ಅಯ್ಯಾವೊಳೆ ಪುರವರಾಧೀಶ್ವರರನ್ನು,[೧೮೮] ಹನುಮನಾಳ ಶಾಸನ ಅಷ್ಟಾದಶಪಟ್ಟಣದ ಪಟ್ಟಣ ಸ್ವಾಮಿಗಳನ್ನು[೧೮೯] ಶಿವಪುರ ಶಾಸನ ಸಹಪಟ್ಟಣ[೧೯೦] ಸ್ವಾಮಿಗಳ ಬಗ್ಗೆ ಉಲ್ಲೇಖಿಸುತ್ತವೆ. ಈ ಪಟ್ಟಣದಲ್ಲಿ ಜರುಗುವ ಸಂತೆಗಳಿಂದ ರಾಜ್ಯಗಳ ಆದಾಯ,

ಉದ್ಯೋಗವಕಾಶ, ಸಾರಿಗೆ ಸಂಪರ್ಕ ಇತ್ಯಾದಿಯಾಗಿ, ಆರ್ಥಿಕ ಜೀವನ ಮಟ್ಟದಲ್ಲಿ ಬದಲಾವಣೆಗಳುಂಟಾಗಲು ಕಾರಣವಾಗಿರಬೇಕು. ಆನೆಗುಂದಿ ಶಾಸನ ವೊಂದು ೧೮ ಪಟ್ಟಣಗಳ ಬಗ್ಗೆ ಉಲ್ಲೇಖಿಸುತ್ತ ೧೮ ಕೇಣಿಗಳು, ಸಾಸಿರ್ವರು, ಕುಂಬಾರರು, ಕಲ್ಯಾಣಿ, ಭೋದನ, ಹೊಟ್ಟಳಕೇರಿ, ಕಂದಾರ, ಕರಹಡ, ಕೊಲ್ಲಾಪೂರ ಪಾನಂಗಲ್ಲು, ನಿಡಗುಂದಿ, ಕಿಲ್ಲಿಯಾರ, ಭಮಕೂರ ಇತ್ಯಾದಿ ಊರುಗಳ ಹೆಸರನ್ನು ಪ್ರಸ್ತಾಪ ಮಾಡಿರುವದನ್ನು ನೋಡಿದಾಗ ಇವೆಲ್ಲ ಆಗಿನಕಾಲದಲ್ಲಿ ಪಟ್ಟಣ ಗಳಾಗಿರಬೇಕೆಂದು[೧೮೧] ಅನಿಸುತ್ತದೆ. ಅಳವಂಡಿ, ಕವಲೂರ, ಇಟಗಿ, ಕುಕನೂರ, ಆನೆಗುಂದಿ, ಮಾದಿನೂರ, ತಳಕಲ್ಲ ಮುಂತಾದವುಗಳು ಸಹ ಕೊಪ್ಪಳ ಭಾಗದಲ್ಲಿ ಪ್ರಾಚೀನ ಪಟ್ಟಣಗಳಾಗಿರಬೇಕೆಂದು ಹೇಳಬಹುದಾಗಿದೆ.

## ವ್ಯಾಪಾರ

ಗ್ರಾಮ - ಪಟ್ಟಣಗಳಲ್ಲಿರುವ ವರ್ತಕರು ಪಾದಮಾರ್ಗ, ಜಲಮಾರ್ಗಗಳ ಮೂಲಕ ಒಂಟಿಯಾಗಿಯೂ ಗುಂಪಾಗಿಯೂ ಬೇರೆ ಬೇರೆ ಸ್ಥಳಗಳಿಗೆ ವ್ಯಾಪಾರಕ್ಕಾಗಿ ಹೊಗುತ್ತಿರಬೇಕು. ಆಗ ತಮ್ಮ ಸರಕುಗಳನ್ನು ಗಂಟು ಮೂಟೆ ಹೆಡಗಿ[೧೮೨] ಬರಕ, ಕಲ್ಲಿ, ಕೋಡೆ[೧೮೩] ಕೊಳಿವೇಲಳಿಗೆ,[೧೮೪] ಸಿಂಗಡಿ ಕಾಯಿ ಗಂಟು ಸಿರಿಯ ದಿಂಡಿನಗಂಟುಗಳು ಕರಂಡಿಗಳಲ್ಲ ಎತ್ತು ಕತ್ತೆ ಕೋಣ[೧೮೫] ಎಮ್ಮೆ, ಕುದರೆ, ತೊತ್ತು ಮುಂತಾದವುಗಳನ್ನು ಬಂಡಿಗಳ[೧೮೬] ಮೂಲಕ ಮತ್ತು ತಲೆಯ ಮೇಲೆ, ಹೆಗಲ ಮೇಲೆ ಹೊತ್ತು ಹೇರಿಕೊಂಡು ಹೊಗುತ್ತಿದ್ದರೆಂದು ಶಾಸನಗಳಿಂದ ತಿಳಿಯುವುದು.[೧೮೭] ಮಾರ್ಗ ಮದ್ಯದಲ್ಲಿ ಹಾದಿಗಳ್ಳರು ದಾಳಿ ಮಾಡಿ ಸರಕು ಪ್ರಾಣಿಗಳನ್ನು ದೋಚಿಕೊಂಡು ಹೋದಾಗ ಕೆಲವರು ಅವರೊಂದಿಗೆ ಹೋರಾಡಿ ತಮ್ಮ ಪ್ರಾಣವನ್ನೇ ಮುಡಪಾಗಿ ಇಟ್ಟು ವರ್ತಕರನ್ನು ಅವರ ಪ್ರಾಣಿಗಳನ್ನು ರಕ್ಷಿಸುತ್ತಿದ್ದರೆಂಬುದಕ್ಕೆ[೧೮೮] ಜಿಲ್ಲೆಯ ಹನುಮನಾಳ ಶಾಸನದಲ್ಲಿ[೧೮೯] ಕಳ್ಳರು ತಂಬುಲಿಗ ಸಾಸಿರ್ವರ ಎತ್ತನ್ನು ಅಪಹರಿಸಿದಾಗ ಕಿಸುಕಾಡೆಪ್ಪತ್ತರ ಬಳಿಯ ಬಾಡದ ಆಲುಗೆರೆಯ ಸಿಂಗ ಗಾಮುಂಡನು ಹೋರಾಡಿ ಅವರ ಎತ್ತನ್ನು ಬಿಡಿಸಿತಂದು ಕೊಟ್ಟಾಗ ಅದರ ಪ್ರಿತಿಯಾಗಿ ಸಾಸಿರ್ವರು ಗವರೆಯರು, ಗಾತ್ರಿಗ, ಸೆಟ್ಟಿಗಳು ಸೇರಿ ಆತನಿಗೆ ಅನೇಕ ದಾನಗಳನ್ನು ನಿಡಿರುವುದನ್ನು ಹೇಳುತ್ತದೆ.

ಹೀಗೆ ಆರ್ಥಿಕ ವ್ಯವಸ್ಥೆಯಲ್ಲಿ ವ್ಯಾಪಾರ ಪದ್ಧತಿ ನಾಡಿನಾದ್ಯಾಂತ ಕಾಣಿಸಿಕೊಂಡಾಗ ಕೊಪ್ಪಳ ಜಿಲ್ಲೆಯು ಹೋರತಾಗಿರಲಿಲ್ಲವೆಂಬುದನ್ನು ಇಲ್ಲಿಯ ಶಾಸನಗಳೇ ಸಾಕ್ಷಿಯಾಗಿ ನಿಂತಿವೆ. ವ್ಯಾಪಾರಸ್ಥರು ತಾವು ತುಗುವ, ಅಳೆಯುವ ಎಣಿಸುವ ಸಮುಸ್ತದಾನ್ಯವನ್ನು ಮಾರಿದಲ್ಲಿ ಚಿನ್ನದಕಾಣಿ ಎರಡು ಸೀರೆಯ ದಿಂಡಿನ ಬಂಡಿಯೊಂದಕ್ಕೆ ಒಂದು ಪಣ, ಸಾರಿಗೆ ವಾಹನಕ್ಕೆ ಹೆಸರಾದ ಎತ್ತಿನ ಮೇಲಿನ ಮಳವೆಗೆ ಐದು ವೀಸ, ಕತ್ತೆಯ ಮೇಲಿನ ಮಳವಿಗೆ ಎರಡು ದೀಪ, ತಲೆಯ ಮೇಲೆ ತರುವ ಜವಳಿಯ ಸೇರೆಗೆ ಒಂದು ವೀಸ ವೊಕ್ಕಲುಗಳು ಒಂದು ಹಾಗ,[೧೯೦] ಸಮಸ್ತ ನಾನಾದೇಶಿ ಮುಮ್ಮುರಿದಂಡಗಳು ಮಹಾನಾಡಗಿ ದೇವಸಭೆ, ಬ್ರಹ್ಮಸಭೆ, ರಾಜಸಭೆ ಕೆಳವಾಡಿ ಮನ್ನೆಯ ಸೆಟ್ಟರು ಸೇರಿ ಮನೆಗಳನ್ನು ಹಣ, ಭೂಮಿ, ತೋಟ, ಇತ್ಯಾದಿಯಾಗಿ ದಾನ ಬಿಟ್ಟರೆಂಬ ವಿಷಯವನ್ನು ಹೇಳುತ್ತವೆ.[೧೯೧] ಕುಕನೂರು ಶಾಸನ ವರ್ಣಿಸುವ ರಾಜಧಾನಿ ದೇಶ ನೆಲೆವೀಡು,

೪೮ ಕೇರಿಗಳು, ಪಟ್ಟಣ, ಬೀದಿ, ಕಟ್ಟಡ, ಅಂಗಡಿ ತೋಟ ಮುಂತಾದವುಗಳು ವಿವಿಧ ವೃತ್ತಿಯ ಜನಾಂಗದವರ ವ್ಯಾಪಾರ ವ್ಯವಸ್ಥೆಯ ಕುರಿತು ಅರಿಯಲು ಸಹಾಯಕವಾಗುತ್ತವೆ.[೯೨] ಈ ಜಿಲ್ಲೆಯ ಶಾಸನಗಳಿಂದ ನಮ್ಮ ಅರವಿಗೆ ಬರುವುದೇನೆಂದರೆ ನಮ್ಮ ಪ್ರಾಚೀನರು ಹೋರನಾಡಿನ ವ್ಯಾಪಾರಕ್ಕಿಂತ ಒಳನಾಡಿನ ವ್ಯಾಪಾರ ಚಟುವಟಿಕೆಗೆ ಹೆಚ್ಚಿನ ಪ್ರಾದಾನ್ಯತೆ ನಿಡಿರಬೇಕೆಂದೆನಿಸಿದರು, ಅಂತರದೇಶಿಯ ವ್ಯಾಪಾರದಲ್ಲಿ ಹಿಂದಿರಲಿಲ್ಲವೆಂದು ಅರಿಯಬೇಕಾಗಿದೆ.[೯೩]

**ಸರಕು**

ಈ ಸಂತೆ ಪೇಟೆ ಪಟ್ಟಣಗಳಲ್ಲಿರುತ್ತಿದ್ದ ಸರಕುಗಳ ಬಗ್ಗೆ ಕೊಪ್ಪಳ ಜಿಲ್ಲೆಯ ಅಳವಂಡಿ, ಕವಲೂರು, ಕೊಪ್ಪಳ, ಮಾದಿನೂರು, ಶಿವಪುರ, ಹಲಗೇರಿ, ಹುಲಗಿ, ಗೋತಗಿ, ಚಳಗೇರಿ, ಪುರ, ಮಂಕಲ್ಕೇರಿ, ಹನುಮನಾಳ, ಹೆಸರೂರ, ಆನೆಗುಂದಿ, ವಿಪ್ರ, ಇಟಗಿ, ಕಲ್ಲೂರು, ತಳಕಲ್ಲು, ಚಳಗೇರಿ ಮುಧೋಳ, ಬಳಗೇರಿ, ಕುಕನೂರು, ರಾಜೂರು, ಸಂಕನೂರು ಶಾಸನಗಳಲ್ಲಿ, ಭತ್ತ, ಜೋಳ, ಸಜ್ಜೆ, ಹೆಸರು, ರಾಗಿ, ಅಕ್ಕಿ, ಮೆಣಸು, ಅಲ್ಲ, ಅರಸಿಣ, ಹತ್ತಿ, ನೂಲು, ಸಿರೆ, ಬಟ್ಟೆ, ವೀಳ್ಯೆದೆಲೆ, ಅಡಕೆ, ಸುಣ್ಣ, ಕುಂಕುಮ, ಕರ್ಪೂರ, ಎಣ್ಣೆ, ಬಾಳೆ, ಟೆಂಗು, ಬೆಲ್ಲ, ಉಪ್ಪು, ತುಪ್ಪ ಮುಂತಾದ ದವಸದಾನ್ಯಗಳು, ಮಾವು, ಸೇಬು, ಹಲಸು, ನಿಂಬೆ, ಬಾಳೆ, ಹಲಸುಗಳಂತಹ ಹಣ್ಣುಗಳು ಸಿರೆಗಳು ಮತ್ತು ಬಟ್ಟೆಗಳು, ಹೂವುಗಳಾದ ಸಂಪಿಗೆ, ಸೇವಂತಿಗೆ, ಕಣಗಿಲೆ, ಜಾಜಿಮಲ್ಲಿಗೆ, ವಿವಿಧ ಕಾಯಪಲ್ಲೆಗಳು, ಎಣ್ಣೆ, ಲೋಹಗಳಾದ ಚಿನ್ನ, ಹವಳ, ಕಬ್ಬಿಣ, ತಾಮ್ರ , ಕಂಚು ಇತ್ಯಾದಿ ಉಲ್ಲೇಖಗಳಿದ್ದು ಇವು ಆಗಿನ ಜನರ ಮೂಲ ಬೇಡಿಕೆಯ ವಸ್ತುಗಳಾಗಿದ್ದರಿಂದ ಇವೆಲ್ಲ ಮಾರಾಟದ ಸರಕುಗಳಾಗಿದ್ದವೆಂದು ಹೇಳಬಹುದು.[೯೪]

**ತೂಕ ಮತ್ತು ಅಳತೆಗಳು**

ಅಳತೆ ಮತ್ತು ತೂಕಗಳು ವ್ಯಾಪಾರದಲ್ಲಿ ಮಾಪನಗಳಾಗಿ ಗುರ್ತಿಸಿಕೊಂಡು[೯೫] ಭತ್ತ, ಅಕ್ಕಿ, ಗೋದಿ, ಕಡಲೆ, ತೊಗರಿ, ಎಳ್ಳು, ಜಿರಿಗೆ, ಸಾಸವಿ ಮೆಣಸು ಸಜ್ಜೆ ಇತ್ಯಾದಿ ದವಸದಾನ್ಯಗಳನ್ನು ತುಂಬಿ ಅಳೆಯಲು ಕೊಳಗ, ಬಳ್ಳ, ಮಾನ, ಸೊಲಿಗೆ, ಬಳೆಸುತ್ತಿದ್ದರೆಂದು ಅವುಗಳ ಅಳತೆಯನ್ನು ರಾಜಾದಿತ್ಯನು ೪ ಗಿದ್ದ= ೧ ಸೊಲ್ಲಿಗೆ, ೪ ಸೊಲ್ಲಿಗೆ = ೧ ಮಾನ, ೪ ಮಾನ = ೧ ಬಳ್ಳ, ಕೊಳಗ = ೧ ಪಂಚ, ೪ ಪಂಚ = ೧ ಖಂಡುಗ ಎಂದು ತಿಳಿಸಿದ್ದಾನೆ.[೯೬] ಎಣ್ಣೆ-ತುಪ್ಪಗಳಂತಹ ಪದಾರ್ಥಗಳನ್ನು ಅಳೆಯಲು ಸಟ್ಟುಗ, ಸೊಟಿಗೆ, ಸೊಳಸ ಮುಂತಾದ ಅಳತೆಗಳಿಂದ ಅಳೆಯುತ್ತಿದ್ದರು.[೯೭] ಹಣ್ಣು ಹಂಪಲು, ಕಾಯಿ, ಅಡಕೆಗಳಂತೆ ವಸ್ತುಗಳನ್ನು ಎಣಿಸುವ ಮೂಲಕ, ವಿಳ್ಯೆದೆಲೆ, ಕಾಯಿಪಲ್ಲೆ, ಈರುಳ್ಳಿ, ಹುಲ್ಲುಗಳನ್ನು ಹಿಡಿ ಇಲ್ಲವೆ ಸೂಡುಗಳಾಗಿ ಮಾರುತ್ತಿದ್ದರು. ಇಂಗು, ಹತ್ತಿ, ಬೆಲ್ಲ, ತೂಗಿ ಮಾರುತ್ತಿದ್ದರೆಂದು ತಿಳಿಯುತ್ತದೆ.[೯೮] ಇದಕ್ಕೆ ನಿದರ್ಶನವಾಗಿ ಜಿಲ್ಲೆಯ ಕಲ್ಲೂರ ಶಾಸನ ಜಿರಿಗೆ, ಸಾಸಿವೆ, ಮೆಣಸು, ಶುಂಠಿ, ಅರಸಿಣ ಅಡಕೆ, ಸಕ್ಕರಿಗಳನ್ನು ತೂಗಿ ಮಾರುತ್ತಿರುವುದಾಗಿ,[೯೯] ಪುರ ಶಾಸನ ಬತ್ತ, ಅಕ್ಕಿ, ಗೋದಿ, ಕಡಲೆ, ತೊಗರಿ, ಎಳ್ಳು, ಹೆಸರು, ಸಜ್ಜೆ, ಜೋಳ,

ಅಳೆಯುತ್ತಿರುವುದಾಗಿ[೨೦೦] ತಿಳಿಸುವವು. ಇವೆಲ್ಲವುಗಳನ್ನು ಅಳೆಯಲು ಬಳಸುವ ಮಾಪನಗಳ ಕುರಿತು ಕುಕನೂರು ಶಾಸನ, ಕೊಳಗಲವನ್ನು[೨೦೧] ಅಂಟೂರಠಾಣಾ ಶಾಸನ ಕೊಳಗ, ಸೊಳಸ, ಗೇಣಿ, ಹೆಡಗಿ, ಮಾನ, ಬಳ್ಳಗಳನ್ನು,[೨೦೨] ಹುಲಗಿ ಶಾಸನ[೨೦೩] ಮಾನವನ್ನು, ಕಲ್ಲೂರ ಶಾಸನ ಸೊಲಿಗೆ ಅರ್ಧ ಸೊಲಿಗೆಗಳನ್ನು,[೨೦೪] ಅಳವಂಡಿ ಶಾಸನ ಹೊರೆಸುಡು ಸೊಂಟಿಗೆಗಳನ್ನು[೨೦೫] ಮಾದಿನೂರು ಶಾಸನ ಒಮ್ಮನ ಎಣ್ಣೆ,[೨೦೬] ಹಲಗೇರಿ ಶಾಸನ[೨೦೭] ಪಟ್ಟಗಾರ ಗೆಯ್ಯಾ ಅದೇ ರೀತಿಯ ತೂಗುವ ಎಣಿಸುವ ಎರಡು ವಸ್ತುಗಳ ಬಗ್ಗೆ ಮುಧೋಳ ಶಾಸನ ಉಲ್ಲೇಖಿಸುವುದನ್ನು[೨೦೮] ಇಲ್ಲಿ ಗಮನಿಸಲಾಗಿದೆ.

## ಭೂಮಾಪನ (ಉದ್ದಳತೆ)

ಭೂಮಿಯನ್ನು ಅಳೆಯಲು ಗೇಣಿ, ಕೋಲ, ಗೋಮನ ಗಡಿಂಬ, ಬಾಚಿವಿಡಿಯ ಫಳೆ, ಕಂಬ, ಮುಂತಾದ ಅಳತೆಗಳಿಂದ ಅಳೆಯುತ್ತಿದ್ದರು. ಅವುಗಳಲ್ಲಿ ಬಿತ್ತುವ ಬೀಜದ ಪ್ರಮಾಣವನ್ನನುಸರಿಸಿ ಊರಿಂದೂರಿಗೆ ಭಿನ್ನವಾಗಿರುತ್ತಿದ್ದವೆಂದು ತಿಳಿಯುತ್ತದೆ.[೨೦೯] ಕುಕನೂರಿನ ಶಾಸನ ಫಳೆಯನ್ನು,[೨೧೦] ಕೊಪ್ಪಳ ಕಲ್ಲೂರ ಶಾಸನ ಫಳೆ-೧೪, ಫಳೆ ೪೭ನ್ನು ಉಲ್ಲೇಖಿಸಿವೆ.[೨೧೧] ಕೊಪ್ಪಳದಲ್ಲಿ ಭೂಮಿಯನ್ನು ಅಳೆಯುವ ನಾಗದೇವನ ಸವಣ್ಣಾದ ಗಡಿಂಬ ಎಂದು ತಿಳಿಸುವದನ್ನು ನೋಡಲಾಗಿ ಕೊಲುಗಳ ಸಹಾಯದಿಂದ ಭೂಮಿಯನ್ನು ಕಮ್ಮ ಮತ್ತರು. ನಿವರ್ತನಗಳಲ್ಲಿ ಅಳೆಯುತ್ತಿರುವುದಾಗಿ ಗೋತಗಿ ಶಾಸನ ತಿಳಿಸುವದು.[೨೧೨] ಕರಿಯ ನೆಲ ೫೪ ಮತ್ತರು, ೪೫೦ ಕಮ್ಮ ಭೂಮಿ, ೪೫೦ ಕಮ್ಮ ತೋಟ ೫೫ ಮತ್ತರುಗಳಂತಹ ಅನೇಕ ಉಲ್ಲೇಖಗಳು ಕಂಡುಬರುತ್ತವೆ. ಅದರಂತೆ ಮತ್ತರು ಕಮ್ಮ, ಕಂಭಗಳು, ಪ್ರಮಾಣವನ್ನು ಖಚಿತವಾಗಿ ತಿಳಿಯಲು ಡಾ. ಕೊಪ್ಪಾರವರು ತಮ್ಮ ಪ್ರಬಂಧದಲ್ಲಿ ಒಂದು ಮತ್ತರಿಗೆ೯೦೦ ಕಂಬಗಳು, ೧ ಮತ್ತರಿಗೆ ೨೦೦ ಕಂಬಗಳು, ಮತ್ತರಿಗೆ ೧೦೦ ಕಂಬಗಳೆಂದು ಸ್ಪಷ್ಟಪಡಿಸಿದ್ದಾರೆ.[೨೧೩] ಅರಕೇರಿ ಶಾಸನ[೨೧೪] ಮಾಣಿಕೇಶ್ವರ ಕೊಲಲಳೆದು ಬಿಟ್ಟ ಮತ್ತರು ೩೦೦ ಮತ್ತು ೪೫೦ ಸಮ್ಮಗಳ್ದೆ ಎಂದು, ಕುಕನೂರಿನ ಮತ್ತೊಂದು ಶಾಸನ ೧೨ ಮತ್ತರು ೧೬೦ ಕಂಬ ಗದ್ದೆ, ಹರದಗೆರೆಯಲ್ಲಿ ೩೦೦ ಕಂಬ ಗದ್ದೆ ಬಗ್ಗೆ ತಿಳಿಸುವ ಉಲ್ಲೇಖಗಳನ್ನು ನೋಡಿದಾಗ ಅವುಗಳಲ್ಲಿಯ ಭಿನ್ನತೆಯನ್ನು ಇಲ್ಲಿ ಅರಿಯಬಹುದಾಗಿದೆ.[೨೧೫] ಹಾಗೆಯೇ ಮನೆ ಮತ್ತು ಇತರ ನಿವೇಶನಗಳ ಉದ್ದಳತೆಯನ್ನು ಗೇಣಿ, ಕೆಯ್ಯಾ ಮೊಳ ಹಸ್ತ ಗಳಿಂದ ಅಳೆಯುತ್ತಿದ್ದು ವ್ಯವಹಾರ ಗಣತದಲ್ಲಿ ಅವುಗಳನ್ನು ೧೨ ಬೆರಳು=ಗೇಣಿ, ೨ ಗೇಣಿ = ೧ ಮೊಳ, ೨ ಮೊಳ = ೧ ಹಸ್ತ, ೪ ಮೊಳ = ೧ ದಂಡ, ೨೦೦೦ ದಂಡ ಕ್ರೋಶ, ೪೦೦೦ ಕ್ರೋಸ= ೧ ಯೋಜನವೆಂದು ಹೇಳುತ್ತದೆ.[೨೧೬] ಬಸವಣ್ಣನವರ ವಚನಗಳಲ್ಲಿ ೨೨ ಅಂಗಲ = ಗೇಣಿ, ೨ ಗೇಣಿ = ೧ ಮೊಳ, ೨ ಮೊಳ = ೧ ಹಸ್ತ, ೨ ಹಸ್ತ = ೧ ಮಾರು, ೨ ಮಾರು = ೧ ಜಂಪೆ, ೭೭೦ ಜಂಪೆ= ೧ ಪದದಾಯ, ೨೮೦೦ ಪದಚ್ಛಯ = ೧ ಕೂಗಳತೆ, ೪ ಕೂಗಳತೆ = ೧ ಹರದಾರಿ, ೪ ಹರದಾರಿ = ೧ ಯೋಜನೆ ಎಂದು ಹೇಳುತ್ತವೆ.[೨೧೭] ಈ ಅಳತೆಗಳನ್ನು ಕಾನೂನಬದ್ಧವಾಗಿ ಮಾಡಲು ರಾಜನು ಅಧಿಕಾರಿಗಳನ್ನು ನಿಯೋಗಿಸುತ್ತಿದ್ದನೆಂದು ತಿಳಿದುಬರುತ್ತದೆ.[೨೧೮]

ಕೊಪ್ಪಳದ ಶಾಸನ ಘಳೆ೧೪ ಬಡಗಲು ತೀರ್ಥದ ಬಸದಿಯ ಭೋಗಸ್ಥಳದ ಮಾನ್ಯದ ಹತ್ತುಗೆಯಿಂ, ನೀಳದಘಳೆ೪೭ ಪಡವಲ ತಿಯಂಬರಸಿಯ ಬಸದಿ ಮಾನ್ಯದ ಹತ್ತುಗೆಯಿಂ ಬಡಗಲ ಗಳೆ೧೪ ತೆಂಕಲರಸಿಯ ಬಸದಿಯ ಹತ್ತೂಗೆಯಿಂ ನೀಳದ ಗಳೆ೪೭ ಎಂಬ ಅಳತೆಯಕೊಲಿನ ಉಲ್ಲೇಖ ನಿಡುವುದು.[೨೧೯]

## ನಾಣ್ಯಗಳು

ಆರ್ಥಿಕ ರಂಗದಲ್ಲಿ ನಾಣ್ಯಗಳ ಅಧ್ಯಯನ ಹೆಚ್ಚಿನ ಪ್ರಾಧಾನ್ಯತೆ ಪಡೆದುಕೊಂಡಿದೆ ಎಂದು ಶಾಸನಗಳ ಅಧ್ಯಯನ ದಿಂದ ನಮ್ಮ ಅರವಿಗೆ ಬರುತ್ತದೆ. ನಾಣ್ಯಗಳನ್ನು ಶಾಸನಗಳಲ್ಲಿ ಪಣ, ಗದ್ಯಾಣ, ದಿನಾರ, ಹಾಗ, ವೀಸ್, ಬೇಳೆ, ಅಡ್ಡ, ಕಾಣಿ, ಕಾಗಿಣಿ, ತಾರ, ದ್ರಮ್ಮ ಎಂದು ಕರೆಯುತ್ತವೆ.[೨೨೦] ವ್ಯವಹಾರಗಣಿತದಲ್ಲಿ ೪ಕಾಣಿ=೧ ವೀಸ, ೫ ವೀಸ=೧ ಹಾಗ, ೪ ಹಾಗ= ೧ ಪಣ, ೧೦ ಪಣ=೧ ಗದ್ಯಾಣ, ಮತ್ತು ೧ಗದ್ಯಾಣ=೧೦ ಪಣ, ೧ಪಣ=೨೦ ವೀಸ್, ೧ಪಣ=೪ಹಾಗ, ೧ ಹಾಗ=೨ ಬೆಳೆ, ೧ಪಣ=೬೪ ಕಾಣಿ, ೧/೨ ತಾರ = ೧ ಕಾಣಿ, ಎಂದು ನಾಣ್ಯಗಳ ಬೆಲೆಯನ್ನು ಗುರ್ತಿಸಿದ ಕೊಷ್ಟಕವನ್ನು ಕಾಣುತ್ತೇವೆ.[೨೨೧] ಹೀಗೆ ಶಾಸನೋಕ್ತ ಬಂಗಾರ, ಬೆಳ್ಳಿ, ಹಾಗೂ ಇತರ ಲೋಹಗಳಿಂದ ತಯಾರಿಸಲ್ಪಟ್ಟ ನಾಣ್ಯಗಳನ್ನು ಕಮ್ಮಟಗಳಲ್ಲಿ ಟಂಕಿಸುತ್ತಿರುವುದಾಗಿ ತೂಕಗಳಲ್ಲಿರುವ ಭಿನ್ನತೆ-ಅಳತೆ-ಇತ್ಯಾದಿಗಳು ಪ್ರಾಚೀನ ಆರ್ಥಿಕ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲಿವೆ ಎಂಬುದನ್ನು ತಿಳಿಯಬೇಕಾದರೆ ನಾಡಿನ ಪ್ರತಿಯೊಂದು ಜಿಲ್ಲೆಯ ಶಾಸನೊಕ್ತ ನಾಣ್ಯಗಳ ಅಧ್ಯಯನ ಮಾಡುವುದರ ಮೂಲಕ ಅರಿಯಬಹುದಾಗಿದೆ.

ಜಿಲ್ಲೆಯ ಕುಕನೂರು ಶಾಸನದಲ್ಲಿ 'ದಿನಾರ' ಎಂಬ (ಪಂಚಶತಂದೀನಾ ರಾಣಾಂ) ರೋಮನ್ ದಿನೇರಿಯಸ್ ಶಬ್ದದ ರುಪಾಂತರ ವಡ್ಡಾರಾಧನೆಯಲ್ಲಿ ದ್ರಮ್ಮದ ಜೋತೆಗೆ ದೀನಾರ ಎಂಬ ನಾಣ್ಯದ ಹೆಸರು ಬರುವುದು[೨೨೨] ಮಾದಿನೂರು ಶಾಸನ[೨೨೩] ಗದ್ಯಾಣ-೧, ಗದ್ಯಾಣ-೨, ಪಣ-೪, ಪಣ-೧, ಉಲ್ಲೇಖನಿಡುತ್ತವೆ. ಇಲ್ಲಿ ಗದ್ಯಾಣ ಎಂಬುದು ಚಿನ್ನದನಾಣ್ಯವಾಗಿದ್ದು, ಇದನ್ನೆ ಕುಕನೂರಿನ ಶಾಸನ ಸಹ ಗದ್ಯಾಣಪೊನ್ನಂ ೧೦೦ ಗದ್ಯಾಣ ಎಂದಿರುವುದರಿಂದ ಇದರ ಇನ್ನೊಂದು ಹೆಸರು ಪೊನ್(ಚಿನ್ನ) ಎನ್ನಲಾಗಿದೆ.[೨೨೪] ಆಳವಂಡಿ ಶಾಸನವೊಂದು ಹೊನ್ನ(ಬಂಗಾರ), ಗದ್ಯಾಣ, ಹೋಂಗೆ ಪಣ ವಡ್ಡ ಬಡ್ಡಿ (ಇದು ನೆಲದ ಮೇಲೆ ಕೊಡುವ ಹೆಚ್ಚಿನ ಹಣ)ಯನ್ನು ಕೊಂಡ ಗದ್ಯಾಣ೧೭೨ ಕ್ಕೆ ಹೊನ್ನ ಬಡ್ಡಿಯವಳಗಂಗಡಿಯಕೆಯ್ಯ ತೆರಿಯನಿಳಸಿ, ಗದ್ದಾಣ ಪೂಜಾರಿಗೆ ಪಣಂ ೨ ಬಿಟ್ಟರೆಂದು ಉಲ್ಲೇಖಿಸುವುದು.[೨೨೫] ಹಿರೇಮನ್ನಪೂರ ಶಾಸನ ಮೂರು ಗದ್ಯಾಣ ಎಂದಿದೆ.[೨೨೬] ಇದು ಗದ್ಯಾಣದ ಒಂದು ಪ್ರಕಾರ ಭಾಗ (ಗದ್ಯಾಣ)=ಗದ್ಯಾಣದ ಒಂದು ಭಾಗ) ಅಂಟೂರರಾಣಾ ಶಾಸನ ವೀಸ ೧೦.[೨೨೭] ಚಳಗೇರಿ ಶಾಸನ ಹಾಗ ಕೊಂಡಲ್ಲಿರೆ ವೀಸಂ ಕೊಂಡಲ್ಲಿಯರೆಂದರೆ,[೨೨೮] ಹೆಸರೂರ ಶಾಸನ ಒಂದು ವೀಸವನ್ನು,[೨೨೯] ಕುಕನೂರಿನ ಮತ್ತೊಂದು ಶಾಸನ ಗದ್ಯಾಣ-೮, ಗದ್ಯಾಣ-೨೦, ಪಣ-೫, ಹೊಂನ್ನು, ಹಾಗವನ್ನು ಉಲ್ಲೇಖಿಸುವುದು.[೨೩೦] ಈ ಹಾಗ ಎಂದರೆ=ಪಾಗ ಆರುವಣ, ಪಣವೊಂದು ಹಾಗವೆಂದು ಅದರ ಅರ್ಥವನ್ನು ಕಾಣಬಹುದು.[೨೩೧] ಇಟಗಿ ಶಾಸನ ಲೊಕ್ಕಿಗದ್ಯಾಣವನ್ನು ಬಾಲಶಿಕ್ಷೆಗೆ ನೀಡಿದರೆಂದು[೨೩೨]

ಲಕ್ಕುಂಡಿಯ ಟಂಕಶಾಲೆಯಲ್ಲಿ ನಿರ್ಮಿತವಾದ ಗದ್ಯಾಣ ಪಾದಪೂಜೆಗೆ ಭೊಕ್ಕಿಯಪತ್ತು ಗದ್ಯಾಣ ೧ ಎಂದು ತಿಳಿಯುವದರೊಂದಿಗೆ ಅದರ ಮೌಲ್ಯವನ್ನು ಹೇಳುತ್ತದೆ.[೨೩೩] ಮಂಕಲ್ಕೇರಿ ಶಾಸನ ಸುವರ್ಣದ ಉಲ್ಲೇಖನೀಡುತ್ತಿದ್ದು,[೨೩೪] ಇದು ಚಿನ್ನದ ನಾಣ್ಯವಾಗಿದೆ. ಗದ್ಯಾಣವು ಸಂಸ್ಕೃತದಲ್ಲಿ ಹೊನ್ನಿಗೆಯು ಹೆಸರಾಗಿದೆ.[೨೩೫] ಮುಧೋಳ ಶಾಸನ ಕೂಡಾ ಚಿನ್ನದಕಾಣ್ಯ-೧, ಪಣ-೧ ವೊಂಗೆ (ಚಿನ್ನ) ೫ವೀಸ, ೧ ವೀಸದ ಉಲ್ಲೇಖ ನಿಡುವುದು.[೨೩೬] ಇಲ್ಲಿ ಪೊಂಗೆ ಗದ್ಯಾಣವೆಂಬುದು ಚಿನ್ನದ ನಾಣ್ಯವಾಗಿದೆ. ಕಲ್ಲೂರ ಶಾಸನ ಆರುವಣ ಹೊಂಗೆ ಹಾಗದ ನಾಣ್ಯವೆಂದಿದೆ.[೨೩೭] ಶಿವಪುರ ಶಾಸನ ಕಾರ್ಷಿಪಣದ ಬಗ್ಗೆ ತಿಳಿಸುವುದು.[೨೩೮] ಇದು ಬಂಗಾರ ಬೆಳ್ಳಿ ಅಥವಾ ತಾಮ್ರದಿಂದಾದ ಒಂದು ನಾಣ್ಯ, ಬಂಗಾರದ ಕಾರ್ಷಾಪಣದ ತೂಕ ೮೦ ಅಥವಾ ೧೦೦ ರತಿ ಎನ್ನಲಾಗಿದೆ.[೨೩೯] ಕವಲೂರು ಶಾಸನ ಪೊಂಗ ಗದ್ಯಾಣ ೧೪೭, ೧೫೦ ರ ಉಲ್ಲೇಖ.[೨೪೦] ಇಟಗಿ ಶಾಸನ ಲೊಕ್ಕಿ ಗದ್ಯಾಣ ೧೨೦ ಪೊಂಗ ಗದ್ಯಾಣ-೧೨೦, ೧೨ ಗದ್ಯಾಣ ಲೊಕ್ಕಿ ಗದ್ಯಾಣವನ್ನು[೨೪೧] ಹಿರೇಮನ್ನುಪೂರ ಸಾಸನ ೧೨ ಗದ್ಯಾಣ, ಅಂಕಾರ ಗದ್ಯಾಣ, ಕಾವಲವಣಗಳನ್ನು,[೨೪೨] ಹುಲಗಿಶಾಸನದಲ್ಲಿ ೬ ಗದ್ಯಾಣ, ಪಣ ಉಲ್ಲೇಖ,[೨೪೩] ಗಿಣಿಗೇರಿ ಶಾಸನ ಉಲ್ಲೇಕಿಸುವ ೩೦೦ ವರಹ ವಿಜಯ ನಗರ ಅರಸರಕಾಲಕ್ಕೆ ಚಾಲ್ತಿಯಲ್ಲಿದ್ದು 'ವರಹ' ಎಂಬುದು ಗದ್ಯಾಣವಾಗಿದೆ.[೨೪೪]

ಕಲ್ಲೂರ ಶಾಸನದಲ್ಲಿ ಬೆಳ್ಳಿ, ಕಂಚು, ಚಿನ್ನದ ಧಾತುಗಳ ಪ್ರಸ್ತಾಪ ಬರುತ್ತಿದ್ದು,[೨೪೫] ಬಹುತೇಕವಾಗಿ ಈ ಧಾತುಗಳಿಂದಲೆ ಬೇರೆ ಬೇರೆ ಮೌಲ್ಯದ ಭಿನ್ನ ಭಿನ್ನವಾದ ನಾಣ್ಯಗಳನ್ನು ಹೊರಡಿಸುತ್ತಿರುವುದಾಗಿ ತಿಳಿದುಬರುತ್ತದೆ. ಇಲ್ಲಿ ಪೋನ್ನ್ ಎಂಬುದು ೯೬ ಗ್ರಾಮ ೬೩ ಗ್ರಾಮ ಎಂದು ಗುರ್ತಿಸಿದ್ದು[೨೪೬] ಕುಕನೂರಿನ ಶಾಸನದಲ್ಲಿ ಪೊನ್ನ ೧೦೦ ಗದ್ಯಾಣದ ಉಲ್ಲೇಖ ಕಂಡುಬರುವುದು.[೨೪೭] ಈ ಹಣದ ವ್ಯವಸ್ಥೆಯಲ್ಲಿ ದೊಡ್ಡಪ್ರಮಾಣದ ಹಣ ಎಂದರೆ ಗದ್ಯಾಣ, ಲೆಕ್ಕದಲ್ಲಿಯೂ, ಸಣ್ಣ ಪ್ರಮಾಣದ ಹಣ ಪಣದ ಲೆಕ್ಕದಲ್ಲಿಯೂ ಚಲಾವಣೆಯಲ್ಲಿದ್ದವು. ಆದರೆ ಡಾ. ಚಿದಾನಂದ ಮೂರ್ತಿಯವರು ವೀಸವೆ ಕನಿಷ್ಟ ಹಣವೆಂದಿರುವರು, ೧೦ ಪಣಕ್ಕೆ ಒಂದು ಪೊಂಗದ್ಯಾಣ ಸಮಾನವಾಗುತ್ತಿತ್ತೆನಲಾಗಿದೆ. ಈ ವಿದ್ವಾಂಸರು ತಿಳಿಸುವ ನಾಣ್ಯಗಳ ಉಲ್ಲೇಖಗಳು ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಕಂಡು ಬರುವದರಿಂದ ನಾಡಿನ ನಾಣ್ಯವ್ಯವಸ್ಥೆಯನ್ನು ಅರಿಯಲು ಶಾಸನಗಳು ಪ್ರಮುಖ ಆಧಾರಗಳಾಗಿ ನಿಲ್ಲುತ್ತವೆ.

**ಟಂಕಸಾಲೆ**

ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳನ್ನು 'ಕಮ್ಮಟ' ಗಳೆಂದು ಅಚ್ಚಿನ ಟಂಕ ಸಾಲೆಗಳೆಂದು ಕರೆಯುತ್ತಿದ್ದರು. ರಾಜನು ವಿಶ್ವಕರ್ಮರೆಂದು ಕರೆಯಿಸಿಕೊಳ್ಳುವ ಅಕ್ಕಸಾಲಿಗರನ್ನು ಈ ಕಮ್ಮಟಗಳಲ್ಲಿ ನೆಮಿಸಿಕೊಂಡು, ನಾಣ್ಯಗಳನ್ನು ತಯಾರಿಸುತ್ತಿರುವುದಾಗಿ ತಿಳಿಯುತ್ತೇವೆ.[೨೪೮] ಇಲ್ಲಿ ಕೆಲಸ ನಿರ್ವಹಿಸುವ ಅಕ್ಕಸಾಲಿಗರು ಶ್ರೇಣಿಗಳೆಂಬ ಸಂಘವನ್ನು ಕಟ್ಟಿಕೊಂಡಿದ್ದರು. ಈ ನಾಣ್ಯಗಳನ್ನು ಹೊರಡಿಸುವ ಟಂಕ ಸಾಲೆಗಳು ಕೊಪ್ಪಳ ಜಿಲ್ಲೆಯಲ್ಲಿ ಕಂಡು ಬರದೇ ಇದ್ದರು ನೆರೆಯ ಜಿಲ್ಲೆಯ ಗದಗ ತಾಲೂಕಿನ 'ಲೊಕ್ಕಿಗುಂಡಿ'

ಯಲ್ಲಿ ಮತ್ತು ಬಳ್ಳಾರಿ ತಾಲೂಕಿನ 'ಕೊಟತೊಣೆ'ಯಲ್ಲಿ ನಾಣ್ಯಗಳನ್ನು ಮುದ್ರಿಸುವ ಟಂಕ ಸಾಲೆಗಳಿರುವುದಾಗಿ ತಿಳಿದುಬರುತ್ತದೆ.[೨೪೯]

**ತೆರಿಗೆ ಸುಂಕ**

ನಾವು ಯಾವುದೇ ನಾಡಿನ ಅರ್ಥ ವ್ಯವಸ್ಥೆಯನ್ನು ತಿಳಿಯಲು ಹೊರಟಾಗ ಆ ನಾಡಿನ ಅಭಿವೃದ್ಧಿ ಸುಭದ್ರತೆ ಅಲ್ಲಿಯ ಹಣಕಾಸಿನ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಎನ್ನುವುದನ್ನು ಮರೆಯಬಾರದು. ಆದ್ದರಿಂದಲೆ ಆಳುವ ಅರಸರು ಅದಕ್ಕೆ ಹೆಚ್ಚಿನ ಮಹತ್ವ ನೀಡಿದ್ದರು. ಈ ಕೊರತೆಯನ್ನು ನಿಗಿಸುವ ಮಾರ್ಗವೆ ತೆರಿಗೆ ವ್ಯವಸ್ಥೆ. ಕೆಲವೊಂದು ಸಾರಿ ಬೇರೆ ಬೇರೆ ಮೂಲಗಳಿಂದಲೂ ಸಹ ರಾಜ್ಯದ ಬೊಕ್ಕಸಕ್ಕೆ ಆದಾಯ ಬರುತ್ತಿರುವುದಾಗಿ ಗೊತ್ತಾಗುತ್ತದೆ.[೨೫೦]

**ಸುಂಕದ ಪ್ರಕಾರಗಳು**

ಶಾಸನಗಳಲ್ಲಿ ಉಲ್ಲೇಖಗೊಂಡ ತೇರಿಗೆಗಳನ್ನು ಅಧ್ಯಯನ ದೃಷ್ಟಿಯಿಂದ ಆಸ್ತಿ ತೆರಿಗೆ, ವೃತ್ತಿ, ಕೈಗಾರಿಕೆಗಳ ತೆರಿಗೆ, ವ್ಯಾಪಾರ ತೆರಿಗೆ, ಸಾಮಾಜಿಕ, ಧಾರ್ಮಿಕ ತೆರಿಗೆ, ಇತರ ತೆರಿಗೆಗಳೆಂದು ವಿಭಾಗಿಸಿ ಚರ್ಚಿಸಲಾಗಿದೆ.

**೧) ಆಸ್ತಿ (ಭೂಮಿ, ನಿವೇಶನ ಧನಕರುಗಳು) ತೆರಿಗೆ**

ರೈತನ ಮೂಲ ಉದ್ಯೋಗ ಕೃಷಿಯಾಗಿರುವುದರಿಂದ ಆತ ಭೂಮಿಯನ್ನೇ ಅವಲಂಬಿಸಿ ಭೂಮಿಯ ಮೇಲೆ ಆತ ರಾಜ್ಯಕ್ಕೆ ಭೂಕಂದಾಯ ಸಲ್ಲಿಸುತ್ತಿದ್ದು, ಅದು ಭೂಮಿಯ ಫಲವತ್ತತೆ ಮತ್ತು ಅಳತೆಯ ಪ್ರಮಾಣಕ್ಕನುಗುಣವಾಗಿ ನಿರ್ದರಿತವಾಗಿರುತ್ತಿತ್ತು. ಶಾಸನಗಳು ಕರಿಭೂಮಿ, ಹೊಲೆದೆರೆ, ಗೆಯ್ಕತೆರೆ, ಆರುವಣ ದಸವಂದ, ಸಿದ್ಧಾಯ ಮೂರಲೊಂದು ಪಣ ಎಂದು ತಿಳಿಸಿವೆ.[೨೫೧]

ಕುಕನೂರಿನ ಶಾಸನವೊಂದರಲ್ಲಿ '' ೯೯ ದಿನಾರ ಸಿದ್ಧಾಯಯನ್ನು ಪ್ರತಿವರ್ಷ ತಸ್ಮಾದನ್ಯ ಸರ್ವೆ ಭಾಧಾರಹಿತ ಏತಸ್ಸರ್ವ ಭಾವಿನೋಭೂಪಾಳಾಜೂಳಯನ್ತು' ಎಂದು ಸಿದ್ಧಾಯ ತೆರಿಗೆ ನೀಡುವ ಬಗ್ಗೆ ಹೇಳಿದರೆ,[೨೫೨] ಪುರ ಶಾಸನ ಸೋಮೇಶ್ವರ ಮಹಾಲಿಂಗಕ್ಕೆ ಊರಿನ ಪಶ್ಚಿಮಕ್ಕೆ ಮಡ್ಡೆಹೊಲ, ಗದ್ದೆ, ಹುಣಸೆ ಮರಗಳು, ಗವುಡ ಮಾನ್ಯದ ಹಣ, ಭತ್ತದ ಆದಾಯವನ್ನು ಸೇರಿಸಿ ಸಂಕ್ರಾಂತಿ ಪುಣ್ಯಕಾಲದಲ್ಲಿ ದತ್ತಿಯಾಗಿ ಬಿಟ್ಟರೆಂಬ ವಿವರಣೆಯಿಂದ ತೆರಿಗೆ ಆದಾಯ ತಿಳಿಯಪಡಿಸಲು ಮಹತ್ವದ ಶಾಸನವಾಗಿದೆ.[೨೫೩] ಇಲ್ಲಿ ಸಿದ್ಧಾಯ ತೇರಿಗೆ ಎಂಬದು ಒಂದು ವರ್ಷದಲ್ಲಿ ಒಂದು ಸಲ ಆಕರಿಸುವ ತೆರಿಗೆಯಾಗಿದ್ದು ಅಂಗಡಿ ಮನೆಗಳ ಮೇಲು ಆಕರಿಸಲಾಗುತ್ತಿತ್ತೆಂದು ತಿಳಿದುಬರುತ್ತದೆ.[೨೫೪]

**೨)ಆರುವಣ**

ಈ ತೇರಿಗೆಯ ಕುರಿತು ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆಗಳು ಮುಂದುವರಿದಿದ್ದು, ಅರುವಣಕ್ಕೆ ಒಂದು ತೆರಿಗೆ, ನೆಗಿಲು ತೆರಿಗೆ ಎಂಬರ್ಥಗಳನ್ನು ಕಾಣುತ್ತೇವೆ. ಇದಕ್ಕೆ ಅರುವಣಗಳ ತೆರಿಗೆ ಮಾನ್ಯಭೂಮಿಗಳ ಮೇಲಿನ ತೆರಿಗೆಗಳು ಭೂತೆರಿಗೆಗಳಾಗಿದ್ದವೆನ್ನಲಾಗಿದೆ.[೨೫೫] ಜಿಲ್ಲೆಯ ತಳಕಲ್ಲು ಶಾಸನ ಪೇಳೆ ಕುತ್ತುಂಬಿಳೆಯಿದಕ್ಕೆ

ಅರುವಣಂ ಎಂದರ[೨೫೬] ಕಲ್ಲೂರ ಶಾಸನ ಬಳ್ಳಂಗೆರೆಯ ಸೀಮೆಯು ಪಡುವ ತಾಳನ ಬಾಗಿಂ ಮೂಡ ಮ೬ ೧೬ ಗೆ ಆರುವಣ ದ ಭೂಮಿ ಮತ್ತರು ೧೨ ಕ್ಕಂ ಗದ್ಯಾಣವೆಂದಿದೆ. [೨೫೭] ಹೆಸರೂರು ಶಾಸನ ತೋಟದ ಹಸುಗೆ ಆರುವಣಂ ಮತ್ತರಲು 'ಪಣ' ವೊಂದುರಲೆಕ್ಕದಿ ಎಂಬ ಉಲ್ಲೇಖನೀಡುತ್ತದೆ[೨೫೮] ಹಾಗೆಯೇ ನಿವೇಶನ (ಮನೆ) ಗಳು ಮತ್ತು ಪಶುಪ್ರಾಣಿಗಳ ಮೇಲೆ ತೆರಿಗೆಗಳನ್ನು ವಿಧಿಸಲಾಗುತ್ತಿರುವುದಾಗಿ ಶಾಸನಗಳಲ್ಲಿ ಕಂಡುಬರುವುದು. ಮುಧೋಳ ಶಾಸನ ಬೇರೆ ಬೇರೆ ವೃತ್ತಿಯಲ್ಲಿ ತೊಡಗಿರುವ ಮತ್ತು ವಿವಿಧ ವಸ್ತುಗಳ ಮೇಲಿನ ತೆರಿಗೆ ಕುರಿತು ವಿವರಿಸುವುದು.[೨೫೯] ಕಲ್ಲೂರ ಶಾಸನ ಎತ್ತು, ಕತ್ತೆ, ಕೋಣನಲು ಹೇರು ಬಂದಂಡಂ ಹೆರ್ಜುಂಕ ಬೀರವಣ ವಡ್ಡರಾವುಳ ಸಹಿತ ಹತ್ತ ಕೊಂದು ದಶವಾಗಿ ನೀಡಿದರೆಂದಿದೆ.[೨೬೦] ಕುಕನೂರಿನ ಶಾಸನ 'ಸಾಸಿರ್ವರು ಕಿಳ್ತೋಗುಕೊಂತಗೊಪ್ಪಲ ಸೆಟ್ಟಿವ ನೆವೊಹಳದಿಂ ಬಂದ ತೆಂಕವಾಗಿಲ, ಮನೆಯ ಸೊಂಮ್ಮು ಸಾಮ್ಯವುಳ ನಿತುವುಂ ಎಂದದೆ.[೨೬೧] ಇನ್ನೊಂದು ಇಟಗಿ ಶಾಸನ ಮನೆಯ ನಿವೇಶನದಗಲಕ್ಕೆ ೫ಳ ತೆಂಕಣಮೆಯ್ಯನಿಳಂ ಎಂದು ಹೇಳುತ್ತದೆ. ಹೀಗಾಗಿ ಅಂದು ಮನೆಯ ನಿವೇಶನಕ್ಕೂ ಸಹ ತೆರಿಗೆ ನಿಡುತ್ತಿರುವುದಾಗಿ ತಿಳಿಯುತ್ತದೆ.[೨೬೨] ಪುರ ಶಾಸನವೊಂದರಲ್ಲಿ ೨೨ ಕ್ಕೆ x ಆರು ಕೈ ಅಗಲದ ಅಳತೆಯ ಇಪ್ಪತ್ತೈದು ಮನೆಗಳನ್ನು ಬಿಟ್ಟ ಉಲ್ಲೇಖನೀಡುತ್ತದೆ.[೨೬೩]

## ೩) ವೃತ್ತಿ ಕೈಗಾರಿಕೆ ತೆರಿಗೆ

ನೇಕಾರಿಕೆ, ಕಮ್ಮಾರಿಕೆ, ಕುಂಬಾರಿಕೆ, ಬಡಿಗತನ, ಉಪ್ಪಾರರು, ಚಮ್ಮಾರರು, ಅಕ್ಕಸಾಲಿಗರು ಮುಂತಾದವರು ವೃತ್ತಿಕೈಗಾರಿಕೆಗಳಲ್ಲಿ ಪ್ರಮುಖರು. ಇವರು ತಾವು ಗಳಿಸಿದ ಲಾಭದ ಮೇಲೆ ಸರಕಾರಕ್ಕೆ ದೇವರಿಗೆ, ತೇರಿಗೆಗಳ ರೂಪದಲ್ಲಿ ಬಿಟ್ಟುಕೊಡುತ್ತಿರುವುದಾಗಿ ಜಿಲ್ಲೆಯ ಹಲವಾರು ಶಾಸನಗಳು ತಿಳಿಯಪಡಿಸುತ್ತವೆ. ಕುಕನೂರಿನ ಮಲ್ಲಿಕಾರ್ಜುನ ದೇವರಿಗೆ ಗದ್ಯಾಣವನ್ನು[೨೬೪] ಇಟಗಿಯ ಶಾಸನ ತೆಲ್ಲಿಗರು ದೇವರ ನಂದಾದೀಪಕ್ಕೆ ಮನೆ, ಗಾಣ ೨ ಬಿಟ್ಟ ಬಗ್ಗೆ,[೨೬೫] ಪುರದ ಶಾಸನ ದೇವರ ಅರಮನೆಯ ಬಡಗಿ ಕಾಳೋಜನಿಗೆ ಒಂದು ಮತ್ತರು ಇನ್ನೊಬ್ಬ ಬಡಗಿ ಕಲ್ಲೋಜನಿಗೆ ಅರೇ ಮತ್ತರು ೫, ಗವರೇಶ್ವರ ದೇವರ ನೈವೇದ್ಯಕ್ಕೆ ೧ ಗಾಣ, ಗಾಣಿಗರು, ನಂದಾದೀಪಕ್ಕೆ ಸೊಳಸಿಗೆ ಎಣ್ಣೆ, ದವಸ, ಅಡಕೆ, ಅರಸಿನ, ಮೇಣಸಿಣ ಮೇಲಿನ ತೇರಿಗೆಯನ್ನು, ಸೋಮೇಶ್ವರ ದೇವರ ಲಿಂಗಕ್ಕೆ ಅಂಗಡಿ, ಹಣ, ಗಾಣ, ಮಗ್ಗ (ನೇಕಾರರು) ಸಿದ್ಧಾಯ ಕಡ್ಡಾಯ, ವೊಜರು ತರುವ ಹಣ, ಕುಂಬಾರ ತರುವಹಣ, ಉಪ್ಪಿನ ವೋಳವಿ ಮುಂತಾದ ಸಕಲ ಸುವರ್ಣಾದಾಯ ಭತ್ತದ ಆದಾಯಗಳನ್ನು ಬಿಟ್ಟಿರುವುದಾಗಿ ಈ ನಾಲ್ಕು ಶಾಸನಗಳಲ್ಲಿ ಕಾಣುತ್ತೇವೆ.[೨೬೬] ಅದೇ ರೀತಿ ಅಂಟೂರತಾಣಾ ಶಾಸನ ಅಂಗಡಿಯಲೆಣ್ಣೆಮಾನ-೧, ನಂದಾದೀಪಕ್ಕೆ ಗಾಣ ಬೋಜನಕ್ಕೆ, ಮಡಕೆ (ಕುಂಬಾರಿಂದ) ದೀಪಾವಳಿ ಪಣತೆಗೆ, ಅಕ್ಕಸಾಲಿ, ಬಡಗಿ, ಕಮ್ಮಾರ, ರೊಕ್ಕಲದೊಂದು ತೆನೆಯ ಹೊರೆ ಹೆಡಗೆಯಲ್ಲಪ್ಪ (ಉಪಾರ) ಮಾನ೧, ನೂಲ ಪರ್ವಕ್ಕೆ (ನೇಕಾರ) ಯೊಕ್ಕಲ ಲೊಂದು ನೂಲ ಕಳಿಹು ಹೆಡಲಗೆ ಚಕ್ಕಳ ಹತ್ತಿರ ತಾಣದಲು ನಡೆಯುವ ಕಂಬವೆರ್ಗ್ಗಡೆವರಿಶಂ ಪ್ರತಿ ಪಣ-೨ ನೀಡುತ್ತಿರುವ ತೆರಿಗೆಗಳ ಕುರಿತು ಮಾಹಿತಿ ನಿಡುವುದು.[೨೬೭]

## ೪) ವ್ಯಾಪಾರ ತೆರಿಗೆ

ಇಂದಿನ ಸರಕಾರದ ಹಾಗೆ ಪ್ರಾಚೀನ ಕಾಲದಲ್ಲಿಯೂ ರಾಜ್ಯ ಬೊಕ್ಕಸಕ್ಕೆ ತುಂಬುವ ಬಹುದೊಡ್ಡ ಮೂಲ ಆದಾಯವೆಂದರೆ ಹೆಜ್ಜುಂಕ, ವಡ್ಡರಾವುಳ (ಎರಡುಂ) ಬಿಲ್ಕೋಡೆಗಳು ವ್ಯಾಪಾರದ ಮೇಲಿನ ತೆರಿಗೆಗಳಲ್ಲಿ ಮುಖ್ಯಾವಾಗಿದ್ದವೆಂದು ತೋರುತ್ತದೆ.

### ಹೆಜ್ಜುಂಕ

ಇದರ ಕುರಿತು ಕಲ್ಲೂರಿನ ಶಾಸನ 'ಹೆಜ್ಜುಂಕ' ಬೀರವಣ, ವಡ್ಡರಾವುಳ ಸಹಿತ ಹತ್ತಕೊಂದು ದಶದಂಡವಾಗಿ[೨೬೮] ಸುಂಕವೆರ್ಗ್ಗಡೆ ಕೊಡಬೇಕಾಗಿ ತಿಳಿಸುವದು. ಮಾದಿನೂರು ಶಾಸನ ದೇವರಂಗಭೋಗಕ್ಕೆ ಬಿಟ್ಟ ಪಣ -೨ ಹೆಜ್ಜುಂಕ್ ಎಂದು ಉಲ್ಲೇಖಿಸಿದೆ. ಈ ಹೆಜ್ಜುಂಕ ಎಂಬುದು ಸಗಟು ವ್ಯಾಪಾರಿವಸ್ತುಗಳ ಮೇಲೆ ಹೇರುವ ಹೇರಿನ ಮೇಲಿನ ಸುಂಕವಾಗಿದ್ದು ದೊಡ್ಡ ದೊಡ್ಡ ವ್ಯಾಪಾರಿಗಳು ಈ ಸುಂಕವನ್ನು ನೀಡುತ್ತಿದ್ದರೆಂದು ತಿಳಿದುಬರುತ್ತದೆ.[೨೬೯]

### ವಡ್ಡರಾವುಳ

ಹೆರ್ಜುಂಕ ಮತ್ತು ವಡ್ಡರಾವುಳ ಎಂಬ, ಅವಳಿ ಸುಂಕಗಳಲ್ಲಿ ಹೆರ್ಜುಂಕವು ಹೇರಿನ ಮೇಲೆ ಆಕರಿಸಬಹುದಾದ ಸುಂಕವಾದರೆ, ವಡ್ಡರಾವುಳವು ವಡ್ಡವ್ಯವಹಾರಿಗಳು ಕೊಡುವ ಸುಂಕವಾಗಿತ್ತೆಂದು ತೋರುತ್ತದೆ.[೨೭೦] ಇದರ ಕುರಿತು ಕಲ್ಲೂರ ಶಾಸನವೊಂದು ಮನೆಯ ವೆರ್ಗ್ಗಡೆ ಮಹಾ ದೇವಯ್ಯಂಗಳ್ ಎರಡನೂರನ್ನು ಆಳುವಾಗ ಅಗ್ರಹಾರ ಬಾದಾಮಿಯ ಭಮ್ಮದೇವ ನಾಯಕನ ಪುತ್ರ ಗೋತ್ರಪವಿತ್ರ, ''ವಿಪ್ರಕುಳಕಮಳ ಮಾರ್ತ್ತಾಂಡ ಪ್ರಜೆಮೆಚ್ಚೆಗಂಡಂ ಹೆಗ್ಗಡೆ ಮಹಾದೇವಯ್ಯ ನಾಯಕನೆರಡಾರುನೂರರ ಹೆರ್ಜುಂಕ ಮನಾಳುತ್ತಂ'' ದೇವರ ಚೈತ್ರ ಪವಿತ್ರಕ್ಕೆಂದು ವಿವಿಧ ವಸ್ತುಗಳಾದ ಅಡಕಿ, ಮೆಣಸು, ದಸುರಿಯ ಸೀರಿ, ಅರಸಿಣ, ಅಲ್ಲಾ, ಮುಂತಾದವುಗಳನ್ನು ಹೊತ್ತ ಬರುವ ಎತ್ತು ಕತ್ತೆ, ಕೋಣನಲು ಹೇರಿಕೊಂಡು ಬಂದಾಗ ಹೆರ್ಜುಂಕ ಬೀರವಣ ವಡ್ಡಲಾವುಳ ಸಹಿತ ಹತ್ತಕೊಂದು ದಶವಂದಾಗಿ ಬಿಟ್ಟರೆಂದು ವಿವರಿಸುತ್ತದೆ. ವಾವಯ್ಯನ ಹೆಗ್ಗಡೆ ಸುಂಕದ ಜಕ್ಕಿರಾಜನು ಕಲ್ಲೂರಲು ಮುನ್ನ ಸುಂಕಕ್ಕೆನಡೆವ ಮೂರು ಪಣಮುಮಂ ದೇವರ ನಂದಾದೀಪ ಎಣ್ಣೆಗೆ ಬಿಟ್ಟರೆಂದು ಹೆಳುವಲ್ಲಿ ವಡ್ಡರಾವುಳ ಎಂಬ ಸುಂಕದ ವಸೂಲಿಗಾಗಿ ಪ್ರತ್ಯೇಕ ಒಬ್ಬ ಅಧಿಕಾರಿ ನಿಯುಕ್ತಗೊಂಡಿರುವದನ್ನು ತಿಳಿಸುತ್ತದೆ.[೨೭೧]

### ಪನ್ನಾಯದ ಸುಂಕ

ಇದು ಎಲೆ ಅಡಕೆಗಳ ವ್ಯಾಪಾರದ ಮೇಲೆ ಆಕರಿಸುವ ತೇರಿಗೆಯಾಗಿದ್ದು.[೨೭೨] ಎಲೆ ಕೆಡುವ ವಸ್ತುವಾದ್ದರಿಂದ ಪನ್ನಾಯವನ್ನು ವಸ್ತುರೂಪದಲ್ಲಿ ಸ್ವಿಕರಿಸದೇ ಹಣದ ರೂಪದಲ್ಲಿ ಕೊಡುತ್ತಿರುವುದಾಗಿ ಕುಕನೂರಿನ ಶಾಸನ ದಂಡನಾಯಕ ಪನ್ನಾಯದದಿಷ್ಟಾಯಕಂ ರೇವರಸರ ಮಯ್ದುನ ನಯ್ದಾಗರದ ಪೆರ್ಗ್ಗಡೆ

ಸಾರಂಗಪಾಣಿ ನಾಯಕರು ಪನ್ನಾಯದ ಸುಂಕದಲು ದೇವರ ನಂದಾದೀಪಕ್ಕೆ ತಿಂಗಳಿಗೆ ಬಿಟ್ಟ ಪಣ ೧ ಹಾಗ ೧ ಬಿಟ್ಟರೆಂದಿದೆ.[೨೨೩] ಮಾದಿನೂರು ಶಾಸನ ಪನ್ನಾಯದ ಸೋಮೇಶ್ವರನ ತಮ್ಮ ರೇವರಸ ಪನ್ನಾಯದ ಸುಂಕದೊಳಗೆ ದೇವರಂಗ ಭೋಗಕ್ಕೆ ಬಿಟ್ಟ ಪಣ -೨ ಹೆರ್ಜುಂಕ ಎಂದಿರುವುದು.[೨೨೪]

ಈ ಸುಂಕಗಳ ಹಾಗೆ ಕೊಟ್ಟಲ್ಲಿ ಕೊಂಡಲ್ಲಿ ಮಾರಿದಲ್ಲಿ, ಮಾರುಗೊಡ ಮುಂತಾದ ಶಬ್ದಗಳು ಜಿಲ್ಲೆಯ ಶಾಸನಗಳಲ್ಲಿ ಕಂಡು ಬರುತ್ತಿದ್ದು ಅವುಗಳು ಕೊಳುಕೊಡುವ ವ್ಯವಹಾರ ಸೂಚಕವಾಗಿವೆಯನ್ನಲಾಗಿದೆ. ಸಂತೆ-ಪೇಟೆಗಳಿಗೆ ಬರುತ್ತಿದ್ದ ವಿವಿಧ ಸರಕುಗಳ ಮೊತ್ತ ಮತ್ತು ಅವುಗಳ ಮೇಲೆ ನಿಗದಿಪಡಿಸಿದ ಸುಂಕಗಳನ್ನು ಆಕರಿಸಲಾಗುತ್ತಿತ್ತು. ಈ ತೇರಿಗೆಗಳನ್ನು ಮಾರಾಟ ಸುಂಕ, ಸಂತೆಯ ಕರವೆಂದು ಕರೆದಿರುವುದನ್ನು ಕಾಣುತ್ತೇವೆ.[೨೨೫] ಧವಸ ಧಾನ್ಯಗಳ ತೆರಿಗೆ ಕೊಟ್ಟಲ್ಲಿ ಕೊಂಡಲ್ಲಿ ಸಮಾನವಾಗಿರುತ್ತಿದ್ದುದರ ಉಲ್ಲೇಖಗಳು ಇಲ್ಲಿ ವಿರಳವಾಗಿವೆ. ಮುಧೋಳ ಶಾಸನದಲ್ಲಿ ಅಯ್ಯಾವೊಳೆ ಐನೂರ್ವರು ಎಂಟುನಾಡ ಹದಿನಾರು, ಸಮಸ್ತ ಮುಮ್ಮುರಿ ದಂಡಗಳು, ನಾನಾದೇಶಿಗಳು ತಾವು ಅಳೆಯುವ, ತೂಗುವ, ಎಣಿಸುವ, ಸಮಸ್ತ ದವಸದಾನ್ಯವನ್ನು ಮಾರಿದಲ್ಲಿ, ಚಿನ್ನದ ಕಾಣಿ ಎರಡು, ಸೀರೆ ಹೊತ್ತತಂದ ಬಂಡೆಯೊಂದಕ್ಕೆ ೧ ಪಣ, ಎತ್ತಿನ ಮೆಳವಿಗೆ ಎರಡು ವೀಸ, ತಲೆಯ ಮೇಲ ತರುವ ಜವಳಿಯ ಸಿರೆಗೆ ೧ ವೀಸ, ಒಕ್ಕಲುಗಳು ಒಂದು ಹಾಗ ಕೊಡಬೇಕೆಂದು ತಿಳಿಸುವುದು.[೨೨೬]

ಪುರ,[೨೨೭] ಚಳಗೇರಿ ಶಾಸನಗಳು ವಿವರವಾದ ಮಾಹಿತಿನಿಡುವುದಿಲ್ಲವಾದರು ಕೊಟ್ಟಲ್ಲಿ ಕೊಂಡಲ್ಲಿ ಎಂಬ ಉಲ್ಲೇಖ ನಿಡಿವೆ[೨೨೮] ಅಂಟೂರಠಾಣಾ ಶಾಸನ ಸಂತೆಯಲ್ಲಿ ನೆರೆಯುವತುಪ್ಪಕ್ಕೆ ದೇವರ ಬಳ್ಳ ಮಾನ, ಬೆಲ್ಲ ಮೂರು, ಹೆಡಿಗೆಕಾಯಿ, ಹಣ್ಣು, ಸುಣ್ಣ ಮಾರಿದಲ್ಲಿ ತೆರಿಗೆ ನಿಡಬೇಕಾಗುವದು ಎಂದು ಹೆಸರಿಸುವುದು.[೨೨೯] ವಿಪ್ರ ಶಾಸನ[೨೩೦] ವಿಪ್ರ ನಾರಾಯಣದಲ್ಲಿ ಎಲೆಕಾರರು (ಪನ್ನುವರ್ಣ್ನದವರು) ಹೇರಿಗೆನೂರು ಎಲೆಯನ್ನು ಅಂದಳಕ್ಕೆ ೫೦ ಎಲೆಯನ್ನು ಕೊಟ್ಟರೆಂದಿದೆ ಹಾಗೆಯೆ ಪುರದ ಇನ್ನೊಂದು ಶಾಸನ ದವಸ, ದಾನ್ಯ-ಅಡಕೆ, ಅರಸಿನ ಮೆಣಸು, ರಾಸದಿ, ಪಂಚವಣ್ಣಿಗೆ ದೊನೆಮಾಸಿ ಕೊಟ್ಟಿರುವುದಾಗಿ ಹೇಳಿದೆ.[೨೩೧]

**ಕಿರುಕುಳಾದಾಯ**

ಇದು ಚಿಲ್ಲರೆ ಕರಗಳಿಂದ ಬರುವ ಆದಾಯವಾಗಿದೆ.[೨೩೨] ಹಿರೇಮನ್ನಾಪುರ ಶಾಸನ ಗದ್ಯಾಣ, ಅಂಕಕಾರ ಗದ್ಯಾಣ ಕಾವಲಿವಣಸೊವಿಣೆಗೆ ಗವಣಂ, ಧನಬಳಂ, ಮನೆವಣಂ, ಮೇವು ಮೊದಲಾಗೆ ಪೆರೆವು ಮೂಗನ್ತ ಕರೆರುದೆರೆ ಕಿರುಕುಳಾಯಸವಭಾದಾ ಪರಿಹಾರವಾಗಿ ನಿಡಿದರೆ, ಆಜ ವರ್ಮರಸನು ಮತ್ತರೊಂದುಮುಂ ಮರುಕಾಣಿಕೆಯಾ ಹೇರಿಗಾಗಿ ಕಿರುದೆರೆ ಕಿರುಕುಳಾಯಮಾಗುನ್ತುಕ್ ಕೊಟ್ಟರೆಂದು ತಿಳಿಸುವುದು.[೨೩೩]

## ೫) ಸಾಮಾಜಿಕ-ಧಾರ್ಮಿಕ ತೆರಿಗೆ

ಪ್ರಾಚೀನ ಮಧ್ಯಕಾಲಿನ ಕರ್ನಾಟಕದ ಜನ-ಸಾಮಾಜಿಕ-ಧಾರ್ಮಿಕ ವ್ಯವಸ್ಥೆಯಲ್ಲಿ ಚೌಲ, ಉಪನಯನ, ಮದುವೆ, ಸೀಮಂತ ಮುಂತಾದ ಸಂಸ್ಕಾರದ ಕಾರ್ಯಗಳು ನಡೆಯುತ್ತಿದ್ದವು. ಅವುಗಳ ಮೇಲೆ ವಿಧಿಸುವ ತೆರಿಗೆಗಳ ಬಗ್ಗೆ ಕೂಡಾ ಶಾಸನಗಳಲ್ಲಿ ಆಧಾರಗಳಿರುವುದನ್ನು ಕಾಣುವೇವು.[೨೮೪] ಕೊಪ್ಪಳ ಜಿಲ್ಲೆಯ ಯಲಬುರ್ಗಿ ತಾಲೂಕಿನ ಕ್ರಿ.ಶ. ೧೧ ನೆ ಶತಮಾನದ ಶಾಸನ ವರ-ವಧುಗಳ ಬಗ್ಗೆ ಪ್ರಸ್ತಾಪಿಸಿದರೆ, ಮಾದಿನೂರ ಶಾಸನ ವೈಶ್ಯ, ಶೂದ್ರ, ಪಂಚಮರು ತಮ್ಮ ಮದುವೆಯ ತೆರಿಗೆಯಾಗಿ ಹಣವನ್ನು ಸಾಮಾಜಿಕ ಧಾರ್ಮಿಕ ಚಟುವಟಿಕೆಗಳಿಗಾಗಿ ಬಿಟ್ಟ ಕುರಿತು ಮತ್ತು ಈ ಮದುವೆಗೆ ವಿಮಾನ ಮಾಡುವವರಿಗೆ ಗದ್ಯಾಣ-೧ ಕೊಟ್ಟರೆಂದು ತಿಳುಸುವುದು[೨೮೫] ಪುರ ಶಾಸನ ಸಾಮಾಜಿಕ ಧಾರ್ಮಿಕ ಮುಖ್ಯ ಕೇಂದ್ರವಾದ ಗವರೇಶ್ವರ ದೇವರ ಅಂಗಭೋಗ, ರಂಗಭೋಗ, ಪಾತ್ರ ಪಾವುಳ, ಚೈತ್ರ ಪವಿತ್ರ ಪಂಚಪವಿತ್ರ ಮಹಾ ನೈವೇದ್ಯಭೋಜನಕ್ಕೆ ಹಿರಿಯಕೊಲಲ್ಲಿ ೧ ಮತ್ತರು ಹಿಟ್ಟು ದಾನಗಳನ್ನು ನೀಡಿದ್ದಾಗಿ ಉಲ್ಲೇಖಿಸುವುದು.[೨೮೬]

### ಹಿಟ್ಟುದೆರೆ

ಇದು ಆಯಗಾರರನ್ನು ಪ್ರತಿಬಿಂಬಿಸುವ ಪದವಾಗಿದ್ದು[೨೮೭] ಇಂದು ಕೂಡಾ ಹಳ್ಳಿಗಳಲ್ಲಿ ಸ್ವಾಮಿಗಳು ದಿನಾಲು ಹಿಟ್ಟು ಬಿಕ್ಷೆಗಾಗಿ ಹೋಗಿ ತಮ್ಮ ಜೀವನ ನಡೆಸುತ್ತಿರುವರು. ಇದಕ್ಕೆ ಜಿಲ್ಲೆಯ ಪುರ ಶಾಸನ[೨೮೮] ಹಿಟ್ಟುಕಾರ ಗಂಗರಸ, ಬೀಚರಸರ ಉಲ್ಲೇಖಮಾಡಿದರೆ, ಶಿರಗುಪ್ಪ ಶಾಸನ ಹಿಟ್ಟಿನ ಮನೆ ಮಾನ್ಯವಾಗಿ ಕೊಟ್ಟರೆಂದು,[೨೮೯] ಅದೇ ಗ್ರಾಮದ ೧೨ ನೆ ಶತಮಾನದ ಶಾಸನ ೮ ಹಿಟ್ಟು ಸಹಿತ ೪೮ ಮನ್ನೆಯರು ದಾನ ಬಿಟ್ಟ ಬಗ್ಗೆ ಹೇಳಿದೆ.[೨೯೦]

### ಬೀರವಣ

ಯುದ್ಧ ಮತ್ತು ಊರಿನ ಸಂರಕ್ಷಣೆಯಲ್ಲಿ ತೊಡಗಿದ ವೀರರಿಗೆ ಕೊಡುವ ಹಣ ಬೀರವಣ ಮತ್ತು ಎತ್ತು, ಕೋಣ, ಕತ್ತೆಗಳ ಸಾರಿಗೆಯ ಸಂರಕ್ಷಣೆಗಾಗಿ ವೀರರಿಗೆ ಬೀರವಣಬಿಟ್ಟ ಸಂಗತಿಗಳು ಶಾಸನಗಳಲ್ಲಿವೆ. ಇದಕ್ಕೆ ನಿದರ್ಶನವಾಗಿ ಕಲ್ಲೂರ ಶಾಸನ ಹೆರ್ಜುಂಕ, ಬೀರವಣ, ವಡ್ಡರಾವುಳ ಸಹಿತ ಬಿಟ್ಟಿರುವುದಾಗಿ ಹೇಳಿದರೆ,[೨೯೧] ಪುರ ಶಾಸನದಲ್ಲಿ ಕೆಳವಾಡಿ ನಾಡ ಹಿರಿಯ ಬೀರವಣಿಗ ಕವಡಿಯಕೇತಿ ಸೆಟ್ಟಿ ಮುಖ್ಯವಾಗಿ ಸಮಸ್ತ ಬೀರವಣಿಗರು ಬೀರವಣದಲ್ಲಿ ಒಂದು ಗದ್ಯಾಣ ಕೊಟ್ಟ ಬಗ್ಗೆ ವರ್ಣಿಸುವುದು.[೨೯೨] ಈ ಬೀರವಣವನ್ನು ಒಂದೆಡೆ ಅರಸ ಪ್ರಜೆಗಗಳಿಂದ ಇನ್ನೊಂದು ಕಡೆ ಗ್ರಾಮದ ಪ್ರಜೆಗಳು ಒಟ್ಟಾಗಿ ಯೋಧರಿಗೆ ಕೊಡುತ್ತಿದ್ದ ಬಗ್ಗೆ ಕೂಡಾ ನಾಡಿನ ಶಾಸನಗಳಲ್ಲಿ ಉಲ್ಲೇಖಗಳಿವೆ.[೨೯೩] ಈ ಸುಂಕಗಳನ್ನು ಸಂಗ್ರಹಿಸಲು ಅಧಿಕಾರಿ ವರ್ಗಗಳಿದ್ದಿರುವ ವಿಷಯ ಕಲ್ಲೂರು ಶಾಸನದಲ್ಲಿದ್ದು ಸುಂಕವನ್ನಾಳುವ ಜಕ್ಕಿರಾಜ, ಒಡ್ಡರಾವುಳ, ಸುಂಕವೆರ್ಗ್ಗಡೆ ಮಹಾದೇವಯ್ಯನಾಯಕನು ಹೆರ್ಜುಂಕ ಎರಡನೂರು ಆಳುತ್ತಿದ್ದರೆಂದು ಬೀರವಣಿಗ ಕವಡಿಯ

ಕೇತಿಸೆಟ್ಟಿ, ಮುಂತಾದವರು ಸುಂಕದ ಅಧಿಕಾರಿಗಳಾಗಿದ್ದರೆಂದು ಹೇಳುವುದು.[೯೪] ನಾಯಕರು, ನಾಡಿನ ಸೆಟ್ಟರು, ದಂಡನಾಯಕರು ಸುಂಕಾಧಿಕಾರಿಗಳಾಗಿ ಸುಂಕವನ್ನು ಸಂಗ್ರಹಿಸುವುದರ ಜೊತೆಗೆ ಅದನ್ನು ರಾಜನಿಗೆ (ರಾಜ್ಯಕ್ಕೆ) ಒಪ್ಪಿಸುವುದಾಗಿ ಶಾಸನಗಳ ಅಧ್ಯಯನದಿಂದ ತಿಳಿದುಬರುತ್ತದೆ.

## ರಾಜ್ಯದ ಖರ್ಚು

ಇದರ ಬಗ್ಗೆ ಕೊಪ್ಪಳ ಜಿಲ್ಲೆಯ ಶಾಸನಗಳು ಉದಾಸೀನ ತಾಳಿದ್ದರೂ ಹೊರನಾಡಿನ ಶಾಸನಗಳಾಧರಿತವಾಗಿ ಇಲ್ಲಿಯವರೆಗೆ ಗಮನಿಸಿದ ಸಮಗ್ರ ಆರ್ಥಿಕ ಚಟುವಟಿಕೆಗಳನ್ನು ಅರಿತಾಗ ರಾಜ ವೈಭವ, ಆಡಳಿತ ವ್ಯವಸ್ಥೆ, ರಾಜ್ಯ ರಕ್ಷಣೆ, ಸಾಮಾಜಿಕ - ಧಾರ್ಮಿಕ ಕಾರ್ಯಗಳು ರಾಜ್ಯದ ಪ್ರಜೆಗಳ ಸಹಕಾರದಿಂದ ನಡೆಯುತ್ತಿರುವುದಾಗಿ, ರಾಜನು ವಿಧಿಸಿದ ತೆರಿಗೆ ಸುಂಕಗಳನ್ನು ಪ್ರಜೆಗಳು ತಪ್ಪದೆ ಕಟ್ಟುತ್ತಿರುವದಾಗಿ, ಸಾಮಾಜಿಕ, ಧಾರ್ಮಿಕ ಕ್ಷೇತ್ರದಲ್ಲಿ ಕಂಡುಬರುವ ಕೆರೆ-ಕಾಲುವೆ, ಬಾವಿ, ದೇವಾಲಯ ಅವುಗಳ ಜೀರ್ಣೋದ್ಧಾರ, ಶಿಕ್ಷಣ ಸಂಸ್ಥೆಗಳು, ಅಂಗಭೋಗ, ರಂಗಭೋಗ, ಇತ್ಯಾದಿಗಳು ಸುಗಮವಾಗಿ ಸಾಗಲು ವ್ಯಾಪಾರಿಗಳು, ರಾಜರು, ಅಧಿಕಾರಿಗಳು ದಾನ ದತ್ತಿಗಳನ್ನು ಬಿಡುವ ಮೂಲಕ ತೆರಿಗೆಯಿಂದ ರಿಯಾಯ್ತಿ ಪಡೆಯುತ್ತಿದ್ದರು. ಅಲ್ಲದೆ ಸರ್ಕಾರಕ್ಕೂ ಸಹ ತೆರಿಗೆಗಳನ್ನು ಕಟ್ಟುತ್ತಿದ್ದರು. ಇಂತಹ ಆದಾಯಗಳಿಂದಲೇ ರಾಜ್ಯದ ಸಮಗ್ರ ಖರ್ಚು ವೆಚ್ಚಗಳನ್ನು ಮಾಡಲಾಗುತ್ತಿತ್ತು. ಬಹುಪಾಲು ತೆರಿಗೆಗಳು ಶಿಕ್ಷಣ ವ್ಯವಸ್ಥೆ, ಧಾರ್ಮಿಕ ದೇವಾಲಯದ ಕಾರ್ಯಗಳಿಗಾಗಿ ವ್ಯಯವಾದರೆ, ಅರ್ಧಭಾಗ ರಾಜ್ಯ ರಕ್ಷಣೆಗಾಗಿ ಖರ್ಚಾಗುತ್ತಿತ್ತೆಂದು ಮತ್ತು ರಾಜ್ಯದಲ್ಲಿ ಕ್ಷಾಮ ಆವರಿಸಿದಾಗಲೂ ಕೂಡಾ ರಾಜನು ರೈತರಿಗೆ ಬಿತ್ತನೆ ಬೀಜಗಳನ್ನು, ಆಹಾರ ಧಾನ್ಯಗಳನ್ನು ಹಂಚಬೇಕೆಂದು ಅರ್ಥ ಶಾಸ್ತ್ರ ತಿಳಿಸುತ್ತದೆ.[೯೫]

ಹೀಗೆ ಆರ್ಥಿಕ ಚಟುವಟಿಕೆಗಳು ರಾಜ್ಯದ ಆದಾಯಗಳ ಮೇಲೆ ಅದರ ಅಭಿವೃದ್ಧಿ ನಡೆಯುತ್ತಿರುವುದಾಗಿ ನಮ್ಮ ಸಂಶೋಧನೆಯಿಂದ ಅರಿವಿಗೆ ಬರುತ್ತದೆ. ಇದೆಲ್ಲಾ ನೋಡಿದಾಗ ಪ್ರಾಚೀನ ಆರ್ಥಿಕ ವ್ಯವಸ್ಥೆಯ ಪ್ರಭಾವ ಇಂದಿನ ಆಧುನಿಕ ಆರ್ಥವ್ಯವಸ್ಥೆಯ ಬದಲಾವಣೆಗಳಿಗೆ ಕಾರಣವಾಗಿರಬೇಕೆಂದೆನಿಸುತ್ತದೆ.

### ಅಡಿಟಿಪ್ಪಣಿಗಳು

೧. ಚಿದಾನಂದ ಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು- ೩೬೪, ಮೈಸೂರ.

೨. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ - ೨ , ಕೊಪ್ಪಳ ಜಿಲ್ಲೆ, ನಂ. ೨೬, ಮಾದಿನೂರು (ಕೊ.ತಾ.), ಕ್ರಿ.ಶ. ೧೧೩೬, ಪು-೩೨.

೩. ಅದೇ, ನಂ-೫೯, ತಳಕಲ್ಲು (ಯ.ತಾ.), ಕ್ರಿ.ಶ. ೯೯೧' ಪು-೨೫೩.

೪. ಅದೇ, ನಂ-೩೭, ಬಳಗೇರಿ (ಯ.ತಾ,), ಕ್ರಿ.ಶ. ೧೦೦೨, ಪು - ೧೯೭.

೫. ಅದೇ, ನಂ-೫೧, ಕುಕನೂರ ( ಯ.ತಾ), ಕ್ರಿ.ಶ. ೧೦೦೫, ಪು-೨೨೪.

೬. ಅದೇ, ನಂ-೨, ವಿಪ್ರ ( ಗ.ತಾ.), ಕ್ರಿ.ಶ. ೧೦೫೯, ಪು-೩೧೪.

೭. ಅದೇ, ನಂ- -೬, ಅಳವಂಡಿ (ಕೊ.ತಾ), ಕ್ರಿ.ಶ. ೧೦೬೧, ಪು- ೧೨.

೮. ಅದೇ, ನಂ--೧೨, ಕಲ್ಲೂರು (ಯ.ತಾ), ಕ್ರಿ.ಶ. ೧೧೮೭, ಪ-೧೬೭.
೯. ಅದೇ, ನಂ--೧, ಕವಲೂರು ( ಕೊ.ತಾ), ಕ್ರಿ.ಶ. ೧೧೯೭, ಪು-೧.
೧೦. ಅದೇ, ನಂ- ೨, ಹೆಸರೂರ ( ಕು.ತಾ), ಕ್ರಿ.ಶ. ೧೧೦೪, ಪು - ೨೭೭.
೧೧. ಅದೇ, ನಂ-೫೩, ಕುಕನೂರು ( ಯ.ತಾ), ಕ್ರಿ.ಶ. ೧೧೨೯, ಪು - ೨೩೬ .
೧೨. ಅದೇ, ನಂ-೨೯, ಮುಧೋಳ ( ಯ.ತಾ), ಕ್ರಿ.ಶ. ೧೧೫೪, ಪು - ೧೮೪ .
೧೩. ಅದೇ, ನಂ-೨೧, ಚಳಗೇರಿ ( ಕು.ತಾ), ಕ್ರಿ.ಶ. ೧೧೭೨, ಪು - ೨೯೮.
೧೪. ಅದೇ, ನಂ-೧೩, ಪುರ ( ಕು.ತಾ), ಕ್ರಿ.ಶ. ೧೨ ನೆ ಶತಮಾನ, ಪು-೨೯೦ .
೧೫. ಅದೇ, ನಂ-೭೦, ರಾಜೂರು ( ಯ.ತಾ), ಪು - ೨೭೨.
೧೬. ಅದೇ, ನಂ-೩, ಗೊತಾಗಿ ( ಕು.ತಾ), ಕ್ರಿ.ಶ. ೧೦೨೪, ಪು - ೨೭೯.
೧೭. ಅದೇ, ನಂ-೬೭, ಇಟಗಿ ( ಯ.ತಾ), ಕ್ರಿ.ಶ. ೧೧೧೨, ೧೩ ಪು - ೨೬೦ .
೧೮. ಅದೇ, ನಂ-೪೮, ಕುಕನೂರು ( ಯ.ತಾ), ಕ್ರಿ.ಶ. ೧೩೭೯, ಪು-೨೧೯.
೧೯. ಅದೇ, ನಂ-೧೪೮ ಹುಲಗಿ ( ಕೊ.ತಾ), ಕ್ರಿ.ಶ. ೧೦೮೮, ಪು - ೧೪೫.
೨೦. ಭೋಜರಾಜ ಪಾಟೀಲ., ೧೯೯೫, ನಾಗರಖಂಡ-೭೦, ಒಂದು ಅಧ್ಯಯನ, ಪು-೧೨೨, ಆನಂದಪುರಂ.
೨೧. ದೇವರಕೊಂಡಾರೆಡ್ಡಿ (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ - ೨, ಕೊಪ್ಪಳ ಜಿಲ್ಲೆ ನಂ-೧೩,೧೪,೧೫, ಪುರ (ಕು.ತಾ.), ಕ್ರಿ.ಶ. ೧೧ ರಿಂದ ೧೨ ನೇ ಶತಮಾನ, ಪು. ೨೮೯ ರಿಂದ ೨೯೩ ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೨. ಅದೇ, ನಂ- ೬೭, ಇಟಗಿ, ನಂ-೩೮, ೩೯, ೪೦, ೪೧, ೫೧, ಕೂಕನೂರ (ಯ.ತಾ), ಕ್ರಿ.ಶ. ೧೧೦೮, ೧೨, ೧೩, ಪು-೨೬೦, ಕುಕನೂರ, ಪು-೧೯೮ ರಿಂದ ೨೨೭.
೨೩. ಕೃಷ್ಣಭಟ್ಟ, ಕೆ. (ಅನು), ೧೯೫೫, ಕೌಟಿಲ್ಯನ ಅರ್ಥಶಾಸ್ತ್ರ, ಪು-೯೮.
೨೪. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ - ೨ , ಕೊಪ್ಪಳ ಜಿಲ್ಲೆ ನಂ-೧೩, ಕಲ್ಲೂರು (ಯ.ತಾ), ಕ್ರಿ.ಶ. ೧೧೮೫, ಪು ೧೬೯.
೨೫. ಅದೇ, ನಂ-೨೯, ಮುಧೋಳು (ಯ.ತಾ), ಕ್ರಿ.ಶ. ೧೧೫೪, ಪು ೧೮೪.
೨೬. ಇವುಗಳ ಕುರಿತು ಇದೇ ಅಧ್ಯಾಯದಲ್ಲಿ ಚರ್ಚಿಸಿದ ಕಾರಣ ಶಾಸನ ಸಂಖ್ಯೆ, ಕಾಲ, ತೋರಿಸಿಲ್ಲ.
೨೭. ಅದೇ, ನಂ-೧೧, ೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೮೬, ೧೧೨೫, ಪು.೧೬೬,೬೫.
೨೮. ಅದೇ, ನಂ-೨, ಹೆಸರೂರು (ಯ.ತಾ.), ಕ್ರಿಶ. ೧೧೦೪, ಪು-೨೭೭.
೨೯. ಅದೇ, ನಂ-೩೮, ೪೭, ಕುಕನೂರ, (ಯ.ತಾ), ಕ್ರಿ.ಶ. ೧೧೦೭, ೧೧೪೩, ಪು, ೨೦೦ ಇತರ ಶಾಸನಗಳು.
೩೦. ಅದೇ, ನಂ-೬೭, ಇಟಗಿ (ಯ.ತಾ), ಕ್ರಿ.ಶ. ೧೧೦೮, ಪು-೨೬೦.
೩೧. ನಾರಾಯಣ, ಪಿ.ವ್ಹಿ ., ೧೯೮೩, ವಚನಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು-೧೪೬ ರಿಂದ ೫೧, ಗದಗ.
೩೨. ಮಲ್ಲಾಪುರ, ಬಿ.ವ್ಹಿ ., ೧೯೭೮, ನಯಸೇನನ ಮತ್ತು ಆತನ ಕೃತಿಗಳು, ಪು- ೩೨೨-೨೩, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೩೩. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ - ೨, ಕೊಪ್ಪಳ ಜಿಲ್ಲೆ ನಂ-೧೪೮, ಹುಲಗಿ (ಕೊ.ತಾ), ಕ್ರಿ.ಶ. ೧೦೮೮, ಪು. ೧೪೫, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೩೪. ಅದೇ, ನಂ-೬, ಅಳವಂಡಿ (ಕೋ.ತಾ.), ಕ್ರಿ.ಶ. ೧೦೬೧, ಪು.೧೨.
೩೫. ಅದೇ, ನಂ-೨೮, ಅಂಟೂರಠಾಣ ( ಕು.ತಾ), ಕ್ರಿ.ಶ. ೧೧೯೫, ಪು. ೩೦೮.
೩೬. ಅದೇ, ನಂ-೧, ಕವಲೂರು (ಕೊ. ತಾ), ಕ್ರಿ.ಶ. ೧೧೯೭, ಪು.೧.
೩೭. ಅದೇ, ನಂ-೫೨-೫೩, ಕುಕನೂರು (ಯ.ತಾ), ಕ್ರಿ.ಶ. ೧೧೭೮, ೧೧೨೯, ಪು-೨೨೮-೨೩೬ .
೩೮. ಅದೇ, ನಂ-೩, ಕವಲೂರು ( ಕೊ.ತಾ ) ಕ್ರಿ.ಶ. ೧೧೭೭, ೭೯, ೭೮, ೮೬, ಪು-೪.
೩೯. ಅದೇ, ನಂ-೬೭, ಇಟಗಿ ( ಯ.ತಾ), ಕ್ರಿ.ಶ. ೧೧೦೮, ೧೨, ೧೩, ಪು ೨೫೯.
೪೦. ಅದೇ, ನಂ-೧೦, ಭೈರಾಪೂರ ( ಕೊ. ತಾ), ಕ್ರಿ.ಶ.೧೨ ನೇ ಶತಮಾನ ಪು-೨೧ .
೪೧. ಅದೇ, ನಂ-೧೪, ಪುರ ( ಕು.ತಾ), ಕ್ರಿ.ಶ. ೧೪೪೬, ಪು - ೨೮೭.
೪೨. ಅದೇ, ನಂ-೧೫,೧೬,೧೭ ಕಲ್ಲೂರು ( ಯ.ತಾ), ಕ್ರಿ.ಶ. ೧೧೨೯, ೧೧೯೮, ೧೧೩೨, ೧೧೫೪, ಪು-೧೭೨, ೧೭೪.
೪೩. ಅದೇ, ನಂ-೨೬, ಮಾದಿನೂರು (ಕೊ.ತಾ), ಕ್ರಿ.ಶ. ೧೧೩೬, ೧೧೯೦, ಪು-೩೧.
೪೪. ಅದೇ, ನಂ-೧೭,ಕಲ್ಲೂರು (ಯ.ತಾ), ಕ್ರಿ.ಶ. ೧೧೯೮, ಪು. ೧೭೪.
೪೫. ಅದೇ, ನಂ-೫೨, ಕುಕನೂರು (ಯ.ತಾ), ಕ್ರಿ.ಶ ೧೧೭೮, ಪು.೨೨೮ .
೪೬. ಚಿದಾನಂದ ಮೂರ್ತಿ ಎಂ., ೧೯೭೯, ಕನ್ನಡ ಶಾಸಗಳ ಸಾಂಸ್ಕೃತಿಕ ಅಧ್ಯಯನ, ಪು - ೨೫, ಮೈ.ವಿ.ವಿ. ಮೈಸೂರ.
೪೭. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೫೨, ಕುಕನೂರು ( ಯ.ತಾ), ಕ್ರಿ.ಶ. ೧೧೭೮.
೪೮. ಅದೇ, ನಂ-೬೭, ಇಟಗಿ (ಯ.ತಾ), ಕ್ರಿ.ಶ. ೧೧೦೮, ಪು. ೨೫೯.
೪೯. ಅದೇ, ನಂ-೬, ಅಳವಂಡಿ ( ಕೊ.ತಾ), ಕ್ರಿ.ಶ. ೧೦೬೧, ಪು.೧೨ .
೫೦. ಅದೇ, ನಂ-೧೧, ಉಪ್ಪನ ಬೆಟಗೇರಿ (ಕೊ.ತಾ), ಕ್ರಿ.ಶ. ೯೬೪, ಪು. ೨೨.
೫೧. ಅದೇ, ನಂ-೫೯, ತಳಕಲ್ಲು (ಯ.ತಾ), ಕ್ರಿ.ಶ. ೯೯೧ ಪು. ೨೫೩.
೫೨. ಅದೇ, ನಂ-೩೭, ಬಳಗೇರಿ (ಯ.ತಾ.), ಕ್ರಿ.ಶ. ೧೦೦೨, ಪು. ೧೯೭ .
೫೩.. ಅದೇ, ನಂ-೩, ಗೋತಗಿ ( ಕು.ತಾ), ಕ್ರಿ.ಶ. ೧೦೨೪, ಪು. ೨೭೯.
೫೪. ಅದೇ, ನಂ-೨೧, ಚಳಗೇರಿ ( ಕು.ತಾ.), ಕ್ರಿ.ಶ. ,೧೧೭೨, ಪು. ೨೯೮ .
೫೫. ಅದೇ, ನಂ-೭೦, ರಾಜೂರ, (ಯ.ತಾ), ಪು , ೨೭೨.
೫೬. ಅದೇ, ನಂ-೧೪೮, ಹುಲಗಿ (ಕೊ.ತಾ), ಕ್ರಿ.ಶ. ೧೦೮೮, ಪು. ೧೪೫ .
೫೭. ನಾರಾಯಣ, ಪಿ.ವ್ಹಿ ., ೧೯೮೩, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೫೦, ಗದಗ
೬೮. ಶೇಷ ಶಾಸ್ತ್ರೀ ., ೧೯೮೨, ಕರ್ನಾಟಕದ ವೀರಗಲ್ಲುಗಳು, ಪುಟ-೧೪೦ ರಿಂದ ೧೪೫, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರ.
೫೯. ದೇವರಕೊಂಡಾರೆಡ್ಡಿ, (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೧೭, ಕಲ್ಲೂರು (ಯ.ತಾ), ಕ್ರಿ.ಶ. ೧೧೨೫, ಪು.೧೭೪..
೬೦. ಅದೇ, ನಂ- ೨೯, ಮುಧೋಳು (ಯ.ತಾ), ಕ್ರಿ.ಶ. ೧೧೫೪, ಪು-೧೮೪.
೬೧. ಅದೇ,ನಂ-೨೨, ಹನುಮನಾಳ, (ಕು.ತಾ), ಕ್ರಿ.ಶ. ೧೧೯೯, ಪು-೩೦೩.

೬೨. ಕೊಪ್ಪಾ, ಎಸ್.ಕೆ., ೧೯೯೦, ತರ್ದವಾಡಿನಾಡು ಒಂದು ಅಧ್ಯಯನ, ಪು. ೨೦೯, ಪ್ರತಿಭಾ ಪ್ರಕಾಶನ ಇಂಡಿ.

೬೩. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೨೭, ಅಂಟೂರಠಾಣ (ಕು.ತಾ), ಕ್ರಿ.ಶ. ೧೦೮೨, ಪು-೩.೦೬, ಹಂಪಿ.

೬೪. ಅದೇ, ನಂ- ೬೭, ಇಟಗಿ (ಯ.ತಾ), ಕ್ರಿ.ಶ. ೧೧೦೮, ಪು-೨೪೯.

೬೫. ಅದೇ, ನಂ-೩.೮, ಕುಕನೂರು (ಯ.ತಾ), ಕ್ರಿ.ಶ. ೧೧೦೭, ೨೭, ೩೨, ೫೭,. ಪು-೧೯೭.

೬೬. ಅದೇ, ನಂ-೨೬, ಮಾದಿನೂರು ( ಕೊ.ತಾ), ಕ್ರಿ.ಶ. ೯೭೩, ೧೧೩೬, ೧೧೯೦, ಪು- ೩೧.

೬೭. ಅದೇ, ನಂ-೮, ಅಳವಂಡಿ (ಕೊ.ತ), ಕ್ರಿ.ಶ. ೧೧೫೭, ೧೨೬೮, ಪು-೧೬ .

೬೮. ಅದೇ, ನಂ-೨೧ ಚಳಗೇರಿ (ಕು.ತಾ), ಕ್ರಿ.ಶ.೧೧೭೨, ಪು-೨೯೭-೯೮.

೬೯. ಅದೇ, ನಂ-೧೫, ಪುರ (ಕು.ತಾ), ಕ್ರಿ.ಶ. ೧೧೫೭, ೧೨೬೮, ಪು. ೨೬೮.

೭೦. ಅದೇ, ನಂ-೮, ಅಳವಂಡಿ ( ಕೊ.ತಾ), ಕ್ರಿ.ಶ. ೧೧೫೭, ೧೨೬೮, ಪು . ೨೦.

೭೧. ಅದೇ, ನಂ-೬೭, ಇಟಗಿ ( ಯ.ತಾ), ಕ್ರಿ.ಶ. ೧೧೦೮. ಪು-೨೪೯.

೭೨. ಅದೇ, ನಂ - ೧೭, ಪುರ ( ಕು.ತಾ), ಕ್ರಿ.ಶ. ೧೧೨೫, ೧೧೯೮, ೧೧೫೪, ಪು.೨೯೪.

೭೩. ಅದೇ, ನಂ- ೧೭ ಕಲ್ಲೂರ (ಯ.ತಾ), ಕ್ರಿ.ಶ. ೧೧೯೮,೧೧೨೫, ಪು. ೧೭೫ .

೭೪. ಅದೇ, ನಂ- ೨೧ ಚಳಗೇರಿ ( ಕು.ತಾ), ಕ್ರಿ.ಶ. ೧೧೭೨, ಪು. ೨೯೮.

೭೫. ಅದೇ, ನಂ- ೨೭ ಅಂಟೂರಠಾಣ ( ಕು.ತಾ), ಕ್ರಿ.ಶ. ೧೦೮೨ , ಪು.೩೦೭ .

೭೬. ಅದೇ, ನಂ- ೧೪ ಪುರ, ( ಕು.ತಾ), ಪು. ೨೯೧.

೭೭. ಅದೇ, ನಂ- ೧೮, ಆನೆಗುಂದಿ ( ಗ.ತಾ), ಕ್ರಿ.ಶ. ೧೧ನೆ.ಶ. . ಪು.೩೨೪.

೭೮. ಅದೇ, ನಂ- ೧೭ ಪುರ (ಕು.ತಾ), ಕ್ರಿ.ಶ. ೧೨೨೫, ೧೧೯೮, ಪು-೨೯೪.

೭೯. ಅದೇ, ನಂ- ೨೭, ಅಂಟೂರಠಾಣಾ (ಕು.ತಾ.), ಕ್ರಿ.ಶ. ೧೦೮೨ ಪು.೩೦೭ .

೮೦. ಅದೇ, ನಂ- ೨೯ ಮುಧೋಳ (ಯ.ತ್ರಾ), ಕ್ರಿ.ಶ.೧೧೫೪.

೮೧. ನಾರಾಯಣ, ಪಿ.ವ್ಹಿ ., ೧೯೮೩, ವ ಸಾ. ಒಂ. ಸಾಂ. ಅ, ಪು- ೧೫೬, ಗದಗ .

೮೨. ಪ್ರೊ. ಸುಂದರ, ಅ. ಮತ್ತು ಮುಧೋಳ, ಎಸ್, ೧೯೯೭, ಪೂರ್ವಭಾವಿ ಇತಿಹಾಸ ಹಂತದ ಸಂಸ್ಕೃತಿಗಳು, ಕರ್ನಾಟಕ ಚರಿತ್ರೆಮಾಲೆ ಒಂದು, ಪು-೧೫೦-೧೮೩., ಬಿ. ಷೇಕ ಅಲಿ ಮತ್ತು ಅ. ಸುಂದರ (ಸಂ) ಕನ್ನಡ ವಿಶ್ವವಿದ್ಯಾಲಯ ಹಂಪಿ.

೮೩. ಚೆನ್ನಬಸವಯ್ಯ ಹಿರೇಮಠ., ೧೯೯೫, ಕುರಗೋಡಿನ ಸಿಂದರು ಪು.೨೭೧, ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ.

೮೪. ಚಿದಾನಂದಮೂತಿ, ಎಂ., ೧೯೭೯, ಕ.ಶಾ.ಸಾಂ.ಅ, ಪು-೩.೭೫, ಮೈಸೂರ ವಿ.ವಿ. ಮೈಸೂರ.

೮೫. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೮, ಅಳವಂಡಿ (ಕೊ.ತಾ), ಕ್ರಿ.ಶ. ೧೧೫೭ ೧೨೬೮ ಪು-೧೬, ಹಂಪಿ .

೮೬. ಚಿದಾನಂದಮೂರ್ತಿ, ಎಂ., ೧೯೭೯, ಕ.ಶಾ.ಸಾಂ.ಅ, ಪು-೩.೭೭, ಮೈಸೂರ ವಿ.ವಿ. ಮೈಸೂರ.

೮೭ ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೮, ಅಳಮಡಿ, (ಕೊ.ತಾ), ಪು.೧೬, ಹಂಪಿ.

೮೮. ಅದೇ, ನಂ-೨೭, ಅಂಟೂರಠಾಣ (ಕು.ತಾ), ಕ್ರಿ.ಶ. ೧೦೮೨ ಪು-೩೦೬.
೮೯. ಅದೇ, ನಂ-೨೨, ಹನುಮನಾಳ (ಕು.ತಾ), ಕ್ರಿ.ಶ. ೧೧೯೯ ಪು.೩೦೩.
೯೦. ಅದೇ, ಹೆಸರೂರು (ಕು.ತಾ), ಕ್ರಿ.ಶ. ೧೧೦೪ ಪು-೨೭೭.
೯೧. ಅದೇ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೨೫ ಪು-೧೭೪.
೯೨. ಅದೇ, ನಂ-೨೯, ಮುಧೋಳ (ಯ.ತಾ), ಕ್ರಿ.ಶ. ೧೧೫೪.
೯೩. ಅದೇ, ನಂ-೩೯, ಕುಕನೂರು (ಯತಾ), ಕ್ರಿ.ಶ. ೧೧೪೯ ಪು-೨೦೩.
೯೪. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ. ೧೧೭೨ ಪು-೨೯೮.
೯೫. ಅದೇ, ನಂ-೧೪, ಪುರ (ಕು.ತಾ), ಪು-೨೮೭.
೯೬. ಕೊಪ್ಪಾ, ಎಸ್. ಕೆ., ೧೯೯೦, ತ.ನಾ. ಒಂ.ಅ, ಪು-೨೧೨, ಇಂಡಿ.
೯೭. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೧೮, ಆನೇಗೊಂದಿ (ಗ.ತಾ), ಕ್ರಿ.ಶ. ೧೩. ನೆ ಶ ಪು-೩೨೩.
೯೮. ಅದೇ, ನಂ-೫೧, ಕುಕನೂರು (ಯ.ತಾ), ಕ್ರಿ.ಶ.೧೦೦೫, ಪು-೨೨೪.
೯೯. ಅದೇ, ನಂ-೨೯, ಮುಧೋಳ, (ಯ.ತಾ), ಕ್ರಿ.ಶ. ೧೧೫೪ ಪು-೧೮೪.
೧೦೦. ನಾರಾಯಣ, ಪಿ.ವ್ಹಿ., ೧೯೮೩, ವ ಸಾ. ಒಂ. ಸಾಂ.ಅ, ಪು- ೧೮೨, ಗದಗ.
೧೦೧. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧, ಕ.ವಿ.ವಿ. ಧಾರವಾಡ.
೧೦೨. ಅದೇ, ಶಾ.ಕ. ವ, ಪು-೧೧.
೧೦೩. ಅದೇ, ಶಾ.ಕ. ವ, ಪು-೧೨.
೧೦೪. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೧೬, ಕಲ್ಲೂರ (ಯ.ತಾ), ಕ್ರಿ.ಶ. ೧೯೯೮, ೧೧೨೫, ಪು.೧೭೪, ಹಂಪಿ.
೧೦೫. ಅದೇ, ನಂ-೨೯, ಮುಧೋಳ (ಯತಾ), ಕ್ರಿ.ಶ. ೧೧೫೪, ಪು-೧೮೪.
೧೦೬. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧೭, ಕ.ವಿ.ವಿ. ಧಾರವಾಡ.
೧೦೭. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ. ನಂ-೫೦, ಕುಕನೂರು ೫೦ (ಯತಾ), ಕ್ರಿ.ಶ. ೧೦೦೫, ಪು-೨೨೨, ಹಂಪಿ.
೧೦೮. ಅದೇ, ನಂ-೨೭, ಅಂಟೂರ ಠಾಣಾ (ಕು.ತಾ), ಕ್ರಿ.ಶ. ೧೦೮೨ ಪು.೩೦೬ ಮತ್ತು ಅದೇ ನಂ-೨೮ ಕ್ರಿ.ಶ. ೧೯೯೫ ಪು-೩೦೮.
೧೦೯. ಅದೇ, ನಂ-೨೨, ಹನುಮನಾಳ (ಕು.ತಾ), ಕ್ರಿ.ಶ. ೧೧೯೯ ಪು-೩೦೨.
೧೧೦. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧೫, ಕ.ವಿ.ವಿ. ಧಾರವಾಡ.
೧೧೧. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೧೩ ಪುರ (ಕು.ತಾ), ಕ್ರಿ.ಶ. ೧೨ ನೆ.ಶ. ಪು-೨೮೮.
೧೧೨. ಅದೇ, ನಂ-೧೫೪ ಶಿವಪುರ (ಕು.ತಾ), ಕ್ರಿ.ಶ. ೧೨ ನೆ. ಶ. ಪು- ೧೫೦.
೧೧೩. ಅದೇ, ನಂ-೧೩, ಪುರ (ಕು.ತಾ), ಕ್ರಿ.ಶ. ೧೨ ನೆ.ಶ. ಪು-೨೯೦.
೧೧೪. ಅದೇ, ನಂ-೧೨೬, ಕೊಪ್ಪಳ (ಕೊ.ತಾ), ಕ್ರಿ.ಶ. ೧೨೦೪. ಪು-೧೨೪.
೧೧೫. ಅದೇ, ನಂ-೨೪, ಮಾದಿನೂರು (ಕೊ.ತಾ), ಕ್ರಿ.ಶ. ೧೨೯೯, ಪು-೩೦.

೧೧೬. ಅದೇ, ನಂ-೪೪, ಕೊಪ್ಪಳ (ಕೊ.ತಾ), ಕ್ರಿ.ಶ. ೧೩ ನೆ.ಶ. ಪು-೪೫.
೧೧೭. ಅದೇ, ನಂ-೫೮, ಆನೆಗೊಂದಿ, (ಗ.ತಾ), ಕ್ರಿ.ಶ. ೧೩೨೫ ಪು-೩೫೭.
೧೧೮. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೩೪, ಕ.ವಿ.ವಿ. ಧಾರವಾಡ.
೧೧೯. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ.
ನಂ-೨೭, ಅಂಟೂರಠಾಣಾ (ಕು.ತಾ), ಕ್ರಿ.ಶ. ೧೦೮೨, ಪು-೩೦೬, ಹಂಪಿ.
೧೨೦. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೩೪, ಕ.ವಿ.ವಿ. ಧಾರವಾಡ
೧೨೧. ಅದೇ, ಶಾ.ಕ.ವ, ಪು-೩೬.
೧೨೨. ದೇವರಕೊಂಡಾರೆಡ್ಡಿ. (ಸಂ). ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ
ನಂ-೫೦ ಕುಕನೂರು (ಯ.ತಾ), ಕ್ರಿ.ಶ. ೧೦೦೫, ಪು-೨೨೨, ಹಂಪಿ.
೧೨೩. ಅದೇ, ನಂ-೨೭, ಅಂಟೂರಠಾಣ (ಕು.ತಾ), ಕ್ರಿ.ಶ. ೧೦೮೨ ಪು-೩೦೬.
೧೨೪. ಅದೇ, ನಂ-೨೨, ಹನುಮನಾಳ (ಕು.ತಾ), ಕ್ರಿ.ಶ. ೧೧೯೯, ಪು-೩೦೩.
೧೨೫. ಅದೇ, ನಂ-೨೯, ಮುಧೋಳ (ಯ.ತಾ), ಕ್ರಿ. ಶ.೧೧೫೪, ಪು-೧೮೪.
೧೨೬. ಅದೇ, ನಂ-೧೫ ಪುರ (ಕು. ತಾ), ಪು-೨೮೭-೨೯೫.
೧೨೭. ಅದೇ, ನಂ-೧೫೪, ಶಿವಪುರ, (ಕೊ. ತಾ), ಕ್ರಿ.ಶ. ೧೨ ನೆ ಶ. ಪು.೧೫೦.
೧೨೮. ಅದೇ, ನಂ-೧೩, ೧೬ ಪುರ (ಕು.ತಾ), ಕ್ರಿ.ಶ ೧೨ ನೆ ಶ ಪು.೨೮೮.
೧೨೯. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು.೪೯, ಕ.ವಿ.ವಿ. ಧಾರವಾಡ.
೧೩೦. ಭೋಜರಾಜ ಪಾಟೀಲ., ೧೯೯೫, ನಾಗನಖಂಡ- ೭೦ ಒಂದು ಅಧ್ಯಯನ, ಪು.೧೩೩, ಆನಂದಪುರಂ.
೧೩೧. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ
ನಂ-೫೬, ಕುಕನೂರು (ಯ.ತಾ) ಪು.೨೩೮, ಹಂಪಿ.
೧೩೨. ಅದೇ, ನಂ-೮, ಅಳವಂಡಿ (ಕೊ.ತಾ), ಕ್ರಿ.ಶ. ೧೧೫೭, ೬೮, ಪು- ೧೬.
೧೩೩. ಅದೇ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ ೧೧೨೫, ಪು-೧೭೪.
೧೩೪. ಭೋಜರಾಜ ಪಾಟೀಲ., ೧೯೯೫, ನಾಗನಖಂಡ- ೭೦ ಒಂದು ಅಧ್ಯಯನ, ಪು.೧೩೩, ಆನಂದಪುರಂ.
೧೩೫. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ.
ನಂ-೨೭, ೨೮ ಅಂಟೂರಠಾಣಾ (ಕು.ತಾ), ಕ್ರಿ.ಶ. ೧೦೮೭, ೧೧೯೫, ಪು.೩೦೬, ೩೦೮.
೧೩೬. ಅದೇ, ನಂ-೨೨ ಹನುಮನಾಳ (ಕು.ತಾ), ಕ್ರಿ.ಶ. ೧೧೯೯ ಪು.೩೦೨.
೧೩೭. ಅದೇ, ನಂ-೧೩, ಪುರ (ಕು.ತಾ), ಕ್ರಿ.ಶ.೧೨ ನೆ. ಪು.೨೮೮.
೧೩೮. ಅದೇ, ನಂ-೫೦, ಕುಕನೂರು (ಯ.ತಾ), ಕ್ರಿ.ಶ ೧೦೦೫ ಪು.೨೨೨.
೧೩೯. ಅದೇ, ನಂ-೨೯, ಮುಧೋಳು (ಯ.ತಾ), ಕ್ರಿ.ಶ. ೧೧೫೪ ಪು.೧೮೪.
೧೪೦. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ-೭೦, ಕ.ವಿ.ವಿ.
ಧಾರವಾಡ.
೧೪೧. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ
ನಂ-೨೭, ಅಂಟೂರಠಾಣ, (ಕು.ತಾ), ಕ್ರಿ.ಶ. ೧೦೮೨, ಹಂಪಿ.
೧೪೨. ಅದೇ, ನಂ-೨೬, ಮಾದಿನೂರು (ಕೊ.ತಾ), ಕ್ರಿ.ಶ. ೧೧೩೬.

೧೪೩. ಅದೇ, ನಂ-೩೯, ಕುಕನೂರು (ಯ.ತಾ), ಕ್ರಿ.ಶ. ೧೧೪೯.

೧೪೪. ಅದೇ, ನಂ-೧೩, ಪುರ (ಕು.ತಾ), ಕ್ರಿ.ಶ. ೧೨ ನೆ.ಶತಮಾನ, ಪು-೨೮೭.

೧೪೫. ಅದೇ, ನಂ-೨೯, ಮುಧೋಳ (ಯ.ತಾ), ಕ್ರಿ.ಶ. ೧೩ ನೆ ಶ. ಪು.೧೮೪.

೧೪೬. ಅದೇ, ನಂ-೧೮, ಆನೆಗುಂದಿ (ಗ.ತಾ), ಕ್ರಿ.ಶ. ೧೩ ನೆ.ಶತಮಾನ, ಪು-೧೨೩.

೧೪೭. ಅದೇ, ನಂ-೧, ವಿಪ್ರ (ಗ.ತಾ), ಕ್ರಿ.ಶ. ೧೦೫೯, ಪು-೩೧೩.

೧೪೮. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೭೧ ರಿಂದ ೭೨, ಕ.ವಿ.ವಿ. ಧಾರವಾಡ.

೧೪೯. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೨೭, ಅಂಟೂರುಠಾಣ (ಕು.ತಾ), ಕ್ರಿ.ಶ. ೧೦೮೨ ಪು.೩೦೬, ಹಂಪಿ.

೧೫೦. ಅದೇ, ನಂ-೨೨, ಹನುಮನಾಳ (ಕು.ತಾ), ಕ್ರಿ.ಶ. ೧೧೯೯ ಪುಟ.೩೦೩.

೧೫೧. ಅದೇ, ನಂ-೨೨ ಹನುಮನಾಳ ಪು.೩೦೩.

೧೫೨. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಕ.ವಿ.ವಿ. ಧಾರವಾಡ .

೧೫೩. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೨೭, ಅಂಟೂರಠಾಣ (ಕು.ತಾ), ಕ್ರಿ.ಶ. ೧೦೮೨, ಪು.೩೦೮, ಹಂಪಿ .

೧೫೪. ಅದೇ, ನಂ-೨೨, ಹನುಮನಾಳ (ಕು.ತಾ), ಕ್ರಿ.ಶ. ೧೧೯೯, ಪು.೩೦೨.

೧೫೫. ಅದೇ, ನಂ-೨, ಹೆಸರೂರು (ಕು.ತಾ), ಕ್ರಿ.ಶ. ೧೧೦೪, ಪು.೨೭೮.

೧೫೬. ಅದೇ, ನಂ-೧೭, ಕಲ್ಲೂರು (ಯ.ತಾ), ಕ್ರಿ.ಶ. ೧೧೨೫, ಪು-೧೨೪.

೧೫೭. ಅದೇ, ನಂ-೨೯, ಮುಧೋಳ (ಯ.ತಾ), ಕ್ರಿ.ಶ. ೧೧೫೪, ಪು-೧೮೪.

೧೫೮. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ.೧೧೭೨, ಪು-೨೯೮.

೧೫೯. ಅದೇ, ನಂ-೯, ಅಳವಂಡಿ (ಕೊ.ತಾ), ಕ್ರಿ.ಶ. ೧೧೮೨.

೧೬೦. ಅದೇ, ನಂ-೧೩, ೧೬, ಪುರ (ಕು.ತಾ), ಕ್ರಿ.ಶ. ೧೨ ನೆ ಪು-೨೮೮ ಮತ್ತು ಕ್ರಿ.ಶ. ೧೧೭೨ ಪು-೨೯೩.

೧೬೧. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು.೧೦೬, ಕ.ವಿ.ವಿ. ಧಾರವಾಡ.

೧೬೨. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ. ನಂ-೨೭, ಅಂಟೂರಠಾಣಾ (ಕು.ತಾ), ಕ್ರಿ.ಶ. ೧೦೮೨, ಪು-೩೦೬, ಹಂಪಿ .

೧೬೩. ಅದೇ, ನಂ-೩೮, ಕುಕನೂರು (ಯ.ತಾ), ಕ್ರಿ.ಶ. ೧೧೦೭ ಪು-೨೦೦.

೧೬೪. ಅದೇ, ನಂ-೧೪, ಪುರ (ಕು.ತಾ), ಪು-೨೯೧.

೧೬೫. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧೧೨, ಕ.ವಿ.ವಿ. ಧಾರವಾಡ.

೧೬೬. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೨೭, ಅಂಟೂರಠಾಣಾ (ಕು.ತಾ), ಕ್ರಿ.ಶ. ೧೦೮೨, ಪು-೩೦೬, ಹಂಪಿ.

೧೬೭. ಅದೇ, ನಂ-೨೯, ಮುಧೋಳು (ಯ.ತಾ), ಕ್ರಿ.ಶ. ೧೧೫೪, ಪು-೧೮೪.

೧೬೮. ಅದೇ, ನಂ-೧೯, ಹಲಗೇರಿ (ಕೊ.ತಾ), ಕ್ರಿ.ಶ. ೧೦೨೮ ಪು-೨೭.

೧೬೯. ಅದೇ, ನಂ-೪೭, ಕುಕನೂರು (ಯ.ತಾ), ಕ್ರಿ.ಶ. ೧೧೪೩. ಪು.೨೧೮.

೧೭೦. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು.೧೧೦, ಧಾರವಾಡ, ಕ.ವಿ.ವಿ.

೧೭೧. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೧೭, ಕಲ್ಲೂರು (ಯ.ತಾ), ಕ್ರಿ.ಶ. ೧೧೨೫ ಪು-೧೭೪, ಹಂಪಿ.

೧೭೨. ಅದೇ, ನಂ-೧೪, ಪುರ (ಕು.ತಾ), ಪು-೨೯೧.

೧೭೩. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ. ೧೧೭೨, ಪು-೨೯೮.

೧೭೪. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧೧೮, ಕ.ವಿ.ವಿ. ಧಾರವಾಡ.

೧೭೫. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ. ನಂ-೮, ಅಳವಂಡಿ (ಕೊ.ತಾ), ಕ್ರಿ.ಶ. ೧೧೫೭, ೧೨೬೮, ಪು-೧೬, ಹಂಪಿ.

೧೭೬. ಅದೇ, ನಂ-೨೭, ಅಂಟೂರಠಾಣಾ (ಕು.ತಾ), ಕ್ರಿ.ಶ. ೧೦೮೨, ಪು-೩೦೬ .

೧೭೭. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ. ೧೧೭೨, ಪು-೨೯೮ .

೧೭೮. ಅದೇ, ನ೨೯, ಮುಧೋಳ (ಯ.ತಾ), ಕ್ರಿ.ಶ. ೧೧೫೪ ಪು-೧೮೪.

೧೭೯. ಅದೇ, ನಂ-೨೨, ಹನುಮನಾಳ (ಕು.ತಾ), ಕ್ರಿ.ಶ. ೧೦೯೯ ಪು-೩೦೩ .

೧೮೦. ಅದೇ, ನಂ-೧೫೪, ಶಿವಪುರ (ಕೊ.ತಾ), ಕ್ರಿ.ಶ. ೧೨ನೆ ಶತಮಾನ ಪು-೧೫೦..

೧೮೧. ಅದೇ, ನಂ-೧೮, ಆನೆಗೊಂದಿ (ಗ.ತಾ), ಕ್ರಿ.ಶ. ೧೩. ನೆ.ಶ, ಪು-೩೨೪.

೧೮೨. ಅದೇ, ನಂ-೨೭, ಅಂಟೂರ ಠಾಣಾ (ಕು.ತಾ), ಕ್ರಿ.ಶ. ೧೦೮೨ ಪು-೩೦೬.

೧೮೩. ಅದೇ, ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೦೯೮, ೧೧೨೫, ೫೪, ಪು-೧೭೫.

೧೮೪. ಅದೇ, ನಂ-೧, ಮಂಕಲ್ಕೇರಿ (ಕು.ತಾ), ಕ್ರಿ.ಶ. ೧೧೨೩ ಪು-೨೭೬.

೧೮೫. ಅದೇ, ನಂ-೨೭, ಅಂಟೂರಠಾಣ (ಕು.ತಾ), ಪು-೩೦೬.

೧೮೬. ಅದೇ, ನಂ-೧೭, ಕಲ್ಲೂರ (ಯ.ತಾ), ಪು-೧೭೪.

೧೮೭. ಅದೇ, ನಂ-೨೯, ಮುಧೋಳ (ಯ.ತಾ), ಕ್ರಿ.ಶ. ೧೧೫೪, ಪು-೧೮೭.

೧೮೮. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧೭೧, ಕ.ವಿ.ವಿ. ಧಾರವಾಡ.

೧೮೯. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ. ನಂ-೨೨, ಹನುಮನಾಳ (ಕು.ತಾ), ಕ್ರಿ.ಶ. ೧೦೯೯ ಪು-೩.೦೨, ಹಂಪಿ.

೧೯೦. ಅದೇ, ನಂ-೨೯, ಮುದೋಳ (ಯ.ತಾ), ಕ್ರಿ.ಶ. ೧೧೫೪ ಪು-೧೮೪ ಮತ್ತು ಅದೇ, ಹನುಮನಾಳ ೨೨, ಅಂಟೂರಠಾಣ ನಂ-೨೬.

೧೯೧. ಅದೇ, ನಂ-೧೩., ಪುರ (ಕು.ತಾ), ಕ್ರಿ.ಶ. ೧೨ ನೆ.ಶ. ಪು.೨೮೮

೧೯೨. ಅದೇ ನಂ-೪೦, ಕುಕನೂರು (೪೦ ರಿಂದ ೫೨) (ಯ.ತಾ), ಪು.೨೦೫ ರಿಂದ ೨೨೮.

೧೯೩. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧೨೭, ಕ.ವಿ.ವಿ. ಧಾರವಾಡ.

೧೯೪. ಅದೇ, ಪು.೧೨೯.

೧೯೫. ಕೊಪ್ಪಾ, ಎಸ್.ಕೆ., ೧೯೯೦, ತ.ನಾ. ಒ. ಅ, ಪು-೨೨೨ ಇಂಡಿ.
೧೯೬. ಅದೇ, ಪುಟ-೨೨೩.
೧೯೭. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧೨೯, ಕ.ವಿ.ವಿ. ಧಾರವಾಡ.
೧೯೮. ಕೊಪ್ಪಾ, ಎಸ್.ಕೆ., ೧೯೯೦, ತ.ನಾ. ಒ. ಅ, ಪು-೨೨೨, ೨೩, ಇಂಡಿ.
೧೯೯. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೧೭, ಕಲ್ಲೂರ (ಯ.ತಾ), ಕ್ರಿ.ಶ. ೧೧೨೫, ಪು-೧೭೪.
೨೦೦. ಅದೇ, ನಂ-೧೨ ರಿಂದ ೧೮, ಪುರ, (ಕು.ತಾ), ಪು-೨೯೬.
೨೦೧. ಅದೇ, ನಂ-೫೨, ಕುಕನೂರು ಕ್ರಿ.ಶ. ೧೧೭೮ ಪು-೨೨೮.
೨೦೨. ಅದೇ, ನಂ-೨೭, ಅಂಟೂರ ಠಾಣಾ (ಕು.ತಾ), ಪು-೩೦೬.
೨೦೩. ಅದೇ, ನಂ-೧೪೮ ಹುಲಗಿ (ಕೊ.ತಾ), ಕ್ರಿ.ಶ. ೧೦೮೮, ಪು-೧೪೫.
೨೦೪. ಅದೇ, ನಂ-೧೩, ೧೫, ಕಲ್ಲೂರ (ಯ.ತಾ), ಕ್ರಿ.ಶ. ೧೧೮೫, ೧೧೨೯, ಪು-೧೬೭ ರಿಂದ ೧೭೨.
೨೦೫. ಅದೇ, ನಂ-೫, ಆಳವಂಡಿ (ಕೊ.ತಾ), ಪು-೧೨.
೨೦೬. ಅದೇ, ನಂ-೨೬, ಮಾದಿನೂರು (ಕೊ.ತಾ), ಕ್ರಿ.ಶ. ೯೭೩. ಪು-೩೧.
೨೦೭. ಅದೇ, ನಂ-೧೯, ಹಲಗೇರಿ (ಕೊ.ತಾ), ಕ್ರಿ.ಶ. ೧೦೨೮, ಪು-೨೭.
೨೦೮. ಅದೇ, ನಂ-೨೯, ಮುಧೋಳು (ಯ.ತಾ), ಕ್ರಿ.ಶ. ೧೧೫೪, ಪು-೧೭೮.
೨೦೯. ಕೊಪ್ಪಾ, ಎಸ್.ಕೆ., ೧೯೯೦, ತರ್ದವಾಡಿಯ ನಾಡು ಒಂದು ಅಧ್ಯಯನ, ಪು-೨೨೩ ಇಂಡಿ, ೨೧೦. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೩೮, ಕುಕನೂರು (ಯ.ತಾ), ಕ್ರಿ.ಶ. ೧೧೫೭, ಪು-೧೯೮, ಹಂಪಿ.
೨೧೧. ಅದೇ, ನಂ-೫೪, ಕೊಪ್ಪಳ (ಕೊ.ತಾ), ಕ್ರಿ.ಶ. ೧೩. ನೆ ಶತಮಾನ, ಪು.೧೪೫.
೨೧೨. ಅದೇ, ನಂ-೩, ಗೋತಗಿ (ಕು.ತಾ), ಕ್ರಿ.ಶ. ೧೦೨೪, ಪು-೨೭೯.
೨೧೩. ಕೊಪ್ಪಾ, ಎಸ್.ಕೆ., ೧೯೯೦, ತರ್ದವಾಡಿಯ ನಾಡು ಒಂದು ಅಧ್ಯಯನ, ಪು-೨೨೪ ಇಂಡಿ,
೨೧೪. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೩೪, ಅರಕೇರಿ (ಯ.ತಾ), ಕ್ರಿ.ಶ. ೧೦೩೩ ಪು-೧೯೨.
೨೧೫. ಅದೇ, ನಂ-೩೯, ಕುಕನೂರು, (ಯ.ತಾ), ಕ್ರಿ.ಶ. ೧೧೪೯, ಪು-೨೦೨.
೨೧೬. ಮರಿಯಪ್ಪ ಬಟ್ಟ, ಎಂ (ಸಂ)., ೧೯೫೫, ರಾಜಾಧಿತ್ಯನ ವ್ಯವಾಹಾರ ಗಣಿತ, ಪು- ೧, ೨೮, ಮದ್ರಾಸ.
೨೧೭. ವಿವರಣೆಗಾಗಿ ನೋಡಿ ನಾರಾಯಣ, ಪಿ.ವ್ಹಿ. ೧೯೮೩., ವ.ಸಾ. ಒ.ಸಾ.ಒ. ಗದಗ.
೨೧೮. ಭೋಜರಾಜ ಪಾಟೀಲ., ೧೯೯೫, ನಾಗನಖಂಡ- ೭೦ ಒಂದು ಅಧ್ಯಯನ, ಪು- ೧೩೮, ಆನಂದಪುರಂ.
೨೧೯. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ಕೊಪ್ಪಳ (ಕೊ.ತಾ), ಕ್ರಿ.ಶ. ೧೩. ನೇ ಶತಮಾನ.
೨೨೦. ರಿತ್ತಿ ಶ್ರೀನಿವಾಸ., ೨೦೦೦, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷೆ ಕೋಶ, ಪು. ೧೦೨, ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರ.

೨೨೧. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧೩೧, ಕ.ವಿ.ವಿ. ಧಾರವಾಡ.

೨೨೨. ನರಸಿಂಹಾಚಾರ್ಯ, ಡಿ. ಎಲ್. (ಸಂ), ೧೯೫೩, ಶಿವಕೋಟ್ಯಾಚಾರ್ಯನ ವಡ್ಡರಾಧನೆ, ಪು. ೧೫, ಶಾರದಾ ಮಂದಿರ ಮೈಸೂರ.

೨೨೩. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೨೬, ಮಾದಿನೂರು (ಯ.ತಾ) ಕ್ರಿ.ಶ.೧೧೩೬, ಪು-೩೨.

೨೨೪. ಅದೇ, ನಂ-೫೧, ಕುಕನೂರು (ಯ.ತಾ.), ಕ್ರಿ.ಶ. ೧೦೦೫, ಪು-೨೨೪.

೨೨೫. ಅದೇ, ನಂ-೬, ೮ ಅಳವಂಡಿ (ಕೊ.ತಾ.), ಕ್ರಿ.ಶ. ೧೦೬೧, ೧೧೫೭, ೧೨೬೮, ಪು- ೧೬.

೨೨೬. ಅದೇ, ನಂ-೮, ಹಿರೇಮನ್ನಾಪುರ (ಕು.ತಾ.), ಕ್ರಿ.ಶ. ೧೧ ನೆ.ಶತಮಾನ, ಪು-.೨೮೪.

೨೨೭. ಅದೇ, ನಂ-೨೬, ಮಾದಿನೂರು (ಕೊ.ತಾ.),ಕ್ರಿ.ಶ. ೯೭೩, ಪು-೩೨.

೨೨೮. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ. ೧೧೭೨, ಪು-೨೯೮.

೨೨೯. ಅದೇ, ನಂ-೨, ಹೆಸರೂರ (ಕು.ತಾ.), ಕ್ರಿ.ಶ. ೧೧೦೪, ಪು-೨೭೮.

೨೩೦. ಅದೇ, ನಂ-೩೮, ೩೯, ಕುಕನೂರು (ಯ.ತಾ.), ಕ್ರಿ.ಶ. ೧೧೦೭, ೧೧೪೯, ಪು-೧೯೭, ೨೦೪.

೨೩೧. ರಿತ್ತಿ ಶ್ರೀನಿವಾಸ., ೨೦೦೦, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷೆ ಕೋಶ, ಪು. ೧೦೯, ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರ.

೨೩೨. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ, ನಂ-೬೭ ಇಟಗಿ (ಯ.ತಾ.), ಕ್ರಿ.ಶ. ೧೧೦೮, ಪು-೨೬೦.

೨೩೩. ರಿತ್ತಿ ಶ್ರೀನಿವಾಸ., ೨೦೦೦, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷೆ ಕೋಶ, ಪು. ೧೦೯, ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರ.

೨೩೪. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೧, ಮಂಕಲ್ಕೇರ (ಕು.ತಾ.),ಕ್ರಿ.ಶ. ೧೧೨೩, ಪು.೨೭೭.

೨೩೫. ರಿತ್ತಿ ಶ್ರೀನಿವಾಸ., ೨೦೦೦, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷೆ ಕೋಶ, ಪು- ೧೦೯, ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರ.

೨೩೬. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೨೯, ಮುಧೋಳ (ಯ.ತಾ.), ಕ್ರಿ.ಶ. ೧೧೫೪, ಪು-೧೮೪, ಹಂಪಿ.

೨೩೭. ಅದೇ, ನಂ-೧೩, ೧೫ ಕಲ್ಲೂರ (ಯ.ತಾ.), ಕ್ರಿ.ಶ. ೧೧೨೯, ೧೧೮೫, ಪು-೧೬೭-೧೭೨.

೨೩೮. ಅದೇ, ನಂ-೧೫೪, ಶಿವಪುರ (ಕೊ.ತಾ.),ಕ್ರಿ.ಶ.೧೨ ನೇ. ಶತಮಾನ, ಪು -೧೫೦.

೨೩೯. ರಿತ್ತಿ ಶ್ರೀನಿವಾಸ., ೨೦೦೦, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷೆ ಕೋಶ, ಪು- ೧೦೩, ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರ.

೨೪೦. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೩, ಕವಲೂರು (ಕೊ.ತಾ.), ಕ್ರಿ.ಶ. ೧೧೭೭, ಪು-೪ ರಿಂದ ೧೧, ಹಂಪಿ.

೨೪೧. ಅದೇ, ನಂ-೬೫, ೬೭, ಇಟಗಿ (ಯ.ತಾ), ಕ್ರಿ.ಶ. ೯೩೯, ಪು. ೨೫೭.

೨೪೨. ಅದೇ, ನಂ-೯, ಹಿರೇಮನ್ನಾಪುರ (ಕು.ತಾ.), ಪು. ೨೮೪.

೨೪೩. ಅದೇ, ನಂ-೧೪೮ ಹುಲಗಿ (ಕೊ.ತಾ) , ಕ್ರಿ.ಶ. ೧೦೮೮ , ಪು. ೧೪೫.
೨೪೪. ಅದೇ, ನಂ-೧೩೯, ಗಿಣಗೇರಿ (ಕೊ.ತಾ.), ಕ್ರಿ.ಶ. ೧೫೨೦. ಪು. ೧೩೬.
೨೪೫. ಅದೇ, ನಂ-೧೫., ಕಲ್ಲೂರು (ಯ.ತಾ.) , ಕ್ರಿ.ಶ. ೧೧೮೫, ಪು. ೧೬೭.
೨೪೬. ಚಿದಾನಂದಮೂರ್ತಿ. ಎಂ., ೧೯೭೯, ಕ.ಶಾ.ಸಾಂ.ಅ, ಪು-೩೬೦, ೯೧, ಮೈಸೂರ.
೨೪೭. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ, ನಂ-೫೧, ಕುಕನೂರು (ಯ.ತಾ.), ಕ್ರಿ.ಶ. ೧೦೦೫, ಪು. ೨೨೮, ಹಂಪಿ.
೨೪೮. ಚಿದಾನಂದಮೂರ್ತಿ, ಎಂ., ೧೯೭೯, ಕ.ಶಾ.ಸಾಂ.ಅ, ಪು-೩೮೯, ೯೧, ಮೈಸೂರ.
೨೪೯. ಅದೇ, ಪು-೩೯೦.
೨೫೦. ಕೃಷ್ಣಬಟ್ಟ. ಕೆ (ಅನು)., ೧೯೫೫, ಕೌಟಲ್ಯನ ಅರ್ಥಶಾಸ್ತ್ರದಲ್ಲಿ (ಪು-೯೮)ದುರ್ಗ, ರಾಷ್ಟ್ರಗಣಗಳು, ಗೃಹೋಪವನಗಳು, ಕಾಡುಭೂಮಿ, ಗೋವುಗಳ ಮುಂದೆ ವ್ಯಾಪಾರ ಮಾರ್ಗಗಳು ಇವು ಏಳರಿಂದ ಕಂದಾಯ ವಸೂಲಿ ಆಗುತ್ತಿರುವುದಾಗಿ ತಿಳಿಸಿದ್ದಾನೆ.
೨೫೧. ಚೆನ್ನಬಸವಯ್ಯ ಹಿರೇಮಠ., ೧೯೯೫, ಕುರಗೋಡಿನ ಸಿಂದರು ಪು. ೨೩೦, ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ.
೨೫೨. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ ನಂ-೫೬, ಕುಕನೂರು (ಯ.ತಾ.), ಪು-೨೩೮.
೨೫೩. ಅದೇ, ನಂ-೧೭, ಪುರ (ಕು.ತಾ.), ಪು-೨೯೪.
೨೫೪. ಭೋಜರಾಜ ಪಾಟೀಲ., ೧೯೯೫, ನಾಗನಖಂಡ- ೭೦ ಒಂದು ಅಧ್ಯಯನ, ಪು- ೧೩೮, ಆನಂದಪುರಂ.
೨೫೫. ಅದೇ, ಪು.೧೩೮.
೨೫೬. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨ , ಕೊಪ್ಪಳ ಜಿಲ್ಲೆ, ನಂ-೫೯, ತಳಕಲ್ಲು (ಯ.ತಾ.), ಕ್ರಿ.ಶ. ೯೯೧, ಪು. ೨೫೪, ಹಂಪಿ.
೨೫೭. ಅದೇ, ನಂ-೧೫, ಕಲ್ಲೂರು (ಯ.ತಾ.), ಕ್ರಿ.ಶ. ೧೧೨೯, ಪು-೧೭೨.
೨೫೮. ಅದೇ, ನಂ-೨, ಹೆಸರೂರ (ಕು.ತಾ), ಕ್ರಿ.ಶ. ೧೧೦೪, ಪು.೨೭೭.
೨೫೯. ಅದೇ, ನಂ-೨೯, ಮುಧೋಳ (ಯ.ತಾ.), ಕ್ರಿ.ಶ. ೧೧೫೪, ಪು-೧೮೪.
೨೬೦. ಅದೇ, ನಂ-೧೭, ಕಲ್ಲೂರು (ಯ.ತಾ), ಕ್ರಿ.ಶ. ೧೦೯೮, ೧೧೨೫,೧೧೫೪, ಪು-೧೭೪.
೨೬೧. ಅದೇ, ನಂ-೩೮, ಕುಕನೂರು (ಯ.ತಾ.), ಕ್ರಿ.ಶ. ೧೧೦೭,೨೭,೩೨,೫೭, ಪು-೧೯೭.
೨೬೨. ಅದೇ, ನಂ-೬೭ ಇಟಗಿ, (ಯ.ತಾ.),ಕ್ರಿ.ಶ. ೧೧೧೨. ೧೧೧೩., ಪು-೨೫೯.
೨೬೩. ಅದೇ, ನಂ-೧೫., ಪುರ (ಕು.ತಾ.) , ಕ್ರಿ.ಶ. ೧೨ ನೇ ಶತಮಾನ, ಪು. ೨೮೮.
೨೬೪. ಅದೇ, ನಂ-೩೯, ಕುಕನೂರು (ಯ.ತಾ.), ಕ್ರಿ.ಶ. ೧೧೪೯, ಪು. ೨೦೨.
೨೬೫. ಅದೇ, ನಂ-೬೭, ಇಟಗಿ (ಯ.ತಾ.), ಕ್ರಿ.ಶ. ೧೧೦೮, ೧೨, ೧೩., ಪು-೨೫೯.
೨೬೬. ಅದೇ, ನಂ-೧೩., ೧೪, ೧೭, ಪುರ(ಕು,ತಾ,), ಕ್ರಿ.ಶ. ೧೨ ನೇ ಶತಮಾನ, ಪು. ೨೮೮ ರಿಂದ ೨೯೪.
೨೬೭. ಅದೇ, ನಂ-೨೭, ಅಂಟೂರರತಾಣ (ಕು.ತಾ), ಕ್ರಿ.ಶ. ೧೦೮೨, ಪು. ೩೦೬.
೨೬೮. ಅದೇ, ನಂ-೧೬, ೧೭, ಕಲ್ಲೂರು (ಯ.ತಾ.), ಕ್ರಿ.ಶ. ೧೧೩೨, ೧೧೨೫, ಪು-೧೭೩-೪.
೨೬೯. ಚಿದಾನಂದಮೂರ್ತಿ, ಎಂ., ೧೯೭೯, ಕ.ಶಾ.ಸಾಂ.ಅ, ಪು,೪೦೦, ೯೧, ಮೈಸೂರ.
೨೭೦. ಭೋಜರಾಜ ಪಾಟೀಲ., ೧೯೯೫, ನಾಗನಖಂಡ- ೭೦ ಒಂದು ಅಧ್ಯಯನ, ಪು -೧೪೦, ಆನಂದಪುರಂ.

೨೭೧. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೧೭, ಕಲ್ಲೂರು (ಯ.ತಾ), ಕ್ರಿ.ಶ. ೧೦೯೮,೧೧೨೫, ೫೪, ಪು-೧೭೪.

೨೭೨. ಕೊಪ್ಪಾ, ಎಸ್.ಕೆ., ೧೯೯೦, ತ.ನಾ. ಒ. ಅ, ಪು-೨೩೧, ಇಂಡಿ.

೨೭೩. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೩೯, ಕುಕನೂರ, (ಯ.ತಾ), ಕ್ರಿ.ಶ. ೧೧೪೯, ಪು-೨೦೨, ಹಂಪಿ.

೨೭೪. ದೇವರಕೊಂಡಾರೆಡ್ಡಿ (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೨೬, ಮಾದಿನೂರು (ಕೊ.ತಾ.), ಕ್ರಿ. ಶ. ೯೭೩, ೧೧೩೬, ೧೧೯೦, ಪು-೩೧, ಹಂಪಿ.

೨೭೫. ಹಿರೇಮಠ ಬಿ. ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೧೨೪, ಕ.ವಿ.ವಿ. ಧಾರವಾಡ.

೨೭೬. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೨೯, ಮುಧೋಳ (ಯ.ತಾ), ಕ್ರಿ.ಶ. ೧೧೫೪, ಪು-೧೮೪.

೨೭೭. ಅದೇ, ನಂ-೧೩., ಪುರ (ಕು.ತಾ), ಕ್ರಿ.ಶ. ೧೨ ನೇ ಶತಮಾನ, ಪು. ೨೮೮.

೨೭೮. ಅದೇ, ನಂ-೨೧, ಚಳಗೇರಿ (ಕು.ತಾ.), ಕ್ರಿ.ಶ. ೧೧೭೨, ಪು-೨೯೮.

೨೭೯. ಅದೇ, ನಂ-೨೭, ಅಂಟೂರರಾಣಾ (ಕು.ತಾ), ಕ್ರಿ.ಶ. ೧೦೮೨, ಪು-೩೦೬.

೨೮೦. ಅದೇ, ನಂ-೨, ವಿಪ್ರ (ಗ.ತಾ.), ಕ್ರಿ.ಶ. ೧೦೪೯, ಪು.೩೧೪.

೨೮೧. ಅದೇ, ನಂ-೧೫, ಪುರ (ಕು.ತಾ.), ಪು-೨೯೨.

೨೮೨. ರಿತ್ತಿ ಶ್ರೀನಿವಾಸ., ೨೦೦೦, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷೆ ಕೋಶ, ಪು-೩೭, ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರ.

೨೮೩. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೯, ಹಿರೇಮನ್ನಾಪುರ (ಕು.ತಾ.), ಪು.೨೮೪, ಹಂಪಿ.

೨೮೪. ಕೊಪ್ಪಾ, ಎಸ್.ಕೆ., ೧೯೯೦, ತರ್ದವಾಡಿಯ ನಾಡು ಒಂದು ಅಧ್ಯಯನ, ಪು.೨೩೨, ಇಂಡಿ.

೨೮೫. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೨೬, ಮಾದಿನೂರ (ಕೊ.ತಾ.), ಕ್ರಿ.ಶ. ೯೭೩., ೧೧೩೬, ೧೧೯೦, ಪು-೩೧.

೨೮೬. ಅದೇ, ನಂ-೧೩., ಪುರ (ಕು.ತಾ.), ಕ್ರಿ.ಶ. ೧೨ ನೇ ಶ. ಪು.೨೮೮.

೨೮೭. ಕೊಪ್ಪಾ, ಎಸ್.ಕೆ., ೧೯೯೦, ತ.ನಾ.ಒ.ಅ, ಪು-೨೩೩.

೨೮೮. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೧೫, ಪುರ (ಕು.ತಾ.), ಪು-೨೯೨.

೨೮೯. ಅದೇ, ನಂ-೫, ಸಿರಗುಪ್ಪಿ (ಕು.ತಾ.), ಕ್ರಿ.ಶ. ೧೧೧೦, ಪು- ೨೮೧.

೨೯೦. ಅದೇ, ನಂ-೧೩., ಪುರ (ಕು.ತಾ.), ಕ್ರಿ.ಶ. ೧೨ ನೇ ಶತಮಾನ, ಪು-೨೮೮.

೨೯೧. ಅದೇ, ನಂ-೧೭, ಕಲ್ಲೂರ (ಯ.ತಾ.), ಕ್ರಿ.ಶ. ೧೧೨೫, ಪು-೧೭೪.

೨೯೨. ಅದೇ, ನಂ-೧೩., ಪುರ, (ಕು.ತಾ), ಪು-೨೮೮.

೨೯೩. ಭೋಜರಾಜ ಪಾಟೀಲ., ೧೯೯೫, ನಾಗನಖಂಡ- ೭೦ ಒಂದು ಅಧ್ಯಯನ, ಪು-೧೪೧, ಆನಂದಪುರಂ.

೨೯೪. ದೇವರಕೊಂಡಾರೆಡ್ಡಿ (ಸಂ)., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ-೨, ಕೊಪ್ಪಳ ಜಿಲ್ಲೆ ನಂ-೧೭, ಕಲ್ಲೂರ (ಯ.ತಾ.), ಕ್ರಿ.ಶ. ೧೦೯೮, ಪು-೧೭೪.

೨೯೫. ಕೃಷ್ಣಬಟ್ಟ, ಕೆ (ಅನು)., ೧೯೫೫, ಕೌಟಿಲ್ಯನ ಅರ್ಥಶಾಸ್ತ್ರ ಪು-೨೩೭.



Chapter-9

# ಅಧ್ಯಾಯ-ಒಂಬತ್ತು

# ಶಿಕ್ಷಣ ಮತ್ತು ಸಾಹಿತ್ಯಿಕ ಚಟುವಟಿಕೆಗಳು

## ಶಿಕ್ಷಣ ವ್ಯವಸ್ಥೆ

ನಮ್ಮ ಸಂಶೋಧನೆಗೆ ದೊರಕಿದ ಶಾಸನಗಳು ಹಾಗೂ ಇಲ್ಲಿಯವರೆಗೆ ಬೆಳಕು ಕಂಡ ಸಂಶೋಧನಾತ್ಮಕ ಗ್ರಂಥಗಳನ್ನು ಅಧ್ಯಯನ ಮಾಡಿದಾಗ;ನಮ್ಮ ದೇಶದ ಪ್ರಾಚೀನ ಶಿಕ್ಷಣ (ವಿದ್ಯಾಭ್ಯಾಸ) ಪದ್ಧತಿ ಬಹುಪಾಲು ಧಾರ್ಮಿಕವಾದುದೆಂದು ತಿಳಿಯುತ್ತದೆ. ಮನುಷ್ಯನ ಬದುಕಿನ ಮುಖ್ಯ ಗುರಿ ಆತ್ಮಜ್ಞಾನ ಅಥವಾ ಮೋಕ್ಷ. ಶಿಕ್ಷಣವೆನ್ನುವುದು ಆತ್ಮಜ್ಞಾನವನ್ನು ಪಡೆಯಲು ಒಂದು ಸಾಧನ. ಸಮಾಜದ ಬದುಕನ್ನು ಊರ್ದ್ವಮುಖವಾಗಿ ನಡೆಸುತ್ತಾ ಕೋಳೆಗಳನ್ನು ಕಳೆದು ಹಸನು ಮಾಡುತ್ತಾ ಜೀವಿಸಿದ್ದಕ್ಕೊಂದು ಶಾಶ್ವತತೆಯ ರೂಪು ದೊರಕಿಸುವ ಮಹತ್ತರವಾದ ಕಾರ್ಯವನ್ನು ಅದು ಸಾಧಿಸುತ್ತದೆ. ಇದರ ಬಗ್ಗೆ ಭಾರತೀಯರ ನಂಬಿಕೆಯು ಗಾಢವಾದುದು. ಮನುಷ್ಯನಿಗೆ ವಿದ್ಯೆಯಿಂದಲೇ ವಿನಯ, ವಿನಯದಿಂದ ಪಾತ್ರತೆ, ಪಾತ್ರತೆಯಿಂದ ಧನ, ಧನದಿಂದ ಧರ್ಮ, ಧರ್ಮದಿಂದ ಸುಖ ಲಭಿಸುತ್ತದೆ ಎಂಬ ಉಕ್ತಿಯೂ ಇದೆ.[1] ವಿದ್ಯೆಗಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ ಅದು ತಾಯಿಯಂತೆ ಕಾಪಾಡುತ್ತದೆ. ತಂದೆಯಂತೆ ಸರಿಯಾದ ಮಾರ್ಗದಲ್ಲಿ ಮುನ್ನಡೆಸುತ್ತದೆ. ವಿದ್ಯಾವಿಹೀನನಾದವನು ಪಶುವಿಗೆ ಸಮಾನ ಎಂಬ ಮಾತು ನಮ್ಮ ಪೂರ್ವಜರಲ್ಲಿದ್ದ ನಂಬಿಕೆಯನ್ನು ತಿಳಿಸುತ್ತದೆ.

ಬರಹದ ಮೂಲಕ ದಾಖಲಾಗುವುದಕ್ಕೆ ಮೊದಲು ಗುರು ಮುಖೇನ ಶಿಷ್ಯ ಪರಂಪರೆಗೆ ಬಾಯಿಪಠಣದ ರೂಪದಲ್ಲಿ ಭೋದಿಸಲ್ಪಡುತ್ತಿದ್ದಾಗ ಶ್ರವಣ, ಮನನ, ದ್ಯಾನಗಳು ಬಹಳ ಮುಖ್ಯವಾಗಿದ್ದವು. ಗುರುವು ಅರಣ್ಯದಲ್ಲಿನ ತನ್ನ ಆಶ್ರಮದಲ್ಲಿ ಆಸಕ್ತರಾದ ಹಲವು ಶಿಷ್ಯರಿಗೆ ವಿದ್ಯೆಯನ್ನು ದಾನ ಮಾಡುತ್ತಿದ್ದನು. ಹೀಗಾಗಿ ಗುರು-ಶಿಷ್ಯರಿಗೆ ವಿಶೇಷವಾದ ಮಹತ್ವ ಲಭಿಸಿತ್ತು. ಅವರ ಆಹಾರ, ವಸತಿ, ವಸ್ತ್ರ ಇತ್ಯಾದಿ ಅತ್ಯಾವಶ್ಯಕ ವಸ್ತುಗಳನ್ನು ಪ್ರಕೃತಿಯಿಂದಲೇ ಸುಲಭವಾಗಿ ಪೂರೈಸಿಕೊಳ್ಳಲು ಪ್ರಾಚೀನ ಕಾಲದಲ್ಲಿ ಅವಕಾಶಗಳಿದ್ದವು. ಶಿಷ್ಯನಾದವನು ಬಿಕ್ಷಾನ್ನದಿಂದ ಜೀವಿಸಬೇಕಾಗಿತ್ತು. ಆಗ ಶಿಷ್ಯನ ವಿದ್ಯಾಭ್ಯಾಸ ಸಂಪೂರ್ಣವಾಗಿ ಗುರುವಿನ ಆಧೀನದಲ್ಲಿ ನಡೆಯುತ್ತಿತ್ತು. ಆಗಿನ ವೈದಿಕ ಯುಗದ ಶಿಕ್ಷಣ ಮುಂದೆ ರಾಜರ ಆಳ್ವಿಕೆಯ ಕಾಲಕ್ಕೆ ವ್ಯಕ್ತಿಯ ಅವಿಭಾಜ್ಯ ಅಂಗವಾಗಿ ಬೆಳೆಯಿತಾದರೂ ಸಾಮಾನ್ಯ ಶಿಕ್ಷಣವು ಉನ್ನತ ವರ್ಗದವರ ಸ್ವತ್ತಾಗಿಯೇ ಉಳಿದುಕೊಂಡು ಬಂದಿರುವಂತೆ ತೋರುತ್ತದೆ. ಕ್ರಮೇಣ ಭೂಮಿಯ ಪಾಲಕರೆನಿಸಿಕೊಂಡಿದ್ದ ರಾಜರು ತಮ್ಮ ಆಡಳಿತ ವ್ಯಾಪ್ತಿಯಲ್ಲಿ ಆಶ್ರಮಗಳು, ಗುರುಶಿಷ್ಯ ವರ್ಗಗಳ ಯೋಗಕ್ಷೇಮಗಳಿಗಾಗಿ ಆಸಕ್ತಿ ತಳೆದು;ಅವುಗಳ ಅನಿರ್ಬಾದಿತ ವ್ಯವಸ್ಥೆಗಾಗಿ ದಾನದತ್ತಿಗಳನ್ನು ನೀಡಲು ರಾಜರು ಅಧಿಕಾರಿಗಳು ಶ್ರೀಮಂತರು ಮುಂದೆ ಬಂದಿರಬೇಕೆಂಬ ಅಂಶ ಶಾಸನಗಳಿಂದ ತಿಳಿಯುತ್ತದೆ.

ಪ್ರಾಚೀನ ಭಾರತದಲ್ಲಿ ವೇದ ಉಪನಿಷತ್ತು ವ್ಯಾಕರಣ, ನಿರುಕ್ತ, ಜ್ಯೋತಿಷ್ಯ, ತರ್ಕ ಮೀಮಾಂಸೆ ಮುಂತಾದ ಶಾಸ್ತ್ರಗಳು, ಸಂಗೀತ, ನಾಟ್ಯ, ನಾಟಕಗಳಂತ ವಿದ್ಯೆಗಳು ರಾಮಾಯಣ ಮಹಾಭಾರತದಿಂದಲೇ ಪ್ರಾರಂಭವಾಗಿ ಮುಂದುವರೆದುಕೊಂಡು ಬಂದಿರಬೇಕೆಂದು ಕಾಣುತ್ತದೆ. ನಂತರದ ಸಿಂಧೂಕೊಳ್ಳದ ನಾಗರಿಕತೆಯ ಶಿಕ್ಷಣದ ಬಗ್ಗೆ ತಿಳಿಯದೇ ಇದ್ದರು ಮೌರ್ಯರು,ಕುಶಾನರು ಮತ್ತಿತರ ರಾಜರು ಇದಕ್ಕೆ ಪ್ರೋತ್ಸಾಹ ನೀಡಿರುವುದನ್ನು ಅನೇಕ ವಿದ್ವಾಂಸರು ಗುರುತಿಸಿದ್ದಾರೆ.[೨] ಆದರೂ ಹೊಸ ಹೊಸ ಶಾಸನಗಳು ಲಿಖಿತ ದಾಖಲೆಗಳು ಇನ್ನು ದೊರೆಯುತ್ತಲೇ ಇದ್ದುದರಿಂದ ಈ ವ್ಯವಸ್ಥೆಯ ಕುರಿತು ಹೆಚ್ಚು ಹೆಚ್ಚಾಗಿ ವಿಸ್ತ್ರುತವಾಗಿ ಅಧ್ಯಯನ ಮಾಡಬೇಕಾಗುತ್ತದೆ. ಅದನ್ನನುಸರಿಸಿ ಸಾಗಿದಾಗ ಶಾತವಾಹನರ ಕಾಲಾವಧಿಯಲ್ಲಿ ರಾಜಮನೆತನದ ಸ್ತ್ರೀಯೊಬ್ಬಳು ವಿಹಾರಕ್ಕೆ ನೀಡಿದ ದಾನ[೩] ಕದಂಬರ ಅರಸ ಮಯೂರ ಶರ್ಮನು ರಾಜನಾಗುವ ಮೊದಲು ಕಂಚಿಗೆ ವಿದ್ಯಾಭ್ಯಾಸಕ್ಕೆಂದು ಅಲ್ಲಿಯ ಘಟಿಕಾಸ್ಥಾನಕ್ಕೆ ಹೋಗಿದ್ದು[೪] ಬಾದಾಮಿ ಚಾಲುಕ್ಯರು ತಲಕಾಡಿನ ಗಂಗರ ಆಳ್ವಿಕೆಯ ಕಾಲದಲ್ಲಿ ಸಾಹಿತ್ಯ ಕೃತಿಗಳ ರಚನೆ ಮತ್ತು ಗಜಶಾಸ್ತ್ರ, ಅಶ್ವಶಾಸ್ತ್ರ ಧರ್ಮಶಾಸ್ತ್ರ ವಿವಿಧ ಶಾಸ್ತ್ರಗಳ ಅಧ್ಯಯನ ನಡೆಯುತ್ತಿದ್ದುದರ ಸುಳಿವುಗಳು ಸಿಗುತ್ತವೆ.[೫] ಚೀನಾ ದೇಶದ ಯಾತ್ರಿಕ ಹ್ಯೂಯೆನ್‌ತ್ಸಾಂಗನು ಭಾರತಕ್ಕೆ ಭೇಟಿ ನೀಡಿದಾಗ ಇಲ್ಲಿಯ ಶಿಕ್ಷಣದ ಬಗ್ಗೆ ವಿವರಿಸುತ್ತಾ ಶಿಷ್ಯ ಗುರುವಿಗೆ ನೀಡುತ್ತಿರುವ ಗುರುದಕ್ಷಿಣೆ ಕುರಿತು ಉಲ್ಲೇಖಿಸಿದ್ದಾನೆ.[೬] ರಾಷ್ಟ್ರಕೂಟರ ಸಮಕಾಲೀನ ಸಾಹಿತ್ಯ ಕೃತಿಯಾದ ಶಿವಕೋಟ್ಯಾಚಾರ್ಯನು ಬರೆದ ವಡ್ಡಾರಾಧನೆ ಗ್ರಂಥದ ಸುಕುಮಾರಸ್ವಾಮಿಯ ಕಥೆಯಲ್ಲಿ 'ಕಾಶ್ಯಪಿ' ಎಂಬಾಕೆಯ ಮಕ್ಕಳಾದ ಅಗ್ನಿಭೂತಿ ಮತ್ತು ವಾಯುಭೂತಿಯರು ತಮ್ಮ ಸಹೋದರ ಮಾವನಾದ ಸೂರ್ಯಮಿತ್ರನ ಹತ್ತಿರ ಶಿಕ್ಷಣಕ್ಕಾಗಿ ಹೋಗಿ ಅಧ್ಯಯನಿಸಿದ ವಿಷಯ ಇತಿಹಾಸ ಪ್ರಖ್ಯಾತವಾಗಿದೆ.[೭] ಇದರಿಂದ ಪ್ರಾಚೀನ ಶಿಕ್ಷಣವು ಗುರುವಿನ.ಮನೆಯಲ್ಲಿ ನಡೆಯುತ್ತಿರುವುದಾಗಿ ತಿಳಿಯುತ್ತದೆ. ವೇದಗಳ ಕಾಲದಲ್ಲಿ ಋಷ್ಯಾಶ್ರಮಗಳು ಬೌದ್ಧಧರ್ಮದ ಉತ್ಕರ್ಷದ ಸಮಯದಲ್ಲಿ ವಿಹಾರ, ಚೈತ್ಯಾಲಯಗಳು, ಜೈನರ ಕಾಲಕ್ಕೆ ಜೈನ ಬಸದಿಗಳು ಶಿಕ್ಷಣದ ಪ್ರಮುಖ ಕೇಂದ್ರಗಳಾದವು. ವಿದ್ಯಾಪ್ರಸಾರದಂತಹ ಚಟುವಟಿಕೆಗಳು ನಂತರದ ಅಗ್ರಹಾರಗಳು, ಬ್ರಹ್ಮಪುರಿಗಳಲ್ಲಿನ ಶಾಲೆಗಳು ಘಟಿಕಾಸ್ಥಾನಗಳು ದೇವಾಲಯಗಳ ಜೊತೆ ಹೊಂದಿಕೊಂಡಿರುವ ಮಠಗಳು ಮುಂದುವರೆಸಿಕೊಂಡು ಬಂದವು. ಪ್ರಾಚೀನ ವಿದ್ಯಾಕೇಂದ್ರಗಳೆಂದು ಪರಿಗಣಿಸಲ್ಪಟ್ಟ ಈ ಅಗ್ರಹಾರ, ಬ್ರಹ್ಮಪುರಿ, ದೇವಸ್ಥಾನ ಮತ್ತು ಮಠಗಳೆಲ್ಲವು ಬ್ರಾಹ್ಮಣ ವರ್ಗದ ಹಿಡಿತದಲ್ಲಿ ಇರುತ್ತಿದ್ದವು. ಹೀಗಾಗಿ ಧರ್ಮ ಪ್ರಧಾನವಾದ ಶಿಕ್ಷಣ ಪಡೆಯುವವರ ಸಂಖ್ಯೆ ವಿದ್ಯಾಕೇಂದ್ರಗಳಲ್ಲಿ ಕಡಿಮೆ ಪ್ರಮಾಣದಲ್ಲಿತ್ತು.

ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ವರ್ಗಗಳು ಅಕ್ಷರ ಜ್ಞಾನ ಪಡೆಯಲು ಬಯಸುತ್ತಿದ್ದರಾದರೂ. ಬ್ರಾಹ್ಮಣರ ಸಂಖ್ಯೆ ಮಾತ್ರ ಅಧಿಕವಾಗಿತ್ತು. ಶೂದ್ರರು ಮಾತ್ರ ಈ ಅವಕಾಶದಿಂದ ವಂಚಿತರಾಗಿರುವದು ಕಂಡು ಬರುತ್ತದೆ. ಏಕೆಂದರೆ ಉತ್ಪಾದನಾ ಪ್ರಧಾನವಾದ, ವಂಶ ಪಾರಂಪರ್ಯವಾಗಿ ಬೆಳೆದುಕೊಂಡು ಬಂದ ವೃತ್ತಿ ಪ್ರಧಾನ ಅಭ್ಯಾಸಕ್ಕೆ ಆಗಿನ ಜನರು ತಮ್ಮ ಹಿರಿಯರು ಹಾಕಿಕೊಟ್ಟ ಶಾಸ್ತ್ರೀಯವಾದ ವೃತ್ತಿಯನ್ನು ಬೆಳೆಸಿ,

ಸುಧಾರಿಸಿ, ವಿಸ್ತರಿಸಿಕೊಳ್ಳಲು ಆಸಕ್ತಿ ತೋರಿಸುವುದು ಅನಿವಾರ್ಯವಾಗಿತ್ತು. ಹೀಗಾಗಿ ಈ ಕಡೆ ಒಲವು ತೋರಲಿಲ್ಲ.

ಪ್ರಾಚೀನ ಕಾಲದಲ್ಲಿ ಧರ್ಮ ಪ್ರಸಾರವೇ ಮುಖ್ಯವಾಗಿದ್ದು,ಬ್ರಾಹ್ಮಣರೇ ಹೆಚ್ಚು ಆಕರ್ಷಿತರಾಗಲು ಅವರ ವೃತ್ತಿಯೇ ಬಹುಮುಖ್ಯ ಕಾರಣವಾಗಿತ್ತು. ಯಜನ, ಯಾಜನ, ಅಧ್ಯಯನ, ಅಧ್ಯಾಪನಗಳಲ್ಲಿ ತೊಡಗುತ್ತಿದ್ದ ಇವರು ವೇದ ಉಪನಿಷತ್ತು ಪುರಾಣ, ವ್ಯಾಕರಣ, ತರ್ಕ ಇತ್ಯಾದಿ ಶಾಸ್ತ್ರಗಳ ಅಧ್ಯಯನ ಅಧ್ಯಾಪನಗಳಿಗೆ ಸ್ವಾಭಾವಿಕವಾಗಿಯೇ ಆಕರ್ಷಿತರಾಗಿದ್ದರು ಎಂಬುದಕ್ಕೆ ಜಿಲ್ಲೆಯ ಕವಲೂರು, ಅಳವಂಡಿ, ಕುಕನೂರು, ತಳಕಲ್ಲು, ಇಟ್ಟಿಗೆ, ಕಲ್ಲೂರು, ಮುಧೋಳು, ಕೊಪ್ಪಳ, ಸಂಕನೂರು, ಪುರ, ವಿಪ್ರ, ಆನೆಗುಂದಿ, ಮಾದಿನೂರು ಮತ್ತೀತರ ಶಾಸನಗಳು ಸಾಕ್ಷಿಯಾಗಿವೆ.[೮]

ಈ ರೀತಿ ಅನೇಕ ಶಾಸನಗಳಲ್ಲಿ ಪ್ರಸ್ತಾಪಗೊಂಡ ಶಿಕ್ಷಣದ ವ್ಯವಸ್ಥೆ ಅಗ್ರಹಾರ, ಬ್ರಹ್ಮಪುರಿ, ಘಟಕಾಸ್ಥಾನ, ಮಠ, ದೇವಸ್ಥಾನಗಳಲ್ಲಿ ನಡೆಯುತ್ತಿರುವುದಾಗಿ ಶಾಸನಗಳು ಬಾಲಶಿಕ್ಷಣ ಕನ್ನಡಕ್ಷರ ಶಿಕ್ಷೆ, ಯುಜುರ್ವೆದ ಇತ್ಯಾದಿಯಾಗಿ ಉಚ್ಚರಿಸಿವೆ.[೯] ಒಟ್ಟಿನಲ್ಲಿ ಆಗಿನ ಜನತೆಯ ಉತ್ತಮ ನಡತೆಗೆ ಮಾರ್ಗದರ್ಶನ ನೀಡಿ ಅವರ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿ ಬದುಕನ್ನು ಸಾರ್ಥಕಗೊಳಿಸುವ ಕಾರ್ಯವನ್ನು ವಿದ್ಯಾ ಸಂಸ್ಥೆಗಳು ನಡೆಸಿಕೊಡುತ್ತಿದ್ದವೆಂದು ಗೊತ್ತಾಗುತ್ತದೆ.[೧೦] ಈ ಪದ್ಧತಿ ನಮ್ಮ ಸಮಾಜದಲ್ಲಿ ಇಂದಿಗೂ ಸಾಲಿಮಠ, ಓದಿಸುವ ಮಠ ತೀರ ಇತ್ತೀಚಿನವರೆಗೂ ಮಠ ಮಾನ್ಯರಾದ ಪೀಠಾಧೀಶರು (ಮಠಾಧೀಶರು) ಶಿಕ್ಷಣ ಸಂಸ್ಥೆಗಳನ್ನು ನಡೆಸಿಕೊಂಡು ಬಂದಿರುವುದು ಇಂದಿಗೂ ಕಾಣುತ್ತೇವೆ. ಇದೇ ರೀತಿ ಎಷ್ಟೋ ದಿನಗಳ ಹಿಂದಿನ ಪರಂಪರೆಗಳು ಸಾವಿರಾರು ವರ್ಷಗಳಿಂದ ನಮ್ಮ ಸಮಾಜದಲ್ಲಿ ಉಳಿದುಕೊಂಡು ಬಂದಿರುವವು.

## ವಿದ್ಯಾಭ್ಯಾಸ (ಮಠಗಳು-ದೇವಸ್ಥಾನಗಳು)

ವೇದಗಳ ಕಾಲದ ಆಶ್ರಮ ಶಿಕ್ಷಣದ ಬದಲಿಗೆ ಅದೇ ಜಾಡಿನಲ್ಲಿ ಬೆಳೆದ ಮಠಗಳು ವಿದ್ಯಾಕೇಂದ್ರಗಳಾಗಿ ಕಾರ್ಯ ನಿರ್ವಹಿಸಿವೆ. ಈ ಮಠಗಳು ದೇವಾಲಯಗಳ ಜೊತೆಗೆ ಇರುತ್ತಿದ್ದವು. ಇವುಗಳಲ್ಲದೆ ಅಗ್ರಹಾರ, ಬ್ರಹ್ಮಪುರಿಗಳು ವಿದ್ಯಾಪ್ರಸಾರಕ್ಕೆಂದೆ ರೂಪುಗೊಂಡು ಪ್ರಾಥಮಿಕ ಪ್ರೌಢ ಶಿಕ್ಷಣದ ಬೆಳವಣಿಗೆಗೆ ಕಾರಣವಾದವು. ಈ ಶಿಕ್ಷಣ ಕೇಂದ್ರಗಳಲ್ಲಿ ತಪೋಧನರು ಛಾತ್ರರು ವಿದ್ಯಾಭ್ಯಾಸದಲ್ಲಿ ತಲ್ಲಿನರಾಗುತ್ತಿದ್ದರು. ತಪೋಧನರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದು, ವಿದ್ಯಾಭ್ಯಾಸದ ಬಳಿಕ ಮಠ-ದೇವಾಲಯಗಳಲ್ಲಿ ಸ್ಥಾನಪತಿಗಳಾಗುತ್ತಿದ್ದರು. ಛಾತ್ರರು ಗ್ರಹಸ್ಥಾಶ್ರಮಕ್ಕೆ ಮರಳುತ್ತಿದ್ದರು. ಹೀಗಾಗಿ ಅವುಗಳಿಗೆ ಹೊಂದಿಕೊಂಡ ವಿದ್ಯಾಕೇಂದ್ರಗಳ ಜವಾಬ್ದಾರಿ ಸಹ ಸ್ಥಾನಿಕರ ಮೇಲಿತ್ತು. ಅಲ್ಲಿನ ಆಡಳಿತ ವ್ಯವಸ್ಥೆಗಾಗಿ ಆಳುವ ಅರಸ ರಾಜಮಾಂಡಲಿಕ ಅಧಿಕಾರಿಗಳಿಂದ ಹೇರಳವಾದ ಸಹಾಯ ದೊರಕುತ್ತಿತ್ತು. ಇದರಿಂದ ಶಿಕ್ಷಣದ ಕೇಂದ್ರಗಳು ಸ್ವಾಯತ್ತ ಸಂಸ್ಥೆಗಳಾಗಿದ್ದವೆಂದು ತಿಳಿಯುತ್ತದೆ. ಸ್ವತಂತ್ರ ಆಡಳಿತದ ಜವಾಬ್ದಾರಿ ಅವರಲ್ಲಿದ್ದ ಕಾರಣ ಅಲ್ಲಿ ಶಿಸ್ತು ಕಟ್ಟುನಿಟ್ಟಿನ ವಿದ್ಯಾಭ್ಯಾಸ ಪದ್ಧತಿ ಬೆಳೆಯಿತು. ಇದು ಅವಶ್ಯಕವು ಆಗಿತ್ತು.

ಅಲ್ಲಿ ನಿರತರಾದ ತಪೋಧನರು ಯಮ ನಿಯಮಾಸನ, ಪ್ರಾಣಾಯಾಮ,ಪ್ರತ್ಯಾಹಾರ, ಧ್ಯಾನ, ಧಾರಣ, ಜಪತಪ ಸಂಪನ್ನರಾದ ಸ್ಥಾನಪತಿಗಳಿಂದ ಉಪದೇಶ ಪಡೆಯುತ್ತಿದ್ದರೆಂದು ತೋರುತ್ತದೆ. ಅಂತಹ ತಪೋಧನರಹಾರ ದಾನಕ್ಕೆಂದು 'ಮಠದಾಚಾರ್ಯ ಸೋಮೇಶ್ವರ ಪಂಡಿತರ' ಕಾಲ ತೊಳೆದು ೨೪ ಮತ್ತರು ಭೂಮಿಯನ್ನು ದಾನ ನೀಡಿದ ವಿಷಯ ಕಲ್ಲೂರ ಶಾಸನದಲ್ಲಿದೆ.[೧೧] ಹಾಗೆಯೇ ಕುಕನೂರಿನ ಶಾಸನ ಕುಕನೂರಿನ ಮಠದ ಚೊಳ ಪಂಡಿತನ ಶಿಷ್ಯನಾದ ಅಗಸ್ತ್ಯ ಜೀಯನ ಕಾಲನ್ನು ತೊಳೆದು ಎರಡು ದೇವಾಲಯಗಳಿಗೆ ಕಳಶವನ್ನಿಡಿಸಿ 'ಮುಖಸಾಲೆ' ಕಟ್ಟಿಸಿ ಮಂಟಪದ ಪರಿಸೂತ್ರದ ನಿರ್ವಹಣೆಗಾಗಿ ಈಶ್ವರ ಶೆಟ್ಟಿ ಎಂಬುವನು ೧೦೦ ಗದ್ಯಾಣ ದಾನಕೊಟ್ಟ ಕುರಿತು ಶಾಸನ 'ಯಮ, ನಿಯಮ ಧ್ಯಾನ ಮೌನಾನುಷ್ಠಾಣ ಸಮಾಧಿ ಸಂಪನ್ನರಪ್ಪ ಶ್ರೀಮತ ಪೊಸಮಠದ ಚೋಳ ಪಂಡಿತರ ಶಿಷ್ಯರಗಸ್ತ್ಯದೇಯರ ಕಾಲಂಕಚ್ಚಿ ಈಶ್ವರಶೆಟ್ಟಿ' ಎಂದು ಹೇಳುತ್ತದೆ.[೧೨] ಅದೇ ಊರಿನ ಮತ್ತೊಂದು ಶಾಸನ ಕುಕನೂರು ಅಗ್ರಹಾರದಲ್ಲಿ ವಿವಿಧ ವೇದ ಶಾಸ್ತ್ರಗಳ ಅಧ್ಯಯನ ನಡೆಯುತ್ತಿತ್ತು. ಇದರಿಂದ ಎಲ್ಲಾ ಶಾಸ್ತ್ರಗಳಲ್ಲಿ ಪ್ರಸಿದ್ಧಿ ಪಡೆದ ಶಾಸ್ತ್ರ ಸಜ್ಜನದ್ಯರತ್ಯೀಜನರ ಸಾವಿರ ಮಹಾಜನರು ಅಲ್ಲಿದ್ದಿರುವುದಾಗಿ ತಿಳಿಸುತ್ತಾ ಚತುರ್ವ್ವೇದಾಧ್ಯಾಯನಗಳು ವ್ಯಾಕರಣ, ಪುರಾಣ, ಕಾವ್ಯ, ನಾಟಕ, ಭರತ ವಾತ್ಸ್ಯಾಯನಾದಿ ವಿದ್ಯಾಸಾರಾಸಾರ ವಿಚಾರ ಚತುನನರ್ ಅನೇಕ ತರ್ಕ ಶಾಸ್ತ್ರಜ್ಞರು ಶಬ್ದವಿದ್ಯಾನಿಪುಣರು ಇಲ್ಲಿಯ ಅಧ್ಯಯನ ಬೋಧನೆಯಲ್ಲಿ ನಿರತರಾಗಿದ್ದರು. ತಪೋಧನರು ಯಮ,ನಿಯಮಾಸನ,ಧ್ಯಾನ, ಧಾರಣ, ಜಪ, ಸಮಾಧಿ ಸಂಪನ್ನರಾಗಲು ದಿನಾಲು ಹಿರಿಯ ಪಂಡಿತರಿಂದ ಉಪದೇಶ ಪಡೆಯುತ್ತಿದ್ದಿರುವುದಾಗಿ ತಿಳಿಸುತ್ತದೆ.[೧೩] ಅದೇ ಊರಿನ ಇನ್ನೊಂದು ಶಾಸನ ಸಾಧುಕುಳ ಪ್ರಸಿದ್ಧರೆನಿಪ ಸೂಂಡಿಯ ನಗರೇಶ್ವರ ಮಠದ ಆಚಾರ್ಯನನ್ನು ವಿವಿಧ ವಿಶೇಷಣಗಳಿಂದ ವರ್ಣಿಸಿದೆ.[೧೪]

ಕುಕನೂರಿನ ಕಾಳಿಕಾಜೇಷ್ಠಾದೇವಿಯ ಸ್ಥಾನದ ಆಚಾರ್ಯರಾದ ಶ್ರೀಮತ್ಸಿದ್ಧಾಂತಿ ರಾಜಗುರು ಕಳೇಶ್ವರಾಚಾರ್ಯರು ಯಮ ನಿಯಮ ಸ್ವಾಧ್ಯಾಯಧ್ಯಾನ ಧಾರಣ, ಮೌನಾನುಷ್ಠಾನ ಜಪ ಷಡಂಗೋಪ ಹಾರಾದಿ ಸಂಪನ್ನರು ಅನೇಕ ತರ್ಕವ್ಯಾಕರಣ ಪುರಾಣ ಕಾವ್ಯ ನಾಟಕ ಇತ್ಯಾದಿ ವಿದ್ಯಾಸಾರಾ ಸಾರಾ ವಿಚಾರಚಾರ ಚತುರರೆನಿಸಿ ಕುಕನೂರಿನ ನವಲಿಂಗಮಠದ ತಪೋಧನ ನರಾಹಾರದಾನಕ್ಕೆ ಅಲ್ಲಿಯ ದೇವಾಲಯದ ಜೀರ್ಣೋದ್ಧಾರಕ್ಕೆ ನಿತ್ಯ ನೈಮಿತ್ತಿಕ್ಕೆ ಪೂಜೆಗೆ ವಿವಿಧ ದಾನಗಳನ್ನು ಬಿಟ್ಟರೆಂದು ಶಾಸನ ಉಲ್ಲೇಖಿಸಿದೆ. ಹಾಗೂ ಈ ಕಳೇಶ್ವರಮುನಿಗಳು ಯರೆಂಬರವಿ ಸಿಂಗೇಶ್ವರ, ರಾಚೇಶ್ವರ, ಚೌಡೇಶ್ವರ, ವಿಕ್ರಮೇಶ್ವರ ದೇವಾಲಯಗಳ ಮಠದ ಆಚಾರ್ಯ ಪಟ್ಟವನ್ನು ಪಡೆದುಕೊಂಡಿದ್ದಾಗಿ ಮತ್ತು ಸಿಂಧರಾಜ ಮಹಾಮಂಡಳೇಶ್ವರ ಪೇರ್ಮಾಡಿಗೂ ಅವನ ಮಂಡಳೇಶ್ವರ ಭಾವುಂಡನಿಗೂ ಗುರುವಾಗಿದ್ದನು. ಇವನು ಕಾಳಾಮುಖಾನ್ವಯಕ್ಕೆ ಸೇರಿದ್ದನೆಂದು ಹೇಳುವುದಲ್ಲದೆ ಗುರುಶಿಷ್ಯರು ಶೈವ ಸಿದ್ಧಾಂತವನ್ನು ಒಪ್ಪಿಕೊಂಡಿರುವುದಾಗಿ ಹೇಳಿದೆ.

ಈ ಎಲ್ಲಾ ಶಾಸನಗಳ ವಿಷಯ ಸಾರವನ್ನು ನೋಡಲಾಗಿ ಕುಕನೂರು ಒಂದು ಉಚ್ಛ ಶಿಕ್ಷಣದವರೆಗಿನ ವಿದ್ಯಾಕೇಂದ್ರವಾಗಿದ್ದು ಇಲ್ಲಿ ಅನೇಕ ತರ್ಕಶಾಸ್ತ್ರಗಳು, ಪುರಾಣಗಳು, ಕಾವ್ಯ, ವ್ಯಾಕರಣ, ನಾಟಕ ಇತ್ಯಾದಿಗಳ

ಅಧ್ಯಯನ ಅವುಗಳನ್ನು ಭೋದಿಸುವವರು, ವಿದ್ವಾಂಸರು ಅಲ್ಲಿದ್ದಿರುವುದಾಗಿ ತಿಳಿಯುವುದು. ಅಲ್ಲದೆ, ಅವುಗಳೆಲ್ಲವನ್ನು ನಡೆಯಿಸಲು ಅನೇಕರು ವಿವಿಧ ದಾನಗಳನ್ನು ನೀಡಿರುವುದಾಗಿ ಹೇಳುತ್ತಾ ''ಕುಂತಳ ದೇಶದ ಬೆಳ್ವಲನಾಡಿನಲ್ಲಿ ವಿರಾಜಿಸುತ್ತಿರುವ ಕುಕನೂರು ಅಗ್ರಹಾರ ಬ್ರಾಹ್ಮಣ ಶಾಲೆಯು ಬ್ರಹ್ಮಲೋಕಕ್ಕೆ ದೊರೆಯಾಯ್ತು'' ಎಂದು ಕುಕನೂರಿನ ಶಿಕ್ಷಣ ಕೇಂದ್ರದ ಶ್ರೇಷ್ಠತೆಯನ್ನು ಹೊಗಳಿದೆ. ಇದೇ ನಾಡಿನ ಆಳವಂಡಿಯು ಒಂದು ಅಗ್ರಹಾರವಾಗಿದ್ದು ಅಲ್ಲಿಯೂ ಸಹ ವ್ಯಾಕರಣ, ಸ್ಮೃತಿ, ಪುರಾಣ, ಆಗಮ, ಚತುರ್ವೇದಾಧ್ಯಯನ, ವೇದಮಂತ್ರ ಮುಂತಾದವುಗಳ ಅಧ್ಯಯನ ಅವುಗಳನ್ನು ಹೇಳಿಕೊಡುವ ಆಚಾರ್ಯರು ಧರ್ಮಶಾಸ್ತ್ರಜ್ಞರು ಆದ ಮಹಾಜನರು ಅಲ್ಲಿರುವುದಾಗಿ ಅಗ್ರಹಾರದಲ್ಲಿ ನಡೆಯುವ ಪೂಜೆ ಪುನಸ್ಕಾರಗಳಿಗೆ ನೀಡಿದ ದಾನದತ್ತಿಗಳ ಕುರಿತು ಶಾಸನ ವಿವರಿಸಿದೆ.[೧೫] ಅದರಂತೆ ಕವಲೂರ ಸಹ ಅಗ್ರಹಾರ ಬ್ರಹ್ಮಪೂರಿ ಶಿಕ್ಷಣದ ಕೇಂದ್ರವಾಗಿತ್ತು. ಇಲ್ಲಿ ಕೌರೂರಿನ ೫೦೦ ಮಹಾಜನರನ್ನು ಮೇಲಿನ ಶಾಸನಗಳಂತೆ ವರ್ಣಿಸುತ್ತಾ ಮಂತ್ರ-ತಂತ್ರನಯರೆಂದು ಹೆಸರಾದ ಈ ಬ್ರಾಹ್ಮಣರು ಹರಿಹರ ದೇವರ ರಂಗಭೋಗ ಅಂಗಭೋಗಕ್ಕೆ ಬ್ರಹ್ಮಪೂರಿಗೆ ಹೇಳವಭಟ್ಟರಿಗೆ ಊರಿನ ಒಡೆಯರಾದ ಮಹಾಜನರ ಸಮ್ಮುಖದಲ್ಲಿ ದಾನ-ದತ್ತಿಗಳನ್ನು ಬಿಟ್ಟಿರುವುದಾಗಿ ತಿಳಿಸುತ್ತದೆ.[೧೬] ಮಾದಿನೂರು ಶಾಸನವೊಂದು ಆ ಊರಿನ ಅಗ್ರಹಾರದ ಮಹಾಜನರನ್ನು ವಿಶೇಷಣಗಳಿಂದ ದೀರ್ಘವಾಗಿ ವರ್ಣಿಸುತ್ತ ವಿದ್ಯಾಭ್ಯಾಸದಲ್ಲಿ ತೊಡಗಿದವರಿಗೆ ಅಗ್ರಹಾರ ಬ್ರಹ್ಮಪೂರಿಗೆ ವಿವಿಧ ದಾನಗಳಾದ ಹಣ, ಭೂಮಿ, ಎಣ್ಣೆ ಮುಂತಾದವುಗಳನ್ನು ನೀಡಿರುವುದಾಗಿ ಉಲ್ಲೇಖ ಮಾಡುತ್ತದೆ.[೧೭]

ಈ ನಾಡಿನ ಪ್ರಸಿದ್ಧ ಅಗ್ರಹಾರಗಳಲ್ಲೊಂದಾದ ಮುಧೋಳು ಅಗ್ರಹಾರದ ಮಹಾಜನರನ್ನು ಶಾಸನ ವಿಶೇಷವಾಗಿ ವರ್ಣಿಸುತ್ತಾ ಅಲ್ಲಿ ನಡೆಯುತ್ತಿರುವ ವಿದ್ಯಾಭ್ಯಾಸದ ಕುರಿತು ಕುಕನೂರು ಶಾಸನಗಳಂತೆ ವರ್ಣಿಸಿದೆ.[೧೮] ತಳಕಲ್ಲು ಕೂಡಾ ಒಂದು ಅಗ್ರಹಾರವಾಗಿದ್ದು ಇಲ್ಲಿ ಸಿದ್ದೇಶ್ವರ ಸಂಕರಾಶಿ ಭಟಾರಕರು ಜಪಸಮಾಧಿಯಂತಹ ಅನೇಕ ಅಧ್ಯಯನದಲ್ಲಿ ನಿರತರಾದ ಶಿಷ್ಯರ ಕುರಿತು ಶಾಸನ ತಿಳಿಸುತ್ತದೆ.[೧೯] ಬೆಳ್ವಲನಾಡಿನ ಮತ್ತೊಂದು ವಿಭಾಗವಾದ ನರೆಯಂಗಲ್ಲು ೧೨ ರ ಭಾಗವಾದ ಇಟ್ಟಗೆ ಮಠ ಅಗ್ರಹಾರ ಬ್ರಹ್ಮಪೂರಿಗೆ ಹೆಸರಾಗಿದೆ. ಇಲ್ಲಿಯೂ ಕೂಡಾ ವೇದ ಅಧ್ಯಯನ, ವಿದ್ಯಾದಾನ, ವ್ಯಾಕರಣಗಳಂತಹ ವಿವಿಧ ಅಧ್ಯಯನಗಳು ನಡೆಯುತ್ತಿತ್ತು. ಯಜನಾಧ್ಯಯನ ಯಜ್ಞದೀಕ್ಷಿತರೆನಿಸಿದ ಮನುಚಾರಿತ್ರರು ಶಾಸ್ತ್ರ ಪಾರಂಗತರು ಎನಿಸಿದ 'ಮಾದವಭಟ್ಟರು' ಬಸವಷಡಂಗಿ ಸಂಗೀತ ಚರಿತಂ ಜನನುತನಾದಂ, ವೇದಂಮನುಜಾಕೃತಿಯಂ ಷಡಂಗಮಂ ತಾಳ್ದಿದ ವೊಲ್ ಸಿಖಾಮಣಿ 'ದೇಚಿರಾಜನ' ವರ್ಣನೆ, ಸಕಳಜಗದ್ವಂದಿತಂ ಬ್ರಹ್ಮವಿದ್ಯಾಸಥಂ ವಿಥೀವಿಹರಣ ಗುರು ಭೂಲೇಖ ವಿಪ್ರಪ್ರಧಾನ ॥ ವಸುದೇವನ ಮನುಚರಿತನ ಇತ್ಯಾದಿಯಾಗಿ ವರ್ಣಿಸಲ್ಪಟ್ಟ 'ವಳಕಬ್ಬೆ' ಇತರರ ಕುರಿತು ಹೇಳಿ ಲೋಕವನ್ನೆ ಇಟ್ಟಗೆಯ ಗ್ರಾಮ ಬೆಳಗುತ್ತದೆ ಎಂದು ಶಾಸನ ತಿಳಿಸುವುದು.[೨೦] ಮೂಲತಃ ಬ್ರಾಹ್ಮಣನಾದ ಮಾದೇವ ದಂಡನಾಯಕನು ಶೈವ ಧರ್ಮವನ್ನು ಸ್ವೀಕರಿಸಿ ತನ್ನ ಮತ್ತು ತಂದೆ ತಾಯಿಗಳ ಹೆಸರಲ್ಲಿ ದೇವಾಲಯ ಕಟ್ಟಿಸಿ ಅವುಗಳು, ಅಲ್ಲಿಯ ಮಠಗಳು ನಡೆಯಲು ಹಾಗೂ ವಿದ್ಯಾಭ್ಯಾಸಕ್ಕಾಗಿ ಅನೇಕ

ದಾನದತ್ತಿಗಳನ್ನು ಬಿಟ್ಟನೆಂದು ಸಕಲ ಶಾಬ್ಧಿಕರು, ಕವಿಗಳು, ತಾರ್ಕಿಕರು, ಆಗಮಿಕರು, ವೈದಿಕರು ಈ ಮಠದಲ್ಲಿ ಆಶ್ರಯ ಪಡೆದಿರುವುದಾಗಿ ಸಕಲ ವಿದ್ಯಾಪಾರಂಗತರಾದ ನಾಲ್ಭೂರ್ವರು ಮಹಾಜನರ ಕುರಿತು, ಶಾಸನ ವಿವರವಾಗಿ ಹೇಳಿದೆ. ಅಲ್ಲಿರುವ ವಿದ್ಯಾಭ್ಯಾಸದಲ್ಲಿ ತೊಡಗಿದ ತಪೋಧನರು ನಿತ್ಯ ಆಹಾರ ದಾನಕ್ಕೆ ನೈವೇದ್ಯಕ್ಕೆ, ಭೋಜನಕ್ಕೆ ಅತಿಥಿಗಳ ಸತ್ಕಾರಕ್ಕೆ, ದೇವರ ಬ್ರಹ್ಮಪೂರಿಗೆ ಬ್ರಾಹ್ಮಣರ ವೇತನಕ್ಕೆ ಅಲ್ಲಿರುವ ದೇವದಾಸ ಪಂಡಿತರುಗಳಿಗೆ ದಾನ ದತ್ತಿಗಳನ್ನು ಬಿಟ್ಟ ವಿವರಣೆ ಇದೆ.[೨೧] ಈ ವಿವರಣೆಯಿಂದ ಗ್ರಾಮದಲ್ಲಿ ಅಂದು ಪ್ರಾಥಮಿಕದಿಂದ ಉನ್ನತ ವ್ಯಾಸಂಗದವರೆಗಿನ ಶಿಕ್ಷಣ ಪದ್ಧತಿ ನಡೆಯುತ್ತಿತ್ತೆಂದು ಸಾಬೀತಾಗುತ್ತದೆ.

ಹೀಗೆ ವಿದ್ಯಾಭ್ಯಾಸಕ್ಕಾಗಿ ಜನರ ನಂಬಿಕೆ ಪರಂಪರೆಯ ಆಚರಣೆಯಲ್ಲಿ ಜನ್ಮತಾಳಿದ ಮಠಗಳು ದೇವಸ್ಥಾನಗಳು, ಅಗ್ರಹಾರ, ಬ್ರಹ್ಮಪೂರಿ, ಘಟಿಕಾ ಸ್ಥಾನಗಳು ಸುಗಮವಾಗಿ ನಡೆದುಕೊಂಡು ಹೋಗಲಿ, ಶಾಶ್ವತವಾಗಿರಲಿ ಎಂದು ಅಲ್ಲಿ ಓದುವ, ಕೇಳುವ, ಹೇಳುವ ಛಾತ್ರ ತಪೋಧನರು ಸ್ಥಾನಾಚಾರ್ಯರಿಗೆ ಅರಸರು-ರಾಣಿಯರು, ಅಧಿಕಾರಿಗಳು, ವಿವಿಧ ವೃತ್ತಿಯನ್ನವಲಂಬಿಸಿದ ವರ್ತಕರು ಭೂಮಿ, ಎಣ್ಣೆ, ಹಣ, ಗಾಣ, ತೋಟ, ಗದ್ದೆ ಇತ್ಯಾದಿಗಳ ನೀಡಿದರೆ, ಕೆಲವರು ತೆರಿಗೆಯಿಂದ ಮುಕ್ತಗೊಳಿಸಿದ್ದರು. ಈ ಕೆಲಸ ಕಾರ್ಯಗಳು ರಾಜ್ಯವನ್ನಾಳುವ ರಾಜರ ಸಮ್ಮತಿಯಲ್ಲಿ ನಡೆಯುತ್ತಿದ್ದವು. ಅಹವಮಲ್ಲನ ಆಳ್ವಿಕೆಯಲ್ಲಿ ಬನವಾಸಿ ೧೨,೦೦೦ ನ್ನು ಆಳುತ್ತಿದ್ದ ಸೋಬನರಸರ ಕೈಕೆಳಗಿನ ಅಧಿಕಾರಿ ಸಾವಿಯಣ್ಣನು ಕೊಪ್ಪಳ ಜಿಲ್ಲೆಯ ಕುಕನೂರು-೩೦ ನ್ನು ಆಳುತ್ತಿದ್ದನು. ಸಾಮಂತ ಸೋಬನರಸರು ಬಂಕಾಪೂರದ ನೆಲೆವೀಡಿನಲ್ಲಿದ್ದಾಗ ಈ ಸಾವಿಯಣ್ಣನು ಅಲ್ಲಿಯ ಅಮೃತರಾಶಿ ಮುನೀಶ್ವರನ ಕಾಲನ್ನು ತೊಳೆದು ಅಗ್ರಹಾರ ತಳಕಲ್ಲಿನ ನಾಗಲೇಶ್ವರ ದೇವಾಲಯಕ್ಕೆ ೪೦೦ ಮತ್ತರು ಭೂಮಿಯನ್ನು ದಾನ ಬಿಟ್ಟಿರುವುದಾಗಿ ತಿಳಿಸಿದೆ.[೨೨] ಈ ನಾಡಿನ ಇನ್ನೊಂದು ಪ್ರಸಿದ್ಧ ಶೈವಮಠ, ಅಗ್ರಹಾರ, ಬ್ರಹ್ಮಪೂರಿ ಮತ್ತು ಘಟಿಕಾಸ್ಥಾನಕ್ಕೆ ಹೆಸರುವಾಸಿಯಾದ ಕುಕನೂರ ಒಂದು ಪ್ರಸಿದ್ಧ ಶಿಕ್ಷಣದ ಕೇಂದ್ರವಾಗಿತ್ತು. ಇಲ್ಲಿ ಸಹ ವಿವಿಧ ದೇವಾಲಯಗಳ ರಚನೆಯಾಗಿದ್ದು; ಈ ದೇವಾಲಯ ಮತ್ತು ಮಠಗಳಲ್ಲಿರುವ ತಪೋಧನ ಆಹಾರ ದಾನಕ್ಕೆ ಇನ್ನಿತರ ಕಾರ್ಯಚಟುವಟಿಕೆಗಳಾದ ಶಿಕ್ಷಣ, ಧಾರ್ಮಿಕ, ವಿಧಿ ವಿಧಾನಗಳು ನಡೆಯಲು ಭೂಮಿ, ಹಣ, ಗಾಣ, ಎಣ್ಣೆ, ತೋಟ, ಮತ್ತರು ಮುಂತಾದವುಗಳು ಬಿಟ್ಟ ಬಗ್ಗೆ ತಿಳಿಸುತ್ತಾ ಇರುವಬೆಡಂಗನ ಕಾಲದಲ್ಲಿ ಈಶ್ವರ ಶೆಟ್ಟಿ ಎಂಬುವನು ಹೊಸಮಠದ ಚೋಳ ಸೋಮೇಶ್ವರ ಪಂಡಿತನ ಶಿಷ್ಯನ ಕಾಲ ತೊಳೆದು ದೇವರಂಗಭೋಗಕ್ಕೆ ೧೦೦ ಗದ್ಯಾಣ ನೀಡಿದ ಉಲ್ಲೇಖಗಳು ದೊರೆಯುತ್ತವೆ.[೨೩] ಈ ಮುಂಚೆ ಪ್ರಸ್ತಾಪಿಸಲ್ಪಟ್ಟ ಇಟ್ಟಿಗೆಯಲ್ಲಿರುವ ಮಠ ದೇವಾಲಯಗಳ ಅಂಗಭೋಗ, ಪಾತ್ರ, ಪಾವುಳ, ನೈವೇದ್ಯ, ಅನ್ನದಾನ, ಭಟ್ಟವೃತ್ತಿ, ಘಳಿಯಾರಗಳಿಗೆ೫೦೦ ಮತ್ತರು ಹೊಲದಾನ ಆಳುಕಾಳಿಗಾಗಿ ೨೪ ಮನೆಗಳನ್ನು ಕಟ್ಟಿಸಿರುವುದು ಋಗ್ವೇದ ಮತ್ತು ಬಾಲಶಿಕ್ಷೆ ಯಜುರ್ವೇದದ ಬಾಲ ಶಿಕ್ಷೆಯಂತಹ ಶಿಕ್ಷಣ ಪದ್ಧತಿ ನಡೆಯಲು೧೨೦ ಗದ್ಯಾಣ ದಾನ ನೀಡಿರುವ ವಿಷಯ ಶಾಸನದಲ್ಲಿ ಬರುತ್ತದೆ.[೨೪] ಹಾಗೆಯೇ ಮುಧೋಳ ಅಗ್ರಹಾರದಲ್ಲಿ ಅಯ್ಯಾವೊಳೆಯ ಐನೂರ್ವರ ವ್ಯಾಪಾರಿ ಸಂಘಗಳು, ಮುಮ್ಮರಿ ದಂಡಗಳು, ಎಂಟನಾಡ

ಹದಿನಾರರು, ನಾನಾದೇಶಿಗಳು ಮುಂತಾದ೫೦೦ ಜನ ವ್ಯಾಪಾರಿಗಳು ಸಭೆ ಸೇರಿ ಅಲ್ಲಿರುವ೧೦೦೦ ಮಹಾಜನರ ಅನುಮತಿ ಪಡೆದು ಗವರೇಶ್ವರ ದೇವಾಲಯದ ಜೀರ್ಣೋದ್ಧಾರ ಅದರ ರಂಗಭೋಗ, ಮಾಟಕೂಟದ ಜೀರ್ಣೋದ್ಧಾರ ಶಿಕ್ಷಣಕ್ಕಾಗಿ ತಾವು ತೂಗುವ, ಅಳೆಯುವ, ಮಾರುವುದರ ಮೇಲಿನ ಸಮಸ್ತ ದಾನ್ಯವನ್ನು ಪಣ, ಚಿನ್ನ, ವೀಸ ಹಾಗೂ ಭೂಮಿ ಮನೆಗಳನ್ನು ಬಿಟ್ಟಿದ್ದನ್ನು ಶಾಸನ ಹೇಳುತ್ತದೆ.[೨೫] ಅಗ್ರಹಾರ ಅಳವಂಡಿಯಲ್ಲಿ ದೇವಾಲಯ, ಮಠಗಳನ್ನು ಸತ್ರಗಳನ್ನು, ಮನೆಗಳನ್ನು, ವಸತಿಗ್ರಹಗಳನ್ನು, ಛತ್ರಗಳನ್ನು ಸ್ನಾನಕ್ಕೆ ಬಾವಿಗಳನ್ನು ತೋಡಿಸುವುದು, ಅರವಟ್ಟಿಗೆ, ಅಗ್ಗಿಷ್ಟಿಕೆಯನ್ನು ಮಾಡಿಸಿದ ಸಂದರ್ಭದಲ್ಲಿ ಅಲ್ಲಿರುವ ಮಹಾಜನರ ಸನ್ನಿಧಿಯಲ್ಲಿ ಕರುವರಗುಲ್ಗಿಮಯ್ಯ, ಕರುವರಯೇಚಿಮಯ್ಯನ ಮಗ ಮೂಕಿಮಯ್ಯ, ಚಾವರಾಜನು (ಈತ ಕೇಶವ ದೇವಾಲಯದ ಮಾಡಿಸಿದ್ದ) ಮೇಲಿನವುಗಳೆಲ್ಲವನ್ನು ನಡೆಯಲು ತೋಟಮತ್ತರುಭೂಮಿ೧೨೭ ಗದ್ಯಾಣಗಳನ್ನು ದಾನ ಕೊಟ್ಟಿರುವುದಾಗಿ ತಿಳಿಸಿದೆ.[೨೬] ಅವುಗಳ ಆದಾಯದಲ್ಲಿ ಅಳವಂಡಿಯ ಅಗ್ರಹಾರದಲ್ಲಿಯ ವಿದ್ಯಾಭ್ಯಾಸ ನಡೆಯುತ್ತಿತ್ತು.

ಕವಲೂರು ಸಹ ಒಂದು ಅಗ್ರಹಾರ-ಧಾರ್ಮಿಕ ಶಿಕ್ಷಣದ ಕೇಂದ್ರವಾಗಿದ್ದು ಇಲ್ಲಿ ಏಚಿರಾಜನೆಂಬುವನು ಹರಿಹರ ದೇವರ ಪ್ರತಿಷ್ಠೆಯನ್ನು ಮಾಡಿಸಿ ದೇವರಂಗಭೋಗ, ಖಂಡಸ್ಫುಟಿತ, ಜೀರ್ಣೋದ್ಧಾರಕ್ಕೆ ಅಗ್ರಹಾರ, ಬ್ರಹ್ಮಪೂರಿಗೆ ತಕ್ಕ ವೃತ್ತಿಯನ್ನು ನಿರ್ಮಿಸಿ ಈ ಭಾಗದ ನಾಡಾಧಿಕಾರಿ, ಮನ್ನೆಯ ಕುಪ್ಪರಸ ಆತನ ಮಕ್ಕಳಾದ ಹರಿಹರ, ಮಲ್ಲದೇವ, ಬಳ್ಳಾಳದೇವರು ಕವಲೂರಿನ ಮಹಾಜನರು ಸೇರಿ ಹರಿಹರ ದೇವರಿಗೆ ಎಡೆಹಳ್ಳಿಯ ಹೊಲದಾನ ನೀಡಿದ್ದಾಗಿ ಮತ್ತು ಬಾಚರಸ ದೊಡ್ಡರಸರು ಕೂಡಾ ಕವಲೂರಿನ ಅಗ್ರಹಾರ, ಬ್ರಹ್ಮಪೂರಿಗೆ ಹೊಲದಾನ ಮಾಡಿದರೆಂದು ತಿಳಿಸಿದೆ.[೨೭] ಮಾದಿನೂರು ಶಾಸನದಲ್ಲಿ ಎಡೆದೊರೆ ೨೦೦೦ ದಲ್ಲಿಯ ನಾಡು ಕೆಳವಾಡಿ -೩೦೦ ಆದರಲ್ಲಿ ಅಗ್ರಹಾರ ಬ್ರಹ್ಮಪೂರಿಗಳಿಂದ ಶೋಭಿಸುತ್ತಿರುವ ಮಾದಿನೂರಿನಲ್ಲಿ ಕೇಶವ ದೇವನು ಸೋಮನಾಥೇಶ್ವರ ದೇವರ ದತ್ತಿಯಲ್ಲಿ ಮೂಲಸ್ಥಾನ ದೇವರಿಗೆ ನಿತ್ಯೋಪಹಾರಕ್ಕೆ ಬಿಟ್ಟ ದತ್ತಿ, ಸೂರ್ಮಡಿ ತೇಜ ಅಹವಮಲ್ಲನು ಮಾದಿನೂರನ್ನು ಅಲ್ಲಿಯ ಬ್ರಾಹ್ಮಣರಿಗೆ ದಾನ ಕೊಡುತ್ತಾನೆ. ಈ ದಾನ ದ್ವಿದಿಚಟ್ಟೋಪಾಧ್ಯಾಯನು ಪಡೆದು ಆ ಊರಿನ ೨೦ ಜನರ ಕಾಲ ತೊಳೆದು ಊರ ನಡುವೆ ತ್ರೈಪುರುಷ ದೇವಾಲಯ ನಿರ್ಮಿಸುತ್ತಾನೆ. ಆ ದೇವಾಲಯದ ಪೂಜೆ, ನಂದಾದೀಪ ಪೂಜಾರಿಗೆ ಜೀರ್ಣೋದ್ಧಾರಕ್ಕೆ ಭೂಮಿಯನ್ನು ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೨೮] ಅದರಂತೆ ಕಲ್ಲೂರು[೨೯] ಬಳಗೇರಿ[೩೦] ಶಾಸನಗಳು ಕೂಡಾ ದೇವಾಲಯ, ಮಠಕ್ಕೆ, ತಪೋಧನರಿಗೆ ಮಠದ ಆಚಾರ್ಯರಿಗೆ ಅಗ್ರಹಾರ, ಬ್ರಹ್ಮಪೂರಿ ದೇವರಂಗಭೋಗರಂಗಭೋಗಕ್ಕೆ ತೋಟ, ಗದ್ಯಾಣ, ಮತ್ತರುಭೂಮಿ, ದಾನಗಳನ್ನು ನೀಡಿರುವುದಾಗಿ ಹೇಳುತ್ತವೆ.

ಘಟಿಕಾಸ್ಥಾನದ ಕುರಿತು ಪೂರಕವಾದ ಅಂಶಗಳನ್ನು ತಿಳಿಸುವ ಕುಕನೂರಿನ ಮತ್ತೊಂದು ಶಾಸನ ಘಟಿಕಾಸ್ಥಾನದಲ್ಲಿರುವ ಘೈಸಾಸರು ಭಟ್ಟರ ಬಗ್ಗೆ ಬ್ರಾಹ್ಮಣರ ಭೋಜನಕ್ಕೆ,ಸತ್ರಕ್ಕೆ, ದೇವಾಲಯಕ್ಕೆ ಭೂಮಿ,

ಗಾಣ, ಮತ್ತರು, ಎಣ್ಣೆ, ಗದ್ದೆ, ಕಮ್ಮ, ಗದ್ಯಾಣ, ಪಣ ಹೂವಿನ ತೋಟಗಳ ದಾನ ನೀಡಿರುವುದಾಗಿ ಹೇಳಿದರೆ[೩೧] ಕ್ರಿ.ಶ. ೧೧೭೦ ರ ಶಾಸನ ಕುಕನೂರಿನ ಮಲ್ಲಿಕಾರ್ಜುನ ದೇವರಂಗಭೋಗ, ಅಂಗಭೋಗ, ಪೂಜೆ, ಬ್ರಾಹ್ಮಣರಿಗೆ, ಘಟಿಕಾಸ್ಥಾನದಲ್ಲಿರುವ ಘೈಸಾಸ ವಿದ್ವಾಂಸರಿಗೆ ನೀಡಿದ ದಾನ-ದತ್ತಿಗಳ ಮಾಹಿತಿ ನೀಡುತ್ತದೆ.[೩೨] ಅದೇ ರೀತಿ ಇನ್ನೂ ಕೆಲವು ಶಾಸನಗಳು ಘೈಸಾಸರ ಕುರಿತು ಉಲ್ಲೇಖಿಸುತ್ತವೆ.

ಈ ವ್ಯವಸ್ಥೆಯಿಂದ ನಮಗೆ ತಿಳಿದುಬರುವುದೆನೆಂದರೆ ವಿದ್ಯಾದಾನಕ್ಕೆ ದಾನ-ದತ್ತಿಗಳನ್ನು ಬಿಡುವಾಗ ದೇವರಂಗಭೋಗ ಮತ್ತು ಅಂಗಭೋಗದ ಜೊತೆಗೆ ಬಿಟ್ಟಿರುವುದರಿಂದ ದೇವಾಲಯಗಳಲ್ಲಿ ದೇವರ ಪೂಜೆ ಪುನಸ್ಕಾರಗಳಿಗಿದ್ದಷ್ಟೇ ಮಹತ್ವ ಶಿಕ್ಷಣಕ್ಕೂ ಇತ್ತೆಂದು ಅರ್ಥವಾಗುತ್ತದೆ. ಹೀಗಾಗಿ ಈ ದೇವಾಲಯಗಳ ಶ್ರೀ ಕಾರ್ಯಗಳ ಪಟ್ಟಿಯಲ್ಲಿ ವಿದ್ಯಾ ದಾನ - ಅನ್ನದಾನಗಳು ಸೇರಿವೆ. ಮಠಗಳಲ್ಲಾಗಲಿ, ದೇವಾಲಯಗಳಲ್ಲಾಗಲಿ ಶಿಕ್ಷಣ ವ್ಯವಸ್ಥೆ ಅವುಗಳ ಅವಿಭಾಜ್ಯ ಕಾರ್ಯವಾಗಿ ನಡೆಯುತ್ತಿತ್ತು. ಇದರಿಂದಾಗಿ ಈ ದೇವಾಲಯ, ಮಠಗಳು ವಿದ್ಯಾಪ್ರಸಾರದಲ್ಲಿ ಹೆಚ್ಚು ಆಸಕ್ತಿ ತಾಳಿದಂತೆ ಕಂಡು ಬರುತ್ತದೆ.

ಕಲಿಯುವ ಶಿಕ್ಷಣ ಪದ್ಧತಿ ಯಶಸ್ವಿಯಾಗಬೇಕಾದರೆ ಅಲ್ಲಿ ಕಲಿಯುವ, ಕಲಿಸುವ ಗುರು-ಶಿಷ್ಯರ ಪಾತ್ರ ಮುಖ್ಯವಾಗಿರುತ್ತದೆ. ಆ ನಿಟ್ಟಿನಲ್ಲಿ ವಿದ್ಯಾರ್ಥಿ ತಪೋಧನರಿಗೆ ಕಲಿಸುವ ಪಂಡಿತರಿಗೆ, ಬ್ರಾಹ್ಮಣರಿಗೆ ಬಂದ ಅತಿಥಿ ಅಭ್ಯಾಸಿಗರಿಗೂ, ವಿದ್ವಾಂಸರಿಗೂ (ಗುರುಗಳು) ಅನುಕೂಲತೆಗಳು ಕಲ್ಪಿಸುವ ದೃಷ್ಟಿಯಂದ ಅವರಿಗಾಗಿ ವಸತಿ, ಸತ್ರ, ಅರವಟ್ಟಿಗೆ, ಛತ್ರ, ಮನೆಗಳನ್ನು ಕಟ್ಟಿಸುವುದು ಅನ್ನದಾನ, ಭೂಮಿ, ಹಣ, ಗದ್ಯಾಣ, ಪಣ , ತೋಟ, ಗದ್ದೆ, ಕಮ್ಮ ಇತ್ಯಾದಿ ರೂಪದಲ್ಲಿ ದಾನ ದತ್ತಿಗಳನ್ನು ಬಿಟ್ಟ ಉದಾಹರಣೆಗಳು ಶಾಸನಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಣುತ್ತೇವೆ. ಮೂಲತಃ ಇಂತಹ ಕಾರ್ಯ ಚಟುವಟಿಕೆಗಳಿಗಾಗಿಯೇ ದೇವಾಲಯ ಮಠ, ವಸತಿ, ಸತ್ರಗಳು ಕಟ್ಟಿಸುವುದು ಪ್ರಾರಂಭವಾಗಿರಬೇಕು. ಈ ಪದ್ಧತಿ ಇಂದಿಗೂ ಕಾಣುತ್ತೇವೆ.

## ಗುರುಶಿಷ್ಯ ವರ್ಗ

ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಗುರು ಮತ್ತು ಶಿಷ್ಯರ ಕುರಿತ ಸಾಕಷ್ಟು ಕಡೆ ಉಲ್ಲೇಖಗಳು ಬರುತ್ತಿದ್ದು, ಗುರುಗಳನ್ನು ಪ್ರತಿನಿಧಿಸುವ ಶಾಸನಗಳು ತಪೋಧನ, ನೈಷ್ಠಿಕ ತಪೋಧನ, ಮಠದ ತಪೋಧನರು, ತಪಸ್ಸು, ಯತಿ, ವಕ್ಖಾಣಭಟ್ಟರನ್ನು, ಉಪಾಧ್ಯಯರುಗಳೆಂದು ಕರೆದರೆ, ಶಿಷ್ಯವರ್ಗವನ್ನು ವಿದ್ಯಾರ್ಥಿ, ವಿದ್ಯಾರ್ಥಿ ತಪೋಧನ, ವಿದ್ಯಾರ್ಥಿಮಾಣಿ ಎಂದು ಉಲ್ಲೇಖಿಸಿವೆ. ಇವರಲ್ಲಿ ತಪೋಧನ, ತಾಪಸರು, ಶಾಸ್ತ್ರೀಕರಾಗಿಯಾಗಲಿ, ನಿಸ್ತ್ರೀಕರಾಗಿಯಾಗಲಿ ಇರಬಹುದಾಗಿತ್ತು. ವಕ್ಖಾಣಭಟ್ಟ ಹಾಗೂ ಉಪಾಧ್ಯಾಯರು ಗ್ರಹಸ್ಥರಾಗಿರುತ್ತಿದ್ದರು. ಯತಿ ಮತ್ತು ನೈಷ್ಠಿಕ ತಪೋಧನರು ನೈಷ್ಠಿಕ ಬ್ರಹ್ಮಚಾರಿಗಳಾಗಿಯೇ ಆಯಾಮಠದ ಜವಾಬ್ದಾರಿ ನಿಭಾಯಿಸುವ ಮುಖ್ಯಸ್ಥರಾಗಿದ್ದುಕೊಂಡು ಬೋಧನೆ ಮಾಡುತ್ತಿದ್ದರು. ಇದಕ್ಕೆ ಸಂಬಂಧಿಸಿದಂತೆ ಕುಕನೂರಿನ ಐದು ಶಾಸನಗಳು[೩೩] ಇಟಗಿ, [೩೪] ಪುರ, [೩೫] ತಳಕಲ್ಲು, [೩೬] ಮುಧೋಳು, [೩೭] ಅಳವಂಡಿ, [೩೮] ಕವಲೂರು, [೩೯] ಮಾದಿನೂರು[೪೦] ಶಾಸನಗಳು ಇನ್ನಿತರ ಕೆಲವು ಶಾಸನಗಳು ಅಲ್ಪಸ್ವಲ್ಪ ಮಾಹಿತಿಯನ್ನು ಒದಗಿಸುತ್ತವೆ.

ಕುಕನೂರಿನ ಒಂದು ಶಾಸನ ಸೋಮೇಶ್ವರಾಚಾರ್ಯನ ಶಿಷ್ಯನೊಬ್ಬನಿದ್ದನೆಂದು ತಿಳಿಸಿ ಆ ಮಠದ ತಪೋಧನರ ಆಹಾರ ದಾನಕ್ಕೆ ಭೂದಾನ ನೀಡಿದಾಗಿ ಹೇಳುತ್ತದೆ. ಕ್ರಿ.ಶ. ೧೧೭೮ ರ ಶಾಸನ ಮಹಾಮಂಡಳೇಶ್ವರ ಸಿಂಧರಾಜ ಪೇರ್ಮಾಡಿಗೂ ಅವನ ಮಂಡಳೇಶ್ವರ ಭಾವುಂಡನಿಗೂ ಗುರುವಾಗಿದ್ದ ಕಳೇಶ್ವರ ಯತಿಯು ಕುಕನೂರು, ಯಲಬುರ್ಗಿಯ ಸಿಂಗೇಶ್ವರ, ರಾಚೇಶ್ವರ, ಚೌಡೇಶ್ವರ, ವಿಕ್ರಮೇಶ್ವರ ದೇವಾಲಯಗಳ ಮಠದ ಆಚಾರ್ಯನಾಗಿ ಕಳೇಶ್ವರ ಮನಿ ಅಪಾರ ಪಾಂಡಿತ್ಯ ಗಳಿಸಿದ್ದನೆಂದು ಮತ್ತು ಶೈವ ಸಿದ್ಧಾಂತವನ್ನು ಅಧ್ಯಯನಿಸಿ ಅದನ್ನು ಒಪ್ಪಿರುವುದಾಗಿ ವರ್ಣಿಸಿದೆ. ಕಾಲಮಾನ ತಿಳಿಸದ ಮತ್ತೊಂದು ಶಾಸನ ಕಾಂಚಿದೇಶದಿಂದ ಬಂದ ಆರ್ಯಭಟ್ಟ, ಮಗ ತ್ರಿವಿಕ್ರಮ, ಇತನ ಮಗ ರುದ್ರರನ್ನು ಉಲ್ಲೇಖಿಸುತ್ತಾ ಅವರು ಸಕಲ ಶಾಸ್ತ್ರ ವೇದಪಾರಂಗತರು ವಿವಿಧ ವಿದ್ಯೆಗಳಲ್ಲಿ ಪರಿಣಿತರಾಗಿದ್ದರೆಂದು ತಿಳಿಸುವುದು. ಪುರ ಶಾಸನ ಅತಿಥಿ ಬ್ರಾಹ್ಮಣ, ತಪೋಧನರು, ಬ್ರಹ್ಮಪೂರಿಯ ಬ್ರಾಹ್ಮಣರ ವೇತನ, ಶಾಸನ ಬರೆದ ಬೊಮ್ಮರಸನ ಬಗ್ಗೆ ಉಲ್ಲೇಖ ನೀಡುವುದು. ಅಳವಂಡಿ ಶಾಸನ ಮಠ, ಸತ್ರ, ವಸತಿ ನಿಲಯ, ವಸತಿ, ಅಧ್ಯಯನ, ಅಧ್ಯಾಪನದಲ್ಲಿ ತೊಡಗಿದ ಮಹಾಜನರ ಕುರಿತು ಹೇಳಿದೆ. ಕೊಪ್ಪಳದ ಅನೇಕ ಶಾಸನಗಳಲ್ಲಿ ಪಂಡಿತ ಗುರು ಶಿಷ್ಯರ ಉಲ್ಲೇಖಗಳು ಕಂಡು ಬರುತ್ತವೆ. ಹೀಗೆ ಶಿಕ್ಷಣ ವ್ಯವಸ್ಥೆ ನಡೆಯಲು ಮಠ, ದೇವಸ್ಥಾನಗಳಲ್ಲಿ ಅದು ನಡೆಯಲು ಜನರು ನೀಡಿದ ದಾನ - ದತ್ತಿ ಪ್ರೋತ್ಸಾಹಗಳು ಅಲ್ಲಿ ಭೋದಿಸುವ ಗುರುಗಳು, ಅಧ್ಯಯನದಲ್ಲಿ ತೊಡಗಿದ ವಿದ್ಯಾರ್ಥಿಗಳು ಚರ್ಚೆ ವಾದ ಸ್ಪರ್ಧೆಗಳಲ್ಲಿ ನಿರತರಾದ ಪಂಡಿತರು (ವಿದ್ವಾಂಸರ) ಕುರಿತು ಚರ್ಚಿಸಲಾಗಿದ್ದರು ಅದಕ್ಕೆಲ್ಲಾ ಮೂಲವಾದ ಅಗ್ರಹಾರ, ಬ್ರಹ್ಮಪೂರಿಗಳು, ಘಟಿಕಾಸ್ಥಾನಗಳ ಕುರಿತು ತಿಳಿಯದೇ ಹೋದರೆ ಅಧ್ಯಯನ ಅಪೂರ್ಣವೆನಿಸುವುದು.

## ಅಗ್ರಹಾರಗಳು

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಇತಿಹಾಸದಲ್ಲಿ ವಿದ್ಯಾಭ್ಯಾಸದ ವ್ಯವಸ್ಥೆ ದೇವಾಲಯ, ಮಠಗಳು, ಅಗ್ರಹಾರ, ಬ್ರಹ್ಮಪೂರಿಗಳು, ಘಟಿಕಾಸ್ಥಾನಗಳಲ್ಲಿ ನಡೆಯುತ್ತಿತ್ತು. ಅವುಗಳೇ ತಪೋಧನರ ನೈಷ್ಠಿಕ ಬ್ರಹ್ಮಚಾರಿಗಳಾದ ಸ್ಥಾನಪತಿಗಳು ವಾಸಿಸುವ ಸ್ಥಳಗಳಾಗಿದ್ದವು. ಅಧ್ಯಯನ ಅಧ್ಯಾಪನದಲ್ಲಿ ತೊಡಗಿದ ಸ್ಥಾನಾಚಾರ್ಯರು, ಉಪಾಧ್ಯಾಯರು (ಭಟ್ಟೋಪಾಧ್ಯಾಯ) ಗಳು, ವಿದ್ಯಾಕೇಂದ್ರಗಳ ಮುಖ್ಯಸ್ಥರಾಗಿದ್ದರು. ಮಹಾಜನರೆಂದು ಹೆಸರಿಸಿಕೊಂಡ ಬ್ರಾಹ್ಮಣರು ವೇದ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರು. ಇವರೆಲ್ಲರ ವಾಸಸ್ಥಾನಗಳಾಗಿ ಅಗ್ರಹಾರಗಳು ಅಸ್ತಿತ್ವಕ್ಕೆ ಬಂದಿರುವುದಾಗಿ ತಿಳಿಯುತ್ತದೆ. ಆಗಿನ ವಿದ್ಯಾದಾನ ಮುಖ್ಯವಾಗಿ ಅಗ್ರಹಾರ, ದೇವಸ್ಥಾನ ಅಥವಾ ಮಠ, ಬ್ರಹ್ಮಪುರಿ, ಘಟಿಕಾಸ್ಥಾನಗಳಲ್ಲಿ ನಡೆಯುತ್ತಿತ್ತು. ಇಲ್ಲಿ ಬ್ರಹ್ಮಪೂರಿಯು ಅಗ್ರಹಾರವನ್ನು ಹೋಲುವುದರಿಂದ ಮೊದಲು ಅಗ್ರಹಾರ ಆ ಬಳಿಕ ಬ್ರಹ್ಮಪುರಿಯ ಕುರಿತು ವಿವೇಚಿಸಲಾಗಿದೆ.

## ಅಗ್ರಹಾರದ ಅರ್ಥ

ಅಗ್ರ + ಆಹಾರ = ಅಗ್ರಹಾರ ಅಗ್ರ ಅಂದರೆ ಶ್ರೇಷ್ಠ ಆಹಾರ ಎಂದರೆ ದೇಶ ಅಥವಾ ಸ್ಥಳ ಎಂದರ್ಥ. ಈ ಅಗ್ರಹಾರಗಳಲ್ಲಿ ಬ್ರಾಹ್ಮಣರು ಮತ್ತು ಬೇರೆ ಜಾತಿಯವರು ಇರಬಹುದಾಗಿತ್ತು. ಆದರೆ ಆಗಿನ ಸಂದರ್ಭದಲ್ಲಿ

ಅವರ ಪ್ರಭುತ್ವವೇ ಹೆಚ್ಚಾಗಿತ್ತು. ಊರಿನ ಉತ್ಪನ್ನವೆಲ್ಲವು ಬ್ರಾಹ್ಮಣರಿಗೆ ಸಲ್ಲುತ್ತಿತ್ತು. ಹೀಗಾಗಿ ರಾಜ್ಯದ ಆದಾಯಕ್ಕೆ ಸಲ್ಲಬೇಕಾಗಿದ್ದ ಐಶ್ವರ್ಯವನ್ನು ಇವರೇ ಅನುಭವಿಸುತ್ತಿದ್ದರು. [೪೧]

ಅವರ ನಿವಾಸಕ್ಕಾಗಿಯೇ ಕೆಲವು ಸಾರಿ ಗ್ರಾಮಗಳನ್ನು ಅಗ್ರಹಾರವಾಗಿ ಮಾರ್ಪಡಿಸಿ ದಾನ ಬಿಟ್ಟಿರುವ ಸಂಪ್ರದಾಯಗಳು ನಮ್ಮ ಪ್ರಾಚೀನರಲ್ಲಿದ್ದಿರುವುದಾಗಿ ಮತ್ತು ಅವುಗಳ ಮೂಲಕವೆ ಹಳ್ಳಿಯ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸಿಕೊಡುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ.

### ಅಳವಂಡಿ ಅಗ್ರಹಾರ

ಅಳವಂಡಿ ಗ್ರಾಮವು ಕೊಪ್ಪಳ ತಾಲೂಕಿನ ಗ್ರಾಮವಾಗಿದ್ದು ಶಾಸನಗಳಲ್ಲಿ 'ಶ್ರೀಮದಳವಿಂಡಿ', 'ಸಕಳಾಗ್ರಹಾರ', 'ರಮಣೀಯ ಪತ್ಕಮಳವಿಂಡಿ', 'ವದಿನಳವಂಡಿಪುರ' ಎಂದು ಉಲ್ಲೇಖಿಸಲ್ಪಟ್ಟಿರುತ್ತದೆ. ಇಲ್ಲಿ ೫ ಶಾಸನಗಳು ಸಿಕ್ಕಿದ್ದು ಅವುಗಳು ತ್ರೈಳೊಕ್ಯ ಮಲ್ಲದೇವ ಕಲ್ಯಾಣದಿಂದ ಆಳುತ್ತಿದ್ದನೆಂದು ಉಲ್ಲೇಖಮಾಡಿದರೆ, ಇನ್ನೊಂದು ಶಾಸನ ವೀರಬಲ್ಲಾಳರ ಬಗ್ಗೆ, ಮತ್ತೊಂದು ಶಾಸನ ನಾಲ್ಕು ರೀತಿ ಕಾಲಮಾನ ಕೊಡುತ್ತಿದ್ದು ಅದು ಜಗದೇಕಮಲ್ಲ ಪೆರ್ಮಾಡಿ ರಾಜನ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳುವುದು. ಈ ರಾಜರ ಕಾಲದಲ್ಲಿಯ ಶಾಸಗಳು ಅಗ್ರಹಾರದ ಬಗ್ಗೆ ಈ ಕೆಳಗಿನಂತೆ ತಿಳಿಸುವವು ''ಚಾಳುಕ್ಯ ಪ್ರತಾಪ ಚಕ್ರವರ್ತಿ ಜಗದೇಕಮಲ್ಲ ವೀರ ಪೇರ್ಮಾಡಿದೇವರ ಕುಂತಳದೇಶದಿಂ ಸುಖಸಂಕಥಾ ವಿನೋದದಿಂದ ರಾಜ್ಯಂಗೆಯ್ಯುತಮಿರಲಾ ಕುಂತಳದೇಶದೊಳಗೆ ॥ ಭರತನುಹೀವಧೂ ರುಚಿರ ಕುಂತಳದಂದಿದಿನಿಪ್ಪ ಕುಂತಳೋರ್ವ್ವರೆ ವಿಭೂಷಣಾ ಕೃತಿಯೊಳೊಪ್ಪುವದೆಕ್ಕಲವಾಡವಾಮಹಿಗುರುಕುಚದ ಗ್ರಹಾರಮೆನೆ ರಂಜಸುಗುಂ ಸಕಳಾಗ್ರಹಾರ ಶೇಖರ ರಮಣಿಯ ರತ್ನಮಳವಿಂಡಿ ॥ [೪೨] ಅಗ್ರಹಾರ ಅಳವಂಡಿಯು ಕುಂತಳದೇಶದ ಎಕ್ಕಲವಾಡಗಳ ರಲ್ಲಿ ರಮಣೀಯವಾಗಿ ಶೋಭಿಸುತ್ತಿತ್ತೆಂದು ವರ್ಣಿಸುತ್ತದೆ.

ಇಲ್ಲಿ ವಾಸಿಸುತ್ತಿದ್ದ ನಾಲ್ಕು ನೂರು ಜನ ವಿಪ್ರರ ಕುರಿತು ಶಾಸನ ''ಸಕಳ ವ್ಯಾಕರಣಾಗಮ ಸ್ಮೃತಿಪುರಾಣಗ್ರಾಮಷಟ್ಕವರ್ಗ ನಾಟಕ ಕಾವ್ಯಜ್ಞಚತುರ್ಮುಖರ್ಕ್ಕತಮುಖರ್ ಷಟ್ಕವರ್ಗ ಸಂಯುಕ್ತರರ್ಥಿಕದಂಬಾಧಾರ ಭೂಮಿಜಾತಿರ ತುಳ ಶ್ರೀನವಲ್ಲಭರ್ ಸದ್ಗುಣಾಧಿಕರುದ್ದಾ ಮಠಗಣ್ಯ ಪುಣ್ಯರೆಸೆದರ್ನಾಲ್ನೂರ್ವರುರ್ವ್ವೀಸುತರು'' ಎಂದು ಅಗ್ರಹಾರದ ನಿವಾಸಿಗಳಾಗಿದ್ದ ೪೦೦ ಜನ ಬ್ರಾಹ್ಮಣರು ವ್ಯಾಕರಣ, ಆಗಮಸ್ಮೃತಿ ಪುರಾಣ, ತರ್ಕ, ನಾಟಕ ಕಾವ್ಯಗಳ ಬಗ್ಗೆ ತಿಳಿದವರಾಗಿದ್ದರಲ್ಲದೆ ಅವರು ಶ್ರೀಮಂತರೂ, ಸದ್ಗುಣಿಗಳೂ, ಉದ್ದಾಮಪಂಡಿತ ಗಣ್ಯರು ಎನಿಸಿಕೊಂಡಿದ್ದರು. ಅವರ ಅಪ್ಪಣೆ ಪಡೆದು ಮಲ್ಲಯ್ಯನೆಂಬುವನು' ಚಾವರಾಜ ಮತ್ತು ಕೇಶವದೇವರ ಹಿಂದಿನ ಸಾಮ್ಯವನ್ನು ಮತ್ತು ಆಸ್ಥಾನದ ಆಚಾರ್ಯತನವನ್ನು ಪಡೆದಿರುವುದಾಗಿ ಹೇಳಿದೆ. ದೇವರಂಗಭೋಗ ನಡೆಸುವವರು ಪುರಾಣಕ್ಕೆ ಗದ್ಯಾಣ ೬ ಪೂಜಾರಿಗೆ ೩ ಚೈತ್ರ ಪವಿತ್ರಕ್ಕೆ ೬ ಮಾಲೆ ಅಗ್ರಹಾರ, ವಸತಿ, ಮಠ, ಸತ್ರಕ್ಕೆ ಮನೆಗಳಿಗೆ ಮುಂತಾದವುಗಳಲ್ಲಿಯ ಕೆಲಸ ಕಾರ್ಯಗಳು ನಡೆಯುವಂತೆ ಅದಕ್ಕೆ ಭೂಮಿ, ಹಣ, ತೋಟಗಳನ್ನು ದಾನ ನೀಡಿರುವ ವರ್ಣನೆ

ಶಾಸನಗಳಲ್ಲಿವೆ. ಯಮ ನಿಯಮ ಸ್ವಾಧ್ಯಾಯಧ್ಯಾನಮೋನಾನುಷ್ಟಾಣ ಪರಾಯಣರ್ ಅಪಘನ ಸಮೀರಣರ್ ಚತುರ್ವ್ವೇದಾಭ್ಯಾಸ ಧರ್ಮಶಾಸ್ತ್ರ ಪರಿವ್ಯಾನಿಗಳ್‌ರಗಳಿಗೆ ಕುರುವರ ಯೇಚಿಮಯ್ಯನ ಮಗ ಮಾಕಿಮಯ್ಯನು ಮಹಾಜನರ ಪಾದ ಪೂಜೆ ಮಾಡಿ ಭೂದಾನ ನೀಡುತ್ತಾನೆ. ಚಾವರಾಜನು ಕೇಶವ ದೇವಾಲಯ ಅರವಟ್ಟಿಗೆ ಅಗ್ಗಿಷ್ಟಿಕೆಯನ್ನು ಮಾಡಿಸಿದ, ಕೆಲವರು ಅದೆಲ್ಲಕ್ಕೆ ಭೂಮಿ, ಹಣ, ಹೊನ್ನು ನೀಡುತ್ತಾರೆ. ಪುರಾಣ, ಚೈತ್ರ, ಪವಿತ್ರ, ಮಾಲೆಗಾರರ ವೃತ್ತಿ, ದೇವರಂಗಭೋಗ ಇತ್ಯಾದಿಗಳು ನಡೆಯುವುದಕ್ಕಾಗಿ.[೪೩] ಒಟ್ಟಿನಲ್ಲಿ ಶಾಸನಗಳ ಪ್ರಕಾರ ಅಳವಂಡಿಪುರವು ೪೦೦ ಜನರುಳ್ಳ ಒಂದು ಪ್ರಸಿದ್ಧ ಅಗ್ರಹಾರವಾಗಿತ್ತು. ಅಲ್ಲಿಯ ಶಿಕ್ಷಣ ಪದ್ಧತಿಯ ಬಗ್ಗೆ ಶಾಸನಗಳು ಬೇರೆ ಬೇರೆ ರೀತಿಯಲ್ಲಿ ಅಪಾರ ಮಾಹಿತಿಯನ್ನು ಒದಗಿಸುತ್ತದೆ.

## ೨.ಕವಲೂರು

ಈ ಗ್ರಾಮವು ಸಹ ಕೊಪ್ಪಳ ತಾಲೂಕಿನಲ್ಲಿ ಬರುತ್ತಿದ್ದು ಇದು ಅಳವಂಡಿ ಅಗ್ರಹಾರದಿಂದ ಉತ್ತರಕ್ಕೆ ೮ ಕಿ.ಮೀ.ಗಳಷ್ಟು ದೂರದಲ್ಲಿದೆ. ಶಾಸನಗಳಲ್ಲಿ 'ಕವಲೂರು' ,'ಕೌರವಪುರ', 'ಕೌರೂರು' ಎಂದಾಗಿ ಇಂದಿನ ಕವಲೂರು ಆಗಿದೆ. ಇದು ಮಾಸವಾಡಿ ನಾಡಿನಲ್ಲಿ ಬರುವ ಒಂದು ಅಗ್ರಹಾರವಾಗಿತ್ತು. ೫೦೦ ಮಹಾಜನರಿಂದ ಶೋಭಿಸುತ್ತಿತ್ತು ಮತ್ತು ಸಕಳ ವ್ಯಾಕರಣ, ಸ್ಮೃತಿ, ಪುರಾಣ, ನ್ಯಾಯ, ತರ್ಕ, ನಾಟಕ, ವಾತ್ಸಾಯನ, ಮಂತ್ರ, ತಂತ್ರ, ವೇದಾಂಗ ಇತ್ಯಾದಿಗಳ ಅಧ್ಯಯನ ಇಲ್ಲಿ ನಡೆಯುತ್ತಿತ್ತೆಂದು ಶಾಸನಗಳು ವರ್ಣಿಸಿರುವುದೇ ಸಾಕ್ಷಿಯಾಗಿದೆ. ಅದರ ಕುರಿತು ಕ್ರಿ.ಶ. ೧೧೭೭ ರಿಂದ ೮೮ ರ ಅವಧಿಯ ಕಲಚೂರಿ ಅರಸ ಸಂಕಮದೇವನ ಶಾಸನ[೪೪] ಮತ್ತು ಕ್ರಿ.ಶ.೧೯೭೭ ರ ಶಾಸನಗಳು ದೇವರಂಗಭೋಗ, ಅಂಗಭೋಗಕ್ಕೆ, ಸೂಳೆಗೇರಿಗೆ, ಬ್ರಹ್ಮಪುರಿಗೆ, ದೇವರಚೈತ್ರ ಪವಿತ್ರಕ್ಕೆ, ಸತ್ರ, ದೇವಾಲಯಕ್ಕೆ, ಶಿಕ್ಷಣಕ್ಕೆ ವಿವಿಧ ದಾನ ದತ್ತಿಗಳನ್ನು ಬಿಟ್ಟ ವಿಷಯ ಶಾಸನಗಳಲ್ಲಿ ಕಂಡು ಬರುವುದು. ಈ ಊರಿನ ಅಗ್ರಹಾರಕ್ಕೆ ಬಳ್ಳಾಳದೇವನ ರಾಣಿಯರು, ನಾಡಾಧಿಕಾರಿಗಳು, ಮನ್ನೆಯರು, ಮಂತ್ರಿಗಳು, ದಾನ ದತ್ತಿಗಳನ್ನು ಬಿಟ್ಟು ಪ್ರೋತ್ಸಾಹ ನೀಡಿರುವುದು ತಿಳಿದುಬರುತ್ತದೆ.[೪೫]

## ೩. ಮಾದಿನೂರು

ಕೊಪ್ಪಳ ತಾಲ್ಲೂಕಿನ ಮಾದಿನೂರು ಗ್ರಾಮ ಜಿಲ್ಲಾ ಕೇಂದ್ರದಿಂದ ಸು.೧೦ ಕಿ.ಮೀ. ಅಂತರದಲ್ಲಿದ್ದು ಈ ಊರಿನ ಶಾಸನಗಳು ಮೋದನೂರ, ಮೋದೆನೂರ, ಮೊದೆಗನೂರ ಎಂದು ಕರೆದಿದ್ದು ಇದು ಪ್ರಾಚೀನ ಕಾಲದ ಎಡದೊರೆ-೨೦೦೦ ಕೆಳವಾಡಿ-೩೦೦ ರಲ್ಲಿದ್ದು ''ಕಲ್ಯಾಣಪೂರದ ನೆಲೆವೀಡಿನಿಂದ ಶ್ರೀಪೃಥ್ವಿವಲ್ಲಭ ಮಹಾರಾಜಾಧಿರಾಜ ಭೂಲೋಕ ಮಲ್ಲನು ರಾಜ್ಯಂಗೆಯುತಮಿರಲು ಮಾದಿನೂರ ಅಗ್ರಹಾರ ತಿಳಕದಂತೆ ಶೋಭಿತವಾಗಿತ್ತೆಂದು ಶಾಸನದಲ್ಲಿ ಬಣ್ಣಿಸಲ್ಪಟ್ಟಿದೆ.[೪೬] ಈ ಅಗ್ರಹಾಲದಲ್ಲಿ ೨೦ ಮಹಾಜನರು ಸಕಲ ವಿದ್ಯೆಗಳ ಜೊತೆಗೆ ಯಮ ನಿಯಮ ಹೇಳಿಕೊಡುತ್ತಿದ್ದರು. ಇಲ್ಲಿ ವಿದ್ಯಾಕೇಂದ್ರಗಳ ಅಧಿಪತಿಗಳೇ ಅಗ್ರಹಾರದ ಅಧಿಪತಿಗಳಾದರೂ ಆಗ ಸೋಮಯಾಜಿ ಬಟ್ಟೋಪಾಧ್ಯಾಯ ಎಂಬುವರು ತಮಗೆ ದೊರೆತ ಭೂಮಿಯ ಕೆಲವು ಭಾಗಗಳನ್ನು ವಿದ್ಯಾಕೇಂದ್ರದಲ್ಲಿದ್ದ ಬ್ರಾಹ್ಮಣ ವಿದ್ವಾಂಸ ಮಹಾಜನರ ಜೀವಿತಕ್ಕೆ ಶಿಷ್ಯರ ಯೋಗ

ಕ್ಷೇಮಗಳನ್ನು ನೋಡಿಕೊಳ್ಳಲು ಬಿಟ್ಟುಕೊಟ್ಟು ಮಹಾಜನರೊಡಗೂಡಿ ಅದರ ಆಡಳಿತವನ್ನು ನಡೆಯಿಸುತ್ತಾ ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಳ್ಳುತ್ತಿದ್ದರು. ಇಲ್ಲಿಯ ಅಧಿಪತಿ ಕಾಶ್ಯಪ ಗೋತ್ರದ ರೇಚಿಮಯ್ಯ ಚಟ್ಟೋಪಾಧ್ಯಾರು ಸೋಮಯಜ್ಞ ಕೈಗೊಂಡ ಉದಾಹರಣೆ ಇಲ್ಲಿದೆ. ವಿದ್ಯಾಭ್ಯಾಸದ ಕುರಿತಂತೆ 'ಪ್ರಭಾಕರ' ವೆಂಬ ಉಚ್ಚ ಶಿಕ್ಷಣದ ಉಲ್ಲೇಖಗಳೊಂದಿಗೆ ಉಪಾಧ್ಯಾಯರು, ಅಧ್ಯಯನದಲ್ಲಿ ತೊಡಗಿದ ಬ್ರಾಹ್ಮಣರ ಪ್ರಸ್ತಾಪಗಳು ಶಾಸನದಲ್ಲಿವೆ. ಇದಕ್ಕಾಗಿ ೨ ನೇ ತೈಲನು ಕ್ರಿ.ಶ. ೯೭೩ ರಲ್ಲಿ ರೇವಯ್ಯ ಚಟ್ಟೋಪಾಧ್ಯಾಯರಿಗೆ ಯಜ್ಞವನ್ನು ಯಶಸ್ವಿಯಾಗಿ ನೆರವೇರಿಸಲು ಮತ್ತು ಸೋಮಯಾಜಿ ಚಟ್ಟೋಪಾಧ್ಯಾಯರಿಗೆ ಮಾದಿನೂರು ಗ್ರಾಮವನ್ನು ದಾರೆಯೆರೆದು ಆ ಊರಲ್ಲಿ ತ್ರೈಪುರುಷ ದೇವಾಲಯ ಕಟ್ಟಿಸಿ ಅದರ ಖಂಡ ಸ್ಫುಟಿತ ಜೀರ್ಣೋದ್ಧಾರಕ್ಕಾಗಿ ದೇವರಂಗಭೋಗ, ನೈವೇದ್ಯಕ್ಕಾಗಿ, ನಂದಾದೀಪಕ್ಕೆ ಹಲವು ಮತ್ತರು ಭೂಮಿ ದಾನ ಕೊಟ್ಟಿದ್ದಾಗಿ ಹೇಳಿದೆ. ೨ ನೇ ಬಿಜ್ಜಳ (೧೧೬೨) ಕಲ್ಯಾಣದಲ್ಲಿ ಸಿಂಹಾಸನಕ್ಕೆ ಬಂದಾಗ ಇತನ ಮಗ ರಾಯಮುರಾರಿ ಸೋವಿದೇವನಿಗೆ ಕ್ರಿ.ಶ. ೧೧೬೭ ರಲ್ಲಿ ಯುವರಾಜ ಪಟ್ಟಗಟ್ಟಿದನು. ಸೋವಿದೇವನ ತಮ್ಮ ಸಂಕಮನನ್ನು ಕ್ರಿ.ಶ. ೧೧೬೮ ರಲ್ಲಿ ಮೋದೆನೂರು ನಾಡಿನ ಅರಸನೆಂದು ಘೋಷಿಸಿದನು. ಆಗಲೂ ಇದು ರಾಜಧಾನಿಯಾಗಿ ಮುಂದುವರೆಯಿತು. ಮುಂದೆ ೧೧೮೩ ರಲ್ಲಿ ಮರಳಿ ಚಾಲುಕ್ಯರ ವಶವಾಯಿತು. ನಂತರ ಸೇವುಣರು ಇದನ್ನು ತಮ್ಮ ಆಡಳಿತಕ್ಕೆ ಸೇರಿಸಿಕೊಂಡರು. ಹೀಗೆ ಅಗ್ರಹಾರ ಶಿಕ್ಷಣ, ಧಾರ್ಮಿಕ ಕೇಂದ್ರವಾಗಿದ್ದ ಮಾದಿನೂರು ನಾಡಿಗೆ ಇದು ರಾಜಧಾನಿಯಾಗಿ ಮೆರೆಯಿತೆಂದು ಶಾಸನ ವರ್ಣಿಸುತ್ತದೆ.

### ೪. ಮುಧೋಳ

ಯಲಬುರ್ಗಿ ತಾಲೂಕಿನಲ್ಲಿ ಬರುವ ಮುಧೋಳ ಗ್ರಾಮ ಶಾಸನದಲ್ಲಿ 'ಮುದುವೋಳಲ' ಎಂದು ದಾಖಲಾಗಿದ್ದು ೧೦೦೦ ಮಹಾಜನರಿಂದ ಕೂಡಿದ ಮಹಾಅಗ್ರಹಾರವಾಗಿತ್ತೆಂದು ಕರೆದ ಶಾಸನ ''ಸ್ವಸ್ತಿ ಯಮನಿಯಮ ಸ್ವಾಧ್ಯಾಯಧ್ಯಾನ ಧಾರಣ ಮೌನಾನುಷ್ಠಾನ ಪರಾಯಣ ಜಪಸಮಾಧಿಶೀಳ ಸಂಪನ್ನರು ಪನ್ನಗಸಯನ ಪದಕಮಳಾರಾಧಿತೋತ್ಪನ್ನರು ಷಟ್ಕರ್ಮ ನಿರತರು ಸಪ್ತಸೋಮ ಸಂಸ್ಥಾವಬೃತಾವಗಾಹನ ಪವಿತ್ರೀಕೃತೋತ್ತಮಾಂಗರು ಅತಿಥಿಯಭ್ಯಾಗತ ವಿಶಿಷ್ಟ ಜನ ಪೂಜೋತ್ಸಾಹರು ಕಲಿಯುಗ ಕೌಮರು ಏಕವಾಕ್ಯರು ವಜ್ರಪಂಜರರು, ಸಮಾಧಿ ಸಮಸ್ತ ಪ್ರಶಸ್ತಿ ಸಹಿತ ಶ್ರೀಮನ್ಮಹಾಗ್ರಹಾರಂ ಮುಧುವೋಳ ಸಾವಿರ ಮಹಾಜನರು ಕೋಪದೊಳಗ್ನಿಯಂ ಬಲ್ಲಾಳ್ತನದೊಳ ಜವನಂ ಹೋಲುತ್ತಿದ್ದರೆಂದು'' ಶಾಸನ ಉಲ್ಲೇಖಮಾಡುತ್ತದೆ.[೪೭] ಈ ಅಗ್ರಹಾರದ ಆಡಳಿತ ಸಾವಿರ ಮಹಾಜನರು ನೋಡಿಕೊಳ್ಳುತ್ತಿದ್ದರು. ಇವರ ಸಂಖ್ಯೆಯ ಆಧಾರದಿಂದ ಕವಲೂರ ಇಟ್ಟಿಗೆ ಅಗ್ರಹಾರಗಳಿಗಿಂತ ಹೆಚ್ಚಾಗಿ ಕುಕನೂರು ಅಗ್ರಹಾರಕ್ಕೆ ಸಮನಾಗಿದ್ದರಿಂದ ಇದೊಂದು ಮಹಾಗ್ರಹಾರವಾಗಿತ್ತೆಂದು ತಿಳಿಯಲಾಗಿದೆ. ತ್ರೈಲೋಕ್ಯಮಲ್ಲ ಆರನೆಯ ವಿಕ್ರಮಾದಿತ್ಯ ರಾಜನ ಆಳ್ವಿಕೆಯಲ್ಲಿ ಐನೂರು ವ್ಯಾಪಾರಿಗಳು, ಎಂಟನಾಡ ಹದಿನಾರು ಸಮಸ್ತ ಮುಮ್ಮುರಿದಂಡಗಳು ನಾನಾ ದೇಶಿಗಳು ಸೇರಿ ಮಹಾನಾಡಾಗಿದ್ದು ಮುದವೋಳಲ ಅಗ್ರಹಾರದ ಗವರೇಶ್ವರ

ದೇವರಂಗಭೋಗ, ಮಾಟಕೂಟದ ಜೀರ್ಣೋದ್ಧಾರ ಇತ್ಯಾದಿ ನಡೆಯುವಂತಾಗಲು ಬೇರೆ ಬೇರೆ ದಾನಗಳನ್ನು ನೀಡಿದ ಉಲ್ಲೇಖಗಳಿವೆ. ಮುಧೋಳು ಗ್ರಾಮದಲ್ಲಿ ಗವರೇಶ್ವರ ದೇವಾಲಯದ ಸ್ಥಾನದ ಪೂರ್ವಾಚಾರ್ಯ್ಯರು, ಶ್ರೀಮದಾಹವಮಲ್ಲ ದೇವರ ವರಶಿಷ್ಯ ತಾರ್ಕ್ಕಿಕ ಚಕ್ರವರ್ತಿದೇವರು ಮತ್ತು (೫೦೦) ವ್ಯಾಪಾರಿಗಳು ಸೇರಿ ಈ ದೇವಾಲಯ ನಿರ್ಮಿಸಿದರು. ಅದರಂತೆ ಬಮ್ಮಲದೇವ ಮತ್ತು ಭಾಗಲದೇವಿಯರು ತಮ್ಮ ಪುತ್ರೋತ್ಸವದ ಕಾಲಕ್ಕೆ ಇಲ್ಲಿ ಹರಿಹರ ದೇವಾಲಯ ಕಟ್ಟಿಸಿದರೆಂದು ಕ್ರಿ.ಶ. ೧೧ ನೆಯ ಶತಮಾನದ ಶಾಸನ ತಿಳಿಸುವುದು. ಈ ಎಲ್ಲಾ ಅಂಶಗಳ ಆಧಾರದಿಂದ ಇದೊಂದು ಮಹಾನಗ್ರಹಾರವಾಗಿತ್ತೆಂದು ಸ್ಪಷ್ಟವಾಗುತ್ತದೆ.

**೫. ಕುಕನೂರು**

ಯಲಬುರ್ಗಿ ತಾಲೂಕಿನಲ್ಲಿ ಬರುವ ಕುಕನೂರು ಗ್ರಾಮವು ಪ್ರಾಚೀನ ಕಾಲದಲ್ಲಿ ಒಂದು ಉಚ್ಚ ಶಿಕ್ಷಣದ ಕೇಂದ್ರವಾಗಿದ್ದು ಇಲ್ಲಿ ಪ್ರಾಥಮಿಕದಿಂದ ಹಿಡಿದು ಉನ್ನತದವರೆಗೆ ಅಂದರೆ ದೇವಾಲಯ, ಮಠ, ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನಗಳಲ್ಲಿ ವಿದ್ಯಾಭ್ಯಾಸ ನಡೆಯುತ್ತಿರುವುದಾಗಿ ಶಾಸನಗಳು ಈ ಕೆಳಗಿನಂತೆ ಬಲವಾದ ಅಂಶಗಳನ್ನು ನೀಡುತ್ತವೆ. ಐತಿಹಾಸಿಕ ಪರಂಪರೆಯನ್ನು ಹೊಂದಿದ ಮಧ್ಯಮಗಾತ್ರದ ಪಟ್ಟಣ ಚಂದ್ರಹಾಸಪುರ ಕುಂತಳಪುರವೆಂದು ದಂತಕಥೆಗಳಲ್ಲಿ ಕರೆಯಿಸಿಕೊಂಡಂತೆ[೪೮] ಇದನ್ನು ಶಾಸನವೊಂದು ''ಎತ್ತಲುವೊಪ್ಪುವತಳೆದ ಕುನ್ತಳದೇಶಕ್ಕೆ ಚಿಂನಪೂವೆತಳ್ತೆತ್ತವಳಂತೆ ಗೊಣ್ಡುದೆ ವಿರಾಜಿಸುತ್ತಿರ್ಪ್ಪುದು ಬೆಳ್ವೋಲಂ ತದತ್ಯುತ್ತಮ ದೇಶದೊಳ್ತಿಳಕದಂತೆನೆಸೆದಿಪ್ಪುದು ಕುಕನೂರು ಮೂವತ್ತು ಸುಗಂದಶಾಳಿಮಿಳಿತ ಲಂಲಳಿತಂ ಫಳತದ್ರುಮಾನ್ವಿತಂ। ತ್ರಿಂಶದ್ಗ್ರಾಮಾಧಿಪತಿ'' ಯೆಂದು ವರ್ಣಿಸುತ್ತಾ ಇದೊಂದು ಪ್ರಸಿದ್ಧ ಅಗ್ರಹಾರವೂ ಜೇಷ್ಠಾದೇವಿಯ ನಿವಾಸಸ್ಥಾನವೂ, ಕುಂತಳ ದೇಶಕ್ಕೆ ಚೆನ್ನದ ಹೂವಿನಂತಿತ್ತೆಂದು ವರ್ಣಿಸುತ್ತದೆ.[೪೯] ಮೂವತ್ತು ಹಳ್ಳಿಗಳಿಗೆ ಆಡಳಿತ ಕೇಂದ್ರವಾಗಿದ್ದ ಕುಕನೂರು ಬೆಳ್ವಲನಾಡಿನಲ್ಲಿ ನೆಲೆಗೊಂಡಿತ್ತು. ಹೀಗಾಗಿ ಈ ಪ್ರದೇಶದಲ್ಲಿ ಬಾದಾಮಿ ಚಾಲುಕ್ಯರು, ಕಲ್ಯಾಣ ಚಾಲುಕ್ಯರು, ಸೇವುಣರು ಮುಂದೆ ವಿಜಯನಗರದ ಅರಸರು ಆಳ್ವಿಕೆ ನಡೆಸಿರುವದಾಗಿ ಕ್ರಿ.ಶ. ೧೦೦೫, ೧೦೯೦, ೧೧೨೭, ೧೧೭೫, ೧೧೪೩, ೧೧೬೩ ರ ಶಾಸನಗಳಿಂದ ವ್ಯಕ್ತವಾಗುತ್ತದೆ. ಶ್ರೀವೀರಪ್ರತಾಪ ಹರಿಹರ ದೇವರಾಯರು ಕುಕನೂರಿನ ಮಹಾಜನಗಳಲ್ಲಿ ಮುಖ್ಯರಾದ ಶ್ರೀಮಾನ್ ಸ್ಥಾನದಾಚಾರ್ಯರಾದ ಗಂಡಿನ ಭಟ್ಟಪ್ಪಯ್ಯಗಳಿಗೆ ಅಗ್ರಹಾರದ ಅಭಿವೃದ್ಧಿ ಮಹಾಮಾಯಾ ದೇವಿಯ ಪೂಜಾ ಕೈಂಕರ್ಯಗಳಿಗೆ ದತ್ತಿ ಕೊಟ್ಟದ್ದನ್ನು ಮತ್ತು ಸೇವುಣರ ಅರಸ ಕನ್ನರ ದೇವನ ಮಂತ್ರಿ ಚಾವುಂಡರಾಯನು ಅಗ್ರಹಾರವನ್ನು ಪ್ರತಿಷ್ಠಿತ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಅಂಶವನ್ನು ತಿಳಿಸುವುದು. ಇಲ್ಲಿಯ ಶಾಸನಗಳು ಕುಕನೂರಿನಲ್ಲಿ ಅಧ್ಯಯನಿಸುವ, ಬೋಧಿಸುವ, ಗುರುಶಿಷ್ಯರು ಅಲ್ಲಿರುವ ವಿದ್ವಾಂಸರು, ಪಂಡಿತರುಗಳ ಬಗ್ಗೆ ಹಾಗೂ ಅವರು ಓದುವ ವಿಷಯಗಳ ಕುರಿತು ಮತ್ತು ಮನೆ, ಮಠ, ದೇವಾಲಯ, ಸತ್ರ, ಅರವಟ್ಟಿಗೆಗಳನ್ನು ಕಟ್ಟಲು ಮತ್ತು ಅವುಗಳ ಜೀರ್ಣೋದ್ಧಾರಕ್ಕಾಗಿ ಪೂಜೆ, ಪುನಸ್ಕಾರ, ಅಂಗಭೋಗ, ರಂಗಭೋಗಕ್ಕೆ ಇತ್ಯಾದಿಗಳು

ನಡೆಯುವಂತಾಗಲು ಅರಸರು, ಅಧಿಕಾರಿಗಳು, ಬ್ರಾಹ್ಮಣರು, ಮತ್ತಿತರರು ಭೂಮಿ, ತೋಟ, ಹೊಲ, ಗದ್ದೆ, ಹಣ,ಎಣ್ಣೆ, ಗಾಣ,ಕಮ್ಮ, ಹೊನ್ನು ಇತ್ಯಾದಿ ದಾನ ದತ್ತಿಗಳನ್ನು ಬಿಟ್ಟಿರುವುದಾಗಿ ವಿಸ್ತೃತ ಮಾಹಿತಿ ನೀಡುತ್ತವೆ.. ಅಂತಹ ಒಂದೆರಡು ಶಾಸನಗಳ ವರ್ಣನೆಮಾತ್ರ ಇಲ್ಲಿ ನೋಡಬಹುದಾಗಿದೆ. ''ಬ್ರಾಹ್ಮಣ ಶಾಲೆಯಿಂ ಬ್ರಹ್ಮಕುಂಡದಿನಿಮ್ ಬ್ರಹ್ಮರೆನಿಪ್ಪದ್ವಿಜರಿಂದಂ ಕುಕನೂರು ಬ್ರಹ್ಮಲೋಕಕ್ಕೆ ದೋರೆಯಾಯ್ತು'' ಎಂದು ಹೇಳಿದರೆ[೫೦] ಮತ್ತೊಂದು ಶಾಸನ ಬಾಳಿಯಬನದಿಂದ, ೪೮ ಕೇರಿಗಳಿಂದ ಸಾರಂಗದ ತನಿಮಣ್ಗಳಿನೋರಂತಿರೆ ಕುಕನೂರು ಕಣ್ಗೆಸೆದಕ್ಕು ಒದವಿದ ವೇದ ಶಾಸ್ತ್ರವೇದ ಪಾಟದಿಂದ ಶಾಸ್ತ್ರ ಸಜ್ಜನರಿಂದ ಫಲತೆರದಿಂದ ಫಲವು ಮಂಟಪದಿಂದ ದೇಗುಲದಿಂದ, ಬೀದಿಗಳಿಂದ ಕಟ್ಟಡಗಳಿಂದ, ತೋಟಗಳಿಂದ, ಕಂಗೊಳಿಸುತ್ತಿತ್ತೆಂದು, ಈ ಅಗ್ರಹಾರದ ಚೆಲುವನ್ನು ವರ್ಣಿಸುತ್ತ ಇಲ್ಲಿ ''ಯಮನಿಯಮ ಸ್ವಾಧ್ಯಾದ್ಯಾನಧಾರಣ ಸಮಾಧಿ ಜಪ ಷಡಂಗೋಪಹಾರಾದಿ ಸಂಪನ್ನರ ಅಖಿಳಪ್ರಾಣಿಪ್ರಸಂನರ್ ಅನೇಕ ತರ್ಕ ವ್ಯಾಕರಣ, ಪುರಾಣ, ಕಾವ್ಯ, ನಾಟಕ, ಭರತ, ವಾತ್ಸಾಯನಾದಿ ವಿದ್ಯಾಸಾರಾಸಾರಾ ವಿಚಾರ ಚತುರಾನರ್''[೫೧] ಎಂದು ವಿವರಿಸುವುದು.

ಅದೇ ಕಾಲದ ಮತ್ತೊಂದು ಶಾಸನ ಯಮನಿಯಮದಂತ ಅಧ್ಯಯನದಲ್ಲಿ ತೊಡಗಿದ ಹೊಸಮಠದ ಚೋಳ ಪಂಡಿತರ ಶಿಷ್ಯರ ಗಸ್ತೇಜೀಯರ್ ಕಾಲಂ ಕಳ್ಚಿ ಈಶ್ವರಸೆಟ್ಟಿ ಎರಡು ದೇವಾಲಯಗಳ ಕಳಸಮಡಿಸಿ ಮುಖಸಾಲೆ (ಮುಖಮಂಟಪ) ಕಟ್ಟಿಸಿ ಅವುಗಳ ನಿರ್ವಹಣೆಗಾಗಿ ೧೦೦ ಗದ್ಯಾಣ ಬಿಟ್ಟಿರುವುದಾಗಿ ತಿಳಿಸಿದರೆ ಕ್ರಿ.ಶ. ೧೧೨೭ ರ ಶಾಸನ ಕುಕನೂರು ಮೂಲ ಸ್ಥಾನದ ದೇವರ ಸಮ್ಮೂಕದಲ್ಲಿ ಬ್ರಾಹ್ಮಣರ ಭೋಜನಕ್ಕಾಗಿ ಮತ್ತು ಸತ್ರಕ್ಕೆ ೫ ಮತ್ತರು ಭೂಮಿ ಅದರ ಆದಾಯ, ಹೊನ್ನು ಬಿಟ್ಟು ಅದನ್ನು ಸಾಸಿರ್ವರು ನಡೆಸಬೇಕೆಂದು ಮಹಾಜರ ಕೈಯಲ್ಲಿ ನೀಡಿರುವುದಾಗಿ, ಆ ದಾನದಲ್ಲಿ ದಿನಾಲು ೪ ಜನ ಬ್ರಾಹ್ಮಣರು ಊಟ ಮಾಡುತ್ತಿರುವುದಾಗಿ ಹಾಗೂ ಇಲ್ಲಿಯ ದೇವಾಲಯದ ಆಚಾರ್ಯ ವಿರೂಪಾಕ್ಷಸ್ವಾಮಿ ಹೆಸರನ್ನು ಸಹ ಸೂಚಿಸುತ್ತದೆ.[೫೨] ಅದೇ ರೀತಿ ಕ್ರಿ.ಶ. ೧೧೪೯ ರ ಶಾಸನ ಕುಕನೂರಿನ ಸೀಮೆಯಲ್ಲಿ ಬಟ್ಟೋಪಾಧ್ಯಾಯ -೧೨ ಮತ್ತರು ೧೬೦ ಕಂಬಗದ್ದೆ, ಗಂಗಾಧರಭಟ್ಟನು ಹರದೇಗಿರಯಲ್ಲಿ ૩೦೦ ಕಂಬಗದ್ದೆಗಳನ್ನು ಮಲ್ಲಿಕಾರ್ಜುನದೇವರಿಗೆ ಬಿಟ್ಟಿರುವದಾಗಿ ತಿಳಿಸುವದು. ಕ್ರಿ.ಶ. ೧೧೬೩ ರ ಶಾಸನ ಅಲ್ಲಿಯ ಅಧಿಕಾರಿಗಳ ವರ್ಣನೆ, ಬ್ರಹ್ಮಪುರಿಯಲ್ಲಿರುವ ೧೫ ಜನ ಮನು ಬ್ರಾಹ್ಮಣರಾದ ಸೋಮಯಾಜಿ, ನಾರಾಯಣ, ನರಸಿಂಗ, ಮಹಾದೇವ, ಭಟ್ಟೋಪಾಧ್ಯಾಯ,ಕಾಳಿದಾಸ ದೀಕ್ಷಿತರು, ರುದ್ರದಿಕ್ಷೀತರು, ಜಾತದೇವ ಕ್ರವೀತರು, ಪುರುಷೋತ್ತಮಯಜ್ಞರು ಚಂದ್ರಸೋಮಯಾಜ್ಯರು, ಆದಿತ್ಯ ಫೈಸಾಸರ ಹೆಸರನ್ನು ಹೇಳುತ್ತದೆ.[೫೩] ಕ್ರಿ.ಶ. ೧೧೪೩ ರ ಇನ್ನೊಂದು ಶಾಸನ ಬ್ರಹ್ಮಪೂರಿಯಲ್ಲಿರುವ ಫೈಸಾಸರಿಗೆ, ಉಪಾಧ್ಯಾಯರಿಗೆ, ಮಲ್ಲಿಕಾರ್ಜುನ ದೇವರಂಗ ಭೋಗ ರಂಗಭೋಗಕ್ಕೆ ಇಲ್ಲಿಯ ಸಾವಿರ ಮಹಾಜನರ ಕೈಯಲ್ಲಿ ಗಳೆಯ ಮುನ್ನುರ್ವ್ವರು ತೋಟವನ್ನು ಬಿಟ್ಟಂತೆ ಹೇಳಿದೆ. ಮತ್ತೊಂದು ಶಾಸನ ಅಗ್ರಹಾರದ ಜೀರ್ಣೋದ್ಧಾರ ಮಹಾಮಾಯ ದೇವಾಲಯದ ಅಂಗಭೋಗರಂಗಭೋಗ, ಜೀರ್ಣೋದ್ಧಾರವನ್ನು ಹರಿಹರ ಮಹಾರಾಯ ಮಾಡಿಸಿ. ಆ

ದೇವರ ನೈವೇದ್ಯ, ದೀಪ. ಚೈತ್ರ, ಪವಿತ್ರ ಪರ್ವ ಅತಿಥಿಗಳಿಗೆ, ನಿತ್ಯ ನೈಮಿತ್ತಿಕೆ ಚತುರ್ವೇದದ ಅಧ್ಯಯನಕ್ಕಾಗಿ ಕುಕನೂರನ್ನೂ ಸಮರ್ಪಿಸಿದ ವಿವರಣೆ ನೀಡುತ್ತದೆ.[೫೪] ಕ್ರಿ.ಶ. ೧೦೦೫ ರ ಶಾಸನವೊಂದು ಇಲ್ಲಿಯ ಅಗ್ರಹಾರದ ಸೋಮೇಶ್ವರ ಆಚಾರ್ಯ ಆತನ ಶಿಷ್ಯನ ಸುಳಿವು ಮತ್ತ ಅಲ್ಲಿರುವ ದೇವಾಲಯ ಮಠದ ತಪೋಧನ ಆಹಾರ ದಾನಕ್ಕೆ ಭೂಮಿ ನಿಡಿದ ಬಗ್ಗೆ ಮಾಹಿತಿ ಒದಗಿಸುವದು ಕ್ರಿ.ಶ. ೧೧೭೮ ರ ಶಾಸನ ಕುಕನೂರಿನಲ್ಲಿರುವ ಒಂಬತ್ತು ಶಿವಲಿಂಗಗಳು, ಮಹಾಮಾಯದೇವಿ, ಮಲ್ಲಿಕಾರ್ಜುನ, ಸೋಮೇಶ್ವರದೇವರ ದೇವಾಲಯ, ಮಠ, ಮಠದಲ್ಲಿ ಶೈವ ಸಿದ್ಧಾಂತವನ್ನೊಪ್ಪಿದ ಬ್ರಾಹ್ಮಣ, ಕಳೇಶ್ವರಯತಿಯನ್ನು ಹೆಸರಿಸುತ್ತಾ ನಿತ್ಯ ನೈಮಿತ್ಯಕೆ, ಪೂಜೆ, ತಪೋಧನರಾಹಾರ, ದೇವಾಲಯಗಳ ಜೀರ್ಣೋದ್ಧಾರಕ್ಕೆ ದಾನದತ್ತಿಗಳನ್ನು ಬಿಟ್ಟ ವಿವರಣೆಯಿದೆ. ಕ್ರಿ.ಶ. ೧೧೨೯ ರ ಶಾಸನ ರುದ್ರಾದಿತ್ಯಘೈಸಾಸರು ಮಾಡಿಸಿದ ಸತ್ರದ ಮನೆಯಲ್ಲಿ ದಿನಾಲೂ ೬ ಜನ ಬ್ರಾಹ್ಮಣರು ಊಟ ಮಾಡುವಂತೆ ಭೂದಾನ ನೀಡಿದ ವಿವರಣೆನಿಡುತ್ತಾ ಯಮನಿಯಮ ಧ್ಯಾನದಾರಣದಲ್ಲಿ ನಿರತರಾದ ಮಹಾಜನರು ಘೈಸಾಸರು, ಋಗ್ವೇದದ ಅಧ್ಯಯನದ ಕುರಿತು ಹೇಳುವುದು.[೫೫] ಇನ್ನೊಂದು ಶಾಸನ ಗಂಗರು, ರಾಷ್ಟ್ರಕೂಟರು, ಕದಂಬ ಅರಸರ ಪ್ರಸ್ತಾಪಗಳನ್ನು ಮಾಡುತ್ತಿದ್ದು ಸಕಲ ಶಾಸ್ತ್ರಗಳಲ್ಲಿ ಪರಿಣಿತ, ವೇದಪಾರಂಗತ, ತ್ರಿವಿಕ್ರಮ ವಿದ್ಯೆಗಳಲ್ಲಿ ಸಾಧನೆಗೈದ ಅಗ್ನಿಹೋತ್ರಿಯಾದ ಕಾಳಾಪಾರ್ಯನ ಪಾಂಡಿತ್ಯದ ವರ್ಣನೆ, ನಾಟಕ, ಗದ್ಯ, ಕಾವ್ಯ, ವೈದ್ಯ, ಶಬ್ದವಿದ್ಯೆ, ಪ್ರಮಾಣ, ಇತಿಹಾಸ, ಪುರಾಣ, ನೃತ್ಯಸಂಗೀತ, ಪಂಚವಾದ್ಯಗಳೆಂಬ ವಿವಿಧ ವಿದ್ಯಾಭ್ಯಾಸ ವಿಷಯಕ್ಕೆ ಕುರಿತಾಗಿ ತಿಳಿಸುತ್ತಿರುವುದರಿಂದ[೫೬] ಕುಕನೂರು ವಿದ್ಯಾಕೇಂದ್ರವಷ್ಟೇ ಅಲ್ಲದೆ ಧಾರ್ಮಿಕ ಕೇಂದ್ರವೂ ಆಗಿತ್ತು. ಇದನ್ನೇ ಶಾಸನಗಳು ಅಗ್ರಹಾರ, ಬ್ರಹ್ಮಪೂರಿ, ಘಟಿಕಾಸ್ಥಾನ, ಮಠ, ದೇವಾಲಯಗಳಿಂದ, ಸುತ್ತಲೂ ನಿಸರ್ಗದ ಚೆಲ್ವಿನಿಂದ ತೋಟಗಳಿಂದ ಕಂಗೊಳಿಸುತ್ತಿತ್ತೆಂದು ಕಾವ್ಯಮಯವಾಗಿ ವರ್ಣಿಸಿರುವುದನ್ನು ಕಾಣುತ್ತೇವೆ.

ಕೊನೆಯ ಮಾತು ಹೇಳುವುದಾದರೆ ಇಲ್ಲಿರುವ ೧೦೦೦ ಮಹಾಜನರು ಸಕಲಶಾಸ್ತ್ರಗಳಲ್ಲಿ ನಿಪುಣರಾಗಿದ್ದರು. ತರ್ಕಶಾಸ್ತ್ರ, ವ್ಯಾಕರಣ, ಪುರಾಣಗಳು, ಕಾವ್ಯ, ನಾಟಕ, ಭರತ, ವಾತ್ಸಾಯನದಂತಹ ವಿವಿಧ ವಿಷಯಗಳಲ್ಲಿ ಚಿರಪರಿಚಿತರಾಗಿದ್ದಾರೆ. ಬಹುತೇಕ ಇದು ೧೧-೧೨ ನೆಯ ಶತಮಾನದ ಹೊತ್ತಿಗೆ ಶಕ್ತಿ ಸ್ಥಾನಕ್ಕೆ ಹೆಸರಾಗಿ ಶಾಕ್ತ ಪಿಠಗಳಾಗಿ ಉರ್ಜಿತಗೊಂಡಂತೆ ಶಾಸನಗಳಿಂದ ಖಚಿತಗೊಳ್ಳುತ್ತದೆ. ಅಲ್ಲದೆ ವಾಸ್ತುಶಿಲ್ಪ ಕಲೆಯಲ್ಲಿ ಖ್ಯಾತಿವೆತ್ತ ಗ್ರಾಮವಾಗಿದೆ. ಹೀಗಾಗಿ ಇಲ್ಲಿ ಯಾವಾಗಲೂ ವೇದಘೋಷಣೆಗಳು ಮೊಳಗುತ್ತಿದ್ದವು. ಮೀಮಾಂಸೆ ವೇದಾಂತಶಾಸ್ತ್ರಗಳು, ಪ್ರವಚನ, ಚರ್ಚೆಗಳು ನಡೆಯುತ್ತಿದ್ದವು. ಅನೇಕ ವಿದ್ಯಾರ್ಥಿಗಳು, ಆಚಾರ್ಯರು, ತಪೋಧನರು, ವಿದ್ವಾಂಸರು ಅಧ್ಯಯನದಲ್ಲಿ ತೊಡಗಿದ್ದರು. ಇವೆಲ್ಲವುಗಳು ಸುಗಮವಾಗಿ ಸಾಗಿಸಿಕೊಂಡು ಹೋಗಲು ೧೦೦೦ ಮಹಾಜನವಿಪ್ರರು ನೆಲೆಸಿದ್ದರು. ಜಾತ್ರಾ- ಉತ್ಸವಗಳು ಸಹ ವಿಜೃಂಬಣೆಯಿಂದ ಜರುಗುತ್ತಿದ್ದವು. ಈ ಸಂದರ್ಭಗಳಲ್ಲಿ ನರನಾರಿಯರು ದೇವಿಯ ಸಮ್ಮುಕದ ನವರಂಗದಲ್ಲಿ ನೆರೆದು ನೃತ್ಯಸಂಗೀತ, ವಾದ್ಯಸ್ತೋತ್ರ, ಪಠನ ವಿವಿಧ ಕಲಾವಿದ್ಯೆಗಳನ್ನು ಪ್ರದರ್ಶನ ಮಾಡುತ್ತಿರುವುದಾಗಿ

ಶಾಸನಗಳು, ಸ್ಮಾರಕಗಳು, ಸಾಹಿತ್ಯ ಗ್ರಂಥಗಳು ಸಾರಿ ಹೇಳಿವೆ. ಮೇಲಿನ ಅಂಶಗಳಿಂದ ನಮಗೆ ತಿಳಿದು ಬರುವುದೆನೆಂದರೆ ಈ ಕ್ಷೇತ್ರ (ಅಗ್ರಹಾರ) ಸಾವಿರ ವರ್ಷಗಳಷ್ಟು ಪ್ರಾಚೀನತೆ ಹೊಂದಿರುವುದು. ಎರಡನೆಯದಾಗಿ ವಿದ್ಯಾ ಪ್ರಭಾವಕ್ಕೆ ಹೆಸರಾದ ಮಹಾನಗ್ರಹಾರವಾಗಿ ಕಂಗೋಳಿಸಿರುವುದು. ಮೂರನೆಯದಾಗಿ ಧಾರ್ಮಿಕ ದೈವಿಶಕ್ತಿಯ ಕೇಂದ್ರವಾಗಿ ಕುಕನೂರು ಕೊಪ್ಪಳ ಜಿಲ್ಲೆಯಲ್ಲಿಯ ಪ್ರಾಚೀನ ಪ್ರಮುಖ ಶಿಕ್ಷಣದ ಕೇಂದ್ರವಾಗಿತ್ತೆಂದು ಸಾಬೀತುಗೊಳ್ಳುತ್ತದೆ.

**೬. ಇಟಗಿ**

ಯಲಬುರ್ಗಿ ತಾಲೂಕಿನ ಕುಕನೂರು ಹೋಬಳಿಯ ಪುಟ್ಟ ಗ್ರಾಮ 'ಇಟಗಿ' ಜಿಲ್ಲಾ ಕೇಂದ್ರದಿಂದ ೨೫ ಕಿ.ಮೀ. ತಾಲೂಕಾ ಕೇಂದ್ರದಿಂದ ೧೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮ ಪ್ರಾಚೀನ ಕಾಲದಲ್ಲಿ ಒಂದು ಅಗ್ರಹಾರವಾಗಿದ್ದು ಬೆಳ್ವಲನಾಡಿನ ನರೆಯಂಗಲ್ ಹನ್ನೆರಡು ವಿಭಾಗಕ್ಕೆ ಸೇರಿದ ಊರಾಗಿದೆ. ಇಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ದಂಡನಾಯಕರಲೊಬ್ಬನಾದ ಮಹಾದೇವ ದಂಡನಾಯಕನು ಬರೆಯಿಸಿದ ಶಿಲಾಶಾಸನವೊಂದಿದ್ದು ಅದು ಇಟಗಿ ಅಗ್ರಹಾರದ ಕುರಿತು ಪ್ರಸ್ತಾಪ ಮಾಡುತ್ತದೆ.[೫೭] ಅದನ್ನೇ ಶಾಸನ ''ಸಕಳದ್ವೀಪಗಳನ್ನು ಮಿನುಗುವ ಜಂಬುದ್ವೀಪದೊಳ ಕೀರ್ತಿವೆತ್ತ ಉತ್ಕೃಷ್ಟ ಭರತವರ್ಷದಲ್ಲಿ ವಿಶ್ವಕಲಸಂಕುಳದ ಜನ್ಮಭೂಮಿ, ಭುವನಶ್ರೀರಮ್ಯ ಹರ್ಮ್ಯಂ ಬಹುಧರ್ಮಾಳದೇನು ನಿವಹಕ್ಕೆ ನಡೆದಾಣ ಬೆಳ್ವಲಂ ಧರಾಂಗನಾ ತಿಳಕಮೆನಿಸಿದ ಕರವೊಪ್ಪಿ ಮೆರೆವ ನರೆಯಂಗಲ್ಲು ಹನ್ನೆರಡರೊಳು ಮಹಾಅಗ್ರಹಾರ ಇಟ್ಟಗೆ ಶೋಭಿಸುತ್ತಿತ್ತು.'' ಎಂದಿದೆ ಇದು ಕನಕಾದ್ರಿಯಂತೆ ವಿಭಧಾಶ್ರಯಂ, ನಾಗಲೋಕದಂತೆ ಭೋಗಿಜನ ಸೇವಿತಂ ಹಾಲು ಸಮುದ್ರದಂತೆ ಪುರುಷೋತ್ತಮ ಸ್ಥಿತಿಕರಂ ಮಹೇಶ್ವರಸ್ಥಾನಂ ಈ ಮಹಾ ಅಗ್ರಹಾರದಲ್ಲಿ ಸೋಗೆಗಳು ನರ್ತಿಸುತ್ತಿದ್ದವು. ಭ್ರಮರಗಳು ಪಾಡುತ್ತಿದ್ದವು. ಹಂಸಗಳು ನಡೆದಾಡುತ್ತಿದ್ದವು, ಕೋಗಿಲೆಗಳು ಹಾಡುತ್ತಿದ್ದವು. ನುಡಿದಂತೆ ನಡೆಯುವ ರಾಜಕೀರಗಳಿದ್ದವು, ಲತಾವನಂಗಳಿದ್ದವು. ಇಂತಹ ಮಹಾಗ್ರಹಾರದೊಳು ಸರುತರು, ನಂದ್ದನದಿಂದ ಹರಿದು ಮಹೇಶ್ವರನ ಜಟಾಗ್ರದಿಂದಿಳಿದು ಗಂಗೆಯ ಕಾಲನಪ್ಪಿ ಇಲ್ಲಿ ಹರಿದು ದೊಡ್ಡ ಕೆರೆಯನ್ನು ನಿರ್ಮಿಸಿತೆಂದು ಶಾಸನ ವರ್ಣಿಸುವುದು.[೫೮]

''ಭೂವಲಯಕ್ಕೆ ವಿನೂತರೆನಿಪ್ಪ ನಾಲ್ಕೂರ್ವರುವಿಪ್ರರು ಎತ್ತ ನೋಡಿದತ್ತಾ ಶೋಭಿಸುತ್ತಿದ್ದರು. ಇವರಿಂದ ವೇದ ವಿದ್ಯಾತಿಲಕ ಬ್ರಾಹ್ಮಣ ಶ್ರೇಷ್ಠರಿಂದ ಭೂಭವನ ವೇದೋಕ್ತ ಮಾರ್ಗವೆನಿಸಿತು. ಸುರಗಣ ಸಾರ್ದಪ್ಪಿದು ವಿವಿಧ ವೇದ ಅರ್ಥಗಳು ಮೂರ್ತಗೊಂಡಂತಿರುವ ಜ್ಞಾನಿಗಳು ಅಮಳ ಚರಿತ್ರರು ಸಕಳ ಕ್ಷೋಣಿಗೆ ಪೂಜ್ಯರು ದ್ವಿಜೋತ್ತಮರು ಅನವೇದ್ಯರು, ಅನುಪಮರು ಅನೇಕ ರೀತಿಯ ಯಜನ ಯಾಜನ ಅಧ್ಯಯನರು, ದಾನ ಸತ್ಪರಿಗ್ರಹರು'' ಎಂದು ಅಲ್ಲಿರುವ ನಾಲ್ಕೂರ್ವರುಮಹಾಜನರ ವರ್ಣನೆ ಶಾಸನದಲ್ಲಿ ಬರುವುದು. ಇವರು ಸಾಹಿತ್ಯ, ವೇದಾಂತ, ಬ್ರಹ್ಮ ವಿದ್ಯೆಗಳನ್ನು ಬಲ್ಲವರಾಗಿದ್ದರು. ಹೀಗಾಗಿ ಪರಿಶುದ್ಧ ಚರಿತ್ರರಾಗಿಯೂ ನಾಡಿನಲ್ಲಿ ಗೌರವಪಡೆದಿದ್ದರು. ಈ ಅಗ್ರಹಾರದಲ್ಲಿ ಹೋಮ ಹವನಗಳು ನಿರಂತರವಾಗಿ ನಡೆಯುತ್ತಿದ್ದವು.

ಆದರಂತೆ ಋಗ್ವೇದ,ಬಾಲಶಿಕ್ಷೆ, ಯಜುರ್ವೇದಗಳ ಅಧ್ಯಯನಕ್ಕೆ ಹೇಳಿ ಮಾಡಿದ ಸ್ಥಳವಾಗಿತ್ತೆಂದು ಶಾಸನ ಕವಿ ವಿಶೇಷ ಮೂರ್ಧನಿ ಪಂಡಿತನು ತಿಳಿಸಿರುವನು. [೫೯]

ಮಹಾದೇವ ದಂಡನಾಯಕನು ತನ್ನ ಹೆಸರಲ್ಲಿ, ತಂದೆ ತಾಯಿಗಳ ಹೆಸರಲ್ಲಿ ದೇವಾಲಯಗಳನ್ನು ಕಟ್ಟಿಸಿದಂತೆ ಸರಸ್ವತಿ ಮಠವನ್ನು ಸಹ ಕಟ್ಟಿಸಿ ಶಾಬ್ದಿಕರಿಗೆ, ಕವಿಗಳಿಗೆ, ಆಗಮಿಕರಿಗೆ, ವೈದಿಕರಿಗೆ, ಸಾಕ್ಷರರಿಗೆ, ಸಜ್ಜನರಿಗೆ, ವಿದ್ಯಾಭ್ಯಾಸ ಮಾಡಲು ಅನುಕೂಲ ಕಲ್ಪಿಸಿಕೊಟ್ಟಿದ್ದನು. ಬಾಲ ಶಿಕ್ಷಣ, ಪ್ರೌಢ ಶಿಕ್ಷಣ, ಉನ್ನತ ಶಿಕ್ಷಣಕ್ಕೆ ಅನುಕೂಲ ದೃಷ್ಟಿಯಿಂದ ಅಲ್ಲಿರುವ ಅಗ್ರಹಾರ, ದೇವಾಲಯ, ಮಠ, ಸತ್ರಗಳು ನಡೆಯುವಂತೆ ಭೂಮಿ ದಾನ, ಮಹಾಜನರಿಗೆ ಗದ್ಯಾಣ-೧೨೦ ಕೊಟ್ಟಿರುವುದಾಗಿ ತಿಳಿಯುತ್ತದೆ. ಪರಿಣಿತರು, ಪಂಡಿತರು, ಕಲಾವಿದರು, ವೇದಬಲ್ಲವರು, ಹೇಳುವಲ್ಲಿ ಸಂಸ್ಕೃತ-ಕನ್ನಡ ಭಾಷೆ ಬಳಸಿದ ಕವಿ, ಛಂದಸ್ಸು, ಅಲಂಕಾರ, ಮಠ, ದೇವಾಲಯ, ಸತ್ರ ಶಾಲೆ, ಬ್ರಹ್ಮಪುರಿ, ಘಟಿಕಾಸ್ಥಾನ, ಘೈಸಾಸರು, ಉಪಾಧ್ಯಾಯರು ಇತ್ಯಾದಿ ಶಿಕ್ಷಣ ಸೂಚಕ ಪದಗಳ ಬಳಕೆಯಿಂದ ಅಗ್ರಹಾರದ ಪಂಡಿತರು ಪೂರ್ಣಜ್ಞಾನ ಬಲ್ಲವರಾಗಿದ್ದರೆಂಬುದನ್ನು ಎತ್ತಿ ತೋರಿಸಿದ್ದಾನೆ.

### ೭.ತಳಕಲ್ಲು

ಯಲಬುರ್ಗಿ ತಾಲೂಕಿನಲ್ಲಿರುವ ತಳಕಲ್ಲು ಗ್ರಾಮವನ್ನು ಶಾಸನ ಶೋಭನರಸರ್ತ್ತಳೆ ಕಲ್ಲಿನಗ್ರಹಾರ ಬಿಡು ಚನ್ನದೇವರ ಎಂದು ಉಲ್ಲೇಖಿಸುತ್ತಿದ್ದು ಚಾಳುಕ್ಯ ಅರಸ ಅಹವಮಲ್ಲನ ಆಳ್ವಿಕೆಯಲ್ಲಿ ಸಾಮಂತನಾಗಿ ಸೋಬನರಸನು ಎರಡಾರುನೂರು ಬನವಾಸಿ-೧೨೦೦೦ ನ್ನು ಆಳುತ್ತಿದ್ದ ಇವನ ಕೈಕೆಳಗೆ ಸಾವಿಯಣ್ಣನು ಕುಕನೂರು -೩೦ ನ್ನು ಆಳುತ್ತಿದ್ದ. ಸೋಭನರಸರು ಬಂಕಾಪೂರದ ನೆಲೆವೀಡಿನಲ್ಲಿದ್ದಾಗ ಯಮನಿಯಮ ಸ್ವಾಧ್ಯಾಯಮೊನಾನುಷ್ಠಾನಸಮಾಧಿ ಸಂಪನ್ನರಪ್ಪ ಶ್ರೀಮತ ಕಾಳದಾಲೂರಿನ ಸಿದ್ದೇಶ್ವರ, ಸಂಕರಾಶಿಭಟ್ಟಾರನ ಶಿಷ್ಯ ಅಮೃತರಾಶಿ ಮುನೀಶ್ವರನ ಕಾಲನ್ನು ತೊಳೆದು ಅಗ್ರಹಾರ ತಳಕಲ್ಲಿನ ನಾಗಲೇಶ್ವರ ದೇವಾಲಯಕ್ಕೆ ೪೦೦ ಮತ್ತರು ಭೂಮಿ ಧಾರೆಯೆರದರೆಂದಿದೆ.[೬೦] ಈ ಅಗ್ರಹಾರದ ಹೆಚ್ಚಿನ ವಿಷಯ ಶಾಸನಗಳಲ್ಲಿ ಕಾಣಸಿಗುವುದಿಲ್ಲ.

### ೮. ಇತರ ಅಗ್ರಹಾರಗಳು

ಹುಲಗಿಯ ಶಾಸನ, ಅಗ್ರಹಾರ ಹುಲಗಿಯ ಸುಳಿವು ನೀಡಿದರೆ[೬೧] ಬಳಗೇರಿ ಶಾಸನ ಬಳ್ಳಂಗೆರೆಯು ಬ್ರಹ್ಮಪೂರಿಯಾಗಿತ್ತೆಂದು ಹೇಳುತ್ತಾ ಅಲ್ಲಿ ೩೦೦ ಜನ ಮಹಾನಜನರಿದ್ದರೆಂದು ತಿಳಿಸುವದು. ಆ ಊರಿನ ಸೋಭನೇಶ್ವರ ದೇವಾಲಯದ ಆಚಾರ್ಯ ಆತನ ಶಿಷ್ಯನೊಬ್ಬನು ಇದ್ದನೆಂದು ಹೇಳುತ್ತಾ 'ಅಗ್ರಹಾರ' ಬೆಳನೆಗೆಯೂರಿನ ಮುಖ್ಯಸ್ಥ ರೂವಾರಿ ಅಯ್ಯಣಯ್ಯನಿಗೆ ವಿರುಪಾಕ್ಷ ದೇವರ ಸನ್ನಿಧಿಯಲ್ಲಿ ಜಗದೇಕಮಲ್ಲನು ಕೆಳವಾಡಿ-೩೦೦ ನ್ನು ಆಳುತ್ತಿದ್ದಾಗ ಅಲ್ಲಿಯ ಮೂಲಸ್ಥಾನದೇವರಿಗೆ ಬೇರೆ ಬೇರೆಯಾಗಿ ಬ್ರಹ್ಮಪುರಿ೧೨ ಜನ ಬ್ರಾಹ್ಮಣರಿಗೆ ಭೂಮಿಯನ್ನು ದಾನ ನೀಡಿರುವುದಾಗಿ ತಿಳಿದು ಬರುವುದು.[೬೨] ಪುರಗ್ರಾಮದ ಶಾಸನ ಪುರದಲ್ಲಿ ಬ್ರಹ್ಮಪುರಿ ಇತ್ತೆಂದು ತಿಳಿಸುವದು. ಆದರೆ ಅಗ್ರಹಾರದ ಬಗ್ಗೆ ಉಲ್ಲೇಖನಿಡುವದಿಲ್ಲ. ಆ ಊರಿನ ಗವರೇಶ್ವರ ದೇವರಂಗಭೋಗ ಅಂಗಭೋಗಕ್ಕೆ ಪಾತ್ರಪಾವುಳ ಚೈತ್ರ, ಪವಿತ್ರ, ಪಂಚಪರ್ಬ್ಬ ನೈವೇದ್ಯ, ಭೋಜನ, ಅತಿಥಿ

ಬ್ರಾಹ್ಮಣರಿಗೆ, ತಪೋಧನರಿಗೆ ನಿತ್ಯ ಆಹಾರ ದಾನಕ್ಕೆ ಖಂಡ ಸ್ಪಟಿತ ಜೀರ್ಣೋದ್ಧಾರಕ್ಕೆ 'ಬ್ರಹ್ಮಪೂರಿ' ಬ್ರಾಹ್ಮಣರ ವೇತನಕ್ಕೆ ವಿವಿಧ ಮತ್ತರು ಭೂಮಿ ಮತ್ತೀತರ ದಾನಗಳು ನೀಡಿದ ಬಗ್ಗೆ ಹಾಗೂ ಆ ಊರಿನಲ್ಲಿ ಊರೋಡೆಯರು ಆಡಳಿತ ನಡೆಸುತ್ತಿರುವುದನ್ನು ಹೇಳುವುದರಿಂದ ಬಹುತೇಕ ಬ್ರಹ್ಮಪೂರಿ ಆಗಿದ್ದ ಪುರ ಗ್ರಾಮ ಮೊದಲು ಅಗ್ರಹಾರವಾಗಿತ್ತೆಂಬ ಅಂಶ ವೃದ್ಧಪುರ ಸಾವಿರ ಜನರ ಉಲ್ಲೇಖ[೬೩] ಮತ್ತು ಕ್ರಿ.ಶ. ೧೦೦೨ ರ ಬಳಗೇರಿ ಶಾಸನ ವಿಮರ್ಶಿಸಲಾಗಿ ಇದು ಅಗ್ರಹಾರ ಆಗಿರುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ.[೬೪] ಬಳಗೇರಿ, ಮಾದಿನೂರು, ನಿಡಗೋಳ, ತಳಕಲ್ಲು ಮುಂತಾದ ಅಗ್ರಹಾರದ ಸಮಸ್ತ ನಾನಾದೇಶಿಗರು ಮುಮ್ಮುರಿದಂಡಗಳು, ಮಹಾನಾಡಾಗಿ ಪುರದಲ್ಲಿ ಸಭೆ ಸೇರಿದ್ದರೆಂದು ಪುರ ಶಾಸನ ತಿಳಿಸುವುರಿಂದ ಬಳಗೇರಿ, ತಳಕಲ್ಲು ಅಗ್ರಾಹಾರಗಳಾಗಿದ್ದವೆಂದು ಸ್ಪಷ್ಟವಾಗುತ್ತದೆ. ಅದರಂತೆ ಕಲ್ಲೂರ ಶಾಸನದಲ್ಲಿ[೬೫] ತಪೋಧನರು ಅಲ್ಲಿಯ ಮಠದ ಆಚಾರ್ಯ ಸೋಮೇಶ್ವರ ಪಂಡಿತರು ನರೆಯಂಗಲ್ಲ-೧೨ ನ್ನು ಕಲ್ಲೂರ ಬಳಗೇರೆಯ ಪ್ರಭುತ್ವ ಮಾಡುತ್ತಿದ್ದರೆಂದು ಪ್ರಸ್ತಾಪಿಸುತ್ತಾ ಅಲ್ಲಿಯ ಬ್ರಾಹ್ಮಣರಿಗೆ ಸೋಭನೇಶ್ವರ ದೇವರಂಗ ಭೋಗಕ್ಕೆ ಗಣಮಠಕ್ಕೆ, ಮಠದ ಆಚಾರ್ನಿಗೆ. ತಪೋಧನರ ಆಹಾರದಾನಕ್ಕೆ ದೇವಾಲಯದ ಪೂಜೆ, ಅತಿಥಿಯರ ಆಹಾರದಾನ ಇತ್ಯಾದಿಗಾಗಿ ಭೂಮಿ, ಹಣ, ಜೊಳ, ಮುಂತಾದ ದಾನ ದತ್ತಿಗಳನ್ನು ನೀಡಿದಬಗ್ಗೆ ತಿಳಿಸುವದು.

ಹೀಗೆ ಕೊಪ್ಪಳ ಜಿಲ್ಲೆಯ ಸಮಗ್ರ ಶಾಸನಗಳನ್ನು ಸಂಶೋಧನೆಯ ಅಡಿಯಲ್ಲಿ ಪರಿಶೀಲಿಸಲಾಗಿ ಅಗ್ರಹಾರಗಳ ಕುರಿತು ಸ್ಪಷ್ಟವಾಗಿ ತಿಳಿಸಿದರೆ ಎರಡು ಅಗ್ರಹಾರಗಳ ಬಗ್ಗೆ ಸ್ಪಷ್ಟಗೊಳ್ಳುವುದಿಲ್ಲ.[೬೬] ಈ ಅಗ್ರಹಾರಗಳಲ್ಲಿ ಮುಧೋಳ, ಕುಕನೂರು ಅಗ್ರಹಾರಗಳು ೧೦೦೦ ಮಹಾಜನರ ಸಂಖ್ಯೆಯನ್ನು ಹೊಂದಿರುವುದರಿಂದ ಅವುಗಳನ್ನು ಘನ ಅಗ್ರಹಾರಗಳೆಂದು, ಕವಲೂರು, ಅಳವಂಡಿ, ಇಟಗಿ ಮಹಾಅಗ್ರಹಾರಗಳೆಂದು ಬಳಗೇರಿ, ಮಾದಿನೂರು, ಪುರ, ತಳಕಲ್ಲು ಅಗ್ರಹಾರಗಳು ಕನಿಷ್ಟ ಅಗ್ರಹಾರಗಳಾಗಿದ್ದವೆಂದು ಹೇಳಬಹುದಾಗಿದೆ.

ಅಗ್ರಹಾರಗಳಲ್ಲಿ ಮಹಾಜನರು ತಾವೇ ಸಾಮೂಹಿಕವಾಗಿ ಊರಿನ ಒಳ ಆಡಳಿತವನ್ನು ನಡೆಸಿಕೊಂಡು ಹೋಗುತ್ತಿದ್ದರು. ಅಲ್ಲದೆ ಇವರೆ ಅದರ ಒಡೆಯರಾಗಿ, ಸಕಲ ವಿದ್ಯೆಗಳನ್ನು ಕಲಿಯುವುದರೊಂದಿಗೆ ಯಮ, ನಿಯಮ, ಧ್ಯಾನ, ಧಾರಣ ಇತ್ಯಾದಿಗಳನ್ನು ಹೇಳಿಕೊಡುತ್ತಿದ್ದರು. ವಿದ್ಯಾಭ್ಯಾಸ ಮುಗಿಸಿದ ಬಳಿಕ ಅರಸರ ಆಸ್ಥಾನದಲ್ಲಿ ಕೆಲವರು ಕವಿಗಳಾದರೆ ಕೆಲವರು ಸಚಿವರು ಆಗಿದ್ದರು. ಇವರು ವಾಸಿಸುವ ಅಗ್ರಹಾರಗಳಿಗೆ ಅರಸರು ಅಧಿಕಾರಿಗಳು, ಸಾಮಂತ ಅರಸರು, ಊರಿನ ಜನರೆಲ್ಲರೂ ಪೋಷಕರಾಗಿದ್ದರು. ಆದರೆ ಊರಲ್ಲಿ ಯಾವುದೇ ಕಾರ್ಯಕ್ರಮಗಳು ನಡೆದರೆ ಅವುಗಳು ಮಹಾಜನರ ಸಮ್ಮುಖದಲ್ಲಿ ನಡೆಯುತ್ತಿತ್ತು. ಇದರಿಂದ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಆಡಳಿತ ರಂಗಗಳಲ್ಲಿ ಅವರ ಪಾತ್ರ ಪ್ರಮುಖವಾಗಿ ಕಾಣಿಸಿಕೊಳ್ಳುತ್ತದೆ. ಹೊಟ್ಟೆ ಬಟ್ಟೆಯ ಚಿಂತೆಯನ್ನು ರಾಜ್ಯವು ಹೋಗಲಾಡಿಸಿದ್ದರಿಂದ ಅಗ್ರಹಾರಗಳ ಬ್ರಾಹ್ಮಣರು ತಮ್ಮ ಪರಿಪೂರ್ಣ ಗಮನವನ್ನು ವಿದ್ಯಾಭ್ಯಾಸದ ಕಡೆಗೆ ಹೆಚ್ಚಿನ ಆಸಕ್ತಿ ತೋರಲು ಕಾರಣವಾಗಿರಬೇಕು.

## ಬ್ರಹ್ಮಪುರಿಗಳು

ನಗರಗಳಲ್ಲಿ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವೆ 'ಬ್ರಹ್ಮಪುರಿ'. ಅಗ್ರಹಾರಗಳು ಊರುಗಳಾದರೆ ಬ್ರಹ್ಮಪುರಿಗಳು ಪಟ್ಟಣಗಳ ಭಾಗಗಳು ಅಗ್ರಹಾರಗಳಿಗಿಂತ ಬ್ರಹ್ಮಪುರಿಗಳ ಸಂಖ್ಯೆ ಕಡಿಮೆ. ಏಕೆಂದರೆ ಪ್ರಾಚೀನ ಕರ್ನಾಟಕದಲ್ಲಿ ಹಳ್ಳಿಗಳ ಸಂಖ್ಯೆ ಹೆಚ್ಚು ನಗರಗಳ ಸಂಖ್ಯೆ ಕಡಿಮೆ ಅಗ್ರಹಾರಗಳಿದ್ದ ಬ್ರಾಹ್ಮಣರು ಆ ಊರುಗಳ ಒಡೆಯರು ಆದರೆ ಬ್ರಹ್ಮಪುರಿಗಳಲ್ಲಿದ್ದ ಬ್ರಾಹ್ಮಣರು ಆ ಊರಿನ ಇತರ ಪಂಗಡಗಳ ಜನರಿದ್ದಂತೇ. ಅಗ್ರಹಾರದ ಬ್ರಾಹ್ಮಣರಿಗಿದ್ದ ಅಧಿಕಾರ ಇವರಿಗಿರುತ್ತಿರಲಿಲ್ಲ. ಇಲ್ಲಿಯವರೆಗೆ ನಡೆದ ಶಾಸನಗಳ ಅಧ್ಯಯನದಿಂದ ತಿಳಿದು ಬಂದ ಅಂಶವೆನೆಂದರೆ ವಿದ್ಯಾಭ್ಯಾಸದ ವಿಷಯದಲ್ಲಿ ಬ್ರಹ್ಮಪುರಿಗಳು ಯಾವ ವೈಶಿಷ್ಟ್ಯವನ್ನು ತೋರುವುದಿಲ್ಲವಾದರು[೬೭] ಅವುಗಳ ಅಧ್ಯಯನ ಮುಖ್ಯವಾಗಿದೆ.

ಪ್ರಸ್ತುತ ಕೊಪ್ಪಳ ಜಿಲ್ಲೆಯ ಕವಲೂರು,[೬೮] ಬಳಗೇರಿ,[೬೯] ಕುಕನೂರು,[೭೦] ಪುರ[೭೧] ಗ್ರಾಮಗಳಲ್ಲಿ ಬ್ರಹ್ಮಪುರಿಗಳಿದ್ದ ಬಗ್ಗೆ ಶಾಸನಗಳು ಉಲ್ಲೇಖನಿಡುತ್ತವೆ. ಕವಲೂರಿನ ಶಾಸನ ಬಾಚಿದೇವ ಆತನ ಕುಮಾರ ಚಿಡುಗಿದೇವ ಮತ್ತು ಕೌರೂರು -೫೦೦ ಮಹಾಜನರು ಹರಿಹರದೇವರ ಸನ್ನಿಧಾನದಲ್ಲಿ 'ಬ್ರಹ್ಮಪುರಿ'ಗೆ ಸೂಳಿಗೇರಿಗೆ, ಯೆಡೆಹಳ್ಳಿಗೇರಿಯ ಹೊಲ ಮನ್ನೆಯವನ್ನು ಬಿಟ್ಟಿರುವುದಾಗಿ ಹೇಳಿದರೆ, ಬಳಗೇರಿ ಶಾಸನದಲ್ಲಿ ಬಳ್ಳಂಗೇರಿ ಬ್ರಹ್ಮಪುರಿಯಾಗಿತ್ತು. ಅಲ್ಲಿ ೩೦೦ ಮಹಾಜರು ಯಮ ನಿಯಮ ಜಪ ಸಮಾಧಿ ಸಂಪನ್ನರು ಷಟ್ಕರ್ಮನಿರತರು ಎಂದು ವರ್ಣನೆ ಬರುವುದು. ಕುಕನೂರಿನ ಶಾಸನ ಬ್ರಹ್ಮಪೂರಿಯ ನಾರಾಯಣಭಟ್ಟೋಪಾಧ್ಯಾಯರ ಬಗ್ಗೆ ಅಲ್ಲಿರುವ ೧೫ ಜನ ಮುಮುಕ್ಷು ಬ್ರಾಹ್ಮಣರ್ಗ್ಗೆ ಚಂದ್ರಾರ್ಕಸ್ಥಾಯಿಯಾಗಿ ಸರ್ವನಮಸ್ಯವಾಗಿ ದಾರಾಪೂರ್ವಕ ಮಾಡಿ ಮಹಾದಾನಗಳನ್ನು ಬಿಟ್ಟರೆಂದಿರುವುದು. ಪುರ ಶಾಸನ 'ಬ್ರಹ್ಮಪುರಿ' ಯ ಬ್ರಾಹ್ಮಣರ ವೇತನಕ್ಕೆ ಹಿರಿಯ ಕೋಲಲ್ಲಿ ಒಂದು ಮತ್ತರು ದಾನವನ್ನು ಹಿರಿಯ ಪಂಡಿತರ ಕೈಯಲ್ಲಿ ಧಾರೆಯನೆರೆದು ಕೊಟ್ಟರೆಂದು ತಿಳಿಸುವುದು. ಕ್ರಿ.ಶ. ೧೦೧೮ ರ ಶಾಸನವೊಂದು ಸಹ 'ಬ್ರಹ್ಮಪುರಿ'ಯ ಎರಡು ಹಳ್ಳದ ನಡುವೆ ಮತ್ತರು ೧೫೦ ಗದ್ದೆ ಮತ್ತರು -೩ ಮೂಲ ಸ್ಥಾನದೇವರಿಗೆ ಬಿಟ್ಟ ಕುರಿತು ಹೇಳಿದೆ. ಇಲ್ಲಿಯ ಅಂಶಗಳನ್ನು ಗಮನಿಸಿದಾಗ ಬ್ರಹ್ಮಪುರಿಯಲ್ಲಿ ವಿದ್ಯಾಭ್ಯಾಸ ಮಾಡಿಸಲಾಗುತ್ತಿತ್ತೆಂಬುದು ನಿಶ್ಚಿತವಾಗುತ್ತದೆ.

## ಘಟಿಕಾಸ್ಥಾನ

ಅಗ್ರಹಾರ, ಬ್ರಹ್ಮಪುರಿ, ದೇವಾಲಯ ಮಠಗಳಂತೆ ಘಟಿಕಾಸ್ಥಾನವೂ ವಿದ್ಯಾಭ್ಯಾಸದ ಒಂದು ಕೇಂದ್ರ. ಜಿಲ್ಲೆಯ ಶಾಸನಗಳು ಹೆಸರಿಸುವ ಕುಂತಳದೇಶದಲ್ಲಿ ಘಟಿಕಾಸ್ಥಾನಗಳು ಇದ್ದವೆಂದು ಇಲ್ಲಿಯ ಕುಕನೂರು, ಇಟಗಿ, ಕವಲೂರು, ಅಳವಂಡಿ, ಮಾದಿನೂರು, ಮುಧೋಳು, ತಳಕಲ್ಲು ಶಾಸನಗಳಿಂದ ತಿಳಿದು ಬರುವುದು.

ಕದಂಬ ಅರಸ ಮಯೂರಶರ್ಮನು ಕಂಚಿಯ ಘಟಿಕಾಸ್ಥಾನದಲ್ಲಿ ಪ್ರವೇಶಿಸಿ ಅಶುತಾರ್ಕಿಕನಾದನೆಂದು ಇತಿಹಾಸ ಪ್ರಸಿದ್ಧವಾಗಿದೆ. ಅದರಂತೆ ನಾಡಿನ ಅನೇಕ ಶಾಸನಗಳಲ್ಲಿ ಘಟಿಕಾ ಸ್ಥಾನಗಳ ಉಲ್ಲೇಖಗಳು

ಕಾಣುತ್ತೇವೆ. ಈ ಘಟಿಕಾಸ್ಥಾನಗಳು ವಿದ್ವಾಂಸರ ವಾದ - ವಿವಾದಗಳು ನಡೆಯುವ ಸ್ಥಳಗಳಾಗಿದ್ದು ಇಲ್ಲಿ ನಡೆಯುತ್ತಿದ್ದ ವಿದ್ಯಾಭ್ಯಾಸ ಯಾವ ಮಟ್ಟದ್ದು ಘಟಿಕಾಸ್ಥಾನ ಎಂದರೇನು ? ಎಂಬುದರ ಕುರಿತು ವಿದ್ವಾಂಸರಲ್ಲಿ ಸಾಕಷ್ಟು ವಾದ ವಿವಾದಗಳಿವೆ.[೨೨] ಇಂತ ಹಲವು ವಾದಗಳಲ್ಲಿ ಡಾ. ಚಿದಾನಂದಮೂರ್ತಿಯವರ ನಿಲುವನ್ನು ತಾತ್ಪೂರ್ತಿಕವಾಗಿ ಒಪ್ಪಿದಂತಿದೆ.[೨೩] ಘಟಿಕಾಸ್ಥಾನಕ್ಕೆ ಮೂಲವು 'ಘಟಿರಾ' ಎಂದು ಒಪ್ಪಲಾಗಿದೆ. ಘಟೀ ಎಂಬ ಅಳತೆಯು ಘಳಿಗೆ, ಅಳತೆ, ಘಳಿಗೇಯ ಯಂತ್ರವಾಗಿ ಗಡಿಯಾರವಾಗಿ ಉಳಿದುಕೊಂಡು ಬಂದಿದೆ. ಕಾಲದ ಅಳತೆಗಾಗಿ ಘಟಿಕೆ ( ಗಡಿಗೆ) ಯನ್ನು ಬಳಸಿಕೊಳ್ಳುತ್ತಿದ್ದರೆಂಬ ಅಭಿಪ್ರಾಯ ಕೆಲವರು ಸೇದು ಬಾವಿಗೆ ಬಳಸಿದ ರಾಟಿ, ಆನೆಕಟ್ಟುವ ಗೂಟ, ಕೌಪೀನ, ಗಳಿಗೆ ಬಟ್ಟಲು ಎಂಬ ಅರ್ಥಗಳನ್ನು ನೀಡಿದ್ದಾರೆ.[೨೪] ಈ ಘಟಿಕಾಸ್ಥಾನಗಳು ಉಚ್ಛಶಿಕ್ಷಣದ ಕೇಂದ್ರಗಳಾಗಿದ್ದವು.[೨೫] ಎಂಬ ಹಿನ್ನಲೆಯಲ್ಲಿ ಕೊಪ್ಪಳ ಜಿಲ್ಲೆಯ ಶಾಸನಗಳ ವಿಚಾರವನ್ನು ಇಲ್ಲಿ ಚರ್ಚಿಸಲಾಗಿರುವುದು.

ಈಗಿನ ವಿಶ್ವವಿದ್ಯಾಲಯಗಳಲ್ಲಿಯಂತೆ ಪ್ರಾಚೀನ ಘಟಿಕಾಸ್ಥಾನದಲ್ಲಿ ತಮ್ಮ ಜ್ಞಾನದ ಸಾಹಸವನ್ನು ಪ್ರದರ್ಶಿಸಿದವರು 'ಘಟಿಕಾಸಾಹಸಿ' ಎಂಬ ಬಿರುದು ಪಡೆಯುತ್ತಿದ್ದರು. ಇಲ್ಲಿ ಮನ್ನಣೆ ಪಡೆದವನು ವಿದ್ವತ್ತಿನ ಶಿಖರವನ್ನು ಮುಟ್ಟಿದವನು ಎಂದು ಆ ಕಾಲದ ಜನರು ತಿಳಿಯುತ್ತಿದ್ದರು. ಈ ಘಟಿಕಾ ಸಾಹಸವು, ಘಳಿಸಾಸ, ಘೈಸಾಸ- ಘೈಸ ಎಂಬ ರೂಪಾಂತರ ಪಡೆದಿದೆ. ಇವುಗಳ ಕುರಿತು ಹನುಮನಾಳ ಶಾಸನವೊಂದು ೬೪ ಘಟಿಕಾ ಸ್ಥಾನಗಳ ಉಲ್ಲೇಖ ನೀಡಿರುವುದಲ್ಲದೆ, ಕರಡಖೇಡ, ಹೆಂಜೇರು, ಕಡಲೇವಾಡ, ತೇರದಾಳ, ಎಲೆವಾಳ, ಸಾಲೋಟಗಿ, ಬಳ್ಳಿಗಾವೆ, ನಾಗಾವಿ, ಮೊರಿಗೇರಿ, ಹೂಲಿ, ಯರಗಿ, ಮಲಘಾಣ, ಕುಕನೂರು, ಇಟಗಿ, ಮುಧೋಳು, ಕವಲೂರು, ಅಳವಂಡಿ ಹೀಗೆ ನಾಡಿನ ಬೇರೆ ಬೇರೆ ಕಡೆ ಇರುವ ಅಗ್ರಹಾರಗಳ ಕುರಿತು ಹೇಳುತ್ತದೆ. [೨೬] ಆ ಕೆಲಸ ಇನ್ನು ಪೂರ್ತಿಗೊಳ್ಳಬೇಕಾದರೆ ಇಂತಹ ಚರ್ಚೆಗಳು ಅವಶ್ಯಕವೆನಿಸುತ್ತದೆ.

ಯಲಬುರ್ಗಿ ತಾಲೂಕಿನ ಕುಕನೂರಿನ ಶಾಸನವೊಂದು ವಾಸುದೇವಘೈಸಾಸರು, ಕೇಶವಘೈಸಾಸರನ್ನು ಹೆಸರಿಸಿದರೆ ಕ್ರಿ.ಶ. ೧೧೨೭ ರ ಅದೇ ಶಾಸನ ಅಲ್ಲಿಯ ಅಗ್ರಹಾರದ ಸರಸ್ವತಿ ದೇವಾಲಯದ ಮಠದಲ್ಲಿಯ ಚತುರ್ವೇದಿಭಟ್ಟರು, ತಿಪ್ಪೆಘೈಸಾಸ -೫೦೦ ಕಮ್ಮ ಗದ್ದೆಯನ್ನು ಮೂಲಸ್ಥಾನ ದೇವರ ನೈವೇದ್ಯಕ್ಕೆ ಬಿಟ್ಟರೆ, ರುದ್ರಾದಿತ್ಯಘೈಸಾಸರು ಗದ್ದೆಮತ್ತರು ಬಿಟ್ಟಿರುವ ಬಗ್ಗೆ ಹಾಗೂ ಬ್ರಹ್ಮಪುರಿ ೧೫ ಜನ ಬ್ರಾಹ್ಮಣ ಪ್ರಸ್ತಾಪ ಮಾಡುತ್ತಾ ಬ್ರಹ್ಮಪೂರಿಯ ನಾರಾಯಣಭಟ್ಟರು, ಪುರುಷೋತ್ತಮಜ್ಯಯರು, ಕಾಳಿದಾಸ ದೀಕ್ಷಿತರು, ಚಂದ್ರಸೋಮಯಾಜ್ಯರು, ಮಹಾದೇವ ಭಟ್ಟೋಪಾಧ್ಯಾಯ, ಆದಿತ್ಯಘೈಸಾಸರು, ಮಾದವದೇವರು, ಎಡಹಳ್ಳಿ, ಕುಕನೂರು ಬೆಡವಟ್ಟಿ ಆದಾಯ ಹಂಚಿಕೊಳ್ಳುವುದುದೆಂದಿದೆ. ಉಳಿದರ್ಧದಲ್ಲಿ ಮೂಲಸ್ಥಾನದೇವರಿಗೆಂದು ಹೇಳುವುದು.[೭೭] ಇಲ್ಲಿ ಉಲ್ಲೇಖಬರುವ ವಾಸುದೇವ ಘೈಸಾಸರು ಕೇಶವಘೈಸಾಸರು ಹರಿಹರನ ರಗಳೆಯಲ್ಲಿ ಉಲ್ಲೇಖವಾಗಿದ್ದು. [೭೮] ಚಿದಾನಂದ ಮೂರ್ತಿಯವರು ಹೇಳುವ ಅಭಿಪ್ರಾಯವನ್ನಿಟ್ಟು ಕೊಂಡು ನೋಡಿದರೆ ಇವರು ಘಟಿಕಾಸಾಹಸಿಗಳಾಗಿದ್ದರೆಂದು ತಿಳಿಯುತ್ತದೆ. ಕ್ರಿ.ಶ. ೧೧೪೯ ಶಾಸನದಲ್ಲಿ ಅಧಿಕಾರಿಗಳಾದ

ಗಂಗಾಧರಭಟ್ಟೋಪಾಧ್ಯಾಯ ವಿಷ್ಣು ಘೈಸಾಸರು ಸೇರಿ ಹೊನ್ನ, ಎಣ್ಣೆ, ಗದ್ದೆಯನ್ನು ಮಲ್ಲಿಕಾರ್ಜುನ ದೇವರಿಗೆ ಬಿಟ್ಟಿರುವುದಾಗಿ ಮತ್ತು ಅವರು ಅರಸರ ಆಸ್ಥಾನದಲ್ಲಿ ಅಧಿಕಾರಿಗಳಾಗಿದ್ದರೆಂದು ತಿಳಿಯುತ್ತದೆ. [೭೯] ಅದರಂತೆ ಕ್ರಿ.ಶ. ೧೧೭೦ರ ಶಾಸನ ನಾರಾಯಣ, ಸೋಮೇಶ್ವರ, ಹಿಟ್ಟಯ ಭಟ್ಟೋಪಾಧ್ಯಾಯರು, ಕೇಶವ, ಹರಿಹರ, ಗೋವಿಂದ, ಬೆಣ್ಣೆಯಮಾಧವ, ಯೋಗೇಶ್ವರ, ಭಟ್ಟೋಪಾಧ್ಯಾಯ ಮತ್ತು ನಾರಾಯಣ, ಆದಿತ್ಯದೇವ, ಶಂಕರ, ಸೋಮೇಶ್ವರ, ವಿಶ್ವೇಶ್ವರ ಘಳಿಸಾಸರು ಸೇರಿ ಇತರರು ಬಿಟ್ಟ ದಾನ ದತ್ತಿಗಳನ್ನು ಸಮನಾಗಿ ಹಂಚಿಕೊಳ್ಳುವುದಾಗಿ ಹೇಳುವದು[೮೦] ೧೧೨೯ ಶಾಸನ ರುದ್ರಾದಿತ್ಯ ಘೈಸಾಸನು ಮಾಡಿಸಿದ ಸತ್ರದ ಮನೆಯಲ್ಲಿ ಪ್ರತಿದಿವಸವು ೬ ಜನ ಬ್ರಾಹ್ಮಣರು ಊಟ ಮಾಡುವಂತೆ ಮತ್ತೆ ೧೨ ಜನ ಊಟ ಮಾಡಲು ಭೂಮಿಯನ್ನು ದಾನ ನೀಡಿದನು. ಮಾದೇವ ಘೈಸಾಸರು ಕೇರೆಗದ್ದೆ ಮತ್ತರು ೧ ಇನ್ನೀತರ ಬೇರೆ ಬೇರೆ ದಾನಗಳು ಬಿಟ್ಟಿರುವುದಾಗಿ ಉಲ್ಲೇಖಿಸಿದೆ. [೮೧]

ಇಟ್ಟಿಗೆಯ ಶಾಸನ ಇಟಗಿಯಲ್ಲಿ ಕಟ್ಟಿಸಿದ ದೇವಾಲಯಗಳಿಗೆ೪೦೦ ಮಹಾಜನ ಬ್ರಾಹ್ಮಣರಿಗೆ ಅಲ್ಲಿಯ ದೇವರಂಗಭೋಗ ಪೂಜೆ, ನೈವೇದ್ಯ ಪತ್ರಪಾವುಳ, ಅನ್ನದಾನ, 'ಭಟ್ಟವೃತಿಘಳಿಯಾರ' ನಡೆಯುವಂತೆ೫೦೦ ಮತ್ತರು ಹೊಲ ಆಳುಕಾಳು ವಾಸಿಸಲು ೨೫ ಮನೆಕಟ್ಟಿಸಿದರಲ್ಲದೆ ಶಿಕ್ಷಣ ಕೇಂದ್ರದಲ್ಲಿ ನಡೆಯುವ ಋಗ್ವೇದ ಬಾಲಶಿಕ್ಷೆ ಯಜುರ್ವೇದದ ಬಾಲಶಿಕ್ಷೆ ಇತ್ಯಾದಿಗಳಿಗೆ ಬಿಟ್ಟ ದಾನ ದತ್ತಿಗಳ ಕುರಿತು ತಿಳಿಸುವುದರಿಂದ ಇಟಗಿ, ಕುಕನೂರುಗಳು ಅಂದು ಘಟಿಕಾಸ್ಥಾನಗಳ ಸ್ಥಾನಮಾನ ಪಡೆದಿದ್ದವೆಂದು ಹೇಳಬಹುದು. [೮೨]

ಮಾದಿನೂರು ಶಾಸನ ವಿಷ್ಣು ಘೈಸಾಸರ ಪ್ರಸ್ತಾಪ ಮಾಡಿದರೆ, [೮೩] ಚಳಿಗೇರಿ ಶಾಸನ ನಾರಾಯಣ ಘಳಿಸಾಗ್ಗೆರೆಯ ಮತ್ತರು, ಬೋಗವ ಘಳಿಸಾಸರ್ಗೆರೆಯ ಮತ್ತರು ಹೊಳತೆಯ ಭಟಗದ್ದೆ ಮತ್ತರು, ವಾದಿಭಟರ್ಗೆರೆಯ ಮತ್ತರು, ಘಳಿಸಗ್ಗೆರೆಯ ಮತ್ತರು ಇತ್ಯಾದಿ ದಾನದತ್ತಿಗಳನ್ನು ಅಲ್ಲಿಯ ನಖರಗಳು, ಪ್ರಜೆಗಳು, ಸುಂಕದ ಅಧಿಕಾರಿಗಳು, ಆಡಳಿತಾಧಿಕಾರಿಗಳು ಸಾಸಿರ್ವರು ಸೇರಿ ಚಳಗೇರಿಯ ಕಲ್ಲಂಗೆರೆಯ ಲಕ್ಷ್ಮೀನಾರಾಯಣದೇವರ ದೇವಾಲಯದ ಚೈತ್ರ ಪವಿತ್ರ, ಪೂಜಾರಿಗೆ, ನಂದಾದೀಪಕ್ಕೆ ಬ್ರಾಹ್ಮಣರಿಗೆ ಭೂಮಿ ಬಿಟ್ಟಿದ್ದಾಗಿ ತಿಳಿಸುತ್ತದೆ. [೮೪] ಮೇಲಿನ ಉಲ್ಲೇಖಗಳನ್ನು ನೋಡಲಾಗಿ ಈ ಕೆಳಗಿನ ಅಂಶಗಳು ನಮ್ಮ ಗಮನಕ್ಕೆ ಬರುವವು. ಒಂದನೆಯದಾಗಿ ಇಲ್ಲಿರುವ ವಿದ್ಯಾಸಂಸ್ಥೆಗಳಾದ ಮಠಗಳು, ದೇವಾಲಯಗಳು, ಶಾಲೆ, ಸತ್ರ, ಅರವಟ್ಟಿಗೆ, ದೇವರ ಚಟುವಟಿಕೆ, ಸಾಮಾಜಿಕ ಚಟುವಟಿಕೆ ಶೈಕ್ಷಣಿಕ ಚಟುವಟಿಕೆಗಳು ಧಾರ್ಮಿಕ ಚಟುವಟಿಕೆ ಇತ್ಯಾದಿಗಳು ದೇವಾಲಯಗಳಲ್ಲಿ ನಡೆಯುತ್ತಿದ್ದವೆಂಬುದು ಸ್ಪಷ್ಟ. ಎರಡನೆಯದಾಗಿ ಅಲ್ಲಿರುವ ಘೈಸಾಸರು ಅಲ್ಲಿರುವ ದೇವರುಗಳ ಹೆಸರನ್ನು ತಮ್ಮ ಹೆಸರಿನೊಂದಿಗೆ ಬಿರುದುಗಳಾಗಿ ಸೇರಿಸಿ ಕರೆಯಿಸಿಕೊಂಡಿರುವುದರಿಂದ ಬಹುತೇಕ ವಾದ-ಚರ್ಚೆಗಳಲ್ಲಿ ನಿಗದಿತ ವೇಳೆಯಲ್ಲಿ ಜಯ ಸಾಧಿಸಿದ್ದ ಕಾರಣ ಅವರಿಗೆ ದೇವರ ಹೆಸರಿನಿಂದ ಬಿರುದುಗಳಿಗೆ ಸೇರಿಸಿ ಕರೆದಿರಬೇಕೆಂದು. ಮೂರನೆಯದಾಗಿ ಅಧಿಕಾರಿಗಳು, ಘೈಸಾಸರು ದೇವರಿಗಾಗಿ ನೀಡಿದ ದಾನಗಳು, ಕೆಲವರು ಉಪಾಧ್ಯಾಯರು ಘೈಸಾಸರಿಗೆ ಸೇರಿಸಿ ದಾನ ದತ್ತಿಗಳು ನೀಡಿರುವುದನ್ನು ಗಮನಿಸಿದರೆ

ಇವರಿಬ್ಬರು ಗುರುಗಳು ವಿದ್ವಾಂಸರಾಗಿದ್ದರೆಂದು ಅರ್ಥವಾಗುತ್ತದೆ. ನಾಲ್ಕನೆಯದಾಗಿ ಅವರು ವಾಸಿಸುವ ಕೇರಿ (ಓಣಿ) ಗಳು ಹೊರನಾಡಿನ ಶಾಸನಗಳಲ್ಲಿ ಉಲ್ಲೇಖವಾದ ಘಟಿಕಾ ಸಾಹಸಿಗಳೆಂಬ ಅಂಶ ಘಳಿಯಾರ ಯಂತ್ರದ ಹೋಲಿಕೆ, ಅವರ ಜವಾಬ್ದಾರಿಗಾಗಿ ನಿರ್ವಹಿಸುವ 'ಭಟ್ಟವೃತ್ತಿ ಘಳಿಯಾರ' (ಇಟಗಿ ಶಾಸನದಲ್ಲಿದೆ), ಫೈಸಾಸರ ಕೆಲಸ ಕಾರ್ಯಗಳನ್ನು ನೋಡಿದಾಗ ಬಹುತೇಕ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖಗೊಂಡ ಫೈಸಾಸರ ಸಂಖ್ಯೆಯನ್ನು ಹಾಗೂ ಇನ್ನಿತರ ಅಂಶಗಲನ್ನು ಆಧಾರವಾಗಿಟ್ಟುಕೊಂಡು ನೋಡಲಾಗಿ ಕುಕನೂರು, ಇಟಗಿ, ಮಾದಿನೂರು, ಚಳಗೇರಿ, ಮುಧೋಳ, ಅಳವಂಡಿ, ಕವಲೂರಗಳು ಘಟಿಕಾ ಸ್ಥಾನಗಳಾಗಿ ಕಾರ್ಯನಿರ್ವಹಿಸಿದ್ದವೆಂಬುದನ್ನು ಸ್ಪಷ್ಟಪಡಿಸುತ್ತವೆ.

## ಪ್ರಾಥಮಿಕ ವಿದ್ಯಾಭ್ಯಾಸ

ನಾಡಿನ ಶಾಸನಗಳಲ್ಲಿ ಉಲ್ಲೇಖವಾದಂತೆ ಬಾಲ ಶಿಕ್ಷಣವು ಮಗುವಿನ ಚುಡಾಕರ್ಮವಾದ ಬಳಿಕ ಆರಂಭವಾಗಿ೮ ನೇ ವರ್ಷಕ್ಕೆ ಓದು ಬರಹ, ಸಾಮಾನ್ಯ ಗಣಿತ, ನಿಘಂಟು, ವ್ಯಾಕರಣ ಮುಂತಾದ ಬಾಲ ಶಿಕ್ಷೆಗಳು ಬಾಲಕರಿಗೆ ಕನ್ನಡ ಅಕ್ಷರಗಳನ್ನು ಕಲಿಸುವ ಮೂಲಕ ಋಗ್ವೇದದ ಮಂತ್ರಗಳನ್ನು ಬಾಯಿಪಾಠ ಮಾಡಿಸುತ್ತಿದ್ದು ಉಪಾಧ್ಯಾಯರಿಗೆ 'ಭಟ್ಟ ವೃತ್ತಿ' ಇದ್ದ ಹಾಗೆ ಭಟ್ಟ ವೃತ್ತಿ ಬಾಲ ಶಿಕ್ಷೆಗೆ ದತ್ತಿಗಳನ್ನು ಬಿಟ್ಟಂತೆ ಶಾಸನಳಲ್ಲಿ ಉಲ್ಲೇಖವಿದೆ. [೮೫] ಜಿಲ್ಲೆಯ ಇಟಗಿ ಶಾಸನ ಅನ್ನದಾನ 'ಭಟ್ಟವೃತ್ತಿ' ಘಳಿಯಾರ ಬಿಟ್ಟು ಋಗ್ವೇದ, ಬಾಲ ಶಿಕ್ಷೆ, ಯಜುರ್ವೇದ, ಚತುರ್ವೇದಗಳು ನಡೆಯುವಂತಾಗಲು ಭೂಮಿ, ಹಣ ಇನ್ನೀತರ ದಾನಗಳನ್ನು ನೀಡಿದ ಕುರಿತು ತಿಳಿಸುವುದು. [೮೬] ಮುಂದುವರೆದು ಶಾಸನ ಋಗ್ವೇದ ಬಾಲಶಿಕ್ಷೆಯ ಖಣ್ಡಿಕ-೧, ಯಜುರ್ವೇದ ಬಾಲ ಶಿಕ್ಷೆಯ ಖಣ್ಡಿಕ-೧, ಇರ್ವ್ವರು ಉಪಾಧ್ಯಾಯರ್ಗ್ಗೆ-೧೨, ಗದ್ಯಾಣ ಹೀಗೆ ಪ್ರತಿಯೊಂದಕ್ಕೂ ವಿಂಗಡಿಸಿ ದಾನ ಬಿಟ್ಟಿರುವುದನ್ನು ಶಾಸನಗಳು ಉಲ್ಲೇಖಿಸುವ ಕುರಿತು ನೋಡಿದರೆ ಅಂದು ಇಟಗಿಯಲ್ಲಿ ಶಿಕ್ಷಣ ಕಲಿಸುವ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲುತ್ತದೆ.

ಋಗ್ವೇದದ ಮಂತ್ರಗಳನ್ನು ಬಾಯಿಪಾಠ ಮಾಡಿಸುತ್ತಿದ್ದ ಉಪಾಧ್ಯಾಯನನ್ನು ಬಾಲ ಶಿಕ್ಷೆ ಶಾಸ್ತ್ರದವನೆಂದು ಕರೆದು ಅದಕ್ಕಾಗಿ ದಾನಗಳು ಬಿಟ್ಟ ಬಗ್ಗೆ ಚಿದಾನಂದಮೂರ್ತಿಯವರು ಗುರ್ತಿಸಿರುವರು. ಕೊಪ್ಪಳ ಜಿಲ್ಲೆಯ ಇನ್ನೀತರ ಶಾಸನಗಳಲ್ಲಿ ಋಗ್ವೇದ, ಯಜುರ್ವೇದ, ಚತುರ್ವೇದಗಳ ಅಧ್ಯಯನ ವೇದಮಂತ್ರಗಳನ್ನು ಬಲ್ಲ ಬ್ರಾಹ್ಮಣ ವಿದ್ವಾಂಸರ ಬಗ್ಗೆ ಸಾಕಷ್ಟು ತಿಳಿದುಬರುತ್ತದೆ. ಆದರೆ ಬಾಲಶಿಕ್ಷಣಕ್ಕೆ ಸಂಬಂಧಿಸಿದಂತೆ ಉಲ್ಲೇಖಿಸುವಲ್ಲಿ ಶಾಸನಗಳು ಮೌನವಹಿಸಿವೆ. ಇಟಗಿ ಮತ್ತು ಕುಕನೂರಿನ ಶಾಸನಗಳು ಮಾತ್ರ ಬಾಲ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅಲ್ಪ ಸ್ವಲ್ಪ ಮಾಹಿತಿಯನ್ನು ನೀಡುತ್ತವೆ.

## ಪ್ರೌಢ ಶಿಕ್ಷಣ

ಪ್ರೌಢ ಶಿಕ್ಷಣ ಕುರಿತಂತೆ ವಿದ್ವಾಂಸರೊಬ್ಬರು ಪ್ರಸ್ತಾಪಿಸುತ್ತಾ ಪ್ರೌಢ ಶಿಕ್ಷಣ ಬೋಧಿಸುವ ಉಪಾಧ್ಯಾಯರ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು 'ಭಟ್ಟ ವೃತ್ತಿ' ಎಂದು ವಿದ್ಯಾರ್ಥಿಗಳ



ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಭಟ್ಟ ವೃತ್ತಿ ಎಂದು ಕರೆದಿರುವರು.[೮೭] ಇಟಗಿಯಲ್ಲಿ ಮಹಾದೇವ ದೇವಾಲಯ ಕಟ್ಟಿಸಿದ ಮಾದೇವದಂಡನಾಯಕನು ದೇವಾಲಯಗಳಿಗೆ ದಾನ ದತ್ತಿಗಳನ್ನು ನೀಡುವಾಗ 'ಭಟ್ಟ ವೃತ್ತಿಗೂ' ದತ್ತಿ ಬಿಟ್ಟರುವುದಾಗಿ ಶಾಸನ ಹೇಳಿದರೆ,[೮೮] ಮಾದಿನೂರು ಶಾಸನವು[೮೯] ಭಟ್ಟ ವೃತ್ತಿಗೆ೩ ಮತ್ತರು, ಗದ್ಯಾಣ, ಭೂಮಿದಾನವನ್ನು ಕಾಶ್ಯಪ ಗೋತ್ರದ ದ್ವೇದಿ ಭಟ್ಟೋಪಾಧ್ಯಾಯ, ಸೋಮಯಾಜಿ ಮಹಾವಿದ್ವಾಂಸರಿಗೆ ಬಿಟ್ಟರೆಂದು ಉಲ್ಲೇಖಿಸುತ್ತದೆ. ಈ ಭಟ್ಟ ವೃತ್ತಿಯೂ ಋಗ್ವೇದ, ಯಜುರ್ವೇದ ಬೋಧಿಸುವ ಉಪಾಧ್ಯಾಯರಿಗೆ ಮತ್ತು ವಿದ್ವಾಂಸರು ಅತ್ಯುತ್ತಮ ರೀತಿಯಲ್ಲಿ ಭೋದಿಸಲು ಅನುಕೂಲವಾಗುವುದಕ್ಕಾಗಿ ಬಿಡುತ್ತಿರುವುದಾಗಿ ಮಾತ್ರ ಎಂದು ತಿಳಿಯಲು ಸಾಧ್ಯವಾಗಿದೆ. ಇನ್ನುಳಿದ ಅಳವಂಡಿ, ಕವಲೂರು, ತಳಕಲ್ಲು, ಕಲ್ಲೂರು, ಬಳಗೇರಿ, ಕುಕನೂರು ಶಾಸನಗಳು ಭಟ್ಟರು, ಭಟ್ಟೋಪಾಧ್ಯಾಯರು, ಭಟ್ಟೋಚಾರ್ಯರು ಇತ್ಯಾದಿ ಪಾಂಡಿತ್ಯದ್ಯೋತಕ ಅಂಶಗಳತ್ತ ಗಮನಸೆಳದಿವೆ. ಭಟ್ಟ ಎಂದರೆ ಗೌರವ ಸೂಚಕ ಹೆಸರಿನಲ್ಲಿ ಬ್ರಾಹ್ಮಣರನ್ನು ಕರೆದಿರುವುದು ವಾಡಿಕೆಯಾಗಿ ಕಂಡು ಬರುವುದರಿಂದ ಅವರು ಪ್ರೌಢ ಶಿಕ್ಷಣ ಕಲಿಸುತ್ತಿರಬೇಕೆಂದು ಕಾಣಿಸುತ್ತದೆ. ಮಾದಿನೂರು ಶಾಸನದಲ್ಲಿ ಸಹ 'ಭಟ್ಟ ವೃತ್ತಿ'ಗಾಗಿ ಬಿಟ್ಟ ದಾನಗಳ ಕುರಿತು ಪ್ರಸ್ತಾಪಬರುವದು.

## ಉಚ್ಛ ಶಿಕ್ಷಣ

ಘಟಿಕಾ ಸ್ಥಾನವೆಂಬುದು ಇನ್ನು ತೋಡಕಿನ ಪ್ರಶ್ನೆಯಾಗಿಯೇ ಉಳಿದಿರುವಾಗ ನಮಗೆ ಲಭ್ಯವಾಗಿರುವ ಶಾಸನಗಳಾಧರಿತ ಬ್ರಹ್ಮಪುರಿ, ಅಗ್ರಹಾರ, ಘಟಿಕಾಸ್ಥಾನದಲ್ಲಿರುವ ವಿದ್ವಾಂಸರುಗಳ ಪ್ರಸ್ತಾಪಗಳು ಉಚ್ಛ ಶಿಕ್ಷಣಕ್ಕೆ ಸಂಬಂಧಿಸಿದವುಗಳೆಂದು ಹೇಳಲು ಸಾಧ್ಯವಾಗುವದಿಲ್ಲವಾದರೂ ಅವುಗಳಲ್ಲಿ ಉನ್ನತ ಶಿಕ್ಷಣ ನೀಡಲಾಗುತ್ತಿತ್ತೆಂದು ಮಾತ್ರ ಹೇಳಲು ಸಾಧ್ಯವಿದೆ. ಏಕೆಂದರೆ ಗುಲಬರ್ಗಾ ಜಿಲ್ಲೆಯ ನಾಗಾವಿ ಘಟಿಕಾಸ್ಥಾನದ ನಿದರ್ಶನ, ಮಯೂರಶರ್ಮನು ಕಾಂಚಿಯ ಘಟಿಕಾಸ್ಥಾನದಲ್ಲಿ ಹೋಗಿ ಯಶಸ್ವಿಯಾದದ್ದು, ಉಚ್ಛ ಶಿಕ್ಷಣದ ಕುರಿತು ತಿಳಿಸುವ ವಿಚಾರಧಾರೆಗಳಾಗಿವೆ.[೯೦]

## ಅಧ್ಯಯನದ ವಿಷಯಗಳು

ವೈದಿಕ ಸಂಪ್ರದಾಯದಡಿಯಲ್ಲಿ ಬೆಳೆದು ಬಂದ ನಮ್ಮ ದೇಶದ ಸಂಸ್ಕೃತಿಯಲ್ಲಿ ವೇದಗಳಿಗೆ ಮೊದಲ ಸ್ಥಾನ ಕಲ್ಪಿಸಿಕೊಟ್ಟ ವಿಷಯ ನಾಡಿನ ಶಾಸನಗಳಿಂದ ತಿಳಿದುಬರುತ್ತದೆ. ಕೊಪ್ಪಳ ಜಿಲ್ಲೆಯ ಇಟಗಿ,[೯೧] ಕವಲೂರು,[೯೨] ಅಳವಂಡಿ,[೯೩] ಕುಕನೂರು,[೯೪] ಕುಕನೂರ್[೯೫] ಮುಂತಾದ ಅಗ್ರಹಾರಕ್ಕೆ ಹೆಸರಾದ ಗ್ರಾಮಗಳಲ್ಲಿ ದೊರೆತ ಶಾಸನಗಳು ವಿವಿಧ ವಿಷಯಗಳನ್ನು ಅಧ್ಯಯನಿಸುವ, ಭೋದಿಸುವ ಬ್ರಾಹ್ಮಣ ವಿದ್ವಾಂಸರು, ಮಹಾಜನರನ್ನು ಉಲ್ಲೇಖಿಸುತ್ತಿರುವದರಿಂದ ಆಗಿನ ವಿದ್ಯಾಭ್ಯಾಸದ ವಿಷಯಗಳನ್ನು ತಿಳಿಯಲು ಅನುಕೂಲವಾಗಿದೆ.

ಪ್ರಾಚೀನ ಕಾಲದಲ್ಲಿ ವೇದ, ಮಂತ್ರಗಳನ್ನೇ ಅಧ್ಯಯನ ಮಾಡುವವರು ಬ್ರಾಹ್ಮಣರೇ ಹೆಚ್ಚಿನ ಪ್ರಮಾಣದಲ್ಲಿ ಇರುತ್ತಿದ್ದರು. ಹೀಗಾಗಿ ಜ್ಯೋತಿಷ್ಯ ಪುರಾಣ, ಕಾವ್ಯ, ನಾಟಕ, ಅರ್ಥಶಾಸ್ತ್ರ, ಭರತ, ವಾತ್ಸಾಯನ ಕಾಮಸೂತ್ರ ಹದಿನೆಂಟು ಪುರಾಣಗಳು, ಸ್ಮೃತಿಗಳು, ಷಡ್ದರ್ಶನಗಳು, ವ್ಯಾಕರಣ, ಸಂಗೀತ, ನಾಟ್ಯ, ಚರಿತ್ರೆಗಳಂತ ವಿಷಯಗಳನ್ನು ಅಧ್ಯಯನ ಮಾಡಿದ ಮಹಾಜನ ಬ್ರಾಹ್ಮಣರ ವರ್ಣನೆ ಶಾಸನಗಳಲ್ಲಿ ಕಂಡು ಬರುವುದು.

ಕ್ರಿ.ಶ. ೧೦೦೫ ರ ಕುಕನೂರು ಶಾಸನ ಅಗ್ರಹಾರದ ಸಾವಿರ ಮಹಾಜನರು ಅಗ್ನಿಷ್ಟೋಮ ಯಾಗಗಳನ್ನು ಮಾಡಿ ಪುಣ್ಯವನ್ನು ಸಂಪಾದಿಸಿದ್ದರೆಂದು ಹೇಳುತ್ತಾ, 'ವೇದಪಾಠದಿಂದ ಸಕಲ ಶಾಸ್ತ್ರಸಜ್ಜನರು, ಚತುರ್ವೇದಗಳಲ್ಲಿ ಶಬ್ದ ವಿದ್ಯಾ ನಿಪುಣರ್ನ್ನಿರ್ಬ್ಬಾಧಿತರು, ''ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಸಮಾಧಿ ಜಪ ಷಡಂಗೋಪಹಾರಾದಿ ಸಂಪನ್ನರ್ ಅಖಿಳಪ್ರಾಣಿಪ್ರಸಂನರ್ ಅನೇಕ ತರ್ಕ ವ್ಯಾಕರಣ ಪುರಾಣ ಕಾವ್ಯ ನಾಟಕ ಭರತ ವಾತ್ಸಾಯನಾದಿ ವಿದ್ಯಾಸಾರಾಸಾರ ವಿಚಾರ ಚತುರಾನನರ್'' ಎಂದು ವರ್ಣಿಸಿದರೇ ಅದೇ ಊರಿನ ಕ್ರಿ.ಶ. ೧೧೪೯ ರ ಶಾಸನ ಕುಕನೂರು ಅಗ್ರಹಾರ ದೇವತಾಭವನಗಳಿಂದ, ವೇದಾಢ್ಯರಿಂದ, ಯಜ್ಞದಿಕ್ಷೀತರಿಂದ, ಶಾಸ್ತ್ರ ಪುರಾಣ, ತರ್ಕವಿದುರರಿಂದ ಶೋಭಿಸುತ್ತಿರುವುದಾಗಿ ತಿಳಿಸಿದೆ. ಕ್ರಿ.ಶ. ೧೧೪೫ ರ ಮುಧೋಳ ಶಾಸನ ಈ ಮೇಲಿನ ಉಲ್ಲೇಖಗಳೊಂದಿಗೆ ಜಪಸಮಾಧಿ ಶೀಳಸಂಪನ್ನರ ಪನ್ನಗಸಯನಪದಕಮಳಾರಾಧಿತೋತ್ಪನ್ನರು ಷಟ್ಕರ್ಮ ನಿರತರು ಎಂದು ಉಲ್ಲೇಖಿಸುವುದು. ಅದರಂತೆ ಕ್ರಿ.ಶ. ೧೧೭೭-೭೯-೮೦-೮೬ ರ ಬೇರೆ ಬೇರೆ ಕಾಲಮಾನ ತಿಳಿಸುವವ ಕವಲೂರಿನ ಶಾಸನ ವ್ಯಾಕರಣ, ಶೃತಿಸ್ಮೃತಿ, ಪುರಾಣ ನ್ಯಾಯ, ಸತ್ಕಾವ್ಯ ನಾಟಕ ವಾತ್ಸಾಯನ ಮಂತ್ರ ತಂತ್ರನಯನಗಳ ಕುರಿತು ತಿಳಿಸುವುದು.

ಹೀಗೆ ಅಧ್ಯಯನದಲ್ಲಿ ತೊಡಗಿದ ವೈದಿಕ ಬ್ರಾಹ್ಮಣರು ಕಷ್ಟವಾಗಿರುವ ಗ್ರಂಥಗಳಿಗೆ ಸಂಸ್ಕೃತದಲ್ಲಿ ವ್ಯಾಖ್ಯಾನಗಳನ್ನು ಬರೆಯುತ್ತಿದ್ದರಿಂದ ಸಾಕಷ್ಟು ಅಭ್ಯಾಸವನ್ನು ಮಾಡುತ್ತಿದ್ದರೆಂದು ಅವರಲ್ಲಿ ಭಾರವೀಯ ಕಿರಾತಾರ್ಜುನೀಯದ ಹದಿನೈದನೆಯ ಸ್ವರ್ಗಕ್ಕೆ ದುರ್ವಿನೀತ ಎಂಬ ಗಂಗರ ದೊರೆ ಟೀಕೆಯನ್ನು ಬರೆದಿರುವುದಾಗಿ ಕರ್ನಾಟಕ ಕವಿ ಚರಿತ್ರೆಯಿಂದ ತಿಳಿಯುತ್ತದೆ. [೯೬] ಆಗಿನ ಸಮಕಾಲೀನ ಗ್ರಂಥ ವಡ್ಡಾರಾಧನೆಯು ಸಹ ನಾಲ್ಕು ವೇದ, ೧೮ ಧರ್ಮ ಶಾಸ್ತ್ರ, ನ್ಯಾಯ, ವ್ಯಾಕರಣ, ಛಂದಸ್ಸು, ಅಲಂಕಾರ ನಿಘಂಟು, ಕಾವ್ಯ, ನಾಟಕ, ಜ್ಯೋತಿಷ್ಯಗಳನ್ನು ಇತ್ಯಾದಿಯಾಗಿ ಕಲಿಸುತ್ತಿದ್ದರೆಂದು ವಿದ್ಯಾಭ್ಯಾಸದ ವಿಷಯಗಳ ಮೇಲೆ ಅಪಾರ ಬೆಳಕು ಚಲ್ಲಿದೆ.[೯೭] ಅದೇ ರೀತಿ ಸಮಾಜದಲ್ಲಿ ಬೇರೆ ಬೇರೆ ವೃತ್ತಿಗಳುಳ್ಳ ನೇಕಾರರು, ಕಮ್ಮಾರರು, ಬಡಿಗ, ಅಕ್ಕಸಾಲಿಗರು, ಬಣಜಿಗರು, ಕಲಾಕಾರರು ಮುಂತಾದ ವೃತ್ತಿ ಅವಲಂಬಿತರು ವ್ಯಾಪಾರಿಗಳು ವಿದ್ಯೆ ಕಲಿಯಲು ಅವಕಾಶವಿದ್ದರು ಕಲಿಯಲಿಲ್ಲವೆಂದು ಕಾಣುತ್ತದೆ. ಏಕೆಂದರೆ ಅನುವಂಶಿಕವಾಗಿ ಬೆಳೆದು ಬಂದ ತಮ್ಮ ಮನೆತನ ವೃತ್ತಿಯನ್ನು ಬೆಳೆಸುವುದು ಅವರ ಮೂಲ ಉದ್ಯೋಗವಾಗಿತ್ತು ಹೀಗಾಗಿ ಶಿಕ್ಷಣದತ್ತ ಒಲವು ತೋರಲಿಲ್ಲವೆಂದರೂ ಶಿಕ್ಷಣಕ್ಕಾಗಿ ದಾನ ದತ್ತಿಗಳನ್ನು ಬಿಟ್ಟ ವಿಷಯ ಶಾಸನಗಳಲ್ಲಿ ಕಂಡು ಬರುವುದರಿಂದ ನಾಡಿನ ಅಭಿವೃದ್ಧಿಗಾಗಿ ಜನಸಾಮಾನ್ಯರ ಒಲವು ಶಿಕ್ಷಣಕ್ಕೆ ಪೂರಕವಾಗಿತ್ತೆಂದು ಹೇಳಬೇಕಾಗುತ್ತದೆ.

### ಭಾಷೆ ಮತ್ತು ಬರವಣಿಗೆ

ಭಾಷೆ ಮತ್ತು ಬರವಣಿಗೆಯಲ್ಲಿ ಕೊಪ್ಪಳ ಜಿಲ್ಲೆಯ ಶಾಸನಗಳು ಗಣನೀಯ ಪಾತ್ರ ವಹಿಸಿರುವುದು ಕಂಡು ಬರುತ್ತದೆ. ಕೊಪ್ಪಳದಲ್ಲಿ ದೊರೆತ ಅಶೋಕನ ಪಾಲ್ಕಿಗುಂಡು, ಗವಿಮಠ ಶಾಸನಗಳು ಪ್ರಾಕೃತ ಭಾಷೆ, ಬ್ರಾಹ್ಮ ಲಿಪಿಯಲ್ಲಿದ್ದು ಇಲ್ಲಿಯ ಅಕ್ಷರಗಳ ಬೆಳವಣಿಗೆಗೆ ತಳಹದಿಯಾಯಿತು. ಕುಕನೂರು, ಇಟಗಿ, ಶಾಸನಗಳು ಗದ್ಯ, ಪದ್ಯ ಮಿಶ್ರಿತ, ಹಳೇಗನ್ನಡ, ಸಂಸ್ಕೃತ ಮತ್ತು ಎರಡು ಮಿಶ್ರಿತವಾಗಿ ರಚನೆಗೊಂಡಿವೆ. ಕೊಪ್ಪಳ, ಮಾದಿನೂರು ಅಳವಂಡಿ, ಕವಲೂರು, ಮುಧೋಳ, ತಳಕಲ್ಲ ಪ್ರಮುಖ ಶಾಸನಗಳ ಪ್ರಾರಂಭ ಮತ್ತು ಕೊನೆಯಲ್ಲಿ ಸಂಸ್ಕೃತ ಶ್ಲೋಕಗಳಿವೆ. ಉಳಿದ ಶಾಸನಗಳು ನಡುಗನ್ನಡ ಹೊಸಗನ್ನಡದಲ್ಲಿ ರಚಿತವಾಗಿವೆ.

ಉದಾಹರಣೆಗಾಗಿ ಇಟಗಿಯ ಕ್ರಿ.ಶ. ೧೧೧೨ ರ ಶಾಸನದಲ್ಲಿ ಕಾವ್ಯ, ಛಂದಸ್ಸು ಭಾಷೆಯಲ್ಲಿ ಕವಿಯ ಪಾಂಡಿತ್ಯವನ್ನು ಗುರ್ತಿಸಲು ಸಾಧ್ಯವಾಗಿದೆ. ''ಮತ್ತೇಭ ವಿಕ್ರೀಡಿತ, ಸ್ರಗ್ದರಾ, ಮಹಾಸ್ರಗ್ಧರಾ, ಚಂಪಕ ಮಾಲಾ, ಉತ್ಪಲ ಮಾಲಾ, ಕಂದ ಪದ್ಯ, ಕಾವ್ಯಮಯ ಗದ್ಯ ರೂಪಕ ಉಪಮೆಯ ಉತ್ಪ್ರೇಕ್ಷ, ಅತಿಶಯೋಕ್ತಿ, ಶ್ಲೇಷ ಅಲಂಕಾರ ಇವುಗಳ ಬಳಕೆ ಇದೆ. ಆದರೆ ಶ್ಲೇಷ ಅಲಂಕಾರಕ್ಕೆ ಸಿಂಹಪಾಲು ಸಂಸ್ಕೃತಗಳ ಪದ ಬಳಕೆ, ಕನ್ನಡ ಭಾಷಾ ಬೆಳವಣಿಗೆಯಲ್ಲಿ ಅಕ್ಷರಗಳ ಮಾರ್ಪಾಡುಗಳ ಇತ್ಯಾದಿಗಳ ಬಳಕೆಯನ್ನು ನೋಡಿದರೆ ಇಟಗಿ ಮತ್ತು ಕುಕನೂರು ಶಾಸನಗಳು ಕಬ್ಬಿಣ ಕಡಲೆಯಂತಿವೆ.''[೯೮] ಶಾಸನಗಳಲ್ಲಿ ಉಲ್ಲೇಖವಾದ ಸಂಧಿ ವಿಗ್ರಹಿಯಾಗಿರುವ ಅಧಿಕಾರಿ ಅನೇಕ ಭಾಷೆಗಳನ್ನು, ಲಿಪಿಗಳನ್ನು ಅರಿತಿರಬೇಕಾಗಿತ್ತು. ಅಂತಹವನನ್ನೆ ಈ ಅಧಿಕಾರಕ್ಕೆ ನೇಮಿಸಿದಂತೆ ಕಾಣುತ್ತದೆ. ಶಾಸನಕಾರನು ಶಾಸನ ಕಲ್ಲುಗಳ ಮೇಲೆ ಬಳಸಲ್ಪಟ್ಟ ಆಕಳು, ಕರು, ಸೂರ್ಯ, ಚಂದ್ರ ದೇವಾಲಯಗಳ ಚಿತ್ರ, ನಿಷೀದಿ ಕಲ್ಲುಗಳು, ಸತಿಗಲ್ಲುಗಳು, ವೀರಗಲ್ಲುಗಳ ಮೇಲೆ ಕೆತ್ತಲ್ಪಟ್ಟ ಚಿತ್ರ ಶಿಲ್ಪಗಳು ಲಿಪಿಯ ಬಳಕೆ ಬರವಣಿಗೆಯಲ್ಲಿ ಮುಖ್ಯ ಪಾತ್ರವಹಿಸುತ್ತವೆ. ಅದನ್ನು ಸೋಮದೇವನ ಯಶಸ್ತಿಲಕ ಚಂಪುವಿನಲ್ಲಿ ಕಾಣುತ್ತೇವೆ.[೯೯] ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಕೆಲವು ಸಂಸ್ಕೃತವಾಗಿದ್ದರೆ ಕೆಲವು ಹಳೆಗನ್ನಡ ಕನ್ನಡ-ಸಂಸ್ಕೃತ ಮಿಶ್ರಿತವಾಗಿರುವ ಪದ್ಯ ಮತ್ತು ಪದ್ಯ ಗದ್ಯ ರೂಪದಲ್ಲಿ ಹಾಗೂ ಗದ್ಯರೂಪದಲ್ಲಿ ಒಳಗೊಂಡಿರುವುದರಿಂದ ಭಾಷೆ ಮತ್ತು ಬರವಣಿಗೆಯಲ್ಲಿ ಅಂದಿನ ಜನರು ''ಪದವನ್ನು ಅರಿತವರು, ಅರಿತದ್ದನ್ನು ಹೇಳುವವರು, ಕಾವ್ಯದಲ್ಲಿ ಪ್ರಯೋಗಮಾಡುವವರು ನಾಡವರ್ಗ್ಗಗಳ್'' ಎಂಬ ಕವಿರಾಜ ಮಾರ್ಗಕಾರನ ಮಾತು ನಿಜವೆನಿಸುತ್ತದೆ.

### ಸ್ತ್ರೀ ಶಿಕ್ಷಣ

ವೈದಿಕ ಯುಗದಲ್ಲಿ ಹಲವಾರು ಸ್ತ್ರೀಯರು ವಿದ್ಯಾವತಿಯರಾಗಿ, ಸಾಧಕರಾಗಿ ಪುರುಷರಿಗೆ ಸಮಾನವಾದ ಸ್ಥಾನವನ್ನು ದೊರಕಿಸಿ ಕೊಂಡಿದ್ದರು. ಮುಂದೆ ಬೌದ್ಧ ಮತ್ತು ಜೈನ ಯುಗಗಳು ಈ ಕೊರತೆಯನ್ನು ತುಂಬಿಕೊಡಲು ಪ್ರಯತ್ನಿಸಿವೆ.[೧೦೦] ಆದರೂ ಪ್ರಾಚೀನ ಕರ್ನಾಟಕದ ಸ್ತ್ರೀ ವಿದ್ಯಾಭ್ಯಾಸದ ಚಿತ್ರಣವು

ಶೋಚನೀಯವಾಗಿದೆ. ಏಕೆಂದರೆ ಕ್ರಿ.ಶ. ಮೂರು ನಾಲ್ಕನೆಯ ಶತಮಾನದಲ್ಲಿಯೇ ಅವಳು ಶಿಕ್ಷಕಣ ಕಲಿಯಲು ಅನರ್ಹಳು ಎಂಬ ಭಾವನೆ ಮೂಡಲು ಪ್ರಾರಂಭಿಸಿ ಅವರನ್ನು ಶಿಕ್ಷಣ ದಿಂದ ದೂರವಿರಿಸಲು ಪ್ರಾರಂಭಿಸಿರಬೇಕು. ಅಂತೆಯೇ ಶಾಸನಗಳಲ್ಲಿ ಸ್ತ್ರೀಯರ ಹೆಸರುಗಳು ಕಂಡುಬರುವದಿಲ್ಲ, ಆದರೆ ರಾಜಮನೆತನದ ಸ್ತ್ರೀಯರು, ಪ್ರಧಾನ ಮಂತ್ರಿ, ದಂಡನಾಯಕ, ಮುಂತಾದ ಅಧಿಕಾರಿಗಳ ರಾಣಿಯರು, ಪತ್ನಿಯರು, ಶಿಕ್ಷಣದಲ್ಲಿ ತೋರಿದ ಆಸಕ್ತಿ ವಿವಿಧ ಕಲೆಗಳಲ್ಲಿ ಪ್ರವೀಣರಾದದ್ದು, ಸೂಳೆ ಸಮುದಾಯ ಪಾತ್ರದವರು ಸಂಗೀತಗೋಷ್ಠಿ, ವಾದ್ಯಗೋಷ್ಠಿಯವರು, ರಾಜಮನೆತನದ ಸ್ತ್ರೀಯರು ಒಂದೆಡೆ ಕಲೆಗಾಗಿ ಇಲ್ಲವೆ ರಾಜರಮನದಾಕರ್ಷಣೆಗಾಗಿ ನೃತ್ಯ ಸಂಗೀತದಂತ ಕಲೆಗಳಿಗೆ ಮಾರು ಹೋಗಿರಲು ಸಾಕು. ಸ್ತ್ರೀಯರ ಕುರಿತು ನೇರ ಆಕರಗಳ ಅಭಾವವಿಲ್ಲ. ಈ ವಿಷಯಕ್ಕೆ ಸಂಬಂಧಿಸಿದ ರಾಣಿಯರ ಬಿರುದುಗಳ ವಿಶೇಷಣಗಳು ಈ ದಿಸೆಯಲ್ಲಿ ವಿಚಾರಿಸಲು ಅವಕಾಶ ಮಾಡಿಕೊಟ್ಟಿವೆ.

ಚಾಲುಕ್ಯ ಅರಸ ತ್ರೈಲೋಕ್ಯಮಲ್ಲ ಸೋಮೇಶ್ವರನ ಮಡದಿ ಮೈಳಲದೇವಿ ವಿಳಾಸ ವಿದ್ಯಾಧರಿ, ಚಾಲುಕ್ಯ ಭುವ ನೈಕಮಲ್ಲನ ಮಡದಿ ಕಂಚಲ ಮಹದೇವಿ 'ಶ್ರೀಂಗಾರ ವಿದ್ಯಾಧರಿ ಸರಳಾಧರಿ,' ಆಹವಮಲ್ಲ ದೇವನ ಅರ್ಧಾಂಗಿ ಸುಗ್ಗಲದೇವಿ 'ಅಭಿನವ ಸರಸ್ವತಿ' ಎಂದು ಬಿರುದು ಪಡೆದಿದ್ದರೆ, ವೀರ ನೊಳಂಬನ ಪತ್ನಿ ಮಾಳಲದೇವಿ ವಿದ್ಯಾಧರಿಯೆನಿ ಕೊಂಡಿದ್ದಳು.[೧೧೧] ಅವರಂತೆ ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯ ಮಲ್ಲ ಸೋಮೇಶರ್ವರನ ಮಡದಿ ಮೈಳಲದೇವಿ ''ವಿಳಾಸ ವಿದ್ಯಾಧರಿ ಸಹ ಸ್ರಫಳ ಭೋಗ ಭಾಗಿ ನಿದ್ವಿತಿಯ ಲಕ್ಷ್ಮೀ ದಾನ ಚಿಂತಾಮಣಿ ಸೋವರಸರ ರಾಜಹಂಸಿ ದಾನ ವಿನೋದ ಕಸ್ತೂರಿ ಕಾಮೋದೆ ನಿತ್ಯ ಸತ್ಯ ಸಂಪನ್ನೆ ವಿಭುದ ಪ್ರಸನ್ನ''ಳಾಗಿದ್ದಳೆಂದು ಮುಧೋಳ ಶಾಸನ ವರ್ಣಿಸುತ್ತದೆ.[೧೦೨] ಅಳವಂಡಿ ಶಾಸನ [೧೦೩] ಚಾವರಾಜನ ಪತ್ನಿ ಧರದ್ವಾಜದಾನ್ವಯ ಶಿರೋಮಣಿ ಸದ್ಗುಣೆ ಸಾವಿಯಕ್ಕಳ ಕುರಿತು, ಕಲ್ಲೂರ ಶಾಸನ ಕುಮಾರಿ ಸರಸ್ವತಿಯ ಬಗ್ಗೆ, [೧೦೪] ಕುಕನೂರಿನ ಶಾಸನ 'ಮದನ ಮಾನಸೋನ್ಮಾದ ಸವರರೂಪ ವಿರಾಜ ತಾನೇಕ ಕಳಾಸ್ವದರಲೆ ಸರಸ್ವತಿ ದೇವತಾತಿ' ಎಂದು ತಿಳಿಸಿದೆ.[೧೦೫] ಈ ಪ್ರದೇಶದ ಶಾಸನಗಳಲ್ಲಿ ಉಲ್ಲೇಖ ಬಂದ 'ರೆಬ್ಬಲದೇವಿ'ಯ ಕುರಿತು ಶಸ್ತ್ರಸಾಹಿತ್ಯ ಕಳಾಜ್ಞಾ ನಿಧಿ ಕವಿ ಪ್ರವರನಂತೆ ಪ್ರತಿಭಾ ಸರಸ್ವತಿ ನಿರ್ಮಳ ಯಶಸ್ವಿತಿ ವಾಣಿ ಕರಕಳಿತವೀಣೆ ಸಕಳ ಕಳಾ ಪ್ರವೀಣೆಯಾಗಿದ್ದಳೆಂದು ಹೇಳುವುದು.[೧೦೬] ಹೊಯ್ಸಳರ ದೊರೆ ವಿಷ್ಣುವರ್ಧನನ ರಾಣಿ 'ಶಾಂತಲಾದೇವಿ' ಜೈನರ ಪುಣ್ಯ ಕ್ಷೇತ್ರವಾದ ಕೊಪ್ಪಳದಲ್ಲಿ ಜೈನ ಬಸದಿ ಕಟ್ಟಿಸಿ ತನ್ನ ಕೀರ್ತಿಮೆರೆದಿದ್ದಾಳೆ. [೧೦೭] ಇವರಲ್ಲದೆ, ರಾಣಿಯರಾದ ಪೊಲೆಯಬ್ಬೆ, ರೆವಕಬ್ಬೆ, ಪಿಟ್ಟಬ್ಬೆ-ರೇವಕಯ್ಯ ಕಂತಿ, ಚಂಗಬ್ಬೆ, ಎರೆರಿಯಬ್ಬೆ ಕನ್ತಿ, ಕವಣಬ್ಬರಸಿ, ರಂಬಲದೇವಿ, ಗೊನಬ್ಬೆ ಮುಂತಾದ ಜೈನ ರಾಣಿಯರ ಉಲ್ಲೇಖಗಳು ಕೊಪ್ಪಳ ಶಾಸನಗಳಲ್ಲಿ ಬೇರೆ ಬೇರೆ ಕಡೆ ಕಂಡುಬರುತ್ತವೆ. [೧೦೮]

ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖ ಬರುವ ಗಂಗ ಅರಸ ರಾಜಮಲ್ಲನ ಪತ್ನಿ ಕಂಚಿಯಬ್ಬರಸಿ (ಕ್ರಿ.ಶ. ೧೦೨೨), ಪೊಲೆಯಬ್ಬೆ ಮಗಳು ಎರೆಯಬ್ಬೆ (೯೭೬) ಭೂತಗನ ಮಗಳಾದ ಮಾರಸಿಂಗನ ತಂಗಿಯಾದ

ಹೆರಿಗನ ಪತ್ನಿ ಜೆಜ್ಜಾಂಬಿಕೆ ಅಥವಾ ಜೆಜ್ಜಬ್ಬರಸೆ, (೯೯೮), ಶ್ರಾವಕಿ ಅಣೆಗಬ್ಬೆ ಶಿಷ್ಯೆ ಪೋಲಿಯಬ್ಬೆ (೯೭೧), ಪದ್ಮಾವತಿ ದೇವಿ (ಕ್ರಿ.ಶ. ೧೧ ನೆ.ಶ) ಪಿಟ್ಟಬ್ಬೆ (೯೭೭), ಶಿಷ್ಯ ರೇವಕಯ್ಯೆಕಂತಿ, ಗೋನಂಬೆಕಂತಿ (ಕ್ರಿ.ಶ. ೧೦೯೯), ಕೋಗಳಿ ಪದ್ಮಬ್ಬೆ ಕಂತಿ (ಕ್ರಿ.ಶ. ೧೦೦೧), ಗಂಗರಾಜನ ಪತ್ನಿ ಪದ್ಮಬ್ಬೆ (ಕ್ರಿ.ಶ. ೯೭೩) ಪಿಟ್ಟಕಬ್ಬೆ (ಕ್ರಿ.ಶ. ೧೦೦೦), ರೇವಕ ನಿಮ್ಮಡಿ, ಅತ್ತಿ ಮಬ್ಬೆ (ಕ್ರಿ.ಶ ೧೦೩೦). ಇತ್ಯಾದಿ ರಾಣಿಯರು ಕಂತಿಯರು ಒಂದಲ್ಲ ಒಂದು ರೀತಿಯಲ್ಲಿ ಸ್ವಾತಂತ್ರ್ಯವನ್ನು ಮೆರೆದಿದ್ದರೆಂದು ತಿಳಿಯುತ್ತದೆ. ಬಹುತೇಕ ಡಾ. ಚನ್ನಕ್ಕರವರು ತಮ್ಮ ಪ್ರಬಂದದಲ್ಲಿ ಕೆಲವು ರಾಣಿಯರ ಕುರಿತು ಚರ್ಚಿಸಿರುವುದು ಗಮನಿಸಿದರೆ ಕನ್ನಡ ಸಾಹಿತ್ಯದಲ್ಲಿ ಇವರ ಪಾತ್ರಗಣನೀಯವಾಗಿರುವುದಾಗಿ ತಿಳಿಯುತ್ತದೆ.

ಇದರಿಂದ ತಿಳಿದು ಬರುವ ಸಂಗತಿಯೆಂದರೆ ಶಿಕ್ಷಣ ರಂಗದಲ್ಲಿ ಸಿಗಲಾರದ ಸ್ಥಾನವನ್ನು ಕೆಲವರು ಕಲೆಯಲ್ಲಿ ತುಂಬಿಕೊಂಡಿದ್ದರು. ಆದರೆ ಅದು ಅರಮನೆಯಲ್ಲಿ ಮಡುಗಟ್ಟಿನಿಂತಿತ್ತು. ಈ ರಾಜಮನೆತನದ ಕಲೆ ಬರುಬರುತ್ತಾ ದೇವಾಲಯದ ವೆಶೆಯರಿಗೆ (ಸೂಳೆಯರು, ಅಂಗ ಭೋಗರಂಗಭೋಗ)[೭] ಸೀಮಿತ ವಾದಾಗ ಅದು ತನ್ನ ಗೌರವ ಕಡಿಮೆ ಮಾಡಿ ಕೊಂಡಿರುವಂತಿದೆ. ಕಲ್ಯಾಣ ಚಾಲುಕ್ಯರು ಹಾಗೂ ಕಲಚೂರಿಗಳ ಕಾಲ ಒಂದು ಪ್ರಮುಖಯುಗವೆನಿಸಿದ್ದು ಅದು ಶಿವಶರಣ ಆಂದೋಲನದಲ್ಲಿ ಸ್ತ್ರೀಯರಿಗೆ ಬೌದ್ಧ, ಜೈನರ ಕಾಲಕ್ಕೆ ದೊರತ ಸ್ವಾತಂತ್ರ ಸ್ಥಾನಮಾನಗಳು ದೊರಕಿಸಿಕೊಟ್ಟಿರುವುದನ್ನು ಕಾಣುತ್ತೇವೆ.[೧೦೯] ಇದೆಲ್ಲಾ ನೋಡಿದರೆ ಸ್ತ್ರೀಯರಿಗೆ ಇರುವ ಸ್ವಾತಂತ್ರ್ಯ-ಸ್ಥಾನಮಾನವಾಗಲಿ, ಶಿಕ್ಷಣದಲ್ಲಿ ಅವರಿಗಿದ್ದ ಅನುಕೂಲತೆ ಅಷ್ಟೊಂದು ಹೆಚ್ಚಿನ ಮಟ್ಟದಲ್ಲಿ ಇರಲಿಲ್ಲ. ಜನ ಸಾಮಾನ್ಯರಿಗಂತೂ ಶಿಕ್ಷಣ ಕಲಿಯುವುದು ಅದು ಕನಸಾಗಿಯೇ ಉಳಿದಿರಲು ಸಾಕು ಎಂದೆನಿಸುತ್ತದೆ.

## ಪರೀಕ್ಷೆಗಳು ಮತ್ತು ಪದವಿಗಳು

ವಿದ್ಯಾಭ್ಯಾಸಕ್ಕೆ ಕೊನೆ ಎಂಬುದು ಇಲ್ಲವಾದರು ಪ್ರತಿ ವರ್ಷ ಅಥವಾ ಉಪಧ್ಯಾಯರು ಸೂಕ್ತವೆಂದು ಪರಿಗಣಿಸಿದಾಗ ವಿದ್ಯಾರ್ಥಿಗಳಿಗೆ ಪರೀಕ್ಷೆಗಳನ್ನು ನಡೆಸಲಾಗುತ್ತಿತ್ತು. ಈ ಸ್ಪರ್ಧಾತ್ಮಕ ಪರೀಕ್ಷೆಗಳು ಘಟಿಕಾಸ್ಥಾನಗಳಲ್ಲಿ ನಡೆಸಲಾಗುತ್ತಿದ್ದು. ಇಲ್ಲಿ ಗೆಲವು ಪಡೆದವರಿಗೆ ಘಟಿಕಾಸಾಹಸಿ, ಘಳಿ ಸಾಸ, ಘೈಸಾಸ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಅವರ ಕುರಿತು ಈಗಾಗಲೇ ಘಟಿಕಾಸ್ಥಾನದಲ್ಲಿ ಚರ್ಚಿಸಲ್ಪಟ್ಟಿದ್ದು ಸಮಕಾಲಿನ ಚರಿತ್ರೆಯಲ್ಲೊಂದಾದ ''ವಿಕ್ರಮಾರ್ಜುನ ವಿಜಯದಲ್ಲಿ'' ಪಂಪನು ಕೃಪಾಚಾರ್ಯರ ಬಳಿ ಪಾಂಡವರ ವಿದ್ಯಾಭ್ಯಾಸ ನಡೆದ ವಿಷಯ ವಿವರಿಸುವಾಗ ಹೆಳಿರುವ ವಿದ್ಯಾಭ್ಯಾಸದ ವಿಷಯಗಳು ಪಂಪನ ಕಾಲದಲ್ಲೂ ಪ್ರಚಲಿತದಲ್ಲಿದ್ದಿರುವುದಾಗಿ ತಿಳಿಯುತ್ತದೆ. ಶಾಸನಗಳಲ್ಲಿ ಈ ಮುಂಚೆ ಪರಿಚಯಿಸಲಾದ ಭಟ್ಟೋಪಾಧ್ಯಾಯ ಎಂಬುದು ಉಪಾಧ್ಯಾಯ ವೃತ್ತಿಯನ್ನು ಸೂಚಿಸುವಂತಿದ್ದರೆ ಘೈಸ ಪದ ''ಪದವಿ'' ಸೂಚಕವಾಗಿದೆ. ಎಂದು

ಖಚಿತಗೊಳ್ಳುತ್ತದೆ.[೧೧೦] ಇದರಿಂದ ತಿಳಿದು ಬರುವ ಸಂಗತಿಯೆಂದರೆ ಈ ಪದವಿಗಳು ಪರೀಕ್ಷೆಗಳು ನಡೆಸಿದ ಬಳಿಕವೇ ಕೊಡಮಾಡುತ್ತಿರುವುದಾಗಿ ತಿಳಿಯುತ್ತದೆ.

**ಸಾಹಿತ್ಯಿಕ ಚಟುವಟಿಕೆಗಳು**

ಜಿಲ್ಲೆಯ ಶಾಸನಗಳು ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲಿದಂತೆ ಸಾಹಿತ್ಯಿಕ ಕ್ಷೇತ್ರದಲ್ಲಿ ನಡೆದ ಸಂಗತಿಯನ್ನು ಯಥಾವತ್ತಾಗಿ ನಿರೂಪಿಸಿರುವಲ್ಲಿ ಗಡಬಡಿಸಿ ಕೇವಲ ಹೊಗಳಿಕೆಗೆ ಪ್ರಾಧಾನ್ಯತೆ ನೀಡಿವೆ. ದಾನಶಾನಗಳ ಸಂಖ್ಯೆ ಹೆಚ್ಚಿರುವುದರಿಂದ ವಿಷಯ ವೈವಿಧ್ಯವೂ ಕಡಿಮೆ. ಈ ಸೀಮಿತ ವಿಷಯದ ಮಧ್ಯದಲ್ಲಿಯೂ ಶಾಸನ ಕವಿಗಳು ತೋರಿದ ಪ್ರತಿಭೆ ಪಾಂಡಿತ್ಯ ಮೆಚ್ಚುವಂತದ್ದಾಗಿದೆ. ಶಾಸನಗಳಲ್ಲಿ ರಾಜನ ಆಳ್ವಿಕೆ, ದಾನಕೊಟ್ಟವರ ಹೆಸರು, ದಾನವಿವರಗಳು, ಆ ದಾನಗಳನ್ನು ಸ್ವೀಕರಿಸಿದವರ ಕುರಿತು ಹಾಗೂ ಆಯಾ ಪ್ರದೇಶಗಳು ನಾಡುಗಳ ಇತ್ಯಾದಿ ವರ್ಣನೆಗಳಿಂದ ಶಾಸನಗಳ ಹರಿವು ವಿಸ್ತ್ರತಗೊಂಡಿದೆ. ಇದಲ್ಲದೆ ಕೆಲವು ಶಾಸನಗಳು ಶುದ್ಧ ಚಂಪೂ ಕಾವ್ಯ ಶೈಲಿಯನ್ನು ಅಳವಡಿಸಿಕೊಂಡಿರುವುದು ಕಾಣುತ್ತೇವೆ. ಇನ್ನೊಂದು ಅಂಶವನ್ನು ಗಮನಿಸಿದರೆ ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಸಂಸ್ಕೃತಬಾಷೆ ಮೊದಲಸ್ಥಾನ ಪಡೆದರೆ ಇಲ್ಲಿಯ ಶಾಸನಗಳು ಬೆರಳೇಣಿಕೆಯ ಸ್ಥಾನ ಪಡೆಯುವಲ್ಲಿ ಯಶಸ್ವಿಯಾಗಿವೆ. ಆದರೆ ಕನ್ನಡಕ್ಕೆ ಮಾತ್ರ ಪ್ರಮುಖ ಸ್ಥಾನ ಪ್ರಾಪ್ತವಾಗಿದೆ. ಪ್ರಾದೇಶಿಕವಾಗಿ ಕನ್ನಡ-ಸಂಸ್ಕೃತ, ಭಾಷೆ ಮತ್ತು ಬರವಣಿಗೆಯನ್ನು ಮೈಗೂಡಿಸಿಕೊಂಡಿವೆ.

ಕೊಪ್ಪಳದಲ್ಲಿ ದೊರೆತ ಅಶೋಕನ ಶಾಸನಗಳು ಬ್ರಾಹ್ಮಿ ಲಿಪಿಯುಳ್ಳ ಪ್ರಾಕೃತ ಭಾಷೆಯಲ್ಲಿದ್ದರೆ, ತಾಮ್ರಪಟ ಶಾಸನಗಳು ಸಂಸ್ಕೃತದಲ್ಲಿವೆ, ಶಿಲಾ ಶಾಸನಗಳು ಕನ್ನಡದಲ್ಲಿದ್ದು ಪ್ರಾರಂಭ ಮತ್ತು ಕೊನೆಯಲ್ಲಿ ಸಂಸ್ಕೃತಗಳ ಬಳಕೆ ಹಾಗೂ ಕೆಲವೊಂದು ಶಾಸನಗಳ ಮಧ್ಯದಲ್ಲಿ ಸಂಸ್ಕೃತ-ಕನ್ನಡ, ಹಳೆಗನ್ನಡಗಳ ಶಬ್ದಗಳು ಕನ್ನಡದ ವೃತ್ತ ಕಂದಗಳು ಕಾಣಿಸಿಕೊಳ್ಳುತ್ತವೆ. ದತ್ತಿ ವಿವರಣೆಯ ಭಾಗ ಗದ್ಯದಲ್ಲಿರುವುದರಿಂದ ಪ್ರತಿಷ್ಠಿತವಾದ ಸಂಸ್ಕೃತ, ಕನ್ನಡ ಇಲ್ಲಿ ಉಭಯ ಸಾಪೇಕ್ಷಿತವಾದ ರೀತಿಯಲ್ಲಿ ಅಭಿವ್ಯಕ್ತಗೊಂಡಿವೆ. ಇದರಿಂದ ಶಾಸನಗಳ ಶೈಲಿಯಲ್ಲಿ ಮಾದರಿಯ ಭಾಷಾಧೋರಣೆ ಉಂಟಾಗಿದೆ. ಸಂಸ್ಕೃತ ಶಾಸನಗಳು ಹೊರತು ಪಡಿಸಿ ನೋಡಲಾಗಿರುವ ಗದ್ಯಾತ್ಮಕ ಶಾಸನಗಳು ಗದ್ಯ ಪದ್ಯಗಳಿಂದ ಮಿಶ್ರಿತಗೊಂಡರೆ, ಕೆಲವು ಪದ್ಯರೂಪದಲ್ಲಿ ವರ್ಣನೆಯೊಂದಿಗೆ ವಿಷಯಗಳನ್ನು ತಿಳಿಸಿದರೆ ಇನ್ನೂಳಿದವುಗಳು ಯಾವ ವರ್ಣನೆ ಆಡಂಬರಗಳಿಲ್ಲದೆ ವಿಷಯವನ್ನು ಕಿರಿದಾಗಿ ನೇರವಾಗಿ ನಿರೂಪಿಸಿವೆ. ಪಾಲ್ಕಿಗುಂಡು, ಗವಿ ಮಠ ಶಾಸನಗಳು ಪ್ರಾಕೃತ ಭಾಷೆಯಲ್ಲಿರುವುದರಿಂದ ಚಾರಿತ್ರಿಕವಾಗಿ ಮಹತ್ವ ಪಡೆದುಕೊಂಡಿವೆ. ಏಕೆಂದರೆ ಅಶೋಕನ ಬೌದ್ಧಧರ್ಮದ ಪ್ರಚಾರ ಹಾಗೂ ಆತನ ಸಾಮ್ರಾಜ್ಯದ ಗಡಿಯನ್ನು ಗುರ್ತಿಸುವಲ್ಲಿ ಇವು ಇತಿಹಾಸದ ಮೈಲುಗಲ್ಲಾಗಿವೆ. ನಂತರ ಬಂದ ಜೈನರು ಕನ್ನಡ ನಾಡಿನಲ್ಲಿ ಜನಾನುರಾಗಿಗಳಾಗಿ ಬಾಳುವುದರೊಂದಿಗೆ ಸ್ಥಳಿಯ ಸಂಸ್ಕೃತ, ಪಾಕೃತ, ಕನ್ನಡ ಭಾಷೆಗಳನ್ನು ಅರಿತು ಕನ್ನಡದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದರು.

ಕನ್ನಡ ಸಾಹಿತ್ಯವನ್ನು ಮೇಲೇರಿಸಿ ಚಂಪುರೂಪದಲ್ಲಿ ಶ್ರೇಷ್ಠ ಕಾವ್ಯಗಳನ್ನು ಬರೆದು ವಿವಿಧ ಭಾಷೆಗಳ ಗ್ರಂಥಗಳಿಗೆ ಸಮಾನವಾಗಿ ನಿಲ್ಲುವಂತೆ ಮಾಡಿದ ಜೈನ ಕವಿಗಳು ಕಾಲ ಬದಲಾದಂತೆ ಜನತೆಯ ಒಲವು ನಿಲವುಗಳನ್ನು ತಿಳಿದು ಷಟ್ಪದಿ, ಸಾಂಗತ್ಯ ಶತಕ, ಗದ್ಯ ಪದ್ಯ ಮೊದಲಾದ ರೂಪಗಳಲ್ಲಿ ಗ್ರಂಥಗಳನ್ನು ರಚಿಸಿದರು. ಜೈನ ಸಿದ್ಧಾಂತದ ಪ್ರಕಾರ ಸಂಸಾರ ಮನೆ ಮಠ ಸಾಮ್ರಾಜ್ಯ ವೃತ್ತಿ ಪ್ರವೃತ್ತಿಗಳಿಗೆ ಸಂಬಂಧಿಸಿದ ಗ್ರಹಸ್ಥ ಜೀವನದ ಕರ್ತವ್ಯ ಪ್ರಜ್ಞೆಯುಳ್ಳ ಧರ್ಮಾಚರಣೆಯನ್ನು ಶ್ರಾವಕ ಧರ್ಮವೆಂದು, ಸಂಸಾರ ಬಂದನದಿಂದ ಮುಕ್ತರಾಗಿ ಸನ್ಯಾಸ ಜೀವನ ನಡೆಸುವ ಧರ್ಮಾಚರಣೆಯನ್ನು ಧರ್ಮವೆಂದು ಹೇಳುತ್ತಾರೆ. ಈ ಮುನಿ ಧರ್ಮ ಸ್ವೀಕರಿಸಿ ದೇಹತ್ಯಾಗಮಾಡಿ ಸುಗತಿಯನ್ನು ಸಾಧಿಸಿದ ಅಥವಾ ಮರಣ ಹೊಂದಿದ ದೃಷ್ಟಾಂತಗಳು-ಕೊಪ್ಪಳ ಮತ್ತು ತಾಲೂಕಿನ ೪೫ ಶಾಸನಗಳಲ್ಲಿ ಕಾಣಸಿಗುತ್ತವೆ.[೧೧೧] ಈ ಮುನಿಗಳ ಕುರಿತು ಹೇಳುವ ಶಾಸನಗಳಲ್ಲಿ ಪ್ರಾರ್ಥನಾಪದ್ಯ ಒಳಗೊಂಡು ಪದ್ಯವಿಲ್ಲದ ನಿಶಿಧಿ ಶಾಸನಗಳಾಗಿವೆ. ಅನೇಕ ಸನ್ಯಾಸಿಗಳು ತಂಡೋಪತಂಡವಾಗಿ ಬಂದು ಕೋಪಣ ತೀರ್ಥದಲ್ಲಿ ಮರಣ ಹೊಂದಿದ್ದಾರೆ. ಅವರ ಕುರಿತು ತಿಳಿಸುವಲ್ಲಿ ಜೀನ ಧರ್ಮದ ಪ್ರಭಾವ, ಭಾಷೆಯ ಪ್ರಭುತ್ವ ಶಾಸನದಲ್ಲಿ ಹೇಗಿರುತ್ತದೆಯಂದರೆ, ''ಸ್ವಸ್ತ್ಯತಿಯಶಯ ಶ್ರೀ ಸೋಮದೇವೋ ಗುರು ಭರಾ ತೇನಾಟಕೇಕಾವೋಶಬ್ದಶಾಸ್ತ್ರ ನೃಪಗಮೆ ಕವಿ ರಾಜಸಮಾಯೋಗ್ಯೋ ನಭೂತೋ ನಭೆ ವಿಷ್ಯಂತಿ'' ಎಂದು ಕ್ರಿ.ಶ.೧೦೦೮ ಹಾಗೂ ೧೦೧೦ರ ಶಾಸನಗಳಲ್ಲಿಯ ಭಾಷೆಯನ್ನು ನೋಡಿದಾಗ ಅದು ತನ್ನ ಪೂರ್ವದ ಹಳೆಗನ್ನಡ ಪ್ರಕ್ರೀಯೆಗಳನ್ನು ಉಳಿಸಿಕೊಂಡಂತೆ ಕಂಡುಬರುತ್ತದೆ.[೧೧೨]

೧೧ ನೆಯ ಶತಮಾನದ ಮಧ್ಯಭಾಗದಿಂದ ೧೨ ನೆಯ ಶತಮಾನದ ಅಂತ್ಯದವರೆಗಿನ ಶಾಸನಗಳು ಚಂಪೂ ಮಾದರಿಯಲ್ಲಿದ್ದರೆ, ಅನಂತರದ ಶಾಸನಗಳ ಭಾಷೆಯ ರೂಪ ತೀರಾ ಅವ್ಯವಸ್ಥಿತ ಗೊಂಡಿದ್ದು ಭಾಷಾ ಶಿಷ್ಟದಿಂದ ಕೆಳಗಿಳಿಯುತ್ತಾ ನಡುಗನ್ನಡದ ಸಾಮಾನ್ಯ ಗದ್ಯ ಶೈಲಿಯನ್ನು ರೂಪಿಸಿಕೊಳ್ಳುತ್ತಾ ನಡದಿವೆ. ಅಂತ ಒಂದೆರಡು ಶಾಸನಗಳ ಸಾಲನ್ನು ಉದಾಹರಣೆಗಾಗಿ ಉಲ್ಲೇಖಿಸಲಾಗಿದೆ. ''ಪೂರ್ವ-ಒಂದು ತಿಂಗಳಂ ಸಾಧಿಸಿದೊರ್ ಹಳೆಗನ್ನಡ (ಕೊಪ್ಪಳ ಕ್ರಿ.ಶ. ೧೦೦೮) ನಾಲ್ವರು ವಿನೆಯ್ದೋರ್ ಕಲ್ಯಾಣ ಕೀರ್ತಿ ಮುನಿಪರ್ ನೆಗಳ್ದಿರ್ ಹಳೆಗನ್ನಡ, ಇಟಗಿ ''ಅವರಿಂದೆ ವೇದ ವಿದ್ಯಾಲತಿಕೆ ನಿಮಿರ್ದುದು'' (ಕ್ರಿ.ಶ. ೧೧೦೮) ನಡುಗನ್ನಡ ''ಹಲಗೆರೆಯ ಲಕ್ಕರಸನು ಹಿರಿಯ ವಕ್ಕರಣೆಯ ತೆಂಕಣ ಹೆಗ್ಗರೆಯೋಳಗಣ ಜೇಷ್ಠ ಸುದ್ಧ ಪಂಚಮಿ ಗುರುವಾರ ದಲ್ಲು'' (ಕುಕನೂರು ಶಾಸನ ಕ್ರಿ.ಶ.೧೧೫೮-೧೧೯೯). (ಕ್ರಿ.ಶ. ೧೩೭೯) ನಡುಗನ್ನಡ ''ನಡೆಸಿ ಬಾಹೋದುಯೆಂದು ತೋಟಯೆರಡು ವಿರುಪಾಕ್ಷ ದೇವರಿಗೆ ಪುಣ್ಯವಾಗಲೆಂದು ಕೊಟ್ಟ ಭೂದಾನದ ಶಾಸನ.''

ಹೀಗೆ ಶಾಸನಗಳು ಭಾಷೆಯ ಬದಲಾವಣೆಯ ಜೊತೆಗೆ ಕವಿಯು ಲಿಖಿತವಾದ ಪಾಠವನ್ನು ಲಿಪಿಗೊಳಿಸುವಾಗ, ಶಿಲಾಕ್ಷರ ವಿನ್ಯಾಸಗೊಳಿಸುವಾಗ ಅದೆಷ್ಟೋ ಶಾಸನದ ಶುದ್ಧಪಾಠ ಉಚ್ಚಾರಣ ದೋಷಲಿಪಿ ಸ್ಖಾಲಿತ್ಯ ಗೊಳಗಾಗಿದೆ. ಮತ್ತು ಆವಜ್ಞೆ ಅವಸರ ಶಿಲಾರಚನೆ ಪ್ರಾಕೃತಿಕವಾದ ಬಾಹ್ಯ ತೊಂದರೆಗಳು ಶಾಸನ

ಬರೆಹವನ್ನು ಅಶುದ್ಧವಾಗಿಸಿವೆ. ಉದಾ : ಇಟಗಿ ಶಾಸನ ಕಾವ ಪುರುಷ-ಕಾವಪುರ್ಷ ಉರಾಳ್ ಅರಸು ಉರಾಳ್ವರಸು ಹಿರಿಯಹೇರಿ, ಘಳಿಸಾಸ, ಫೈಸಾಸ ಎಂದು ಉಲ್ಲೇಖಿಸಿದೆ. ಕೆಲವು ಶಾಸನಗಳು ಸಾಹಿತ್ಯದ ದೃಷ್ಠಿಯಿಂದ ಮಹತ್ವದ್ದಾಗಿವೆ. ಅಂದಿನ ಆಳರಸರ ವಂಶಾಭ್ಯುದಯ ಅವರ ವೀರ ಪೌರುಷ, ವ್ಯಕ್ತಿತ್ವ ಬಿರುದಾವಳಿ, ಯುದ್ಧ ಕೌಶಲ್ಯ, ನಾಡು, ಜಿಲ್ಲೆ ರಾಜಧಾನಿ, ಗ್ರಾಮ ದೇವಾಲಯ, ಮಹಾಜನರು ಗುಣಾತಿಶಯಗಳ ಬಣ್ಣನೆ ಇತ್ಯಾದಿ ವಿಷಯಗಳನ್ನು ಛಂದೋ ಪ್ರಕಾರಗಳಲ್ಲಿ ಔಚಿತ್ಯ ಪೂರ್ಣವಾಗಿ ವಿವರಿಸುವಲ್ಲಿ ಸಾಹಿತ್ಯಿಕ ಮೌಲ್ಯವನ್ನು ನಿಚ್ಛಳವಾಗಿ ತಿಳಿಸುತ್ತವೆ. ಇಂಥ ದೃಷ್ಟಾಂತವನ್ನು ಕ್ರಿ.ಶ. ೧೧೦೮ ರ ಇಟಗಿ ಶಾಸನ ಇಟಗಿ ದೇವಾಲಯಗಳನ್ನು ರಚಿಸಿದ ಚಕ್ರವರ್ತಿ ಎಂದು ಹೆಸರಾದ ಮಾದೇವದಂಡನಾಯಕನನ್ನು ರಾಜ, ರಾಣಿಯರನ್ನು ನಾಡಿನ ಬಗ್ಗೆ ವರ್ಣಿಸುತ್ತದೆ. ''ದರಂಗ ಕುಲ ಪರ್ವತಾಳಿ ತಳ ಗಂಬಗಳ್ದಿ ಶಾಭಿತ್ತಿ ಬಿತ್ತಿರ ಸಾಲಂಕೃತ ಚಿತ್ರ ಪುತ್ರಿಕೆಯರಾದಿಗ್ದೇವಿರ್ದೇ ಗುಲಗಿದೀರಾಜಕನಕಾದ್ರಿ ಪೊಂಗಳ ಸಮಾಗಲ್ಕಾ ಮಹಾದೇವರಾಯ....'' ಎಂದು ಹೆಳಿದರೆ ಕ್ರಿ.ಶ. ೧೦೦೫ ರ ಕುಕನೂರ ಶಾಸನ ಕಾವ್ಯಮಯವಾಗಿದ್ದು ಶಾಸನದ ಸ್ತೂತಿ ಪದ್ಯ ಸಮುದ್ರದ ವರ್ಣನೆ ಅದರ ಮದ್ಯ ಮೇರುಗಿರಿ ಪರ್ವತ ಅದರ ದಕ್ಷಿಣಕ್ಕೆ ಭಾರತದೇಶ ಅದರಲ್ಲಿ ಕುನ್ತಳ ದೇಶ ಅದನ್ನು ಆಳುವ ಚಾಳುಕ್ಯ ದೊರೆಯ ಆಡಳಿತದ ಬೆಳ್ವಲ ನಾಡಿನ ಕುಕನೂರು-೩೦ ರ ಚೆಲ್ವನ್ನು ಅಲ್ಲಿರುವ ಮಠ, ದೇವಾಲಯ, ಮಹಾಜನರು, ಶಿಕ್ಷಣ ಅಗ್ರಹಾರ ನಿಸರ್ಗದ ಕುರಿತು ವರ್ಣಿಸುವಲ್ಲಿ ಶಾಸನ ಸಾಹಿತ್ಯದ ಕಾವ್ಯದಲ್ಲಿ ಘಟ್ಟಿತನ ಮೇರದಿದೆ.[೧೧೩] ಅದರಂತೆ ವರ್ಣಿಸುವ ಅಳವಂಡಿ, ಮಾದಿನೂರ, ಕವಲೂರ, ಇಟಗಿ ಕುಕನೂರಿನ ಶಾಸನಗಳಲ್ಲಿ ಪದ್ಯಗಳ ಭಾವ ಗಾಂಭೀರ್ಯ ಭಾಷಾ ಪ್ರೌಢಿಮೆ ಅಲಂಕಾರ, ಪದ ಲಾಲಿತ್ಯ, ರಸ ದೃಷ್ಠಿ, ವರ್ಣನಾ ಕೌಶಲ್ಯಗಳು, ಕನ್ನಡ ಶಾಸನ ಸಾಹಿತ್ಯೋದ್ಯಾನದಲ್ಲಿ ಘಮಘಮಿಗಿಸುವ ಮಕರಂದಗಳಾಗಿವೆ. ಅಂದಿನ ಆಳರಸರು ಕೆತ್ತಿಸಿದ ಅಂದಿನ ಶಿಲಾ ಶಾಸನಗಳು ಕೇವಲ ಅವರ ವ್ಯಕ್ತಿ ಮಾಹಿತಿ, ರಾಜಕೀಯ ಆಡಂಬರದ ವೀರ ಪ್ರಶಸ್ತಿಗಳಿಗಾಗಿ ಮಾತ್ರ ಉಳಿಯದೆ, ಅವರು ಗೈದ ದಾನದತ್ತಿ, ಕಟ್ಟಿಸಿದ ದೇವಾಲಯ, ನೆಲೆಗೊಳಿಸುವ ವ್ಯವಸ್ಥೆ, ದಕ್ಷ ಪ್ರಜಾಪರಿಪಾಲನೆ, ವಿದ್ಯೆ, ಸಂಸ್ಕೃತಿ, ಕಲಾಸಂವರ್ಧನೆ, ಧಾರ್ಮಿಕ ಉತ್ತೇಜನ, ರಾಷ್ಟ್ರೀಯಪ್ರೇಮ, ತ್ಯಾಗ, ಭಕ್ತಿ, ಪೌರುಷ, ಸ್ವಾಭಿಮಾನಗಳಂತಹ ಬಾಳಿನ ಪರಮಾದರ್ಶಗಳನ್ನು ಜೀವಂತ ಧ್ವನಿಯಾಗಿ ಕೇಳಿಸುವ ಸಾಹಿತ್ಯಕ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲುವ ಸ್ಮಾರಕಗಳಾಗಿವೆ.

**ಶಾಸನಗಳಲ್ಲಿ ಬಳಕೆಯಾದ ಹಳೆಗನ್ನಡ ಹೊಸಗನ್ನಡ**

ಚರಿತ್ರೆಯಲ್ಲಿ ಸೇರಿಹೋದ ಭಾಷೆಗಳಲ್ಲಿ ಶಬ್ದಗಳ ಬಳಕೆಯ ಪರಿವರ್ತನೆಗಳು ಗೋಚರಿಸುವುದು ಭಾಷಾಗತಿಯ ನಿಯಮವಾಗಿದೆ. ಅದನ್ನು ಗಮನದಲ್ಲಿರಿಸಿ ನೋಡಿದಾಗ ಶಾಸನಗಳಲ್ಲಿ ಕಂಡುಬರುವ 'ಪ'ಕಾರಕ್ಕೆ -'ಹ'ಕಾರಗಳು ಪೋಲ-ಹೊಲ ಬಳಕೆಯಾಗಿದೆ. ವಿಕಾರಕ್ಕೆ ಬದಲಾಗಿ 'ರ'ಕಾರ ಇಲ್ಲವೆ 'ಳ್' ಕಾರಗಳಾಗಿ ಕಾಣಿಸಿಕೊಂಡಿವೆ ಇಂತಹ ಎಷ್ಟೋ ಶಬ್ದಗಳ ಬದಲಾವಣೆ ಜಿಲ್ಲೆಯ ಕುಕನೂರು, ಇಟಗಿ, ಕವಲೂರು, ಅಳವಂಡಿ, ತಳಕಲ್ಲು, ಸಂಕನೂರು, ಮಾದಿನೂರು, ಕೊಪ್ಪಳ, ಪುರ ಗ್ರಾಮಗಳ ಊರಿನ

ಶಾಸನಗಳಲ್ಲಿ ಕಂಡುಬಂದಿವೆ. ಮತ್ತು ಕ್ರಿ.ಶ. ೯೦೦ ರಿಂದ ಪ್ರಾರಂಭವಾಗಿ ೧೦೧೧, ನೆಯ ಶತಮಾನದ ಶಾಸನಗಳಲ್ಲಿ ಹೊಸಗನ್ನಡದ ಸಾಹಿತ್ಯ ಬೆಳೆದು ಬಂದದ್ದು ಕಾಣುತ್ತವೆ.[೧೧೪] ನಂತರ೧೨ ನೆಯ ಶತಮಾನದಲ್ಲಿ ವಚನ ಸಾಹಿತ್ಯ ಬೆಳೆದು ಬಂದ ಹಿನ್ನಲೆಯಲ್ಲಿ[೧೧೫] ಕನ್ನಡದ ಶಾಸನ ಸಾಹಿತ್ಯದಲ್ಲಿ ವಚನ ಕ್ರಾಂತಿ ಕಾಲವಾಗಿ ನೂತನ ಸಾಹಿತ್ಯ ಉಗಮವಾಯಿತು. ಆಗ ನಾಡಿನ ಶಾಸನಗಳಂತೆ ಜಿಲ್ಲೆಯ ಶಾಸನಗಳು ಸಹ ಬದಲಾವಣೆಗೊಳಪಟ್ಟಿವೆ. ಕುಕನೂರ, ಅಳವಂಡಿ, ಮುಧೋಳ, ಇಟಗಿ, ಕವಲೂರು ಇತ್ಯಾದಿ ಶಾಸನಗಳನ್ನು ಶಾಸನ ಸಂಪುಟದಲ್ಲಿ ಗಮನಿಸಬಹುದಾಗಿದೆ.

ಇಟಗಿ ಶಾಸನ ಪದ್ಯರಂಜಿತವಾಗಿ ಸಾಹಿತ್ಯದಲ್ಲಿ ಗಣ್ಯಸ್ಥಾನಕ್ಕೆ ಅರ್ಹವಾಗಿದೆ. ಅದರಂತೆ ಕುಕನೂರು ಶಾಸನ ತಿಳಿಸುವ ದೇಶ, ವಿಭಾಗ, ನಿಸರ್ಗದ ವರ್ಣನೆ, ಜೇಷ್ಠಾ ದೇವಿ ಸಿದ್ಧಾಂತಿ ಕಳೇಶ್ವರ ಮುನಿಯನ್ನು ವರ್ಣಿಸುವ ಪದ್ಯಗಳು-ಮನೋಹರವಾಗಿವೆ. ಮತ್ತು ಇದು ಸಮಗ್ರ ಕಾವ್ಯ, ಚಂಪೂ ಶೈಲಿಯಲ್ಲಿ ರಚಿಸಲಾಗಿದೆ. ಅಳವಂಡಿ ಶಾಸನ ಸಹ ನಾಡು, ದೇಶ, ವಿಭಾಗ, ಪಟ್ಟಣ, ಕಂಪಣ, ಅಗ್ರಹಾರ, ಬ್ರಹ್ಮಪೂರಿಗಳ, ವರ್ಣನೆ ನೀಡುವುದು. ಅದೇ ರೀತಿ ಕವಲೂರು , ಮಾದಿನೂರ, ಆನೆಗುಂದಿ ಮುಂತಾದ ಶಾಸನಗಳು ಸೇರುತ್ತವೆ.

ಶಾಸನಗಳು ಪ್ರಾರಂಭದಲ್ಲಿ ದೇವತಾಸ್ತೂತಿ, ಶ್ಲೋಕ, ರಾಜರ ವರ್ಣನೆ, ಮಧ್ಯಮತ್ತು ಕೊನೆಯಲ್ಲಿ ಅವರ ಅಧಿಕಾರಿಗಳು, ಅವರ ವಂಶ, ಸಾಮಾಜಿಕ, ಆರ್ಥಿಕ ಧಾರ್ಮಿಕ, ಶಿಕ್ಷಣ ದೇವಾಲಯದಂತಹ ವಿಷಯಗಳ ಕುರಿತು ತಿಳಿಸುವ ವಿಸ್ತೃತ ಭಾಗವನ್ನು ಬೆಳೆಸಿಕೊಂಡು ಜೊತೆಗೆ ದಾನದತ್ತಿಯನ್ನು ನೀಡುವ ಸ್ವೀಕರಿಸುವವರ ವ್ಯಕ್ತಿತ್ವ, ಪ್ರದೇಶ, ಗ್ರಾಮ ವರ್ಣನೆ, ಇತ್ಯಾದಿ ವಿವರಣೆಯನ್ನು ಅಳವಡಿಸಿಕೊಳ್ಳುವಲ್ಲಿ ಶಾಸನ ರಚನೆ, ರಸ, ಭಾವ, ಛಂದಸ್ಸು ಅಲಂಕಾರ, ಭಾಷಾ ವೈವಿದ್ಯತೆ, ಕಾವ್ಯ ರಚನಾ ಕುಶಲತೆ, ಕವಿ ತೋರಿದ ಪಾಂಡಿತ್ಯ, ಪ್ರತಿಭೆ, ರೂವಾರಿಗಳು ಖಂಡಣಕಾರರ ಚಾಣಕ್ಷತನಗಳು ಮುಖ್ಯವಾಗಿ ಕಾಣಿಸಿಕೊಳ್ಳುತ್ತದೆ. ಶಾಸನದ ಮೇಲೆ ರೂವಾರಿ ಶಾಸನ ಕೆತ್ತುವಾಗ ಸೂರ್ಯ ಚಂದ್ರರಚಿತ್ರ, ಸವತ್ಸರ, ಗೋವಿನ ಚಿತ್ರಗಳು, ಗುಡಿಯ ಚಿತ್ರಗಳನ್ನು ಕೆತ್ತಲು ಪ್ರಾರಂಭಿಸಿದರು. ಇವು ದಾನ ಶಾಸನಕ್ಕೆ ಶಿಲ್ಪ ಕಲೆಗೆ ಹೆಸರಾಗಿವೆ. ಕವಿ ಶಾಸನ ರಚನೆ ಮಾಡುವಾಗ ಒಮ್ಮೊಮ್ಮೆ ಕಾವ್ಯ, ಕಥೆ, ಕಾದಂಬರಿ, ಕವನ, ಅಖಂಡ ಕಾವ್ಯರೂಪದಲ್ಲಿ ಇಲ್ಲವೆ ಗದ್ದ-ಪದ್ಯ ರೂಪದಲ್ಲಿ ಮಿಶ್ರಿತವಾಗಿ ರಚಿಸಿರುವುದು ಕಾಣುತ್ತೇವೆ. ಈ ಅಂಶವನ್ನು ಕುಕನೂರ, ಮುಧೋಳ, ಅಳವಂಡಿ, ಮಾದಿನೂರು ಇಟಗಿ ಶಾಸನಗಳು ಎತ್ತಿ ಹಿಡಿದಿವೆ.

ಇಟಗಿ ಶಾಸನವನ್ನು ನೋಡಿದರೆ ಬೆಳ್ವಲನಾಡಿನ ವರ್ಣನೆ ಶಿವ, ಬ್ರಹ್ಮ ಗಣಪತಿ, ಸರಸ್ವತಿಸ್ತೂತಿ, ದೇವಾಲಯ, ರಾಜನ ವರ್ಣನೆ ಬೇಟೆಯ ವರ್ಣನೆ ಮಾಡುವಾಗ ಕವಿಯು ಬಳಸಿಕೊಂಡ ಕಾವ್ಯಾತ್ಮಕ ಲಕ್ಷಣದಿಂದ ಇದೊಂದು ಪುಟ್ಟ ಮಹಾಕಾವ್ಯವಾಗಿ ಕಾಣಿಸುತ್ತದೆ. ಇದರಲ್ಲಿ ಮತ್ತೇಭ-ವಿಕ್ರೀಡಿತ, ಸ್ರಗ್ಧರಾ, ಮಹಾ ಸ್ರಗ್ಧರಾ, ಚಂಪಕಮಾಲಾ, ಉತ್ಪಲಮಾಲಾ ಕಂದ ಪದ್ಯಗಳು ರೂಪಕ ಉಪ ಮೇಯ ಉತ್ಪ್ರೇಕ್ಷೆ,

ಅತಿಶಯೋಕ್ತಿ ಸ್ಲೇಷ ಅಲಂಕಾರಕ್ಕೆ ಸಿಂಹಪಾಲು ದೊರಕಿಸಿಕೊಂಡಿದೆ. ವಿಕ್ರಮಾದಿತ್ಯ ಅರಸನ ದಂಡನಾಯಕ ಮಹಾದೇವ ಸಾಹಸ ಭೈರವ ವರ್ಣನೆಯಲ್ಲಿ ವೀರರಸ ನಾರಾಯಣಯ್ಯ, ಮಹಾದೇವ ಅವನ ಪರಿವಾರದಲ್ಲಿ ಭಕ್ತಿರಸ ತುಂಬಿರುವುದು. ವಿಪ್ರೋತ್ತಮರದಲ್ಲಿ ಶಾಂತಿ ರಸ ನೆಲೆಸಿದೆ, ರತಿ ರಂಭೆಯರಿಗೆ ಮಿಕ್ಕಿದ ಕಾಮಿನಿಯರಲ್ಲಿ ಮತ್ತು ವಿವಿಧ ಭಾವ ಭಂಗಿ ಯಲ್ಲಿರುವ ಶಿಲಾ ಬಾಲಕೀಯರಲ್ಲಿ ಚಿಮ್ಮಿದ ಶೃಂಗಾರರಸ ಇವೆಲ್ಲವುಗಳು ರಸಿಕರ, ಸಾಹಿತಿಗಳ ಮನಸ್ಸನ್ನು ಆಕರ್ಷಿಸುತ್ತವೆ.[೧೧೬]

ಅದೇ ರೀತಿ ಕುಕನೂರ ಶಾಸನದಲ್ಲಿ ೩ ರೀತಿಯ ಕಾಲಮಾನ, ಅರಸರ ವರ್ಣನೆ, ಕುಕನೂರ ಅಗ್ರಹಾರ, ಬ್ರಹ್ಮಪುರಿ, ದೇಶ, ನಾಡು, ಬ್ರಾಹ್ಮಣರ ವರ್ಣನೆ ಅಲ್ಲಿಯ ಜೇಷ್ಠಾದೇವಿ ಇನ್ನೂ ಅನೇಕ ದೇವರುಗಳ ಸ್ತುತಿಗಳು ಕುಕನೂರು ಬ್ರಹ್ಮಲೋಕಕ್ಕೆ ದೊರೆಯಾಗಿತ್ತೆಂದು ತಿಳಿಸುವಲ್ಲಿ ದೀರ್ಘವಾಗಿ ವರ್ಣಿಸಲ್ಪಟ್ಟ ಕಾವ್ಯ ಮತ್ತು ಗದ್ಯರೂಪದ ಸಂಸ್ಕೃತ, ಹಳಗನ್ನಡ, ಹೊಸಗನ್ನಡದಲ್ಲಿರುವುದು ಕಾಣುತ್ತೇವೆ. ಶಾಸನವನ್ನು ರಚಿಸಿದ ಗೋಮಕವಿ, ಗಂಗಿಮಯ್ಯರ ಉಲ್ಲೇಖಗಳು ಶಾಸನದಲ್ಲಿವೆ. ಇಲ್ಲಿ ಕವಿಗಿದ್ದ ಸಂಸ್ಕೃತ ಭಾಷಾ ಹಿಡಿತ ಹಳೆಗನ್ನಡದ ಬಳಕೆ ಗಮನಾರ್ಹವಾಗಿದೆ. ಶಾಸನ ತಿಳಿಸುವಂತೆ ಲಿಪಚ ಗದ್ಯಂ ॥ ಅಪಿಚವೃತ್ತಂ ॥ ತತ್ರತ್ರಶ್ಚತುರ್ದ್ದ ಶವಿದ್ಯಾಸ್ಥಾನಧಿಗತ ॥ ವೈದ್ಯಂ ಕಾವ್ಯಂ ಶಬ್ದ ವಿರ್ದ್ಯಾಂ, ಪುರಾಣ, ನೃತ್ಯ ಸಂಗೀತವಾದ್ಯಂ, ವೀರ ವಿಸ್ಮಯಕರೋ ಎಂಬಂತೆ ರಾಜನ ಸಾಹಸಗುಣಗಳನ್ನು ಶತ್ರುಗಳನ್ನು ದಮನಮಾಡುವಿಕೆ, ಶಿಕ್ಷಣ, ಇತ್ಯಾದಿಗಳ ವರ್ಣನೆ ನೀಡುವಲ್ಲಿ ಹೆಸರಾಗಿದೆ.[೧೧೭]

ಜನರ ನಿತ್ಯ ಓದಿನಿಂದ ದೂರವಿರುವ ಶಾಸನ ಸಾಹಿತ್ಯ ಕವಿ ಸಾಹಿತ್ಯದಂತೆ ಪೂರ್ವದ ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಎಂದು ವಿಭಜಿಸಿ ನೋಡುವುದಾದರೂ ಅದು ಬೆಳೆದು ಬಂದ ಪರಂಪರೆ ವಿಶಿಷ್ಟವಾಗಿದೆ. ಅದನ್ನು ನೃಪತುಂಗನ ಯುಗ, ಪ್ರಾಕೃತ ಶಾಸನಯುಗ, ಸಂಸ್ಕೃತ ಕನ್ನಡ ಶಾಸನಯುಗ, ನೃಪ-ತುಂಗೋತ್ತರ ಯುಗ (ರಾಷ್ಟ್ರಕೂಟರ ಯುಗ, ಕಲ್ಯಾಣ ಚಾಲುಕ್ಯ ಹೋಯ್ಸಳರ ಯುಗ), ಮತ್ತು ವಿಜಯನಗರ ಯುಗವೆಂದು ಸಾಹಿತ್ಯದ ಪರಂಪರೆ-ಪರಿವರ್ತನೆಗಳ ದೃಷ್ಟಿಯಿಂದ ನೊಡಲಾಗಿರುವುದು. ಇಲ್ಲಿ ಕೊಪ್ಪಳದ ಅಶೋಕನ ಶಾಸನಗಳು (ಕ್ರಿ.ಪೂ ೩೦೦) ಪ್ರಾಕೃತ ಭಾಷೆ ಬ್ರಾಹ್ಮಿ ಲಿಪಿಯಲ್ಲಿರುವವು. ಮೌರ್ಯರ ನಂತರ ಆಳ್ವಿಕೆ ನಡೆಸಿದ ಶಾತವಾಹನರ ಶಾಸನ ಸಿಗದೇ ಇದ್ದರೂ ಅವರು ಆಳಿದ ನೆಲೆಗಳಉಲ್ಲೇಖಗಳು ಪ್ರಬಂಧದ ಎರಡನೆಯ ಅಧ್ಯಾಯದಲ್ಲಿ ಬಂದಿವೆ. ಇವರ ಬಳಿಕ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಚಾಲುಕ್ಯರು, ಕದಂಬರು, ಗಂಗರು ಕರ್ನಾಟಕವನ್ನು ಆಳಿದಂತೆ ಕೊಪ್ಪಳ ಪ್ರದೇಶವನ್ನು ಆಳಿರುವುದು ರಾಜಕೀಯ ಇತಿಹಾಸದ ಅಧ್ಯಾಯದಲ್ಲಿ ಬಂದುಹೋಗಿವೆ. ಇವರ ಕಾಲದ ಶಾಸನಗಳು ಸಂಸ್ಕೃತ, ಕನ್ನಡ ಶಾಸನ ಸಾಹಿತ್ಯಕ್ಕೆ ಹೆಸರಾಗಿವೆ, ಅವುಗಳಲ್ಲಿ ತುಂಡುಗದ್ಯ ಇಲ್ಲವೆ ಬಿಡಿ ಪದ್ಯಗಳಾಗಿ ಮತ್ತು ಸಾಹಿತ್ಯ ಗುಣಕ್ಕಿಂತ ವಿಷಯ ನಿರೂಪಣೆಯತ್ತ ಒಲವೂ ಭಾಷಾ ಬಳಕೆಯ ಮೇಲ್ಮೆ ಎದ್ದು ಕಾಣುತ್ತದೆ. ಜೊತೆಗೆ ಸಂಸ್ಕೃತವನ್ನು ಬೆನ್ನು ಕಟ್ಟಿಕೊಂಡೆ ಈಜು ಬಿದ್ದ ಸಂದರ್ಭಗಳೆ ಶಾಸನಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಆದರೆ ಶಾಸನ ಶೈಲಿಯಲ್ಲಿ

ಸಮಪಾತ ಕಾಣುವುದಿಲ್ಲ. ಅದಕ್ಕೆ ಉತ್ತಮ ನಿದರ್ಶನ ಗಳೆಂದರೆ ಕುಕನೂರು ಮತ್ತು ಇಟಗಿಯ ಶಾಸನಗಳಾಗಿವೆ. ಉದಾ : ಕ್ರಿ.ಶ. ೧೧೮೩ ರ ತಾಮ್ರಪಟ ಶಾಸನ.

> ''ತಸ್ಯಾ ಶ್ರೀ ಕಸೋಬ್ರಾತಾ ಗುಣ್ಯೆ ರತ್ನಾ ಕರೋಪಮ ।
> ಅಭೂತ್ಸಂಘಣದೇವಾಖ್ಯೋ ಜಗದಾಹ್ಲಾದಕರಕ ॥ ಯಸ್ಸಾ ನಾಮೋಕ್ಷ
> ರೈರೇವಾ ಶೆರೈರಿವ ಭಯಂಕರೈ, ಪ್ರಣ ಮ್ಯಪ್ರಾಣರಕ್ಷಾ ಯೈಯತಂತೆ
> ಕೇವಲಿಂ ದ್ವಿಕ್ಷ'' । ಇತ್ಯಾದಿಯಾಗಿ ತಿಳಿಸುತ್ತದೆ.

ಒಟ್ಟಿನಲ್ಲಿ ಈ ಯುಗದ ಶಾಸನಗಳ ಬಿಡಿ ಪದ್ಯಗಳು ಸತ್ವವನ್ನೊಳಗೊಂಡಿವೆ. ಅದರೊಂದಿಗೆ ಭಾಷೆ ಛಂದಸ್ಸಿನ ಗಂಜೂ ಇದೆ ಎಂದು ಗೊತ್ತಾಗುತ್ತದೆ. ಹಲವಾರು ವರ್ಷಗಳು ಗತಿಸಿದ ಬಳಿಕ ಬಾದಾಮಿ ಚಾಲಕ್ಯರನ್ನು ಸೋಲಿಸಿ ಕ್ರಿ.ಶ. ೭೫೭ ರಲ್ಲಿ ಅಧಿಕಾರಕ್ಕೆ ಬಂದ ರಾಷ್ಟ್ರಕೂಟರು ಸಾಮ್ರಾಜ್ಯದ ವಿಸ್ತರಣೆ ಸುಭದ್ರತೆಗೆ ಗಮನಕೊಟ್ಟಿದ್ದರಿಂದ ಅಷ್ಟೊಂದು ಶಾಸನಗಳು ಈ ಜಿಲ್ಲೆಯಲ್ಲೂ ಅಲ್ಪವಾಗಿ ಕಾಣಿಸಿಕೊಂಡಿವೆ. ರಾಷ್ಟ್ರಕೂಟರ ದೊರೆ ನೃಪತುಂಗನು ಸಿಂಹಾನಕ್ಕೆ ಬಂದಾಗ ಈತನ ಸಾಮಂತರಾದ ಗಂಗಮಂಡಲದ ಶಿವಮಾರ, ವೆಂಗಿ ಮಂಡಲದ ಚಾಲುಕ್ಯ ಗುಣಕ ವಿಜಯಾದಿತ್ಯರು ಸಾಹಿತ್ಯ ಪ್ರಿಯರು ಆಗಿದ್ದರು ಹೀಗಾಗಿ ನಾಡಿನಾದ್ಯಂತ ಇವರ ಸಾಹಿತ್ಯ ಪುನರುಜ್ಜಿವನ ಪ್ರಜ್ಞೆಯಿಂದಾಗಿ ಶಾಸನ ಸಾಹಿತ್ಯ ಚರಿತ್ರೆಯಲ್ಲಿ ತೆರೆದ ನವಮನ್ವಂತರವಾಗಿದೆ. ಅಂತಹ ರಾಷ್ಟ್ರಕೂಟರ ಶಾಸನಗಳು ಕೊಪ್ಪಳ, ಇಟಗಿ, ಅರಕೇರಿ, ಸಂಕನೂರು, ಅಳವಂಡಿ, ಬೆಟಗೇರಿಗಳಲ್ಲಿ ಕಂಡುಬರುತ್ತವೆ.

ಗಂಗರ ಚರಿತ್ರೆಗೆ ಸಂಬಂಧಿಸಿದಂತೆ ಕುಕನೂರು, ಹೆಬ್ಬಾಳ, ಇಟಗಿ ಕೊಪ್ಪಳದಲ್ಲಿಯ ಶಾಸನಗಳು ನಿರ್ದಿಷ್ಟ ವಿಷಯಾನುಕ್ರಮಣಿಕೆಗೆ, ನಿಖರ ಕಾವ್ಯತೇಜತೆಗೆ ಸಹಾಯಕವಾಗಿವೆ.[೧೧೮] ನಂತರದ ಕಲ್ಯಾಣ ಚಾಲಕ್ಯರು ಕಲಚೂರಿಗಳು ಹೊಯ್ಸಳರು ವಿಜಯನಗರ ಅರಸರ ಶಾಸನಗಳು, ಬೆಳೆದು ಬಂದದು ಹಿಂದಿನ ನೆಲೆ ಗಟ್ಟಿನ ಮೇಲೆ ಎಂಬುದು ಇಲ್ಲಿ ದೊರೆತ ಶಾಸನಗಳು ಸಾಬೀತುಪಡಿಸುವಲ್ಲಿ ಯಶಸ್ವಿಯಾಗಿವೆ. ಕಲ್ಯಾಣ ಚಾಲಕ್ಯರ ಕಾಲದವರೆಗಿನ ಶಾಸನ ಪ್ರಪಂಚದಲ್ಲಿ ದ್ವೀಪದಂತೆ ತೋರಿದರೆ ನೃಪತುಂಗನ ಕಾಲಘಟ್ಟ ಇನ್ನು ಸ್ಥಿರಗೊಳ್ಳುತ್ತಿರುವ ಸಂರ್ಕೀಣ ಕಾಲವಾಗಿರುವದರಿಂದ ಕಾವ್ಯ ಪ್ರಯೋಗ ಶೀಲತೆ ನಡೆದು ಶಾಸನಗಳ ಸ್ತುತಿ, ಸಮುದ್ರದ ವರ್ಣನೆ ಅರಸು, ಗ್ರಾಮ, ದಾನ, ಫಲಶೃತಿ ಎಂಬ ಕ್ರಮ ಶಾಸನಗಳಲ್ಲಿ ತಪ್ಪದೆ ಪಾಲಿಸಿರುವಂತಿದೆ. ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳನ್ನು ನೋಡಿದರೆ ಅವುಗಳ ಸ್ವರೂಪ, ಭಾಷೆ, ಬರಹ, ತಂತ್ರ, ಇತ್ಯಾದಿಗಳಲ್ಲಿ ಖಚಿತ ರೂಪಧಾರಣ ಮಾಡಿಕೊಂಡು ಪರಮಾವಧಿ ಸಿದ್ಧಿ ಮುಟ್ಟಿದ್ದು ಕಂಡುಬರುತ್ತದೆ. ಈ ಕಾಲದ ಶಾಸನಗಳು ಪಡಿಯಚ್ಚಿನ ದಾರಿ ಹಿಡದಿರುವುದು ಕಂಡು ಬರುತ್ತದೆ. ಉದಾ : ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ವೃಥ್ವಿಲ್ಲಭಂ ಮಹಾರಾಜಾದಿರಾಜಂಪರಮೇಶರ್ವಂ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಳುಕ್ಯಭರಣಂ ಪಂಚಾಲಮದೇಭ ಪಂಚಾನನಂ ಧಾರಾ ನಗರ ಗರುಡ। ಕಾಂಚೀಪುರಸಂಹಾರ

ಕಾರಣ । ಎಂದು ಇತ್ಯಾದಿ ವಿವರಣೆ ಬರುತ್ತದೆ.[೧೯] ಅದರಂತೆ ಕ್ರಿ.ಶ. ೧೦೦೮ ರ ವಿಕ್ರಮಾದಿತ್ಯನ ಕುಕನೂರು ಶಾಸನ, ಕ್ರಿ.ಶ. ೧೦೨೪ ರ ಜಗದೇಕಮಲ್ಲನ ಗೊತಗಿ ಶಾಸನ, ಕ್ರಿ.ಶ. ೧೦೮೮ ರ ೬ ನೆಯ ವಿಕ್ರಮಾದಿತ್ಯನ ಹುಲಿಗಿ ಶಾಸನ, ಕ್ರಿ.ಶ. ೧೧೨೯ ರ ಭೂಲೋಕಮಲ್ಲನ ಕುಕನೂರ ಶಾಸನ, ಕಲ್ಲೂರಿನ ಕ್ರಿ.ಶ. ೧೧೩೨ ರ ಶಾಸನ ಹೀಗೆ ಇನ್ನೂ ಅನೇಕ ಶಾಸನಗಳಲ್ಲಿ ರಾಜರ ವರ್ಣನೆ, ಸಮುದ್ರ, ದಾನದತ್ತಿ, ನಾಡು ಇತ್ಯಾದಿ ಉಪಮೆ, ಅತಿಶಯೋಕ್ತಿ ತುಂಬಿದ್ದು ಭಾಷಾಹಿಡಿತವಿದ್ದರೂ ಕಾವ್ಯದ ಹಿಡಿತ ಕಡಿಮೆಯಾಗುತ್ತ ಶಾಸನ ಸಾಹಿತ್ಯ ಬೆಳವಣಿಗೆಯಲ್ಲಿ ಶಾಸನ ಕವಿಯ ಪಾಂಡಿತ್ಯವೇ ಹೆಚ್ಚು ಎದ್ದು ಕಾಣುತ್ತದೆ. ನಂತರದ ಕಲಚೂರಿಗಳ ಕಾಲಗಟ್ಟದಲ್ಲಿ ವಚನ ಸಾಹಿತ್ಯದ ಪ್ರದೇಶದಿಂದಾಗಿ ಶಾಸನಗಳಲ್ಲಿ ಸಾಹಿತ್ಯದಲ್ಲಿ ಬದಲಾವಣೆಗೊಂಡು ಯಾದವರ ಆಳ್ವಿಕೆಯ ಕಾಲಕ್ಕೆ ಸಂಪೂರ್ಣ ಶಾಸನ ಬದಲಾವಣೆಯಲ್ಲಿ ತಿರುವು ಪಡೆಯಲು ಕಾರಣವಾಯಿತು ಎಂಬ ಅಂಶವನ್ನು ಜಿಲ್ಲೆಯ ಶಾಸನಗಳು ಪುಷ್ಟೀಕರಿಸುತ್ತವೆ. ಹೀಗೆ ರಾಷ್ಟ್ರಕೂಟರ ಯುಗ ಶಾಸನದ ಹೊಸ ದೃಷ್ಟಿಗೆ ಕಾರಣವಾದರೆ ಕಲ್ಯಾಣ ಚಾಲುಕ್ಯರು, ಹೊಯ್ಸಳರ ಯುಗದಲ್ಲಿ ಶಾಸನ ಸಾಹಿತ್ಯದ ಬೆಳವಣಿಗೆಗೆ ಕಾರಣವಾಗಿ ನಂತರದ ಕಾಲದಲ್ಲಿ ತನ್ನ ಬೆಳವಣಿಗೆ ನಿಲ್ಲಿಸಿಕೊಂಡಿತ್ತೆಂಬ ಅಂಶ ಕೊಪ್ಪಳ ಜಿಲ್ಲೆಯ ಶಾಸನಗಳಿಂದಲೂ ತಿಳಿದುಬರುತ್ತದೆ.

ಶಾಸನಗಳಲ್ಲಿ ಮೊದಮೊದಲು ಗದ್ಯಭಾಗ ಹೆಚ್ಚಿದ್ದು ಬರುಬರುತ್ತ 'ಸಮಾಸ'ಯುಕ್ತ ಪದ್ಯ ಮತ್ತು ಗದ್ಯ ಪದ್ಯ ಮಿಶ್ರಣ ಹೆಚ್ಚಾಗಿ ಇದರಲ್ಲಿಯೇ ಕಂದವೃತ್ತಗಳು, ಪದ್ಯಗಳು ಅಧಿಕವಾಗಿರಲು ಸಾಕು. ಇದೇ ದಾಟಿಯಲ್ಲಿ ಮಹಾಜನರು, ಗ್ರಾಮ, ರಾಜರು, ದೇವಾಲಯ, ಸ್ಥಾನಾಚಾರ್ಯರು, ದೇವತೆಗಳ ವರ್ಣನೆ ಶಾಸನಗಳಲ್ಲಿ ವಿಜೃಂಭಿಸುತ್ತವೆ. ಅಂತಹ ಮಾಹಿತಿ ಕ್ರಿ.ಶ. ೧೦೦೫ ರ ಕುಕನೂರಿನ ಶಾಸನ ದಿಂದ ತಿಳಿಯುತ್ತದೆ.[೧೨೦] ಇಲ್ಲಿ ಆಡಂಬರದ ಗದ್ಯಭಾಗಗಳು ಹೆಚ್ಚು ಕಂಡುಬಂದರು ದೇಶಿಯ ಶಕ್ತಿಯನ್ನೊಳಗೊಂಡು ಬೆಳೆದ ಗದ್ಯ ಕಡಿಮೆ. ಆದರೂ ಕಾವ್ಯಗಳಲ್ಲಿಯಂತೆ ಗದ್ಯಕ್ಕಿಂತ ಪದ್ಯದ ಬಗ್ಗೆ ಹೆಚ್ಚಿನ ಒಲವು ಶಾಸನದಲ್ಲಿ ಕಾಣಿಸಿಕೊಳ್ಳುತ್ತದೆ. ಒಟ್ಟಿನಲ್ಲಿ ಶಾಸನ ಕವಿಯ ಪಾಂಡಿತ್ಯದ ಅಟ್ಟಹಾಸ, ಅತಿಶಯೋಕ್ತಿ ಆಡಂಬರ ಛಂದಸ್ಸಿನಹೊಂದಿಕೆ ಭಾವ ಪುನರುಕ್ತಿ ನುಡಿಗಟ್ಟುಗಳು ಮುಖ್ಯವಾಗಿ ಪರಿಗಣಿಸಿ ನೋಡಬಹುದಾಗಿದೆ.

ಹೀಗೆ ಶಾಸನ ಸಾಹಿತ್ಯದ ಚರ್ಚೆ ಕವಿ ಸಾಹಿತ್ಯ ಮತ್ತು ಅಧ್ಯಯನಕ್ಕೆ ಪೂರಕವಾಗಿ ಸಹಾಯವಾಗ ಬಹುದೆಂಬ ಹಿನ್ನೆಲೆಯಲ್ಲಿ ತಿಳಿದು ಕೊಳ್ಳಲು ಪ್ರಯತ್ನಿಸಲಾಗಿರುವುದು. ಜಿಲ್ಲೆಯ ಸಮಗ್ರ ಶಾಸನಗಳು ಒಂದೇ ಸಂಪುಟದಲ್ಲಿ ಬಿಡುಗಡೆ ಆದಕಾರಣ ಶಾಸನ ಬಳಕೆ ಹೆಚ್ಚಾಗಿ ಇಲ್ಲಿ ಬಳಸಿಕೊಳ್ಳಲು ಬಯಸಿಲ್ಲ ಎಂಬ ಅಂಶ ವಿದ್ವಾಂಸರು ಗಮನಿಸಬೇಕು.[೧೨೧] ಮೋದ ಮೊದಲು ಪ್ರಾಕೃತ ಆಮೇಲೆ ಸಂಸ್ಕೃತ ಆಯಾ ಪ್ರಾಂತಕ್ಕೆ ಸಂಬಂಧಿಸಿದಂತೆ ಮಾತೃಭಾಷೆಗಳಲ್ಲಿ ಗ್ರಂಥಭಾಷೆಗಳು ಹುಟ್ಟಿಕೊಂಡು ಪ್ರತಿಯೊಂದು ಶಾಸ್ತ್ರಕ್ಕೆ ಪಾಭಾಷಿಕ ಪದಗಳು ಅವಶ್ಯಕವೆನಿಸಿ ಕವಿಯು ಪರಿಭಾಷಿಕ ಶಬ್ದಗಳನ್ನೆ ಬಳಸಿಕೊಂಡು ಪರಿಭಾಷೆ ಶಾಸ್ತ್ರ ಬೆಳೆಸಿಕೊಂಡು ಬಂದಂತೆ ಕಾವ್ಯಶಾಸ್ತ್ರ ಬೆಳೆದು ಬಂದಿರಬೇಕು. ಕಾವ್ಯ ಜನಜೀವನದ ಸಂಭವನೀಯ ಘಟನೆಗಳ ಕಲಾತ್ಮಕ

ಅಭಿವ್ಯಕ್ತಿಯಾದರೆ ಶಾಸನಗಳು ಸಂಭವಿಸಿದ ಘಟನೆಗಳ ದಾಖಲೆಗಳಾಗಿ ಹೊರಹೊಮ್ಮಿವೆ. ಇಂಥ ಬೇರೆ ಬೇರೆ ಘಟನೆಗಳೊಂದಿಗೆ ಬಳಕೆಯಾಗಲ್ಪಟ್ಟ ಪದಗಳು ಶಾಸನದಲ್ಲಿ ನೇರವಾಗಿ ಇಳಿದು ಬಂದಿರುವುದು ಗಮನಕ್ಕೆ ಬರುತ್ತದೆ. ಉದಾ : ಮಹಾಮಂಡಳೇಶ್ವರ, ಸಾಮಂತ, ದಂಡನಾಯಕ, ಮಹಾದಂಡ ನಾಯಕ, ಅಮಾತ್ಯ, ಮಹಾಮಾತ್ಯ ಸಂಧಿವಿಗ್ರಹಿ-ಮಹಾಸಂಧಿ ವಿಗ್ರಹಿ, (ಕನ್ನಡ ಸಂಧಿ ವಿಗ್ರಹಿ), ಗಾವುಂಡ,-ನಾಳ್ಗಾವುಂಡ, ಕರಣ-ಶ್ರೀಕರಣ, ಕುಳಕರಣಿ-ಸೇನಭೋವ, ರಾಜ್ಯ-ದೇಶ, ನಾಡು-ನಾಟ್ಯ ಕಂಪಣ, ವೆಂಠೆ, ಆಹಾರ, ಮಂಡಲ ಸೀಮೆ, ರಾಜಧಾನಿ, ಬೆಳ್ವಲ, ಪುಲಗೇರಿ, ಕಿಸುಕಾಡು ನಾಡು, ಕುಂತಳ ದೇಶ, ಕೋಪಣವೆಂಟೆ, ತೀಥಿ, ವಾರ, ನಕ್ಷತ್ರ, ಲೆಂಕಸಾಸಿರ್ವರು, ಚೋಳ, ವಾಳಿ, ಅಂಗಭೋಗ-ರಂಗಭೋಗ, ಚೈತ್ರ-ಪವಿತ್ರ, ಆಚಾರ್ಯ-ಸೂಳೆ, ಭಾವಿ-ಕೆರೆ, ಕಾಲುವೆ, ಸಂಘಗಚ್ಛ, ಸಮಾಧಿ, ನೊಂಪಿ, ಷಡಂಗಿ, ಪೈಸಾಸ, ಬಟ್ಟ-ಭಟ್ಟೋಪಾಧ್ಯಾಯ, ಗೋತ್ರ, ಅಗ್ರಹಾರ ಬ್ರಹ್ಮಪೂರಿ, ಘಟಿಕಾಸ್ಥಾನ ನೈಷ್ಠಿಕ, ಗೊರವ, ಮುಮ್ಮರಿ ದಂಡ, ಅಯ್ಯಾವೊಳೆ ಗವಜೆ, ಸ್ಥಾನಪತಿ ಬ್ರಹ್ಮಚಾರಿ, ನಖರ, ಬಣಂಜಿಗರು, ಶೆಟ್ಟಿಗಳು, ಪಣ,ಹಾಗ, ದ್ರಮ್ಮ, ವೀಸ, ಮತ್ತರ, ರಗಳೆ, ಗೇಣು, ಕೋಲು, ಮಾಣಿಕ, ಗದ್ದೆ, ಕೆಯ, ತೋಂಟ, ಗಾಣ, ಮಾನ, ಎಣ್ಣೆ ಸುಂಕ ತಳಾರ ಸುಂಕ, ಪನ್ನಾಯ, ಅಕ್ಕಸಾಲಿಗ, ಗದ್ಯಾಣ, ಭತ್ತಾ, ಅರಸ, ಜವಳ, ಅಲ್ಲ, ಎಲೆ, ಲಿಪಿಕಾರ, ರೂವಾರಿ, ಕಂಚಗಾರ, ಕಮ್ಮಾರ, ಶಿಲ್ಪಿ, ಬಡಗಿ, ಆಚಾರಿ ಇತ್ಯಾದಿ ಪಾರಿಭಾಷಿಕ ಶಬ್ದಗಳ ಬಳಕೆಯಾಗಿರುವುದು ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಕಂಡುಬರುತ್ತದೆ. ಇದಕ್ಕೆಲ್ಲಾ ಲಿಪಿಗಳ ಬಳಕೆ ಮಾನವತೆಯ ಜೀವ ವಿಕಾಸ ಕ್ರಮದಲ್ಲಿ ಮಾತು ಒಂದು ಸಿದ್ಧಿಯಾದರೇ ಈ ಮಾತಿಗೆ ಇನ್ನೊಂದು ಸಿದ್ಧಿ ಎಂಬಂತೆ ಈ ಭಾಗದ ಶಾಸನಗಳಲ್ಲಿ ಪ್ರಾಕೃತ ಭಾಷೆಯ ಬ್ರಾಹ್ಮಲಿಪಿ ಮೂಲವಾಗಿ ಬೆಳೆದು ಆಯಾ ಅರಸರ ಆಳ್ವಿಕೆಯ ಕಾಲದಲ್ಲಿ ಹಳೆಗನ್ನಡ ಸಂಸ್ಕೃತ, ಕನ್ನಡ ಭಾಷೆಯನ್ನು ಕವಿಗಳ ಬಳಸಿ ಶಾಸನಗಳನ್ನು ಬರೆದಿರಬೇಕು ಅದನ್ನೆ ರೂವಾರಿಗಳು ಕಲ್ಲ ಮೇಲೆ ತೀಡಿ ಬರೆದಿರಬೇಕು ಇಲ್ಲವೆ ರೂವಾರಿ ಶಿಲ್ಪಿ ಖಂಡರಣೆ ಮಾಡುತ್ತಿದ್ದ. ಲಿಪಿಕಾರ ತಿಡಿ ಬರೆಯುತ್ತಿದ್ದ. ಇವರೆಲ್ಲರ ಸಹಯೋಗದಿಂದಲೇ ಶಾಸನಗಳು ರಚನೆಗೊಂಡಿವೆ. ಅಂತಹ ಮೂಲಾಕಾರಗಳ ನಿರ್ಮಾಣಕ್ಕೆ ಕಾರಣರಾದ ಅವರ ಕುರಿತು ತಿಳಿಯುವುದು ಬಿಟ್ಟರೆ ಪ್ರಬಂಧ ಪೂರ್ತಿಗೊಳ್ಳುವುದಿಲ್ಲವೆಂದೆನಿಸಿ ಈ ಶಾಸನ ಕವಿಗಳು ರೂವಾರಿಗಳು, ಲಿಪಿಕಾರರ ಕುರಿತು ಕೆಳಗೆ ಚರ್ಚಿಸಲಾಗಿದೆ.

**ಶಾಸನ ಕವಿಗಳು**

ಕನ್ನಡ ಶಾಸನ ಸಾಹಿತ್ಯ ಪ್ರಪಂಚಕ್ಕೆ ಹೊಸ ತಿರುವು ಒದಗಿಸಿಕೊಟ್ಟವರು ಶಾಸನ ಕವಿಗಳು. ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಚರಿತ್ರೆಯ ರಚನೆಗೆ ದಾಖಲೆಗಳಾದ ಶಾಸನಗಳನ್ನು ತಮ್ಮ ಪ್ರತಿಭಾ ಸ್ಪರ್ಶದಿಂದ ಸಾಹಿತ್ಯವನ್ನಾಗಿಸಿದ ಕವಿಗಳ ಸಂಖ್ಯೆ ಕರ್ನಾಟಕದಲ್ಲಿ ಅಧಿಕ ವಾಗಿತ್ತೆಂಬ ಅಂಶ ಜಿಲ್ಲೆಯ ಶಾಸನ ಕವಿಗಳ ಅಧ್ಯಯನದಿಂದ ಸ್ಪಷ್ಟಗೊಳ್ಳುತ್ತದೆ. ಈಗಾಗಲೆ ಡಾ. ಆರ್.ನರಸಿಂಹಚಾರ್ಯರು ರಚಿಸಿದ 'ಕವಿಚರಿತೆ' ಮೆವುಂಡಿ ಮಲ್ಲಾರಿಯವರು ''ಶಾಸನಕವಿಗಳ ಚರಿತ್ರೆ'' ಎಂಬ ಗ್ರಂಥಗಳನ್ನು ಹೊರ ತಂದಿರುವರಾದರು ಇನ್ನೂ ಅನೇಕ ಮೂಲಗಳಿಂದ ಬೆಳಕಿಗೆ ಬಂದ ಜಿಲ್ಲಾವಾರು ಶಾಸನಗಳನ್ನು ಅಧ್ಯಯನ ಮಾಡಿದಾಗ ಹಲವಾರು ಹೊಸ

ಕವಿಗಳ ಇತಿಹಾಸ ಬೆಳಕಿಗೆ ಬರುತ್ತದೆ. ನಮಗೆ ಲಭ್ಯವಿರುವ ಕೊಪ್ಪಳ ಜಿಲ್ಲೆಯ ಶಾಸನಗಳನ್ನು ಪರಿಶಿಲನೆಮಾಡಿ ನೊಡಲಾಗಿ ೧೮ ಜನ ಶಾಸನ ಕವಿಗಳ ಸುಳಿವು ನಮಗೆ ದೊರಕುತ್ತದೆ. ಅವರ ಜೀವನ ಬದುಕಿನ ಬಗ್ಗೆ ಶಾಸನಗಳು ಮೌನ ವಹಿಸಿರುವುದು ಕಂಡು ಬಂದರು ಅವರ ಪ್ರತಿಭೆ, ಸಾಮರ್ಥವನ್ನು ತಿಳಿಯಲು ಶಾಸನಗಳಿಂದ ಸಾಧ್ಯವಾಗುತ್ತದೆ. ಆದರೆ ಶಾಸನ ಶಿಲಾಬರಹಗಳನ್ನು ಸ್ಥಳಿಕವಾದ ಅಂದಿನ ಆಳರಸರ ಆಜ್ಞಾನುಸಾರವಾಗಿ ಬರೆದುದರಿಂದಲೂ ಅಥವಾ ಇವರು ನೇಮಕಮಾಡಿದ ಕವಿಗಳು ಬರೆದಿರುವುದರಿಂದಲೆ ಸಾಹಿತ್ಯ ಚರಿತ್ರೆಯಲ್ಲಿ ದೊರಕಬಹುದಾದ ಸ್ಥಾನಮಾನಗಳು ಲಭ್ಯವಾಗದೇ ಉಳಿದಿರುವಂತೆ ಕಂಡುಬರುವುದು. ಶಾಸನ ಬರವಣಿಗೆಯ ವ್ಯವಸ್ಥೆಯಲ್ಲಿ ಮಾತ್ರ ಶಾಸನ ಕವಿಗಳಿಗೆ ವಿಶಿಷ್ಟ ಸ್ಥಾನವಿದೆ ಎಂಬುದನ್ನು ಅವರು ರಚಿಸಿದ ಶಾಸನಗಳಿಂದ ತಿಳಿದುಕೊಳ್ಳುವುದು ಸೂಕ್ತ.

### ೧. ಕವಿ ಇನ್ದಯ್ಯ

ಕ್ರಿ.ಶ. ೯೭೭ರ ಕೊಪ್ಪಳ ಶಾಸನವನ್ನು ಕವಿ ಇನ್ದಯ್ಯ ಬರೆದಿರುವುದಾಗಿ ತಿಳಿಸಿದೆ. ಈ ಶಾಸನವನ್ನು ಕನ್ನಡ ಸಂಸ್ಕೃತ ಭಾಷೆಯನ್ನು ಬಳಸಿ ೬೬ ಸಾಲುಗಳಲ್ಲಿ ಬರೆಯಲಾಗಿದೆ. [೨೨]

### ೨. ಮೋಜಾಳಿ ಸೇಷಯ್ಯ

ಈ ಕವಿಯ ಕುರಿತು ಕ್ರಿ.ಶ. ೧೦೦೨ ರ ಬಳಗೇರಿ ಶಾಸನ ತಿಳಿಸುತ್ತಿದ್ದು [೨೩] ಶಾಸನ ೨೨ ಸಾಲುಗಳಲ್ಲಿದ್ದು ಸಂಸ್ಕೃತ ಶ್ಲೋಕ-ಹಳೆಗನ್ನಡ ಶಬ್ದಗಳ ಮಿಶ್ರಿತದಲ್ಲಿ ರಚನೆಯಾಗಿದೆ.

ಶಾಸನ ''ಸ್ವದತ್ತಾಂ ಪರದತ್ತಾಂ(ವಾ) ಯೋ, ಹರೇತಿ ವಸುನ್ದರಾ ಷಷ್ಟಿರ್ವ್ವರ್ಷ ಸಹಸ್ರಾಣಿ ವಿಷ್ಠಾಯಾಂ ಜಾಯತೆ ಕ್ರಿಮಿ ||ಕಂ|| ಬಿರುದರ ಪೆಣ್ಡಿರಗಣ್ಡ ಮರಳೋ(೦)...ಗೆಲ್ವ - ಪಂಡಿತ ವಾಕ್ಯಂ ವರವೃದ್ಧಪುರ(ದ) ಸಾಸಿರ್ವ್ವರು ಹೇಳಿ ಮೋಜಾಳಿ ಸೇಷಯ್ಯನ ಲಿಖಿತಂ ಮಂಗಳಂ ಶ್ರೀ'' ಎಂದು ಶಾಸನ ಬರೆದ ಕವಿಯ ಬಗ್ಗೆ ತಿಳಿಸುವಲ್ಲಿ ಶಬ್ದಗಳ ಭಾಷಾ ಬಳಕೆಯ ಮಹತ್ವವನ್ನು ಗುರುತಿಸಬಹುದು.

### ೩. ಕವಿ ಪಿಟ್ಟೋಜ

ಕ್ರಿ.ಶ. ೧೦೯೯ ಮತ್ತು ೧೦೨೮ರ ಕಾಲಮಾನ ತಿಳಿಸುವ ಶಾಸನವನ್ನು 'ಕವಿ ಪಿಟ್ಟೋಜನು' ಗದ್ಯ ಪದ್ಯಮಿಶ್ರಿತವಾಗಿ ಹಳೆಗನ್ನಡ ಭಾಷೆಯಲ್ಲಿ ಕಾವ್ಯಾತ್ಮಕವಾಗಿ ವರ್ಣಿಸಿ ಶಾಸನವನ್ನು ೪೭ ಸಾಲುಗಳಲ್ಲಿ ರಚಿಸಿರುವನು. [೨೪]

### ೪. ಕವಿ ಸಮನ್ತ ಭದ್ರಭೂಮಿರ

ಕ್ರಿ.ಶ. ೧೦೨೩ರ ಶಾಸನವನ್ನು ''ಶ್ರೀಮನ್ನರೆನ್ದ್ರಸೇನ್ ಪಂಡಿತರಗ್ರಶಿಷ್ಯರ್ಸ್ಸಮನ್ತ ಭದ್ರಭೂಮಿರರ್ಕ್ಕಲ್ಲೊಳಕ್ಕರಮಂ ಬರೆದು ಕಲ್ಲ ನಿರೆಸಿದರ್'' ಎಂದು ಕವಿ ಬಗ್ಗೆ ಉಲ್ಲೇಖಿಸುವಶಾಸನ ಹಳಗನ್ನಡ ಪದ್ಯ ಶೈಲಿಯಲ್ಲಿ ೫೫ ಸಾಲುಗಳಲ್ಲಿ ಅಜೀತ ಸೇನಾಚಾರ್ಯನ ವರ್ಣನೆ ಮಾಡುತ್ತದೆ. [೨೫]

**೫. ವೀರನಂದಿಮುನಿಂದ್ರಕವಿ**

ಕ್ರಿ.ಶ. ೧೦೫೧ರ ಕೊಪ್ಪಳ ಶಾಸನವನ್ನು ದೇಸಿಗಣದಲ್ಲಿ ಜೀನಕವಿ ವೀರನಂದಿಮುನೀಂದ್ರನು ಬೆಳಗಿದನು. ಈ ಮುನಿಯ ಶಿಷ್ಯ ಮಾಳಿಯಬ್ಬೆ ಈ ಶಾಸನ ಹಾಕಿಸಿದಳೆಂದು ಉಲ್ಲೇಖಿಸುತ್ತದೆ.[೧೨೬] ಮತ್ತು ಹಳೆಗನ್ನಡ - ಕನ್ನಡ ಮಿಶ್ರಿತವಾಗಿ ಅಲ್ಲಲ್ಲಿ ಸಂಸ್ಕೃತದ ಒಂದೊಂದು ಶಬ್ದ ಶಾಸನದಲ್ಲಿ ಬಳಕೆಯಾಗಲ್ಪಟ್ಟಿದೆ.

**೬. ಮಲ್ಲಕವಿ**

ಕಲ್ಯಾಣಚಾಲುಕ್ಯರ ಅರಸ ತ್ರೈಲೋಕ್ಯಮಲ್ಲದೇವನ ಕ್ರಿ.ಶ. ೧೦೬೧ ರ ಅಳವಂಡಿ ಶಾಸನವನ್ನು ಮಲ್ಲಕವಿ ಬರೆದನೆಂದು ಶಾಸನ ಹೇಳುತ್ತದೆ.

''ರಾಮಭದ್ರ ಹರಚರಣ ಕಮಳಭಕ್ತ ಪರಮಾರ್ತ್ಥಂ
ಕರುವ ಗುಲುಗನಣಿಗಿರ ಪುತ್ರಂ ನಿರುತಂ ಕರುವರ
ಬಮ್ಮರ್ಂ ಬರೆಯಿಸಿದಂ ಬರೆದ ಮಲ್ಲನೀಶಾಸನಂ॥
ಗುಲಮಯ್ಯಂ ಸೋಮನಾಥ ದೇವನ ಖಣ್ಡರ''

ಎಂದು ಉಲ್ಲೇಖಿಸುವುದು.[೧೨೭] ಈಶಾಸನ ಕವಿಯ ತಂದೆ ಮತ್ತು ಕವಿಯನ್ನು ಕುರಿತು ''ಕರುವ ಬಮ್ಮರ್ಯ್ಯ ನಾಲ್ಙೂರ್ವ್ವರ ದಾಸಿ ಪರನಾರಿಪುತ್ರಂ ಗೋತ್ರ ಪವಿತ್ರ ಶಿವನ ದಾಸಿಸುಪುತ್ರಂ ಕುಳದೀಪಕಸೆನಿಸಿ ನೆಗಳ್ದಿಂ॥'' ಎಂದು ವರ್ಣಿಸುವಮೂಲಕ ತಂದೆ ಕರುವ ಗುಲ್ಲಿಮಯ್ಯನು ಅಳವಂಡಿ ಗ್ರಾಮದ ಮುಖ್ಯ ವ್ಯಕ್ತಿಯಾಗಿದ್ದ ಆಗ ಮಗನು ಈ ಊರಿನ ಮಠಕ್ಕೆ ತಂದೆಯ ಕಾರ್ಯಗಳನ್ನು ಮುಂದುವರೆಸಿ ವಸತಿ ಸತ್ರಕ್ಕೆ ೧೮ ಮತ್ತರು, ದೇವರಿಗೆ ೫ ಮತ್ತರು, ಮಠಕ್ಕೆ ಎರೆಮತ್ತರು ದಾನ ನೀಡಿ ಈ ಶಾಸನ ಬರೆಯಲು ಮಲ್ಲಕವಿಗೆ ಹೇಳಿರಬೇಕು. ಅದರಂತೆ ಈ ಶಾಸನ ರಚಿಸಿದನು. ಸೋಮನಾಥನು ಕಲ್ಲಿನ ಮೇಲೆ ಕೆತ್ತಿದನೆಂದು (ಖಣ್ಡರ ಮಾಡಿದನೆಂದು) ತಿಳಿಯುತ್ತದೆ. ಈ ಕವಿ ದ್ರುಹಿಣನೆಂಬ ಕವಿತೆಯಂತೆ ಗದ್ಯ-ಸಂಸ್ಕೃತ ಕಾದಂಬರಿ ಕರ್ತೃವಾದನೆ ಬಾಣಕವಿಯ ಗದ್ಯದಂತೆ ಮಿಗಿಲಾದುದೆಂದು ಇದ್ವಾಂಸರೊಬ್ಬರು[೧೨೮] ಬೇರೆ ಬೇರೆ ಕಡೆ ಉಲ್ಲೇಖ ಬರುವ ಈ ''ಮಲ್ಲಕವಿ''ಯ ಕುರಿತು ಚರ್ಚಿಸುವಲ್ಲಿ ವಿಷಯ ತಿಳಿಯಪಡಿಸಿದ್ದಾರೆ. ಈ ಕವಿ ವಿರಚಿತ ಶಾಸನ ಪದ್ಯರೂಪದ ಕನ್ನಡ ಭಾಷೆ೩೮ ಸಾಲುಗಳಲ್ಲಿ ರಚಿತಗೊಂಡಿದೆ.

**೭. ವೀರೇಶಮೂರ್ಧನಿಕವಿ (ಕ್ರಿ.ಶ. ೧೧೦೮)**

ಚಾಳುಕ್ಯ ಅರಸ ೬ನೇ ವಿಕ್ರಮಾದಿತ್ಯನು ಕ್ರಿ.ಶ. ೧೧೦೮ರ ತನ್ನ ಆಳ್ವಿಕೆಯ ಕಾಲದಲ್ಲಿ ಈತನ ದಂಡನಾಯಕನಾದ ಮಹಾದೇವ ದಂಡನಾಯಕನು ಇಟ್ಟಗೆಯಲ್ಲಿ ತನ್ನ ಹೆಸರಿನಿಂದ ಮಹಾದೇವ ದೇವಾಲಯ ಕಟ್ಟಿಸಿ ಅದರ ಅಂಗಭೋಗ, ವೇದೋಪನಿಷತ್ತುಗಳ ಅಧ್ಯಯನ ಅಲ್ಲಿಯ ಮಹಾಜನರಿಗೆ ಪೂಜೆ ಸತ್ರಾದಿಗಳಿಗೆ ವಿಕ್ರಮಾದಿತ್ಯ ಅರಸನ ಸರ್ವನಮನಸ್ಯವಾಗಿ ದಾನದತ್ತಿ ನೀಡಿರುವುದಾಗಿ ಹೇಳಿದೆ.[೧೨೯] ದೇವಾಲಯದ (ಅಗ್ರಹಾರ) ವರ್ಣನೆ ವಿವಿಧ ನಾಡು, ಕುಂತಳದೇಶ, ಬೆಳ್ವಲನಾಡು, ನೆರೆಯಂಗಲ್ಲು

ವಿಭಾಗಗಳಿಂದ ಸುತ್ತುವರೆಯಲ್ಪಟ್ಟ ಇಟ್ಟಿಗೆಯ ಉಲ್ಲೇಖ, ಚಾಳುಕ್ಯರ ವಂಶಾವಳಿ, ಬೆಣ್ಣೆಕಲ್ಲು ತೋಟಗಳನ್ನು, ಗ್ರಾಮಗಳನ್ನು ಬ್ರಾಹ್ಮಣರ ಕರ್ತವ್ಯಗಳನ್ನು ಸವಿಸ್ತಾರವಾಗಿ ವರ್ಣಿಸುವಲ್ಲಿ ಕವಿಯು ತನ್ನ ಕಾವ್ಯಮಯವಾದ ಶೈಲಿ, ಭಾಷಾ ಸಾಮರ್ಥ್ಯ, ಪಾಂಡಿತ್ಯವನ್ನು ಮೆರೆದಿದ್ದಾನೆ. ಆತನು ಬಳಸಿದ ಶಾಸನೋಕ್ತ ಶ್ಲೋಕಗಳನ್ನು ಇಲ್ಲಿ ಗಮನಿಸಬೇಕು.

''ಬಹು ಭಿರ್ವ್ವಸುಧಾ ಭುಕ್ತ ರಾಜಭಸ್ಸಗರಾದಿಭಿಃ ಯಸ್ಯ ಯಸ್ಯಯಧಾ
ಭೂಮಿಸ್ತಸ್ಯ ತದಾ ಫಲಂ॥
ಸ್ವದತ್ತಂ ಪರದತ್ತಂ ವಾಯೋಹರೇತ ವಸುಂಧರಾಂ॥
ಷಷ್ಠಿಂ ವರ್ಷ ಸಹಸ್ರಾಣಿ ವಿಷ್ಠಾಯಾಂ ಜಾಯತೆ ಕ್ರಿಮಿಃ॥
ಸುವರ್ಣ್ಣಮೇಕಂ ಗ್ರಾಮೇಕಂ ಭೂಮೇರಪ್ಯೇಕ ಮಂಗಲಂ॥
ಸಾಮಾಸ್ಯೋಯಂ ಧರ್ಮಸೇತುರ್ ನಿವಾಣಾಂ
ಕಾಲೆ ಕಾಲೇ ಪಾಲನೀಯೋಭವದ್ಭಿಖಃ
ಸರ್ವ್ವೇನೇ ತಾನ್ಬಾಗಿನಃ ಪಾರ್ಥಿವೇಂದ್ರಾನ್ಭೂಯೋ''
ಭಾಯೋ ಯಾಚತೇ ರಾಮಭದ್ರ॥ ಎಂಬ ಸಂಸ್ಕೃತ ಶ್ಲೋಕ ಶಾಸನದ ಕೊನೆಯಲ್ಲಿ ಈ

ಶಾಸನ ಕವಿಯ ವಂಶ ಸ್ವನಾವೊಲ್ಲೇಖಿಕನಗಳನ್ನು ಸಂಸ್ಕೃತದಲ್ಲಿ ಕೆಳಗಿನ ಪದ್ಯದಲ್ಲಿ ಕಾಣುತ್ತೇವೆ.

ಮದ್ವಂಶಜಾಪ್ಪರಮಹೀಪತಿ ವಂಶಜಾಂವಾಪಾಪಾದಪೇತಮನಸೋ
ಭುವಿಭೂಮಿ ಪಾಳಾಃ ಯೇ ಪಾಲಯಂತಿ
ಮಮಧರ್ಮಮಿಮಂ ಸಮಸ್ತಂ ತೇಭ್ಯೋ
ಮಯಾ ವಿರಚಿತೋಂಜಲಿವೀರೇಷ ಮೂರ್ಧನಿ''

ಎಂದು ಕವಿಯ ಹೆಸರನ್ನು ಸಹ ಸ್ಪಷ್ಟವಾಗಿ ಉಲ್ಲೇಖಿಸಿರುವುದನ್ನು ಇಲ್ಲಿ ಗಮನಿಸಬಹುದು.

೮೯ ಸಾಲಿನಲ್ಲಿ ರಚನೆಗೊಂಡ ಈ ದೊಡ್ಡಶಾಸನ ಪ್ರಾರಂಭದಲ್ಲಿ ಹಳೆಗನ್ನಡ, ಕನ್ನಡ ಮಿಶ್ರಿತ ಗದ್ಯ ರೂಪದಲ್ಲಿದ್ದು ಇಟ್ಟಿಗೆ ಅಗ್ರಹಾರದ ವರ್ಣನೆ, ಬ್ರಾಹ್ಮಣರವರ್ಣನೆ, ನಿಸರ್ಗದ ವರ್ಣನೆ ದೇವಾಲಯದ ವರ್ಣನೆ ಇತ್ಯಾದಿಗಳು ಕವಿಯ ಕಾವ್ಯತ್ವದ ಪ್ರಭುತ್ವ, ಭಾಷಾ ಪ್ರೌಢಿಮೆಯನ್ನು ಗುರುತಿಸಲು ಸಾಧ್ಯವಾಗಿದೆ.

ಕಾವ್ಯಗಳಲ್ಲಿ ೧೮ ವರ್ಣನೆಗಳಿದ್ದು ಅದು ಕಾವ್ಯ ಲಕ್ಷಣಗಳಿಂದ ಕೂಡಿದ್ದರೆ, ಮಹಾಕಾವ್ಯವೆನಿಸುವುದು. ಈ ಶಾಸನ ಕಾವ್ಯದಲ್ಲಿ ಬೇಟೆಯ ವರ್ಣನೆಯನ್ನುಳಿದು, ಉಳಿದ ಎಲ್ಲಾ ವರ್ಣನೆಗಳು ಕಾವ್ಯಲಕ್ಷಣಗಳಿಂದ ಕೂಡಿರುವುದರಿಂದ ಇದು ಪುಟ್ಟ ಮಹಾಕಾವ್ಯ ಎಂದೆನಿಸುವುದರಲ್ಲಿ ಯಾವಸಂದೇಹವೇ ಇಲ್ಲ. ಮತ್ತೇಭ ವಿಕ್ರೀಡಿತ, ಸ್ರಗ್ಧರೆ, ಮಹಾಸ್ರಗ್ಧರೆ, ಚಂಪಕ ಮತ್ತು ಚಂಪಕಮಾಲಾ ಇವುಗಳ ಬಳಿಕೆ ಉತ್ಪಲಮಾಲಾ ಮತ್ತು ಚಂಪಕಮಾಲಾ ಇವು ಹೆಚ್ಚಿನ ಸಂಖ್ಯೆಯಲ್ಲಿವೆ. ಕಂದಪದ್ಯಗಳು ಮತ್ತು ಕಾವ್ಯಮಯ ಗದ್ಯ. ರೂಪಕ,

ಉಪಮೇಯ ಉತ್ಪ್ರೇಕ್ಷೆ, ಅತಿಶಯೋಕ್ತಿ ಶ್ಲೇಷ ಅಲಂಕಾರ ಇತ್ಯಾದಿಗಳು ಕಾಣಿಸಿವೆ. ಶ್ಲೇಷ ಅಲಂಕಾರಕ್ಕೆ ಸಿಂಹಪಾಲು ದೊರಕಿದೆ.[೧೩೦] ಶಾಸನದಲ್ಲಿ ಸಂಸ್ಕೃತ ಪದಗಳ ಬಳಕೆಯಿಂದ ರನ್ನ ಭಾಷಾ ಸಂಪತ್ತು ಲಿಪಿಗಳ ಮಾರ್ಪಟುಗಳಾಗಿವೆ. 'ಎನ್ದನೂರು, ಕುಣ್ದ, ಕುಣ್ಡಾನ್ವಯ' ಈ ಪದಗಳಲ್ಲಿರುವ 'ನ' ಮತ್ತು 'ಣ' ಗಳ ಬದಲಾಗಿ ಅನುಸ್ವಾರ (೦)ಬಳಕೆ 'ರ' ಮತ್ತು 'ಳ' ಹೀಗೆ ಸಂಸ್ಕೃತ ಹಳೆಗನ್ನಡ ಮಿಶ್ರಿತ ಶಾಸನ ಕಬ್ಬಿಣದ ಕಡಲೆ ಆಗಿದೆ ಎಂಬುದನ್ನು ಕೆಳಗಿನ ನುಡಿಯಿಂದ ತಿಳಿಯಲಾಗಿದೆ.

''ಆಡುವ ಸೋಗೆ ಪಾಡುವಳಿಗಲ್, ನಡೆದಾಡುವ ಹಂಸೆ ಪಂಚಮಂ
ಬಾಡುವ ಗಣ್ಡ ಗೋಗಿಲೆ ಕೆಲನ್ನುಡಿದಂತು ಟ ನಾಗಳಂತೆಮಾ
ತಾಡುವ ರಾಜಕೀರ ಪೊಲವರ್ಕಿಸಲಾರದಗಲ್ದು ಪೂವಿನಂ
ಬಾಡೆ ಲತಾವ ನಂಬುಗುವನಲ್ಲ ವರಲ್ಲಿಯ ನಂದನಂಗೊಳ್''

ಇಲ್ಲಿ ಕನ್ನಡ ನುಡಿಗಳ ಸತ್ವವನ್ನು ಕಾಣಬಹುದು. ಶಾಸನ ರಚನೆ, ವ್ಯಾಕರಣ, ಛಂದಸ್ಸು, ಅಲಂಕಾರ, ಕನ್ನಡ ಸಂಸ್ಕೃತ ಪದಗಳ ಬಳಕೆ, ಭಾಷೆಯ ಮೇಲಿನ ಪ್ರಭುತ್ವ ಇವು ಶಾಸನ ಕವಿಯ ಆಳವಾದ ಅಧ್ಯಯನ ಮತ್ತು ಪ್ರತಿಭೆಯನ್ನು ತಿಳಿಸುತ್ತವೆ. ಲಿಪಿಗಳಲ್ಲಿ ಕಡಿಮೆ ದೋಷಗಳಿದ್ದ ಕಾರಣ ಲಿಪಿಕಾರನು ಸಹ ವಿದ್ವಂಸನಾಗಿರುವನೆಂದು ತಿಳಿಯುತ್ತದೆ. ಲಿಪಿಕಾರನ ಶುದ್ಧ ಭಾಷೆ ಅಂದ ಕೆತ್ತನೆ ಶಾಸನಕ್ಕೆ ಮೆರಗು ನೀಡಿದೆ. ಇದು ಅಧ್ಯಯನಶೀಲರಿಗೆ ಅಪೂರ್ವ ಕೊಡುಗೆ ಆಗಿದೆ ಎನ್ನಬಹುದು.

## ೮. ಸಜ್ಜನತಿಲಕ

ಈ ಕವಿಯ ಕುರಿತು ಕುಕನೂರಿನ ಶಾಸನ
''ಪಲಬರ ಪೊಗಳಲಗಸ್ತ್ಯರ ಕುಳತಿಳಕಂ
ನೆಗಳ್ದ ಸುಕವಿ ಪರಮಾ - ಸುತಂ ನಲವಿಂ ಪೇಳ್ದಂ

ಸಜ್ಜನ ತಿಲಕನೆನಲು ಮೆಚ್ಚನಾವನೀ ಶಾಸನಮಂ'' ಎಂದು ವರ್ಣಿಸುವುದು. ಇದು ರಾಯಮುರಾರಿ ಸೋಮೇಶ್ವರನ ಕ್ರಿ.ಶ. ೧೧೭೦ರ ಕಾಲದಲ್ಲಿ ರಚಿಸಲ್ಪಟ್ಟ ೭೮ ಸಾಲಿನ ಶಾಸನವಾಗಿದೆ.[೧೩೧]

ಶಾಶನದ ಕೊನೆಯ ಪದ್ಯದಲ್ಲಿ ''ಕವಿ ಸಜ್ಜನ ತಿಲಕ'' ಎಂಬ ಪ್ರಶಸ್ತಿಯನ್ನೊ ಅಥವಾ ಸಚ್ಚಾರಿತ್ರ್ಯವನ್ನು ಸೂಚಿಸುವ ವಿಶೇಷಣವನ್ನು ಆತನ ತಂದೆಯ ಗೋತ್ರವನ್ನು ಅಗಸ್ತ್ಯಗೋತ್ರವೆಂದು ಹೇಳುವಲ್ಲಿ ತಂದೆ ಪರಮಾತ್ಮ.ಆ ಪರಮಾತ್ಮನು ಸಹ ಒಳ್ಳೆಯ ಕವಿಯಾಗಿದ್ದನೆಂದು ತಿಳಿಸುತ್ತದೆ. ಆದರೆ ಇಲ್ಲಿ ಉಲ್ಲೇಖಬರುವ 'ಪರಮಾತ್ಮ' ಎಂಬ ಹೆಸರೋ ಅಥವಾ ಪರಮೇಶ್ವರ ಎಂಬುದು ದೇವರ ಹೆಸರಿನ ರೂಪಾಂತರವೋ ತಿಳಿಯದು.[೧೩೨] ಆದರೆ ಕವಿಯು ಶಾಸನವನ್ನು ಹೊಸಗನ್ನಡದಲ್ಲಿ ಬರೆದಿರುವ ಕುರಿತು ''ಈ ಶಾಸನಮನು ಸರ್ವನೆವದಿಂ ಲೇಸೆನಿಸಿದರಿಸ್ಯಶ್ರಂಗ ಮಹಿಮೋನ್ನತಿಯಂ ಬಾಸರ ಮತಿ ಬಣ್ಣಿಸಿದಂ ಶ್ರೀ ಸಜ್ಜನ ತಿಲಕ

ನೋಸೆದು ಪೊಸಗನ್ನಡಂ।।''ಎಂದು ತನ್ನ ಶಾಸನದ ಶ್ರೇಷ್ಠತೆಯ ಬಗ್ಗೆ ಹೇಳಿರುವುದು ಸಮುಚಿತವೇ ಆಗಿದೆ. ಹೀಗೆ ಹೇಳುವುದು ಕವಿಗೆ ನಿಮಿತ್ತಮಾತ್ರ ಊರ ಪೌರಾಣಿಕ ಮಹತಿಯ ನಾಡಜನಗಳ ಬಗ್ಗೆ ತನಗಿದ್ದ ಪ್ರೀತಿ ಅಭಿಮಾನಗಳನ್ನು ತನ್ನ ಕಲ್ಪನಾ ವಿನ್ಯಾಸಕ್ಕೆ ಇದೊಂದು ಒಳ್ಳೆಯ ಸಂದರ್ಭವೆಂದು ಕವಿ ''ಬಣ್ಣಿಸಿದಂ ಪೊಸಗನ್ನಡಂ'' ಎಂದು ಬಳಸುವ ಮೂಲಕ ಕನ್ನಡ ಭಾಷೆ ಮತ್ತು ಶಾಸನ ರಚನೆಯ ಪದ್ಧತಿಯ ಪರಂಪರೆಯನ್ನು ಹಾಕಿಕೊಟ್ಟಿದ್ದಾನೆ. ಮೇವುಂಡಿಮಲ್ಲಾರಿಯವರು ಹೇಳುವಂತೆ ಶಿರಸಂಗಿ ಶಾಸನದಲ್ಲಿ ಕವಿಯಗೊತ್ರ ಹೇಳಿಲ್ಲ. ಕುಕನೂರಿನ ಶಾಸನದಲ್ಲಿ ಮಾತ್ರ ಕವಿಯ ಗೋತ್ರ ಅಗಸ್ತ್ಯಗೋತ್ರ ಎಂದು ಸ್ಪಷ್ಟಪಡಿಸುತ್ತದೆ.

ಅದೇ ಶಾಸನದ ಮುಂದಿನ ಭಾಗದಲ್ಲಿ 'ವರಕಾಶ್ಯಪ ಗೋತ್ರದ ದೇವರಾಜನಂಗನೆಯ ಮಾಗಳಿಯಕ್ಕನ ತನಯಂ ಬರೆದನಿದಂ ಶ್ರೀ ನಗೆವಡೆಯರತಿಲಕಂ ಗಣಕ ಮಂಡನಂ ಶಿವದೇವ।।' ಸ್ವಸ್ತಿ ಶ್ರೀಮನ್ಮಹಾಗ್ರಹಾರ ಕುಕನೂರು ಸಾಸಿರರ್ವ್ವರ ವರಪುತ್ರನೆಚ್ಚಿನ ಕಮ್ಮಟದೊಡೆಯಂ ಚನ್ದ್ರೋಜನ ಮಗಂ ದಾಮೋಜಂ ಬೇಸಕೆಯ್ದು ಬರೆದ ಶಾಸನಮಂ।। ಎಂದು ಕಶ್ಯಪಗೋತ್ರದ ದೇವರಾಜನ ಪತ್ನಿ ಮಾಳಿಯಕ್ಕನ ತನಯಂಶ್ರೀನಂಗನೆ ಯೊಡೆಯ ಕುಲತಿಲಕಗಣಕಮಂಡನೂ ಆದ ಶಿವದೇವ ಇದನ್ನು ಬರೆದನೆಂದು ಕೀರ್ತಿಸುತ್ತದೆ. ಇದೆಲ್ಲ ನೋಡಿದಾಗ ಶಾಸನ ಕರ್ತೃ ಶಿವದೇವನೇ ಅಥವಾ ಸಜ್ಜನ ತಿಲಕನೆಂಬವನ ಕುರಿತು ಸಂಶಯ ಉಂಟಾಗುತ್ತದೆ. ಇದನ್ನು ದಾಮೋಜ ಎಂಬುವನು ಕೆತ್ತಿರುವುದಾಗಿ ತಿಳಿಯುತ್ತದೆ. ಹೀಗೆ ಕವಿಯ ಬಗ್ಗೆ ತಿಳಿಸುವ ಹೊಸಗನ್ನಡದ ಶಾಸನ ಪದ್ಯ ರೂಪದಲ್ಲಿ ಕಾವ್ಯಾತ್ಮಕವಾಗಿ ವಿವರಿಸಿಕೊಂಡು ಹೋಗಿರುವುದು ಮೆಚ್ಚತಕ್ಕದ್ದಾಗಿದೆ.

### ೯. ಕವಿ ಕಂದರ್ಪ

ಬೇರೆ ಬೇರೆ ಕಾಲಗಳಲ್ಲಿ ನೀಡಿದ ದಾನದತ್ತಿಗಳ ವಿವರಣೆಯನ್ನೊದಗಿಸುವ ಕವಲೂರಿನ ಶಾಸನದಲ್ಲಿ ''ಮೇದಿನಿ ದಟ್ಟನೆ ಸೆಯೆ ಶಾಸನಮಂವಿರಚಿಸಿದಂ ಗಮಸೂರಿ ಚಾತುರ್ಬ್ಬಾಷಾ ಚಕ್ರವರ್ತಿ ಕವಿ ಕಂದರ್ಪಂ'' ಎಂದು ಕವಿಯ ನಾಮಗೋಚರವಾಗುತ್ತದೆ. [೨೩೩] ೯೫ ಸಾಲುಗಳಲ್ಲಿ ರಚಿತವಾದ ಶಾಸನದಲ್ಲಿ ಕಾವ್ಯ ರಚನೆ ಭಾಷಾ ಸಾಮರ್ಥ್ಯ, ಶಾಸನದಲ್ಲಿ ಬಳಕೆಯಾದ ವ್ಯಾಕರಣ ಭದ್ಧತೆ,ಸಾಹಿತ್ಯವನ್ನು ''ಸಮಸ್ತ ಚತುರ್ಭಾಷಾ ಕವಿ ಚಕ್ರವರ್ತಿ'' ಎಂದು ಆತನ ಕಾವ್ಯ ಕೃಷಿಯನ್ನು ಶಾಸನ ಹೊಗಳಿದೆ. ಇದನ್ನು ನೋಡಿದರೆ ಈ ಮೊದಲೆ ಈತ ಕಾವ್ಯ ರಚನೆ ಮಾಡುತ್ತಿರಬೇಕೆಂದು ಅನಿಸುತ್ತದೆ.

ಪೆಳ್ದನೊಲ್ದು ಶಾಸನಮಂ ಪೀಯಾಕ್ಷಸಮಸೂಕ್ತಿ
ಚಾತುರ್ಭಾಷಾ ಕವಿ ಚಕ್ರವರ್ತಿ ಕವಿ ಕಂದರ್ಪ ಉದ್ವಜ್ಜನ
ಸಮ್ಮತಿಸ್ಫೋಟಿ ಪದಾರ್ಥಗಳಂ ಕ್ರಿಯಾ ಸಂಕುಳ ಮಹಮಪ್ಪರಿತಿರೆ

ಪೇಳ್ದನಿಂತಿ ಕವಿಕಂದರ್ಪ।। ನೆಂದು ವರ್ಣಿಸಿದೆ. ಬಹುತೇಕ ಈ ಕವಿಗೆ ''ಚಾತುರ್ಭಾಷಾ ಕವಿ ಚಕ್ರವರ್ತಿ'' ಎಂಬ ಬಿರುದಿತ್ತು ಹಾಗೂ ಈತ ಕನ್ನಡ - ಸಂಸ್ಕೃತಗಳನ್ನಲ್ಲದೆ ಬೇರೆ ಭಾಷೆಗಳಲ್ಲಿ ಪ್ರವೀಣನಾಗಿದ್ದನೆಂದು

ಸಂಶೋಧಕರೊಬ್ಬರು ಉಲ್ಲೇಖಿಸುತ್ತಾ ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ''ಕವಿಕಂದರ್ಪರ ಬಗ್ಗೆ ಮತ್ತು ಆತನ ತಂದೆ ಬಾಳಚಂದ್ರಮುನಿ, ತಾಯಿ ಸೊನ್ನಾದೇವಿ''ಯರ ಕುರಿತು ಪ್ರಸ್ತಾಪಮಾಡುತ್ತಾರೆ. ಈ ಬಾಳ ಚಂದ್ರಮುನಿಗಳು ಕವಿಗೆ ಗುರು- ತಂದೆಎರಡು ಆಗಿದ್ದರು. ತಂದೆಯಿಂದಲೇ ವಿದ್ಯಾಭ್ಯಾಸ ಕಲಿತಿರುವದಾಗಿ ಹಾಗೂ ಅನಂತಪುರಾಣ ಪ್ರಕಾರ ಕವಿಕಂದರ್ಪ ಜೈನ ಕವಿಯಾಗಿದ್ದನೆಂದು ತಿಳಿಯುತ್ತದೆ. ಈ ಕವಿಯು ಶ್ರವಣಬೆಳಗೊಳ, ಬೆಳಗಾಂವ, ಮಂಡ್ಯ, ಧಾರವಾಡ ಜಿಲ್ಲೆಯ ಶಾಸನಗಳಲ್ಲಿ ಕಾಣಿಸಿಕೊಂಡಿರುವದನ್ನು ಕವಿಚರಿತ್ರೆಯಲ್ಲಿ ಕೊಪ್ಪಳ ಜಿಲ್ಲೆಯ ಕವಲೂರಿನ ಶಾಸನ ತಿಳಿಸುವ ಕವಿಯೇಆತನಾಗಿರಬೇಕು. ಈತನೇ ಅನೇಕ ಕಡೆ ದೊರೆತ ಶಾಸನಗಳನ್ನು ಬರೆದಿರುವಂತೆ ತಿಳಿಯುತ್ತದೆ. ಇವನು ಜೈನ ಕವಿ ಆಗಿದ್ದರಿಂದ ಕೊಪ್ಪಳ ತೀರ್ಥಕ್ಕೆ ಬಂದಿರಬೇಕು, ಆಗ ಕವಲೂರಿನ ಶಾಸನ ರಚಿಸಿರುವಂತೆ ಕಂಡುಬರುತ್ತದೆ.

ಶಾಸನ ಪಾಠ ಕನ್ನಡವಾಗಿದ್ದರೂ ಅಲ್ಲಲ್ಲಿ ಹಳಗನ್ನಡ ಶಬ್ದಗಳ ಬಳಕೆ, ಭಾಷೆ, ಛಂದಸ್ಸು ಕಾವ್ಯದಲ್ಲಿ ಗಟ್ಟಿತನ ಹೊಂದಿದೆ ಹಲವಾರು ವೃತ್ತಗಳು, ಕಂದಗಳು ವಿವಿಧ ವರ್ಣನೆಗಳಿಂದ ಶಾಸನ ತನ್ನ ವಿಸ್ತೃತವನ್ನು ಹೆಚ್ಚಿಸಿಕೊಂಡಿದೆ.

### ೧೦ ಗೋಮಕವಿ

ಕ್ರಿ.ಶ. ೧೧೭೮ ರ ಕುಕನೂರಿನ ಶಾಸನವೊಂದು ಈ ಕವಿಯ ಬಗ್ಗೆ ಉಲ್ಲೇಖಿಸುತ್ತಾ ''ಉತ್ತಮವೆನೆಕುಡುಗುಂಟೆಯೊಳಿತ್ತಂತಿರೆ ಗೋಮ ಕವಿಗೆ ದಯೆಯಂ ಹಂನಿರ್ಮ್ಮತ್ತಕ್ಕೆಯ್ಯಂ ಮನ್ನೆಯುಮನಿತ್ತಂ ಸೆಲಗರದೊಳಂ ಕಳೇಶ್ವರ ದೇವರು ।। ಎಂದು ವರ್ಣಿಸುವುದು. ಕಳಚೂರಿ ಅರಸ ಸಂಕಮನ ಕಾಲದಲ್ಲಿ ಕವಿ ಈ ಶಾಸನವನ್ನು ೧೧೭ ಸಾಲುಗಳಲ್ಲಿ ರಚಿಸಿದ್ದಾನೆ ಇದರಲ್ಲಿ ಚಂಪು ಕಾವ್ಯದ ಸಾಹಿತ್ಯ ೫೩ ಸಾಲುಗಳಲ್ಲಿದೆ ಕನ್ನಡ ಪದ್ಯದಲ್ಲಿ ನಿಳವನದ ಕೊನೆ ಕೊನೆಯಲ್ಲಿ ದತ್ತಿಗಳನ್ನು ಹೇಳುವ ಬಾಗವಿದ್ದು ಕಂದ ಪದ್ಯದಲ್ಲಿಮಾತ್ರ ಗೋಮ ಕವಿಗೆ ಸಲಗರದಲ್ಲಿ ಹೊಲ ಮನೆಗಳನ್ನು ಕೊಟ್ಟ ಮನ್ನಣೆ ಮಾಡಲಾಯಿತೆಂಬ ಸಂಗತಿ ತಿಳಿಸಿಲಾಗಿರವುದು. ಇದಕ್ಕೂ ಮೊದಲೊಂದು ಸಲ ಗುಡಗುಂಟೆಯಲ್ಲಿ ಹೊಲ ಮನೆಗಳನ್ನಿತ್ತು ಗೌರವಿಸಲಾಗಿತ್ತೆಂಬ ವಿಷಯವನ್ನು ಸಹ ಶಾಸನ ಪದ್ಯದಲ್ಲಿ ಕಂಡುಬಂದಿದೆ ಈ ಕವಿಗೆ ಪುರಸ್ಕಾರ ವಿತ್ತವರು ಕುಕನೂರಿನ ಜೇಷ್ಟಾದೇವಿಯರ ಸ್ಥಾನಾಚಾರ್ಯರಾಗಿದ್ದ ಹಾಗೆಯೇ ಸೋಮೇಶ್ವರ ದೇವರ ನವಮಠದ ಆಚಾರ್ಯರಾಗಿದ್ದ ಲೋಕ ಗುರು ಕಳೇಶ್ವರಚಾರ್ಯರು ನೀಡಿದ ದಾನದ ಕುರಿತು ಶಾಸನ ''ಉತ್ತಮವೆನೆ ಗುಡುಗುಂಟೆಯೋಳಿತ್ತಂತಿರೆ ಗೋಮ ಕವಿಗೆ ದಯೆಯಂ ಪನ್ನಿರ್ಮತ್ತ ಕೆಳಯ್ಯರ ಮನೆಯಮ್ಮನಿತ್ತಾಂ ಸೆಲಗರದೊಳಂ ಕಳೇಶ್ವರ ದೇವಂ ।। ಇಷ್ಟಲ್ಲದೆ ಈ ಮುನಿಗೆ ಮತ್ತು ವಿದ್ಯಾಸಂಸ್ಥೆ ನಿರ್ವಹಣೆಗಾಗಿ ಬಿಟ್ಟ ದತ್ತಿಗಳನ್ನು ಸಹ ಕವಿಗೆ ಕೊಟ್ಟು ಮರ್ಯಾದೆ ಮಾಡಿದರೆಂದು ಈ ಸನ್ಮಾನ ಆಗೊಂದು ಶಾಸನ ಬರೆದುದಕ್ಕಾಗಿಯೆ ಮಾಡಿದ್ದರೆಂದು ತಿಳಿದು ಬರುವುದು.[೧೩೪] ಈ ಕವಿಯ ಕುರಿತು ಹೀಗೆ ಅಪಾರ ಮಾಹಿತಿ ನಮಗೆ ತಿಳಿದುಬರುವುದರಿಂದ ಆಗಾಗ ಇಂತ ಶಾಸನಗಳನ್ನು ಬರೆಯುವ ವೃತ್ತಿವುಳ್ಳ ಕವಿ ಇವರಾಗಿರಬೇಕೆಂದು

ಸ್ಪಷ್ಟ ವಾಗುತ್ತದೆ. ಶಿರಸಂಗಿ ಶಾಸನ (ಕ್ರಿ.ಶ. ೧೧೮೬); ಕುಕನೂರಿನ ಶಾಸನ (ಕ್ರಿ.ಶ. ೧೧೭೮) ; ಇದೇ ಊರಿನ ಮತ್ತೊಂದು ಶಾಸನದಲ್ಲಿ ಸಜ್ಜನತಿಲಕ ಕವಿಯ ಉಲ್ಲೇಖ ಬರುವುದರಿಂದ ಇದೆಲ್ಲ ತಾಳೆನೋಡಿದಾಗ (ಕ್ರಿ.ಶ. ೧೧೭೦) ಗೋಮ ಕವಿ ಕೂಡಾ ಅದೇ ಸಮಕಾಲಿನವನಾಗಿದ್ದುರುವುದು ಒಂದೆಡೆ ಸಜ್ಜನ ತಿಲಕನೇ ಗೋಮಕವಿ ಆಗಿರಬಹುದೆಂಬ ಮೇವುಂಡಿಮಲ್ಲಾರಿಯವರ ಊಹೆ ಇಲ್ಲಿ ವಿವೋಚಿಸುವುದು ಸೂಕ್ತವೆನಿಸುತ್ತದೆ.[೧೩೫] ಈ ಹಿನ್ನೆಲೆಯಲ್ಲಿ ಗೋಮಕವಿ, ಮತ್ತು ಸಜ್ಜನ ತಿಲಕ ಇಬ್ಬರು ಬೇರೆ ಬೇರೆ ಎಂದೆನಿಸುತ್ತದೆ. ಏಕೆಂದರೆ ಶಾಸನಗಳಲ್ಲಿ ಸಮವಾದ ವಿಚಾರಗಲು ಕಂಡು ಬರುವುದಿಲ ಆದರೆ ಒಂದೇ ಕಾಲದಲ್ಲಿ ಆಗಿ ಹೋದವರೆಂಬ ವಿಚಾರ ಮಾತ್ರ ಒಪ್ಪಬಹುದಾಗಿದೆ. ಏಕೆಂದರೆ ಗೋಮ ಕವಿ, ಸಜ್ಜನ ತಿಲಕ ಇಬ್ಬರ ಹೆಸರುಗಳನ್ನು ಶಾಸನಗಳೇ ಸ್ಪಷ್ಟವಾಗಿ ಹೇಳಿವೆ.

## ೧೧ ಆದಿತ್ಯದೇವ (ಪಂಡಿತ ಲಕ್ಷ್ಮೀಧರ)

ಯಲಬುರ್ಗಿ ತಾಲೂಕಿನ ಇಟಗಿ ಗ್ರಾಮದ ಸಾದರ ರುದ್ರ ಗೌಡರ ಮನೆಯಲ್ಲಿ ದೊರತ ತಾಮ್ರಪಟ ಶಾಸನ ಕ್ರಿ.ಶ. ೧೧೮೩. ರಲ್ಲಿ 'ಆದಿತ್ಯದೇವ ಕವಿಯೂ' ಸಂಸ್ಕೃತ ಭಾಷೆಯಲ್ಲಿ ಬರೆದನೆಂದು ತಿಳಿಸುತ್ತದೆ. ಶಾಸನ ೮೯ ಸಾಲುಗಳನ್ನು ೨೪ ಶ್ಲೋಕಗಳನ್ನೊಳಗೊಂಡಿರುವುದು. ಈ ಕವಿಯ ಕುರಿತು ಶಾಸನದಲ್ಲಿ

''ಶಕ್ತಿವ್ಯುತ್ಪತ್ತಿ ಸಂಪನ್ನವಿದ್ವತ್ ಶ್ರೀಪಾಪಾದಸೇವಿನಾ
ರಚಿತಾದಿತ್ಯದೇವನ ಸೇಯಂ ಶಾಸನ ಪದ್ಧತಿಃ ।
ಕೃತಿರಿಯಂ ತ್ರಿಭುವನವಿದ್ಯಾ ಚಕ್ರವರ್ತಿನಃ ಶ್ರೀಪಾದಾ
ದಿತ್ಯದೇವಸ್ಯ । ಲಿಖಿತಮಿದಂ ಪಂಡಿತಲಕ್ಷ್ಮೀರಧರೇಣ ।
ಉತ್ಕೀರ್ಣಂ ರಾಜವಿಜ್ಞಾನಿನಾ ಪಂದಯೇನ । ಮಂಗಲ ಮಹಾಶ್ರೀ[೧೩೬]

ಎಂದು ಶಾಸನ ಬರೆದ ಕವಿ ''ಆದಿತ್ಯದೇವ, ಪಂಡಿತಲಕ್ಷ್ಮೀದರ ಎಂದರೆ ಇದನ್ನು ಕೆತ್ತಿದವನು 'ಪಂದಯ್ಯ' ಎಂಬುವವನೆಂದು ಉಲ್ಲೇಖಿಸುತ್ತಾ ಕಾಠಾರದ ದಿವಾಕರ ದಂಡನಾಯಕನು ತಮ್ಮ ಕೆಯ್ಯ ಹೊನ್ನ ಕೊಟ್ಟು ಅವರೆತಿಪ್ಪೆಯಲ್ಲಿಕೆಯ ಮತ್ತರು ೫೦ ಮತ್ತೊಂದು ಮನೆಯಮಂ ಮಾರಿಕೊಂಡು ಬ್ರಾಹ್ಮಣ ಜನಕ್ಕೆ ಬಿಟ್ಟರೆಂದು ತಿಳಿಸುವುದಲ್ಲದೆ, ಕವಿಯು ತನ್ನನ್ನು ಶಕ್ತಿ ವ್ಯುತ್ಪತ್ತಿ ಸಂಪನ್ನ ಪಂಡಿತನೆಂದು ಹೇಳಿಕೊಂಡಿದ್ದಾನೆ. ಈ ಕವಿ ಆದಿತ್ಯದೇವನಿಗೆ ತ್ರಿಭುವನ ವಿದ್ಯಚಕ್ರವರ್ತಿ ಎಂಬಬಿರುದಿದ್ದಂತೆ ಒಕ್ಕಣಿಕೆಯಲ್ಲಿ ತಿಳಿಸುತ್ತದೆ. ಈ ಕಾಲದಲ್ಲಿ ಸಂಸ್ಕೃತ ಸಾಹಿತ್ಯದ ಭಾಷಾಜ್ಞಾನದ ಬಗ್ಗೆ ಕವಿಗಿರುವ ಜ್ಞಾನದ ಕುರಿತು ನಾವು ಮೆಚ್ಚತಕ್ಕದ್ದಾಗಿದೆ. ಮತ್ತು ಶಾಸನ ಕವಿಯನ್ನು ಉತ್ಕೀರ್ಣಕಾರನ ಹೆಸರನ್ನು, ಲೇಖಕನ ಹೆಸರನ್ನು ಆದಿತ್ಯ ದೇವ (ಪಂಡಿತ ಲಕ್ಷ್ಮಿದರ) ಕೆತ್ತಿದವ ಪಂದಯ್ಯ ಎಂದು ಬೇರೆ ಬೇರೆಯಾಗಿ ಉಲ್ಲೆಖಿಸುತ್ತದೆ.

## ೧೨. ರೋಣದ ಚಾವೋಜ

ಕ್ರಿ.ಶ. ೧೧ ನೆಯ ಶತಮಾನದ ಕುಕನೂರಿನ ಶಾಸನದಲ್ಲಿ ಶಾಸನ ಬರೆದ ಕವಿ ರೋಣ ಚಾವೊಜ ಮತ್ತು ಶಾಸನವನ್ನು ಸಹ ಇತನೆ ಕಣ್ಣರಿಸಿದನೆಂದು ಹೇಳಿದೆ.[೧೩೭]

## ೧೩. ಸೇನಬೋವ ಬಮ್ಮರಸ

ಪುರ ಶಾಸನವೊಂದು ೧೨ನೆಯ ಶತಮಾನದ ಶಾಸನ ಕವಿಯ ಕುರಿತು ''ಇಂತಿ ಧರ್ಮ ಶಾಸನಂ ಭೂಮ್ಮಂಡಳಧರೆ ದಿವಂ ಚಂದ್ರಾರ್ಕ್ಕರುಳ್ಳಿನಂ ಸ್ಥಿರಾಯು ಧರ್ಮವೆಂದು ಬರೆದಂ ॥'ಸೇನಬೋವ ಬಂಮರಸ ॥ ನರಸಿಂಹ । ದೇವರ ಮನೆಯ ಸೇನಬೋವ ಬಸವರಸಗೆ ಹಿರಿಯ ಕೋಲ ವಿದರ ಮತ್ತೊರೊಂದು'' ಎಂದು ಶಾಸನ ಬರೆದ ಕವಿಗೆ ದಾನನೀಡಿದುದ್ದಾಗಿ ತಿಳಿಸುತ್ತದೆ. ಪ್ರಾರಂಭ ಮತ್ತು ಕೊನೆಯಲ್ಲಿ ಸಂಸ್ಕೃತ ಅಕ್ಷರ ಬಳಕೆ ಹಾಗೂ ಕನ್ನಡ ಹಳೆಗನ್ನಡ[೧೩೮] ಶಬ್ದಗಳ ಮಿಶ್ರತವಾಗಿ ೩೩ ಸಾಲುಗಳಲ್ಲಿ ರಚಿತವಾದ ಶಾಸನವಾಗಿದೆ.

## ೧೪. ಕವಿ ವಿಶ್ವಾಮಿತ್ರ

ಆನೆಗೊಂದಿಯ ಶಾಸನದಲ್ಲಿ ೧೩ನೆಯ ಶತಮಾನದ ಕವಿ ವಿಶ್ವಾಮಿತ್ರನ ಉಲ್ಲೇಖ ಬರುತ್ತಿದ್ದು. ಶಿವ ಪಾರ್ವತಿಯರ ಮದುವೆಯ ಸಮಗ್ರ ಚಿತ್ರಣವನ್ನು ಸೇರೆ ಹಿಡಿದು ರಚಿಸಿದ ಕವಿಯನ್ನು ಕುರಿತು ಶಾಸನ '' ಗಿರಿಜೆ ಭುವಂ ನೆರಪಿದಿಂ ಬಳಿಯೂ ಮಾಪರ ಮಂಗೆ ಪರ್ವ್ವತರಾಜನೆಂದ ಪಿರಿಯ ಯೊಲವಿನಿಂದ ಕೋವರ ಕುಲಕ್ಕೆ ಸಾಸನಮ ನೊರೆಯೆಂದು ಬಂನಪಂಗೆಯ್ದು ನಾಗಂ ॥ ಗಿರಿಜೇಶ ಪೇಳ್ದನಾವರಮ ನಿಸ್ಪ್ರಷ್ಟನಾದರದಿಂದ ಬರೆದ 'ವಿಶ್ವಮಿತ್ರನೆ ಪಿರಿದೊಲವಿನಿಂದ' ಕೋವರಕುಲಕ್ಕೆ ಕುಡುವೇಳ್ದು ಗಿರಿರಾಜ ಗಿತ್ತನೀ ಶಾಸನವನು ॥ ಎಂದು ಬಹಳ ಸೋಗಸಾಗಿ ಕವಿಯನ್ನು ವರ್ಣಿಸಿದೆ. ಕನ್ನಡ ಭಾಷೆ ಮತ್ತು ಲಿಪಿಯಲ್ಲಿ ೨೬೯ ಸಾಲುಳ್ಳ ದೊಡ್ಡದಾದ-ತಾಮ್ರಪಟದಲ್ಲಿರುವ ಈ ಶಾಸನ 'ಪಸವುಂ' ಮಾರಿಯ ಬರನಸದಳಂ ಪಿಂಗುಗೆ ಸಸಿಗಳು ಬೆಳೆಗೆನುಗಳು ಕರಗೆ ವಸುಧೆಯೋಳು ಗಿರಿರಾಜವೆಸರ ಶಾಸನ ಮೆಚ್ಚಿ ಬೆಸಯ್ದುತಿರ್ಕ್ಕ ಅಯ್ಸವಂತೆರ್ಗ್ಗೆ ॥[೧೩೯] ಎಂದು ಹಳೆಗನ್ನಡವನ್ನು ಬಳಸಿ ಕಾವ್ಯತ್ಮಕವಾಗಿ ಓದುಗರನ್ನು ಓದಿಸಿಕೊಂಡು ಹೊಗುವಂತೆ, ಬರೆದ ಕವಿಯು ತನ್ನ ಜಾಣ್ಮೆಯನ್ನು ಮೆರೆದಿದ್ದಾನೆ. ಮತ್ತು ಇದೊಂದು ಪೌರಾಣಿಕ ಕಥೆಯಂತೆ ಶಾಸನದಲ್ಲಿ ವರ್ಣಿಸಲ್ಪಟ್ಟಿದೆ.

## ೧೫. ಮೈದುನ ಮಾದಿಯ ಹೆಗ್ಗಡೆ

ಕ್ರಿ.ಶ. ೧೩೧೫ ರ ಕಮ್ಮಟ ದುರ್ಗದ ಶಾಸನ ಸೂರತಾನದಳ ನೇಮಿಸಹಿತ ನಡೆದುಬಂದಲ್ಲಿ ತುಳುವಯೆ ಸಿಂಗನಾಯ್ಕನ ತಂಮ ಕಾಮಿನಾಯ್ಕನು ರಣದಲ್ಲಿ ಹೊಯ್ದಡೆ ಬಿದ್ದನು ಹತನ ಅಕ್ಕ ಅಳಿಯಯಿಕ್ಕಿರಿಸಿದ ವೀರಗಲ್ಲು ಬರೆದಾತ ಮೈದುನ ಮಾದಿಯ ಹೆಗ್ಗಡೆ ಮಂಗಳ ಮಹಾಶ್ರೀ ಎಂದು ಶಾಸನವನವನ್ನು ಬರೆದ ಕವಿಯ ಕುರಿತು ತಿಳಿಸುವದು.[೧೪೦]

**೧೬. ಕಣಿಗನ**

ಗಂಗ ಅರಸರ ವಂಶಾವಳಿಯನ್ನು ತಿಳಿಸುವ ಕುಕನೂರಿನ ಗ್ರಾಮದಲ್ಲಿ ದೊರತ ತಾಮ್ರಪಟ ಶಾಸನ ಏಳು ಹಲಗೆಯಲ್ಲಿದ್ದು ಪ್ರಾರಂಭದಲ್ಲಿ ಸಂಸ್ಕೃತ ನಂತರ ಅರ್ಧಭಾಗ ಕನ್ನಡ ಅಲ್ಲಲ್ಲಿ ಹಳೆಗನ್ನಡ ಶಬ್ದಗಳ ಬಳಕೆ ಅರ್ದಭಾಗ ಸಂಸ್ಕೃತ ಭಾಷೆಯಲ್ಲಿ, ಸಂಸ್ಕೃತ ಶ್ಲೋಕಗಳು ಗದ್ಯರೂಪದಲ್ಲಿರುವ ೨೩೦ ಸಾಲುಳ್ಳ ಬಹು ದೊಡ್ಡದಾದ ಈ ಶಾಸನ ಛಂದಸ್ಸು ಭಾಷೆಯ ಬಳಕೆಯಲ್ಲಿ ಸಾಹಿತಿಗಳ ಅಧ್ಯಯನಕ್ಕೆ ಮಹತ್ವಪೂರ್ಣವಾದ ಶಾಸನವಾಗಿದೆ. ಇದಕ್ಕೆಲ್ಲ ಇದನ್ನು ರಚಿಸಿದ ಕವಿಯ ಪಾಂಡಿತ್ಯ ಮುಖ್ಯವಾಗಿದೆ. ಆ ಕವಿ ಕುರಿತು ಶಾಸನದ ಕೊನೆಯಲ್ಲಿ ''ಶ್ರೀ ಸ್ವಸ್ತಿ ಸತ್ಯ ವಾಕ್ಯ ಪೆರ್ಮ್ಮಾನಡಿಗಳ ಸಗ್ಗಾಟವ ಸೂರಸ್ತ ಗಣಯಣನ್ದಿದೇವರಗುಡ್ಡಂ ಶಾಸನದೋರೆ ಗಙ್ಗಯ್ಯಮ್ಬರೆಯಿ ಸಿದೋಂ ಲೋವಿಯ ದಾಸನ ಮಗಂ ಕಣಿಗನ ಲಿಖಿತಂ'' ಎಂದು ತಿಳಿಸುವುದು.[೧೪೧]

**೧೭. ಶ್ರೀಮುದ್ದಣಾಚಾರ್ಯ**

ಗದ್ಯರೂಪದಲ್ಲಿರುವ ಕ್ರಿ.ಶ. ೧೩೭೯ ರ ಕುಕನೂರಿನ ಶಾಸನ ಕನ್ನಡ ಭಾಷೆ ಲಿಪಿಯಲ್ಲಿದ್ದು ಕೊನೆಯಸಾಲಿನಲ್ಲಿ''ಶ್ರೀಧರ್ಮಾಮೂರ್ತಿ ಹರಿಹರ ಮಹಾರಾಯರು ಕೂಕನೂರ ಶ್ರೀ ಮಹಾಸ್ಥಾನಾದಾ ಚಾರ್ಯರಾದ ಗಂಡಿನ ಭಟ್ಟಪ್ಪಯಂಗಳಿಗೆ ಕೊಟ್ಟ ತಾಮ್ರ ಶಾಸನ ಹರಿಹರ ಮಹಾರಾಯರ ವಪ್ಪ। ಶ್ರೀ 'ಶ್ರೀಮುದ್ದಣಾಚಾರ್ಯ ಲಿಖಿತಂ' ಎಂದು ಕವಿಯ ಹೆಸರನ್ನು ತಿಳಿಸುವುದು.[೧೪೨]

**೧೮. ರಾಮೋಜಶ್ರೀ**

ಪದ್ಯರೂಪದಲ್ಲಿರುವ ೨೦ ಸಾಲುಗಳುಳ್ಳ ಗೊಂಡಬಾಳು ಶಾಸನ ''ವಾಯುವ್ಯದಲು ವಾಮನಕಲು ॥''

ಯಶಾಸನದ ಬರೆದ ಕೊಪಣದ ಕಮ್ಮಾರೋಜನ ಮಗ ರಾಮೋಜಶ್ರೀ ಎಂದು ಶಾಸನ ಬರೆದ ಕವಿಯ ಕುರಿತು ಉಲ್ಲೆಖಿಸಿದೆ.[೧೪೩]

ಹೀಗೆ ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ೧೭ ಕವಿ ಗಳ ಕುರಿತು ಉಲ್ಲೇಖಗಳು ಬರುತ್ತಿದ್ದು. ಈ ಕವಿಗಳ ಬಗ್ಗೆ ಶಾಸನಗಳು ವಿವರಣೆ ನಿಡುವುದಿಲ್ಲವಾದರು ಶಾಸನ ಸಾಹಿತ್ಯದಲ್ಲಿ ಅವರ ಪಾತ್ರ ಪ್ರಮುಖವಾಗಿದೆ. ಬಹುಷ ಇವರು ಅರಸರಿಂದ ನೇಮಕಗೊಂಡ ಕವಿಗಳಾಗಿರಬಹುದು. ಇಲ್ಲವೆ ಅರಸನ ಆಜ್ಞೆಯಂತೆ ಶಾಸನ ರಚಿಸಿದ ಕವಿಗಳಾಗಿರಬಹುದು, ಶಾಸನದಲ್ಲಿ ಅವರಿಗಿರುವ ಸ್ಥಾನಮಾನವನ್ನು ಗಮನಿಸಿದರೆ ಶಾಸನ ಕವಿಗಳಿಗೆ ಸಿಗಬೇಕಾದ ಸ್ಥಾನಮಾನ ಲಭಿಸದೆ ಇರುವುದು ವಿಷಾದಕರವೆನಿಸುತ್ತದೆ. ಆದರೂ ಅಲ್ಪ ಮಾಹಿತಿಯಿಂದಾದರು ಅವರ ಪ್ರತಿಭೆ ಶಾಸನ ಸಾಹಿತ್ಯದಲ್ಲಿ ಮೆಚ್ಚು ತಕ್ಕದ್ದಾಗಿದೆ.

**ಶಾಸನ ರೂವಾರಿಗಳು**

ಶಾಸನಗಳಲ್ಲಿ ಬಳಸುವ ಫಲಕಗಳಲ್ಲಿ ಶಿಲೆ ಮತ್ತು ಲೋಹಗಳು ಪ್ರಮುಖವಾದವು. ಕವಿ ರಚಿಸಿಕೊಟ್ಟ ಪಾಠವನ್ನು ಲಿಪಿಕಾರ ಈ ಫಲಕಗಳ ಮೇಲೆ ಬಾಣಗಳಿಂದ ಬರೆಯಲು ಅದನ್ನು ಕೊರೆಯುವವರು. ಶಿಲಾ ವಿದ್ಯಾಪ್ರವಿಣರಾದಕಲ್ಲು ಕುಟಿಗರು ಮತ್ತು ಲೋಹವಿದ್ಯಾ ಪ್ರವೀಣರಾದ ಅಕ್ಕಸಾಲಿಗರು ಕೆಲವು ಸಲ ಬಡಿಗ, ಕಮ್ಮಾರ ಮತ್ತು ಕಂಚಗಾರರು ಈ ಕಾರ್ಯಮಾಡುತ್ತಿರುವುದಾಗಿ ತಿಳಿಯುತ್ತದೆ. ಈ ಅಕ್ಷರ ಶಿಲ್ಪಿಗಳನ್ನು ಶಾಸನ ಪರಿಭಾಷೆಯಲ್ಲಿ ರೂವಾರಿ ಅಥವಾ ಕಂಡರಣಕಾರನೆಂದು ಕರೆಯಲಾಗಿದೆ ಶಾಸನಗಳಲ್ಲಿ ಸಾಮಾನ್ಯವಾಗಿ ಇವರ ಉಲ್ಲೇಖ ಬರುವುದು ತೀರ ಕೊನೆಗೆ ಮಾತ್ರ, ಇವರ ಹೆಸರಿನ ಹಿಂದೆ ಕಲ್ಕುಟಿಗ, ಕಲ್ಲಂ ಕಡಿದಾತ, ಕಂಡರಣೆಕಾರ, ಸರಸ್ವತೀಗಣಭಾತ್ರ, ಸರಸ್ವತೀಗಣಪುತ್ರ, ಸರಸ್ವತೀ ಗಣದಾಸ, ಶಾಸನಾಚಾರ್ಯ ಸೂತ್ರ ಧಾರಿ ವಿಶ್ವಕರ್ಮ, ಅಕ್ಕಸಾಲಿ, ಬನ್ನಣೆ, ಬಡಗಿ, ಶಿಲ್ಪಿ, ಆಚಾರಿ, ಕಮ್ಮಾರ, ಕಂಚಗಾರ, ಗವುಂಡ, ಮತ್ತು ರೂವಾರಿ ಯೆಂಬ ವಿಶೇಷಣಗಳಿಂದ ಕರೆದಿರುವುದು ತಿಳಿಯುತ್ತದೆ. ಕೆಲವು ಸಲ ಕವಿ-ರೂವಾರಿ ಎರಡು ಒಬ್ಬನೆ ಆಗಿರುತ್ತಿದ್ದನು. ಬಹುತೇಕ ರೂವಾರಿಗಳ ಕೊರತೆ ಉಂಟಾದಾಗ ಕವಿಯೇ ರೂವಾರಿ ಆಗಿರಬೇಕು ಕೆಲವುಬಾರಿ ಮೂರು ಒಬ್ಬನೆ ಆಗಿರುತ್ತಿದ್ದ.[೧೪೪] ಆದರೆ ಕವಿ, ರೂವಾರಿ, ಲಿಪಿಕಾರರ ಸಂಯುಕ್ತದಲ್ಲಿ ಶಾಸನಗಳು ರಚನೆಗೊಂಡಿವೆ ಎಂಬ ಅಂಶ ಮರೆಯುವಹಾಗಿಲ್ಲ.

ಕೊಪ್ಪಳ ಜಿಲ್ಲೆಯ ಹ್ಯಾಟಿ ಶಾಸನ ಕಲಿಯುಗ ವಿಶ್ವಕರ್ಮ ಶ್ರೀ ವರ್ಷಗರಿಓಝ ಮತ್ತು ಅವನ ಮಗ 'ಬಿಲ್ಲವ' ಕಂಡರಿಸಿದ್ದಾರೆ ಎಂದು ತಿಳಿಸಿದರೆ[೧೪೫] ಕುಕನೂರಿನ ಶಾಸನವೊಂದರಲ್ಲಿ ಶಾಸನ ಭರೆದವ 'ಶಿವದೇವ' ಕುಕನೂರ ಸಾಸಿರ್ವರ ಪುತ್ರ ಚನ್ದೋಜನ ಮಗ 'ದಾಮೋಜ' ಕೆತ್ತಿದ ಎಂದಿದೆ.[೧೪೬] ಅದೇ ಊರಿನ ಗಂಗರಕಾಲದ ಶಾಸನ 'ಗಂಗಮಯ್ಯ ಬರೆಯಿಸಿದ' ಇದನ್ನು ಕೆತ್ತಿದವ 'ಕಣ್ಣುಗ' ಎಂದಿದೆ. ಬಹುಷ ಇಲ್ಲಿ 'ಕಣ್ಣುಗ' ಕವಿ ರೂವಾರಿ ಆಗಿದ್ದನೇ? ಎಂದು ಪ್ರಶ್ನೆ ಉದ್ಭವಿಸುತ್ತದೆ. ಆದರೆ ಶಾಸನ ಹೆಚ್ಚಿನ ವಿವರ ನೀಡುವುದಿಲ್ಲ.[೧೪೭] ೧೩ನೆಶತಮಾನದ ಯಲಬುರ್ಗಿ ಶಾಸನ ಎರಂಬರಗೆಯ ಜೈನಧರ್ಮದ ಕುರಿತು ತಿಳಿಸುತ್ತಾ ಅಲ್ಲಿಯ ನಗರಜೀನಾಲಯಕ್ಕೆ ಕೇತಿಸೆಟ್ಟಿಯ ಮಗ ಮಲ್ಲಿಸೆಟ್ಟಿಯು ಪಾರ್ಶ್ವನಾಥ ದೇವರ ವಿಗ್ರಹವನ್ನು ಮಾಡಿಸಿದ. ಈ ವಿಗ್ರಹವನ್ನು ಮಾಡಿದವನು 'ರೂವಾರಿ' ಚಕ್ರವರ್ತಿ 'ಪಾಲೋಜ' ಎಂದು ಆತನನ್ನು ಚಕ್ರವರ್ತಿ ಎಂದು ಕರೆದಿರುವುದು ಅವನ ಶ್ರೇಷ್ಠತೆಯನ್ನು ಎತ್ತಿಹೆಳುತ್ತದೆ.[೧೪೮]

ಕುಕನೂರಿನ ಮತ್ತೊಂದು ಶಾಸನದಲ್ಲಿ ರೋಣದ 'ಚಾವು..ರಯ್ಯ' ಬರೆದಂ ಚಾವೋಜಂ ಕಣ್ಡರಿಸಿದ ಎಂಬ ಉಲ್ಲೇಖ ಬಹಶ ಶಾಸನ ಬರೆದ ಕವಿಯೇ ಕಣ್ಡರಿಸಿರುವಂತೆ ಕಂಡು ಬರುವುದು.[೧೪೯] ಇಟಗಿ ಶಾಸನವನ್ನು ಬರೆದವನು ಪಂಡಿತ ಲಕ್ಷ್ಮೀಧರ, ಇದನ್ನು ಕೆತ್ತಿದವನು 'ಪಂದಯ್ಯ' ಎಂದು ತಿಳಿಸುತ್ತದೆ.[೧೫೦] ಅಳವಂಡಿ ಶಾಸನ ಕರುವರಬರ್ಮ್ಮ ಬರೆಯಿಸಿದಂ ಬರೆದ ಮಲ್ಲನೀ ಶಾಸನಮಂ ಗುಲುಗಿ ಮಯ್ಯಂ ಸೋಮನಾಥ 'ಖಣ್ಡರ' ಎಂದಿದೆ. ಇಲ್ಲಿ ಕವಿ, ತಿಡಿ ಬರೆಯುವ, ಖಣ್ಡರಣಕಾರ ಮೂವರು ಕೂಡಿ ಈ ಶಾಸನ

ರಚಿಸಿರಬೇಕೆಂದು ತಿಳಿಯುವುದು.[೧೫೧] ಹೀಗೆ ಶಾಸನಗಳಲ್ಲಿ ಉಲ್ಲೇಖ ಬರುವ ಈ ರೂವಾರಿಗಳ (ಶಿಲ್ಪಗಳ) ಪರಂಪರೆ ಶಾಸನ ರಚನೆಯಲ್ಲಿ ಕನ್ನಡ ನಾಡಿನಲ್ಲಿ ಪ್ರಮುಖವಾಗಿತ್ತು. ಕವಿ, ಲಿಪಿಕಾರ, ರೂವಾರಿ ಇವರು ಶ್ರಮಜೀವಿ ವರ್ಗಕ್ಕೆ ಸೇರಿದವರಾಗಿದ್ದರಿಂದ ಶಾಸನ ರಚನೆಯ ಅವರಿಗೆ ಪ್ರತಿಫಲ ಸಿಗಬೇಕಾದದ್ದು ಸಹಜ, ಆ ಹಿನ್ನೆಲೆಯಲ್ಲಿ ಅವರ ಹೆಸರು ಶಾಸನದಲ್ಲಿ ಕಾಣುತ್ತೇವೆ.

## ಲಿಪಿಕಾರ

ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಲಿಪಿಕಾರರ ಕುರಿತು ಎಲ್ಲಿಯೂ ಉಲ್ಲೇಖಗಳು ಬಾರದೆ ಇರುವುದರಿಂದ ನಮಗೆ ನಿರಾಶೆವಾಗುತ್ತದೆ. ಆದರೂ ಅವರ ಕುರಿತು ಒಂದೆರಡು ಶಬ್ದಗಳಲ್ಲಿ ಹೇಳಲೇಬೇಕಾಗುತ್ತದೆ. ಏಕೆಂದರೆ ಕವಿ, ರುವಾರಿ, ಲಿಪಿಕಾರರ ಸಂಯುಕ್ತದಿಂದಲೇ ಶಾಸನ ಪೂರ್ಣವಾಗುತ್ತಿರುವದರಿಂದ ಈ ಲಿಪಿಕಾರ ಕವಿ ರಚಿಸಿದ ಶಾಸನ ಕಲ್ಲ ಮೇಲೆ ಬಳಪದಿಂದ ತೀಡಿ ಬರೆಯುತ್ತಿದ್ದನೆಂದು ಕಂಡುಬರುತ್ತದೆ.[೧೫೨] ಇದರಿಂದ ಕೊಪ್ಪಳ ಜಿಲ್ಲೆಯ ಶಾಸನ ರಚನೆಯಲ್ಲಿ ಅವರ ಕೊಡುಗೆಯನ್ನು ನಾವು ಮರೆಯುವಂತಿಲ್ಲವೆಂದು ಹೇಳಬಹುದು. ಏಕೆಂದರೆ ಈ ಮೂವರ ಶ್ರಮದಿಂದ ಶಾಸನ ರಚನೆಯಾಗುತ್ತಿತ್ತೆಂದು ವಿದ್ವಾಂಸರು ನಿದರ್ಶನದೊಂದಿಗೆ ಸ್ಪಷ್ಟಪಡಿಸಿರುವಾಗ ಅದನ್ನು ಒಪ್ಪಬೇಕಾಗುತ್ತದೆ.

## ಅಡಿಟಿಪ್ಪಣಿಗಳು

೧. ಗೋಪಾಲರಾವ್, ಎಚ್. ಎಸ್., ೧೯೯೩, *ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ*, ಪು- ೧೫೫, ಮೈಸೂರ, ಪ್ರಾಚ್ಯವಸ್ತು ನಿರ್ದೇಶನಾಲಯ.

೨. ಅದೇ, ಪು- ೧೫೬.

೩. *South Indian Inscriptions*, Vol-XIV part-I, 3rd Century A.D.

೪. *Epigraphia Carnatica*, Vol-VII, ನಂ- ೧೭೬, ಶಿಕಾರಿಪುರ, ಕ್ರಿ.ಶ. ೪೫೦.

೫. ಗೋಪಾಲರಾವ್, ಎಚ್. ಎಸ್., ೧೯೯೩, *ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ*, ಪುಟ-೧೫೬, ಮೈಸೂರ , ಪ್ರಾಚ್ಯವಸ್ತು ನಿರ್ದೇಶನಾಲಯ.

೬. ಚಿದಾನಂದಮೂರ್ತಿ. ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೨೦೭, ಮೈಸೂರ ವಿಶ್ವವಿದ್ಯಾಲಯ.

೭. Kadabadi, B.K., *Vaddradhane A Study,* p-3-4, Dharwad, Karnatak University.

೮. ದೇವರಕೊಂಡಾರೆಡ್ಡಿ., ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ,* ಈ ಸಂಪುಟದಲ್ಲಿ ಪ್ರಕಟವಾದ ಶಾಸನಗಳು, ಕ.ವಿ.ವಿ. ಹಂಪಿ.

೯. ಕೊಪ್ಪಾ, ಎಸ್.ಕೆ., ೧೯೯೦, ತರ್ದವಾಡಿಯನಾಡು ಒಂದು ಅಧ್ಯಯನ, ಪುಟ-೧೮೦, ಇಂಡಿ, ಪ್ರತಿಭಾ ಪ್ರಕಾಶನ.

೧೦. Gopal, B.R., 1981, *The Chalukyas of Kalyana and Kalacharis* pp. 420-421, Dharwad.

೧೧. ದೇವರಕೊಂಡಾರೆಡ್ಡಿ., ೧೯೯೯, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ,* ನಂ-೧೩, ಕಲ್ಲೂರ (ಯ. ತಾ) ಕ್ರಿ.ಶ. ೧೧೮೫ ಪು-೧೬೭, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೧೨. ಅದೇ, ನಂ-೫೦, ಕುಕನೂರ (ಯ. ತಾ), ಕ್ರಿ.ಶ. ೧೦೦೫. ಪು-೨೨೨.
೧೩. ಅದೇ, ನಂ-೫೧, ಕುಕನೂರ (ಯ. ತಾ), ಕ್ರಿ.ಶ. ೧೦೦೫, ಪು- ೨೨೪.
೧೪. ಅದೇ, ನಂ-೫೨, ಕುಕನೂರ (ಯ.ತಾ), ಕ್ರಿ.ಶ. ೧೧೭೮, ಪು-೨೨೮.
೧೫. ಅದೇ, ನಂ-೬ ಮತ್ತು ೯ ಅಳವಂಡಿ, (ಕೊ.ತಾ), ಕ್ರಿ.ಶ. ೧೦೬೧, ೧೧೫೭, ಪು-೧೩-೧೬.
೧೬. ಅದೇ, ನಂ-೧, ಕವಲೂರು (ಕೊ.ತಾ), ಕ್ರಿ.ಶ. ೧೪೯೭ ಪು-೧.
೧೭. ಅದೇ, ನಂ-೨೬, ಮಾದಿನೂರು (ಕೊ.ತಾ), ಕ್ರಿ.ಶ. ೯೭೩, ೧೧೩೬, ೧೪೯೦, ಪು-೩೧.
೧೮. ಅದೇ, ನಂ-೨೯ ಮುಧೋಳ, (ಯತಾ), ಕ್ರಿ.ಶ. ೧೧೫೪ ಪು-೧೮೪.
೧೯. ಅದೇ, ನಂ-೫೯, ತಳಕಲ್ಲ (ಯ.ತಾ), ಕ್ರಿ.ಶ. ೯೯೧ ಪು ೨೫೩.
೨೦. ಅದೇ, ನಂ-೬೭ ಇಟಗಿ (ಯ.ತಾ), ಕ್ರಿ.ಶ. ೧೧೦೮, ೧೨, ೧೩, ಪು-೨೫೯.
೨೧. ಅದೇ, ನಂ-೧೩, ಪುರ (ಕು.ತಾ), ಕ್ರಿ.ಶ. ೧೨ ನೆ. ಶ. ಪು-೨೮೮.
೨೨. ಅದೇ, ನಂ-೫೯, ತಳಕಲ್ಲು (ಯ. ತಾ), ಕ್ರಿ.ಶ. ೯೯೧, ಪು-೨೫೩.
೨೩. ಅದೇ, ನಂ-೫೧, ಕುಕನೂರ (ಯ. ತಾ), ಕ್ರಿ.ಶ. ೧೦೦೫, ಪು-೨೨೪.
೨೪. ಅದೇ, ನಂ-೬೭, ಇಟಗಿ (ಯ. ತಾ), ಕ್ರಿ.ಶ. ೧೧೦೮, ೧೨, ೧೩, ಪು-೨೫೯.
೨೫. ಅದೇ, ನಂ-೨೯, ಮುಧೋಳು (ಯ. ತಾ), ಕ್ರಿ.ಶ. ೧೧೫೪ ಪು.೧೮೪.
೨೬. ಅದೇ, ನಂ-೬, ಅಳವಂಡಿ (ಕೊ. ತಾ), ಕ್ರಿ.ಶ. ೧೦೬೧ ಪು-೧೨.
೨೭. ಅದೇ, ನಂ-೩, ಕವಲೂರು (ಕೊ. ತಾ), ಕ್ರಿ.ಶ. ೧೧೭೭, ೭೯, ೭೮, ೭೪, ಪು-೫.
೨೮. ಅದೇ, ನಂ-೨೬, ಮಾದಿನೂರ (ಕೊ. ತಾ), ಕ್ರಿ.ಶ. ೯೭೩, ೧೧೩೬, ೧೪೯೦, ಪು-೩೧.
೨೯. ಅದೇ, ನಂ-೧೩, ೧೫, ಕಲ್ಲೂರು (ಯ. ತಾ), ಕ್ರಿ.ಶ. ೧೧೮೫, ೧೧೨೯, ಪು-೧೬೭, ೧೭೨.
೩೦. ಅದೇ, ನಂ-೩೭, ಬಳಗೇರಿ (ಯ. ತಾ), ಕ್ರಿ.ಶ. ೧೦೦೨, ಪು- ೧೯೪- ೯೬.
೩೧. ಅದೇ, ನಂ-೩೮, ಕುಕನೂರು (ಯ. ತಾ), ಕ್ರಿ.ಶ. ೧೧೦೭, ೨೭, ೩೨, ೫೭, ಪು-೧೯೯.
೩೨. ಅದೇ, ನಂ-೪೧, ಕುಕನೂರು (ಯ. ತಾ), ಕ್ರಿ.ಶ. ೧೧೭೦ ಪು ೨೧೦.
೩೩. ಅದೇ, ನಂ-೪೦, ಕುಕನೂರು (ಯ. ತಾ), ಪು-೧೯೭-೨೩೮.
೩೪. ಅದೇ, ನಂ-೬೭, ಇಟಗಿ (ಯ. ತಾ), ಕ್ರಿ.ಶ. ೧೧೦೮ ೧೨, ೧೩, ಪು-೨೫೯.
೩೫. ಅದೇ, ನಂ-೧೩ ಪುರ, (ಕು.ತಾ), ಕ್ರಿ.ಶ. ೧೨, ನೆ ಶ. ಪು ೨೮೯.
೩೬. ಅದೇ, ನಂ-೫೯, ತಳಕಲ್ಲು (ಯ. ತಾ), ಕ್ರಿ.ಶ. ೯೯೧, ಪು-೨೫೩.
೩೭. ಅದೇ, ನಂ-೨೯, ಮುಧೋಳ (ಯ. ತಾ), ಕ್ರಿ.ಶ. ೧೧ ೫೪ ಪು ೧೮೪.
೩೮. ಅದೇ, ನಂ-೬, ೮, ಅಳವಂಡಿ (ಕೊ. ತಾ), ಕ್ರಿ.ಶ. ೧೦೬೧, ೧೧೫೭, ಪು-೧೩, ೧೭.
೩೯. ಅದೇ, ನಂ-೩, ಕವಲೂರು (ಕೊ. ತಾ), ಕ್ರಿ.ಶ. ೧೧೭೭, ೭೯, ೭೮, ೭೪, ಪು-೫.
೪೦. ಅದೇ, ನಂ-೨೬, ಮಾದಿನೂರು, (ಕೊತಾ), ಕ್ರಿ.ಶ. ೯೭೩, ೧೧೩೬, ೧೪೯೦, ಪು- ೩೧.
೪೧. ಚಿದಾನಂದಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೦೯, ಮೈಸೂರ ವಿ.ವಿ.
೪೨. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೮, ಅಳವಂಡಿ (ಕೊ. ತಾ) ಕ್ರಿ.ಶ. ೧೧೫೭, ೧೨೬೮, ಪು-೧೬, ಹಂಪಿ, ಕ.ವಿ.ವಿ.
೪೩. ಅದೇ, ನಂ-೯, ಅಳವಂಡಿ (ಕೊ. ತಾ), ಕ್ರಿ.ಶ. ೧೧೮೨ ಪು-೨೦.
೪೪. ಅದೇ, ನಂ-೩, ಕವಲೂರ (ಕೊ. ತಾ), ಕ್ರಿ.ಶ. ೧೧೭೭, ೭೯, ೮೦, ೭೮, ೮೬ ಪು-೫.
೪೫. ಅದೇ, ನಂ-೧, ಕವಲೂರ (ಕೊ. ತಾ), ಕ್ರಿ.ಶ. ೧೪೯೭ ಪು-೧.
೪೬. ಅದೇ, ನಂ-೨೬, ಮಾದಿನೂರು (ಕೊ. ತಾ), ಕ್ರಿ.ಶ. ೧೧೩೬, ಪು-೩೧.

೪೭. ಅದೇ, ನಂ-೨೯, ಮುಧೋಳ (ಯ. ತಾ), ಕ್ರಿ.ಶ. ೧೧೫೪- ಪು೧೮೪.

೪೮. ಅಳವಂಡಿ ಲಕ್ಷ್ಮಣ., ೧೯೯೩, ರಾಯಚೂರ ಜಿಲ್ಲೆಯ ಕೇಲವು ಅಗ್ರಹಾರಗಳು, ತಿರುಳುಗನ್ನಡ, ಪಾಟೀಲ, ಎಚ್. ಎಸ್. ಮತ್ತು ಬೇಟ್ಟದೊರು. (ಸಂ), ಪು-೩೨, ಕೊಪ್ಪಳ.

೪೯. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೩೮-೫೨, ಕುಕನೂರು (ಯ. ತಾ), ಪು-೧೯೦-೨೩೫, ಹಂಪಿ, ಕ.ವಿ.ವಿ.

೫೦. ಅದೇ, ನಂ-೫೨, ಕುಕನೂರು (ಯ. ತಾ), ಕ್ರಿ.ಶ. ೧೧೭೮, ಪು-೨೩೦.

೫೧. ಅದೇ, ನಂ-೫೧, ಕುಕನೂರು (ಯ. ತಾ), ಕ್ರಿ.ಶ. ೧೦೦೫, ಪು ೨೨೬.

೫೨. ಅದೇ, ನಂ-೩೮, ಕುಕನೂರು (ಯ. ತಾ), ಕ್ರಿ.ಶ. ೧೧೦೭, ೨೭,೩೨, ೫೭, ಪು-೧೯೭.

೫೩. ಅದೇ, ನಂ-೪೦, ಕುಕನೂರು (ಯ. ತಾ), ಕ್ರಿ.ಶ ೧೧೬೩, ಪು-೨೦೫.

೫೪. ಅದೇ, ನಂ-೪೮, ಕುಕನೂರು (ಯ. ತಾ), ಕ್ರಿ.ಶ. ೧೩೯೭, ಪು ೨೧೯.

೫೫. ಅದೇ, ನಂ-೫೩, ಕುಕನೂರು (ಯ. ತಾ), ಕ್ರಿ.ಶ. ೧೧೨೯, ಪು ೨೩೬.

೫೬. ಅದೇ, ನಂ-೫೬, ಕೂಕ್ಕನೂರು (ಯ. ತಾ), ಪು-೨೩೮.

೫೭. ಅಳವಂಡಿ ಲಕ್ಷ್ಮಣ., ೧೯೯೩, ರಾಯಚೂರ ಜಿಲ್ಲೆಯ ಕೇಲವು ಅಗ್ರಹಾರಗಳು, ತಿರುಳುಗನ್ನಡ, ಪಾಟೀಲ, ಎಚ್. ಎಸ್. ಮತ್ತು ಬೇಟ್ಟದೊರು (ಸಂ), ಪು ೩೪, ಕೊಪ್ಪಳ.

೫೮. ಪಾಟೀಲ, ಬಿ.ಸಿ., ೨೦೦೧, ಮಹಾದೇವ ದೇವಾಲಯ, ಪು-೧೯, ಕೊಪ್ಪಳ.

೫೯. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೬೭, ಇಟಗಿ (ಯ. ತಾ) ಕ್ರಿ.ಶ. ೧೧೦೮, ೧೨, ೧೩ ಪುಟ-೨೬೦, ಹಂಪಿ, ಕ.ವಿ.ವಿ.

೬೦. ಅದೇ, ನಂ-೫೯, ತಳಕಲ್ಲು (ಯ. ತಾ), ಕ್ರಿ.ಶ. ೯೯೧ ಪು ೨೫೩.

೬೧. ಅದೇ, ನಂ-೧೪೮, ಹುಲಗಿ (ಕೊ. ತಾ), ಕ್ರಿ. ಶ. ೧೦೮೮ ಪು-೧೪೫.

೬೨. ಅದೇ, ನಂ-೩೬, ಬಳಗೇರಿ (ಯ. ತಾ), ಪು-೧೯೪.

೬೩. ಅದೇ, ನಂ-೧೩, ಪುರ (ಕು. ತಾ) ೧೨ ನೇ ಶತಮಾನ, ಪು ೨೮೮.

೬೪. ಅದೇ, ನಂ-೧೩, ಪುರ (ಯ. ತಾ), ಕ್ರಿ.ಶ. ೧೨ ನೆ ಶತಮಾನ, ಪು-೨೮೮.

೬೫. ಅದೇ, ನಂ-೧೭, ಕಲ್ಲೂರ (ಯ. ತಾ), ಕ್ರಿ.ಶ. ೧೧೯೮ ಪು-೧೭೪.

೬೬. ಪಾಟೀಲ, ಬಿ.ಸಿ ಮೊದಿನೂರು ನೆನವು, ೧೯೯೮, ಪುಟ-೧೩, ಕೊಪ್ಪಳ.

೬೭. ಚಿದಾನಂದಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೨೧೬, ಮೈಸೂರ, ವಿ.ವಿ.

೬೮. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೩, ಕವಲೂರು (ಕೊ. ತಾ) ಕ್ರಿ.ಶ. ೧೧೭೭, ೭೯, ೮೦, ೮೬, ಪು-೪, ಹಂಪಿ, ಕ.ವಿ.ವಿ.

೬೯. ಅದೇ, ನಂ-೩೬, ಬಳಗೇರಿ (ಯ. ತಾ), ಪು-೧೯೪.

೭೦. ಅದೇ, ನಂ-೪೦, ಕುಕನೂರು (ಯ. ತಾ), ಕ್ರಿ.ಶ. ೧೧೬೩ ಪು-೨೧೯.

೭೧. ಅದೇ, ನಂ-೧೩, ಪುರ (ಕು. ತಾ), ಕ್ರಿ.ಶ. ೧೨ ನೆ ಶತಮಾನ, ಪು ೨೯೦.

೭೨. ಚಿದಾನಂದಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು ೨೨೩-೨೬ ಮೈಸೂರ,ವಿ.ವಿ.

೭೩. ಅದೇ,

೭೪. ಗೋಪಾಲರಾವ್, ಎಚ್. ಎಸ್., ೧೯೯೩, ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೬೩., ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರ.

೭೫. ಅದೇ, ಪು-೧೬೩.
೭೬. ಅದೇ, ಪು-೧೬೪.
೭೭. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೩೮, ಕುಕನೂರು (ಯ. ತಾ), ಕ್ರಿ.ಶ. ೧೧೨೭ ಪು- ೧೯೭ ರಿಂದ ೨೦೯, ಹಂಪಿ, ಕ.ವಿ.ವಿ.
೭೮. ವೆಂಕಣಯ್ಯ ಟಿ. ಎಸ್., (ಸಂ) ಬಸವರಾಜ ದೇವರ ರಗಳೆ.
೭೯. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೩೯, ಕುಕನೂರು (ಯ. ತಾ) ಕ್ರಿ.ಶ. ೧೧೪೯ ಪು ೨೦೨, ಹಂಪಿ, ಕ.ವಿ.ವಿ.
೮೦. ಅದೇ, ನಂ-೪೧, ಕುಕನೂರು (ಯ. ತಾ), ಕ್ರಿ.ಶ. ೧೧೭೦, ಪು-೨೦೯ ರಿಂದ ೨೧೪.
೮೧. ಅದೇ, ನಂ-೫೩, ಕುಕನೂರು (ಯ. ತಾ), ಕ್ರಿ.ಶ. ೧೧೨೯, ಪು-೨೩೬.
೮೨. ಅದೇ, ನಂ-೬೭, ಇಟಗಿ (ಯ. ತಾ), ಕ್ರಿ.ಶ. ೧೧೯೦, ಪು-೩೨.
೮೩. ಅದೇ, ನಂ-೨೬, ಮಾದಿನೂರು (ಕೊ. ತಾ), ಕ್ರಿ.ಶ. ೧೧೩೬, ಪು-೩೧.
೮೪. ಅದೇ, ನಂ-೨೧, ಚಳಗೇರಿ (ಕೊ. ತಾ), ಕ್ರಿ.ಶ. ೧೧೭೨, ಪು-೨೯೮.
೮೫. ಚಿದಾನಂದಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೨೭-೨೮, ಮೈಸೂರ, ವಿ.ವಿ.
೮೬. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೬೭, ಇಟಗಿ (ಯ. ತಾ), ಕ್ರಿ.ಶ. ೧೧೦೮, ೧೨, ೦೩, ಪು-೨೬೮, ಹಂಪಿ, ಕ.ವಿ.ವಿ.
೮೭. ಜೇವೂರ, ಎಸ್.ವಿ., ಕರ್ನಾಟಕದ ಶೈಕ್ಷಣಿಕ ಇತಿಹಾಸ, ಪು- ೬೫.
೮೮. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೬೭ ಇಟಗಿ (ಯ. ತಾ), ಪು-೨೫೯, ಹಂಪಿ, ಕ.ವಿ.ವಿ.
೮೯. ಅದೇ, ನಂ-೨೬, ಮಾದೆನೂರು (ಯ. ತಾ), ಪು-೩೩.
೯೦. ಚಿದಾನಂದಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೨೨೩ ರಿಂದ ೨೨೬. ಮೈಸೂರ, ವಿ.ವಿ.
೯೧. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೬೭, ಇಟಗಿ (ಯ. ತಾ), ಪು-೨೫೯, ಹಂಪಿ, ಕ.ವಿ.ವಿ.
೯೨. ಅದೇ, ನಂ-೩, ಕವಲೂರು (ಕೊ. ತಾ), ಕ್ರಿ.ಶ. ೧೧೭೪, ೭೮,೭೯,೮೦,೮೬, ಪು-೫.
೯೩. ಅದೇ, ನಂ-೮, ಅಳವಂಡಿ (ಕೊ. ತಾ), ಕ್ರಿ.ಶ. ೧೧೫೭, ೧೨, ೬೮ ಪು-೧೬.
೬೪. ಅದೇ, ನಂ-೫೧, ಕುಕನೂರು (ಯ. ತಾ), ಕ್ರಿ.ಶ. ೧೦೦೫ ಪು ೨೨೭.
೯೫. ಅದೇ, ನಂ-೫೬, ಕುಕನೂರು (ಯ. ತಾ), ಪು-೨೪೪-೨೪೭.
೯೬. ನರಸಿಂಹಚಾರ್, ಆರ್., ೧೯೭೨-೭೪, ಕರ್ನಾಟಕ ಕವಿ ಚರಿತ್ರೆ, ಪು- ೯೬, ಬೆಂಗಳೂರ, ಕನ್ನಡ ಸಾಹಿತ್ಯ ಪರಿಷತ್ತು.
೯೭. ಚಿದಾನಂದಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು ೨೨೩-೨೪, ಮೈಸೂರ, ವಿ.ವಿ.
೯೮. ಪಾಟೀಲ, ಬಿ.ಸಿ., ೨೦೦೧, ಮಹಾದೇವ ದೇವಾಲಯ, ಪು-೨೫, ಕೊಪ್ಪಳ.
೯೯. Handique, K.K., 1949, *Yasastilaka and Indian Culture,* p.1, Sholapur.
೧೦೦. ಎಲಿಗಾರ ಚನ್ನಕ್ಕ., ೧೯೮೭, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು-೩೯, ಧಾರವಾಡ, ಕ.ವಿ.ವಿ.
೧೦೧. ಚಿದಾನಂದಮೂರ್ತಿ, ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೮೪, ಮೈಸೂರ, ವಿ.ವಿ.

೧೦೨. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೩೨, ಮೂಧೋಳು (ಯ. ತಾ), ಕ್ರಿ.ಶ ೧೧ ನೆ ಶತಮಾನ, ಪು-೧೯೧, ಹಂಪಿ, ಕ.ವಿ.ವಿ.

೧೦೩. ಅದೇ, ನಂ-೮, ಅಳವಂಡಿ (ಕೊ. ತಾ), ಕ್ರಿ.ಶ.೧೧೫೭ ಪು-೧೬.

೧೦೪. ಅದೇ, ನಂ-೧೬, ಕಲ್ಲೂರು (ಯ. ತಾ), ಕ್ರಿ.ಶ. ೧೧೩೨, ಪು-೧೭೩.

೧೦೫. ಅದೇ, ನಂ-೫೬, ಕುಕನೂರು (ಯ. ತಾ), ಪು ೨೩೮.

೧೦೬. ಎಲಿಗಾರ ಚನ್ನಕ್ಕ., ೧೯೮೭, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು-೮೫, ಧಾರವಾಡ, ಕ.ವಿ.ವಿ.

೧೦೭. ಜೈನ ಸಾಹಿತ್ಯ ಸಂಸ್ಕೃತಿ, ಜೈನ ಕೇಂದ್ರ ಕೊಪ್ಪಳ ಪು-೬೬.

೧೦೮. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ಶಾ.ಸಂ ೨, ಪು- ೩೬, ರಿಂದ ೪೦, ೮೧, ೧೦೮, ೧೧೧, ೧೧೩, ೧೧೫, ೧೨೨, ಕೊಪ್ಪಳ ಶಾಸನಗಳು ಮಾದಿನೂರು ಶಾಸನಗಳು ಉಲ್ಲೇಖಿಸಿದ ರಾಣಿಯರಲ್ಲಿ ಕೆಲವರು ಮತ್ತು ರೆಬ್ಬಲದೇವಿಯರನ್ನು ಡಾ. ಚನ್ನಕ್ಕರವರು ತಮ್ಮ ಪ್ರಬಂಧದಲ್ಲಿ ಉಲ್ಲೇಖಿಸಿರುವದನ್ನು ಗಮನಿಸಿಲಾಗಿದೆ.

೧೦೯. ನಾರಾಯಣ. ಪಿ. ವಿ., ೧೯೮೩, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನದಲ್ಲಿ ಚರ್ಚಿತ ಗೊಂಡಿದ್ದನ್ನು ಅರಿಯಲಾಗಿದೆ.

೧೧೦. ಗೋಪಾಲರಾವ್, ಎಚ್. ಎಸ್., ೧೯೯೩, ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪು-೧೬೩-೧೬೫, ಮೈಸೂರ, ಪ್ರಾಚ್ಯವಸ್ತು ನಿರ್ದೇಶನಾಲಯ.

೧೧೧. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ಪುಟ-೩೭ ರಿಂದ ೧೩೦, ಹಂಪಿ, ಕನ್ನಡ ವಿ.ವಿ.

೧೧೨. ಅದೇ, ಪು-೧೨೦.

೧೧೩. ಅದೇ ಪು-೨೨೪.

೧೧೪. ಅದೇ ನಂ-೩,೪,೫,೬,೭,೮,೯,೧೦,೧೧, ೧೨, ೧೩, ೧೪, ೧೬, ೧೭, ೨೦,೨೧, ೨೩, ೨೫, ೨೬, ೩೪, ೩೫,೩೬,೩೭,೩೮,೪೦ ಕೊಪ್ಪಳ (ಕೊ.ತಾ), ನಂ-೧, ತಳಕಲ್ಲು (ಯ.ತಾ), ನಂ-೩,೪ ಬಳಗೇರಿ (ಯ.ತಾ), ನಂ-೫೧, ಕುಕನೂರು (ಯ.ತಾ), ನಂ-೬, ೭ ವಿ ಪ್ರ (ಗ.ತಾ), ನಂ-೮, ೧೫, ಕಲ್ಲೂರು (ಯ.ತಾ), ನಂ-೯, ಸಂಕನೂರ (ಯ.ತಾ), ಅದರಂತೆ ಮಾದಿನೂರು, ಯಲಬುರ್ಗಿ, ಕುಷ್ಟಗಿ, ಗಂಗಾವತಿ ತಾಲೂಕಿನ ಶಾಸನಗಳಲ್ಲಿ ಕಂಡು ಬಂದಿವೆ.

೧೧೫. ನಾರಾಯಣ. ಪಿ. ವಿ., ೧೯೮೩, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು-೧೩-೫೫, ಗದಗ.

೧೧೬. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೬೭- ೬೯, ಇಟಗಿ (ಯ. ತಾ), ಪು-೨೫೫ ರಿಂದ ೨೭೨, ಹಂಪಿ, ಕ.ವಿ.ವಿ.

೧೧೭. ಅದೇ, ನಂ-೩೮-೫೭, ಕುಕನೂರು (ಯ. ತಾ), ಪುಟ-೧೯೮ ರಿಂದ ೨೫೧.

೧೧೮. ಅದೇ, ಪ್ರಸ್ತಾವನೆ ಪುಟ-೨೫-೨೭.

೧೧೯. ಅದೇ ಪ್ರಸ್ತಾವನೆ, ಪು- ೩೩ ರಿಂದ ೩೬.

೧೨೦. ಅದೇ, ಪು-೨೨೪.

೧೨೧. ಅದೇ, ಪುಟ ೧ ರಿಂದ ೩೯೮.

೧೨೨. ಅದೇ,ನಂ-೯೦, ಕೊಪ್ಪಳ (ಕೊ. ತಾ), ಕ್ರಿ.ಶ. ೯೯೭ ಪು-೭೬.

೧೨೩. ಅದೇ, ನಂ-೩೭, ಬಳಗೇರಿ, (ಯ. ತಾ), ಕ್ರಿ.ಶ. ೧೦೦೨-ಪು-೧೯೬.

೧೨೪. ಅದೇ, ನಂ-೯೬, ಕೊಪ್ಪಳ (ಕೊ. ತಾ), ಕ್ರಿ.ಶ. ೧೦೧೯-ಪು೮೪-೮೫.

೧೨೫. ಅದೇ, ನಂ-೯೪, ಕೊಪ್ಪಳ (ಕೊ. ತಾ), ಕ್ರಿ.ಶ ೧೦೨೨, ಪು-೮೧.

೧೨೬. ಅದೇ, ನಂ-೧೨೭, ಕೊಪ್ಪಳ (ಕೊ. ತಾ), ಕ್ರಿ.ಶ. ೧೦೫೧, ಪು-೧೨೭.

೧೨೭. ಅದೇ, ನಂ-೬, ಅಳವಂಡಿ (ಕೊ. ತಾ), ಕ್ರಿ.ಶ. ೧೦೬೧, ಪು-೧೩.

೧೨೮. ಮಲ್ಲಾರಿಮೆವುಂಡಿ., ೧೯೬೩, ಕನ್ನಡ ನಾಡಿನ ಕೆಲವು ಶಾಸನ ಕವಿಗಳು, ಪುಟ-೭೧-೮೯, ಧಾರವಾಡ ಸಮಾಜ ಪುಸ್ತಕಾಲಯ.

೧೨೯. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೬೭, ಇಟಗಿ (ಯ. ತಾ) ಕ್ರಿ.ಶ. ೧೧೦೮, ೧೨, ೧೩, ಪು-೨೬೮, ಹಂಪಿ, ಕ.ವಿ.ವಿ.

೧೩೦. ೯೮. ಪಾಟೀಲ, ಬಿ.ಸಿ., ೨೦೦೧, ಮಹಾದೇವ ದೇವಾಲಯ, ಪು ೨೬, ಕೊಪ್ಪಳ.

೧೩೧. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೪೧, ಕುಕನೂರು (ಯ. ತಾ), ಕ್ರಿ.ಶ. ೧೧೭೦ ಪು-೨೧೦, ಹಂಪಿ, ಕ.ವಿ.ವಿ.

೧೩೨. ಮಲ್ಲಾರಿಮೆವುಂಡಿ., ೧೯೬೩, ಕನ್ನಡ ನಾಡಿನ ಕೆಲವು ಶಾಸನ ಕವಿಗಳು, ಪು-೧೫೩. ಧಾರವಾಡ, ಸಮಾಜ ಪುಸ್ತಕಾಲಯ.

೧೩೩. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೩, ಕವಲೂರ (ಕೊ. ತಾ.), ಕ್ರಿ.ಶ. ೧೧೭೭, ೭೯, ೮೦, ೭೮,೭೯,೭೪,೮೬, ಪು-೪, ಹಂಪಿ, ಕ.ವಿ.ವಿ.

೧೩೪. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೫೨, ಕುಕನೂರು (ಯ. ತಾ), ಕ್ರಿ.ಶ. ೧೧೭೮ ಪು-೨೨೮, ಕ.ವಿ.ವಿ. ಹಂಪಿ.

೧೩೫. ಮಲ್ಲಾರಿಮೆವುಂಡಿ., ೧೯೬೩, ಕನ್ನಡ ನಾಡಿನ ಕೆಲವು ಶಾಸನ ಕವಿಗಳು, ಪು ೧೭೪, ಧಾರವಾಡ, ಸಮಾಜ ಪುಸ್ತಕಾಲಯ.

೧೩೬. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೬೯, ಇಟಗಿ (ಯ. ತಾ) ಕ್ರಿ.ಶ. ೧೧೮೩ ಪು ೨೭೨, ಹಂಪಿ, ಕ.ವಿ.ವಿ.

೧೩೭. ಅದೇ, ನಂ-೪೪, ಕುಕನೂರು (ಯ. ತಾ), ಕ್ರಿ.ಶ. ೧೧ಶತಮಾನ, ಪು-೨೧೬.

೧೩೮. ಅದೇ, ನಂ-೧೩, ಪುರ, (ಕು. ತಾ) ಕ್ರಿ.ಶ. ೧೨ ನೆ ಶ. ಪು-೨೮೮.

೧೩೯. ಅದೇ, ನಂ-೧೮, ಆನೆಗುಂದಿ (ಗ. ತಾ), ಕ್ರಿ.ಸ. ೧೩ ನೆ. ಶತಮಾನ, ಪು-೩೩೪.

೧೪೦. ಅದೇ, ನಂ-೧೬೪, ಕಮ್ಮಟದುರ್ಗ (ಕೊ. ತಾ) ಕ್ರಿ.ಶ. ೧೩೧೫ ಪು-೧೫೮.

೧೪೧. ಅದೇ, ನಂ-೫೬, ಕುಕನೂರು (ಯ. ತಾ), ಪು-೨೫೧.

೧೪೨. ಅದೇ, ನಂ-೪೮, ಕುಕನೂರು (ಯ. ತಾ), ಕ್ರಿ.ಶ. ೧೩೭೯, ಪು- ೨೨೧.

೧೪೩. ಅದೇ, ನಂ-೧೩೫, ಗೊಂಡಬಾಳು (ಕೊ. ತಾ), ಕ್ರಿ.ಶ. ೧೫೧೨, ಪು-೧೩೨.

೧೪೪. ಕಲಬುರ್ಗಿ, ಎಂ. ಎಂ., ೧೯೭೪, ಶಾಸನ ವ್ಯಾಸಂಗ, ಪು-೩೨, ಧಾರವಾಡ, ಕ.ವಿ.ವಿ.

೧೪೫. ದೇವರಕೊಂಡಾರೆಡ್ಡಿ., ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ-೨, ಕೊಪ್ಪಳ ಜಿಲ್ಲೆ, ನಂ-೧೩೬, ಹ್ಯಾಟಿ (ಕೊ. ತಾ), ಕ್ರಿ.ಶ. ೧೨ ನೆ.ಶ. ಪು- ೧೩೩, ಹಂಪಿ, ಕ.ವಿ.ವಿ.

೧೪೬. ಅದೇ, ನಂ-೪೧, ಕುಕನೂರು (ಯ. ತಾ), ಕ್ರಿ.ಶ. ೧೧೭೦ ಪು-೨೧೦.

೧೪೭. ಅದೇ, ನಂ-೫೬, ಕುಕನೂರು (ಯ. ತಾ), ಪು-೨೪೦.

೧೪೮. ಅದೇ, ನಂ-೬, ಯಲಬುರ್ಗಿ (ಯ. ತಾ), ಕ್ರಿ.ಶ೧೩ ನೇ ಶತಮಾನ, ಪು-೧೬೩.

೧೪೯. ಅದೇ, ನಂ-೪೪, ಕುಕನೂರು (ಯ. ತಾ), ಕ್ರಿ.ಶ. ೧೧ ನೇ ಶತಮಾನ, ಪು-೨೧೬.

೧೫೦. ಅದೇ, ನಂ-೬೯, ಇಟಗಿ (ಯ. ತಾ), ಕ್ರಿ.ಶ. ೧೧೮೩, ಪು-೨೭೨.

೧೫೧. ಅದೇ, ನಂ-೬, ಅಳವಂಡಿ (ಕೊ. ತಾ), ಕ್ರಿ.ಶ. ೧೦೬೧, ಪು- ೧೪.

೧೫೨. ಕಲಬುರ್ಗಿ, ಎಂ. ಎಂ, ೧೯೭೪, ಶಾಸನ ವ್ಯಾಸಂಗ, ಪು-೫, ಧಾರವಾಡ, ಕ.ವಿ.ವಿ.




Chapter-10

# ಅಧ್ಯಾಯ-ಹತ್ತು

# ದೇವಾಲಯ ವಾಸ್ತು ಮತ್ತು ಶಿಲ್ಪಕಲೆ

ಭಾರತೀಯ ವಾಸ್ತು ಶಿಲ್ಪವು ಮುಖ್ಯವಾಗಿ ದೇವಸ್ಥಾನಗಳ ನಿರ್ಮಾಣಕ್ಕೆ ಸಂಬಂಧಿಸಿದ್ದರೂ ಅದು ಮನುಷ್ಯನ ವಾಸದ ಸ್ಥಳಕ್ಕೂ ಅನ್ವಯವಾಗುತ್ತ ಬಂದಿದೆ. ಆದರೆ ಕೊಪ್ಪಳ ಜಿಲ್ಲೆಯ ಸಾಂಸ್ಕೃತಿಕ ಚರಿತ್ರೆಯ ಮುಖ್ಯಭಾಗವಾದ ವಾಸ್ತುಶಿಲ್ಪಕಲೆಯು ಈ ಅಧ್ಯಾಯದಲ್ಲಿ ಕೇವಲ ದೇವಾಲಯ ವಾಸ್ತು ಕಲೆಗೆ ಮಾತ್ರ ಸಂಬಂಧಿಸಿದುದಾಗಿದೆ.

## ೧. ಪರಂಪರೆ

ಭಾರತದಲ್ಲಿ ದೇವಾಲಯಗಳ ಇತಿಹಾಸ ಬಹಳ ಪ್ರಾಚೀನವಾಗಿದ್ದು ಅದು ಸಿಂಧೂಕೊಳ್ಳದ ಮಹೆಂಜೋದಾರೋದಷ್ಟು ಹಳೆಯದಾಗಿದೆ. ಸಿಂಧೂ ಸಂಸ್ಕೃತಿಯಲ್ಲಿ ದೇವಾಲಯಗಳು, ಪ್ರತಿಮೆ ಹಾಗೂ ಪೂಜಾರಾಧನೆಗಳು ಇದ್ದವೆಂದು ಪುರಾತತ್ವ ಅಧ್ಯಯನದಿಂದ ತಿಳಿದುಬರುತ್ತದೆ. ಆನಂತರದ ರಾಮಾಯಣ-ಮಹಾಭಾರತಗಳಂತಹ ಮಹಾಕಾವ್ಯಗಳ ಕಾಲದಲ್ಲಿಯೂ ದೇವಾಲಯ ಪೂಜೆ-ಪುನಸ್ಕಾರಗಳ ಇರುವಿಕೆಯನ್ನು ಕಾಣಬಹುದು. ಇವುಗಳ ಸ್ಪಷ್ಟರೂಪ, ನಿರ್ದಿಷ್ಟ ಗುರಿ ಕಾಣುವುದು ಭಾರತದ ಬೌದ್ಧಯುಗದೊಂದಿಗೆ. ಏಕೆಂದರೆ ಭಾರತದಲ್ಲಿ ಬೌದ್ಧಧರ್ಮ ಪ್ರಚಾರ ಹೊಂದಿದಂತೆ ದೇವಾಲಯ ನಿರ್ಮಾಣಕ್ಕೆ ಹೊಸ ಆಯಾಮಗಳು ದೊರೆತು ಈ ಹಿಂದೆ ದೇವಾಲಯ-ಕಟ್ಟಡಗಳಿಗೆ ಬಳಸುತ್ತಿದ್ದ ಕಟ್ಟಿಗೆ ಹಾಗೂ ಮಣ್ಣುಗಳ ಬದಲಿಗೆ ಈಗ ಕಲ್ಲು ಹೆಚ್ಚು ಬಳಕೆಗೊಂಡು ಮರದ ತುಂಡುಗಳ ಮೇಲೆ ಮಾಡುತ್ತಿದ್ದ ಕೌಶಲ್ಯಗಳನ್ನೆಲ್ಲ ಕಲ್ಲಿನ ಮೇಲೆ ಜನರು ಹೆಚ್ಚು ಹೆಚ್ಚು ಮಾಡತೊಡಗಿದರು.[೧] ಕ್ರಿ.ಪೂರ್ವ ೪-೫ ನೆ ಶತಮಾನದಲ್ಲಿ ಭಾರತ ದೇಶದ ಪ್ರಾಚೀನ ವಾಸ್ತುಶಿಲ್ಪ ಚರಿತ್ರೆ ಅಸ್ಪಷ್ಟವಾಗಿ ಕಾಣಿಸಿಕೊಂಡರು ಅದು ಮಹಾವೀರ ಮತ್ತು ಗೌತಮಬುದ್ಧರ ಮರಣದ ತರುವಾಯ ಒಮ್ಮೆಲೆ ಧರ್ಮದ ಹಿನ್ನೆಲೆ ಪಡೆದುಕೊಂಡು ಬೆಳೆದು ಬಂದಿರುವದನ್ನು ಕಾಣುತ್ತೇವೆ. ಉದಾಹರಣೆಗಾಗಿ ಮೌರ್ಯಚಕ್ರವರ್ತಿ ಅಶೋಕ ತಾನು ಅನುಸರಿಸಿದ ಮತ್ತು ಪ್ರೋತ್ಸಾಹಿಸಿದ ಬೌದ್ಧಧರ್ಮ ಹಾಗೂ ಅದರ ಸ್ಥಾಪಕ ಬುದ್ಧನ ಸ್ಮರಣಾರ್ಥವಾಗಿ, ಬುದ್ಧನು ಕುಳಿತು ಬೋಧಿಸಿದ ಸ್ಥಳ, ಹುಟ್ಟಿದ ಸ್ಥಳ, ಮರಣಿಸಿದ ಸ್ಥಳ ಇತ್ಯಾದಿ ಸ್ಥಳಗಳಲ್ಲಿ ಸ್ತೂಪಗಳನ್ನು ಕಟ್ಟಿಸಿ ಭಾರತೀಯ ಧಾರ್ಮಿಕ ವಾಸ್ತು ಶಿಲ್ಪ ಕ್ಷೇತ್ರಕ್ಕೆ ಬುನಾದಿ ಹಾಕಿಕೊಟ್ಟಿರುವದನ್ನು ಕಾಣುತ್ತೇವೆ. ಅದಕ್ಕಾಗಿ ಪ್ರಾಚೀನ ಭಾರತೀಯ ಚರಿತ್ರೆಯಲ್ಲಿ ಅಶೋಕ ಚಕ್ರವರ್ತಿ ಮಿನುಗುವ ನಕ್ಷತ್ರದಂತೆ ಹೊಳೆಯುವನೆಂದು ವಿದ್ವಾಂಸರ ಒಮ್ಮತಾಭಿಪ್ರಾಯವನ್ನು ಅಲ್ಲಗಳೆಯಲಾಗುವದಿಲ್ಲ. ಅಶೋಕನ ತರುವಾಯ ಬಂದ ಅನೇಕರು ಆತ ಜಾರಿಗೊಳಿಸಿದ ಧಾರ್ಮಿಕ ವಾಸ್ತುಶಿಲ್ಪಕಲೆಗೆ ಇನ್ನಷ್ಟು ಪ್ರೋತ್ಸಾಹಿಸಿ ಬೆಳೆಸಿದರು. ಉತ್ತರ ಭಾರತದ ಗುಪ್ತರಕಾಲ, ದಕ್ಷಿಣದ ಚಾಲುಕ್ಯ ಪಲ್ಲವ ಕಲೆಗಳು ಭಾರತೀಯ ಧಾರ್ಮಿಕ ವಾಸ್ತುಶಿಲ್ಪಕಲೆಗೆ ಒಂದು ನಿರ್ದಿಷ್ಟತೆಯನ್ನು ಒದಗಿಸಿ ನಂತರದ ವಾಸ್ತುಶಿಲ್ಪಕಲೆಯ ಬೆಳವಣಿಗೆಯ ಉನ್ನತಿಗೆ ತಳಪಾಯ ಹಾಕಿಕೊಟ್ಟವು.

## ೨. ವಾಸ್ತು ಹಿನ್ನೆಲೆ

ಪ್ರಾಣಿವರ್ಗದಲ್ಲಿ ಮಾನವನ ಮೇಲ್ಮೆ ಇರುವುದು ಅವನ ಸಂಸ್ಕೃತಿಯಿಂದ. ಏಕೆಂದರೆ ಪ್ರಾಣಿವರ್ಗದಲ್ಲಿ ಮನುಷ್ಯನನ್ನು ಹೊರತುಪಡಿಸಿದರೆ ಉಳಿದವುಗಳಿಗೆ ಸಂಸ್ಕೃತಿಯ ಕುರುಹುಗಳು ಕಾಣಿಸುವದಿಲ್ಲ. ಹೀಗಾಗಿ ಸಂಸ್ಕೃತಿಯು ಮನುಷ್ಯನ ಬಂಡವಾಳವಾಗಿ ಕೆಲಸ ನಿರ್ವಹಿಸಿತು. ಮನುಷ್ಯ ತನ್ನ ಅಪಾರವಾದ ಬುದ್ಧಿಮತ್ತೆಯನ್ನು ಪಯೋಗಿಸಿ, ತನ್ನೆರಡು ಕೈಗಳನ್ನು ಬಳಸಿಕೊಂಡು ಮಾಡಿದ ಕೆಲಸಗಳೆಲ್ಲವು ಅವನ ಸಂಸ್ಕೃತಿಯ ಹರಿವಿನಲ್ಲಿ ಸೇರಲ್ಪಡುತ್ತವೆ. ಮಾನಸಿಕ ಒತ್ತಡಕ್ಕೆ ಸಿಲುಕಿದ ಮನುಷ್ಯ ಕಲ್ಪನೆಗಳನ್ನು ತುಂಬಿಕೊಂಡು ಆಶಾವಾದಿಯಾಗಿ ಕೈಗಳನ್ನು ಬಳಸಿ ಕಲ್ಪನೆಗಳಿಗೆ ರೂಪಗಳನ್ನು ಒದಗಿಸಿದ. ಆಗ ಕಲ್ಪನೆಗಳು ಧರ್ಮವೆಂದಾದವು. ಕೈಕೆಲಸ ಮೂರ್ತಿಶಿಲ್ಪವಾಯಿತು.[೨] ಹೀಗೆ ಮನುಷ್ಯನ ಕಲ್ಪನೆಗಳಿಂದ ಧರ್ಮ ಉದ್ಭವಿಸಿದಂತೆ ಅವನ ಕೈಗಳಿಂದ ಧರ್ಮದ ಮೂರ್ತಿಶಿಲ್ಪ ಉದ್ಭವಿಸಿತು. ಒಂದೇ ನಾಣ್ಯದ ಎರಡು ಮುಖಗಳಾದ ಧರ್ಮ ಹಾಗೂ ಮೂರ್ತಿಶಿಲ್ಪ ಹಿನ್ನೆಲೆಗಳಿಗೆ ಹಲವಾರು ಕಾರಣಗಳುಂಟು. ೧) ನಿಸರ್ಗದ ಮಡಿಲಲ್ಲಿ ಬೆಳೆದ ಮನುಷ್ಯನಿಗೆ ಆದರಲ್ಲಡಗಿದ ಮೇಲ್ನೋಟಕ್ಕೆ ಕಾಣಿಸುವ ಗುಡ್ಡ-ಬೆಟ್ಟ, ಹಗಲು-ರಾತ್ರಿ, ನದಿಕೊಳ್ಳ, ಗುಡುಗು-ಮಿಂಚುಗಳು ಅವನಿಗೆ ಆಶ್ಚರ್ಯ-ಆತಂಕಗಳನ್ನು ಹುಟ್ಟಿಸಿದವು. ನೈಸರ್ಗಿಕವಾಗಿರುವ ಇಂತಹ ಆಶ್ಚರ್ಯಗಳಿಗೆ ಹೆದರಿ ಆತಂಕಗೊಂಡ ಮನುಷ್ಯನು ಇವುಗಳಲ್ಲಿ ಯಾವುದೋ ಒಂದು ಬಲವಾದ ಶಕ್ತಿ ಇದೆಯೆಂಬುದನ್ನು ಮೊದಲಬಾರಿಗೆ ಅರಿತುಕೊಂಡು ಅದರ ಪರಿಹಾರವೆಂಬಂತೆ ಅವುಗಳನ್ನೇ ಆರಾಧಿಸತೊಡಗಿದ. ಆಗ ಬೆಟ್ಟಗುಡ್ಡ, ನದಿಕೊಳ್ಳ, ಕಾಡುಮರ, ಸಮುದ್ರ, ಆಕಾಶ, ಸೂರ್ಯ, ಚಂದ್ರ, ಗುಡುಗು-ಮಿಂಚು, ಮಳೆ-ಬೆಂಕಿಗಳನ್ನು ದೇವತೆಗಳೆಂದು ಬಗೆದು ಪೂಜಿಸಿ ಕೊನೆಗೆ ಅವುಗಳಿಗೊಂದು ಮೂರ್ತಸ್ವರೂಪ ಕೊಟ್ಟನಲ್ಲದೆ ಮನುಷ್ಯರೂಪವನ್ನೇ ಕೊಟ್ಟನು. ಹೀಗಾಗಿ ದೇವಾಲಯ ವಾಸ್ತು ಹಿನ್ನೆಲೆಗೆ ನಿಸರ್ಗವು ಮೊದಲ ಕಾರಣವಾಗಿ ಪರಿಣಮಿಸಿತು.

೨. ಈ ವಾಸ್ತು ಶಿಲ್ಪ ಹಿನ್ನೆಲೆಗೆ ಮತ್ತೊಂದು ಮುಖ್ಯ ಕಾರಣವಾದುದೆಂದರೆ ಸಾವು ಈ ಸಾವೆಂಬುದು ಒಂದು ಗಂಭೀರ ಸಮಸ್ಯೆ. ಅದರ ಒಗಟನ್ನು ಬಿಡಿಸುವದು ಅಂದಿನಿಂದ ಇಂದಿನವರೆಗೂ ಸಾಧ್ಯವಾಗಿಲ್ಲ ಹಾಗಂತ ಒಗಟನ್ನು ಬಿಡಿಸುವ ಪ್ರಯತ್ನವೂ ನಿಂತಿಲ್ಲ. ಮನುಷ್ಯನ ಆಸೆ, ಆಕಾಂಕ್ಷೆ, ಯೋಜನೆಗಳಿಗೆ ಸಾವು ಸಂಚಕಾರಿ. ಅದಕ್ಕಾಗಿ ಸಾವಿಗೆ ಭಯಪಡುವಷ್ಟು ಮನುಷ್ಯ ಬೇರೆ ಯಾವುದಕ್ಕೂ ಭಯಪಡುವದಿಲ್ಲ. ಆದರಿಲ್ಲಿ ಸಾವಿಗೆ ಹೆದರಿಕೆ ಸತ್ತವನಿಗೂ ಹರಡಿರುವುದು ಸೋಜಿಗವೆನಿಸುತ್ತದೆ. ಹೀಗಾಗಿ ಸಾವನ್ನು ಕಂಡರೆ ಹೆದರುವವರು ಈಗ ಸತ್ತವನನ್ನು ಕಂಡು ಹೆದರ ತೊಡಗಿದರು. ಇಂತಹ ಹೆದರಿಕೆಯ ಹಿನ್ನೆಲೆಗೊಳಪಟ್ಟು ಪ್ರಾಚೀನ ಭಾರತೀಯ ಸಮಾಜದ ಧರ್ಮ, ನಂಬಿಕೆ, ಆಚಾರ, ವಿಚಾರಗಳು ಬೆಳೆದು ಬಂದಿದ್ದು, ಭಾರತೀಯ ಧರ್ಮವು ಅವುಗಳನ್ನು ಪೋಷಿಸಿ ಕೊಂಡು ಬಂದಿದೆ. ಹಿಂದೂ ಧರ್ಮ ಸಿದ್ಧಾಂತದ ಪ್ರಕಾರ ಪ್ರಾಚೀನ ಮಾನವನ ನಂಬಿಕೆಯು ಸತ್ತ ವ್ಯಕ್ತಿ ಎಂದೂ ಇಲ್ಲವಾಗುವದಿಲ್ಲ. ಅವನು ಯಾವುದೋ ರೀತಿಯಲ್ಲಿ ಉಳಿದುಕೊಂಡು

ಬರುತ್ತಾನೆಂಬುದಾಗಿದೆ. ಆದಕ್ಕಾಗಿ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಸತ್ತ ವ್ಯಕ್ತಿಯನ್ನು ಹೂಳುವ ಎಲ್ಲ ಪದ್ಧತಿಗಳೂ, ಸತ್ತವರು ಮತ್ತು ಮೇಲೆದ್ದು ಬರದಂತೆ ಬದುಕಿರುವ ಇತರರಿಗೆ ಸತ್ತವರಿಂದ ತೊಂದರೆ ಯಾಗಬಾರದೆಂಬ ಉಪಾಯಗಳೇ ಸಮಾದಿಗಳಾದವು. ಇದರಲ್ಲಿ ಎರಡು ನಂಬಿಕೆಗಳ ವೈರುದ್ಧ್ಯಗಳುಂಟು. ಒಂದು ಸತ್ತವನ ನೆನಪನ್ನು ಉಳಿಸಿಕೊಳ್ಳುವದಾದರೆ, ಮತ್ತೊಂದು ಸತ್ತವನು ಮೇಲೆದ್ದು ಬಂದು ತೊಂದರೆಕೊಡಬಾರದೆಂಬುದು. ಆದುದರಿಂದ ಸತ್ತವನ ಜೀವ ಅಥವಾ ಚೇತನವನ್ನು ಶಾಂತಗೊಳಿಸುವುದು, ತೃಪ್ತಿಪಡಿಸುವದು ತುಂಬ ಅಗತ್ಯವೆಂದು ತಿಳಿದು ಸತ್ತವನಿಗೆ ಸರಿಯಾಗಿ ಸಮಾದಿ ಮಾಡುವ ಪದ್ಧತಿಯನ್ನು ರೂಢಿಗೆ ತಂದಿರಬೇಕು. ಈಗ ಪ್ರಸಿದ್ಧವಾಗಿರುವ ಅಸಂಖ್ಯಾತ ಚಿಕ್ಕ ದೊಡ್ಡ ದೇವಾಲಯಗಳೆಲ್ಲವು ಸತ್ತವನ ಸಮಾಧಿಗಳು ಮಂದಿರಗಳಾಗಿ ಬೆಳೆದು ಬಂದಿವೆ. ಬೃಹತ್ ಶಿಲಾಯುಗದ ವೃತ್ತಕಾರದ ಕಲ್ಲಿನ ಸಮಾಧಿಗಳು, ಪೋರ್ಟ ಹೋಲ್ಸ ಸಮಾದಿಗಳು ಬೌದ್ಧಯುಗದ ಸ್ತೂಪಗಳಿಗೆ ಹೆಚ್ಚು ಪ್ರಭಾವ ಬೀರಿದಂತೆ ಕಂಡು ಬಂದರೂ ಸ್ತೂಪದ ಹಿನ್ನೆಲೆಯಲ್ಲಿ ವೈದಿಕಯುಗದ ಅಗ್ನಿಧ್ರಿಯ ಎಂಬ ಸಮಾಧಿ ಮಂದಿರವನ್ನು ನೋಡಬೇಕು. ಸ್ತೂಪಗಳಿಗೆ ಬೌದ್ಧಯುಗವು ಹೆಚ್ಚು ಪ್ರೋತ್ಸಾಹ ನೀಡಿದ್ದರಿಂದ ಸಮಾಧಿಸ್ತೂಪ, ಸ್ಮಾರಕ, ಆರಾಧನೆಗಳೆಂಬ ಮೂರು ಆಯಾಮಗಳು ದೇವಲಯ ಕಲ್ಪನೆಗೆ, ರಚನೆಗೆ ಹಿನ್ನೆಲೆಯನ್ನೊದಗಿಸಿದವು. ದೇವಾಲಯ ಕಲ್ಪನೆ ರಚನೆಗೆ ಸಾವು ಸಮಾಧಿ ಸ್ಮಾರಕ ಆಲಯ ಆರಾಧನೆಗಳೆಲ್ಲವು ಕಲೆತು ಬಂದಿವೆ.[೩] ಹೀಗೆ ಸತ್ತವನ ದೇಹದ ಮೇಲೆ ಸಮಾಧಿ ಕಟ್ಟುವ ರೀತಿಯಲ್ಲಿ ಆಯಾ ಕಾಲದೇಶಗಳಲ್ಲಿ ಧರ್ಮಕ್ಕನುಸಾರವಾಗಿ ಮಣ್ಣಿನ ಗುಡ್ಡೆ, ಕಟ್ಟೆ, ವೇದಿಕೆ, ಮಂಟಪ, ಗೂಡು, ಕೋಣೆಗಳಾಗಿ ಮಾರ್ಪಾಟು ಹೊಂದಿ ದೇವಾಲಯ ಬೆಳೆದು ಬಂದಿತು. ಮುಖ್ಯವಾಗಿ ಶಿಲಾಯುಗದ ಮಾನವ ವಾಸದ ಗುಡ್ಡದ ಸ್ವಾಭಾವಿಕ ಗುಹೆಗಳು, ನಂತರ ಅವನ ಕೈಯಿಂದ ಕಟೆದ ಗುಹೆ, ಚೈತ್ಯ ಆಲಯಗಳಾಗಿ, ಸತ್ತವನ ದೇಹದ ಮೇಲೆ ಮಾಡಿದ ಮಣ್ಣಿನ ಗುಡ್ಡೆ, ವೇದಿಕೆ, ಮಂಟಪಗಳು, ಗುಡುಗಳು ದೇವರ ವಾಸದ ಆಲಯಗಳಾಗಿ ಕೊನೆಗೆ ದೇವಾಲಯ ಗೃಹಗಳಾಗಿ ಬೆಳೆದು ಬಂದಿವೆ.

ಅಲೆಮಾರಿಯಾಗಿದ್ದ ಮಾನವನು ಒಂದು ನಿಶ್ಚಿತ ಸ್ಥಳದಲ್ಲಿ ನೆಲೆನಿಂತಾಗ ತನ್ನ ಸುರಕ್ಷತೆ ಹಾಗೂ ರಕ್ಷಣೆಗಾಗಿ ಒಂದು ಊರನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ. ಪ್ರಥಮವಾಗಿ ಕಟ್ಟಿಗೆ ಹುಲ್ಲಿನಿಂದ ಕೂಡಿದ ಗುಡಿಸಲನ್ನು ಕಟ್ಟಿಕೊಂಡ. ಕಾಲಬದಲಾದಂತೆ ನಾಗರಿಕತೆ ಬೆಳೆದಂತೆ ಗುಡಿಸಲಿನ ಜೊತೆಗೆ ಕಲ್ಲಿನಿಂದ ಮನೆ ಕಟ್ಟಿಕೊಂಡ. ಸ್ವಂತಕ್ಕಾಗಿ ಕಟ್ಟಿಕೊಂಡ ಮನೆ ಗೃಹವಾಸ್ತುಶಿಲ್ಪವೆಂದು ಕರೆಯಿಸಿಕೊಂಡಿತು. ಅವನು ದೇವರಿಗಾಗಿ ಕಟ್ಟಿದ ಸ್ಮಾರಕವು ಧಾರ್ಮಿಕ ವಾಸ್ತುಶಿಲ್ಪ ಅಥವಾ ದೇವಾಲಯ ವಾಸ್ತುಶಿಲ್ಪವೆನಿಸಿಕೊಂಡಿತು.[೪] ಈ ದೇವಾಲಯ ಮತ್ತು ರಚನೆಯು ದೇಹವೇ ದೇಗುಲವೆಂಬ ಕಲ್ಪನೆಯಡಿಯಲ್ಲಿಯು ಸಹ ರಚನೆಗೊಂಡಿವೆ. ಶಾಸ್ತ್ರಗ್ರಂಥಗಳು ಸಹ ಇದನ್ನು ಸಮರ್ಥಿಸುತ್ತವೆ.[೫]

### ೩) ಉದ್ದೇಶ

ದೇವಾಲಯಗಳ ನಿರ್ಮಾಣ ಕೇವಲ ಪ್ರಾಚೀನ ಮಾನವನ ನಂಬಿಕೆ- ಕಲ್ಪನೆಗಳ ತಳಹದಿಯ ಮೇಲೆ ರೂಪು ಪಡೆದುಕೊಂಡು ಬಂದಿದ್ದರೂ ಅವುಗಳ ನಿರ್ಮಾಣಕ್ಕೆ ಇನ್ನೂ ಅನೇಕ ಅಂಶಗಳು ಕಾರಣವಾಗಿವೆ.

ಅವುಗಳಲ್ಲಿ ಪ್ರಮುಖ ಸ್ಥಾನ ಪಡೆದಿರುವುದು ಧರ್ಮ. ದೇವಾಲಯಗಳ ನಿರ್ಮಾಣದಿಂದ ತಮಗೂ, ತಮ್ಮ ವಂಶಜರಿಗೂ ಮೋಕ್ಷ ಪ್ರಾಪ್ತವಾಗುವದೆಂಬ ತಿಳುವಳಿಕೆ ಪ್ರಾಚೀನ ಕಾಲದಿಂದ ಇಂದಿನವರೆಗೂ ಇದೆ. ಪರೋಕ್ಷ ವಿನಯ, ಸ್ವಪ್ರತಿಷ್ಠೆ, ಈಶ್ವರ ಪದವಿ, ಧರ್ಮಶ್ರದ್ಧೆ, ವಿಜಯದ ಸ್ಮರಣೆ, ಪುಣ್ಯಪ್ರಾಪ್ತಿಗಳೆಂಬ ಅನೇಕ ಅಂಶಗಳ ಸಫಲತೆಗಳಿಗಾಗಿ ರಾಜರು, ರಾಣಿಯರು, ಸಾಮಂತ ಮಂಡಳೇಶ್ವರರು, ಅಧಿಕಾರಿಗಳು, ಸಾಮಾನ್ಯರೆಂಬ ಬೇಧ ತೋರದೆ ಎಲ್ಲರೂ ದೇವಾಲಯ ನಿರ್ಮಾಣ, ಜೀರ್ಣೋದ್ಧಾರ, ಅವುಗಳ ನಿತ್ಯ ಚಟುವಟಿಕೆಗಳಿಗೆಂದು ದತ್ತಿ-ದಾನಗಳನ್ನು ನೀಡಿ ತಮ್ಮ ಉದ್ದೇಶದ ಜೊತೆಗೆ ಧರ್ಮ ಜಾಗೃತಿಯನ್ನುಂಟು ಮಾಡಿರುವರು. ಅಂತವರನ್ನು ಶಾಸನಗಳು ಕಾವ್ಯಾತ್ಮಕವಾಗಿ ವರ್ಣಿಸುತ್ತವೆ. ಕೊಪ್ಪಳ ಜಿಲ್ಲೆಗೆ ಸಂಬಂಧಿಸಿದಂತೆ ಶಾಸನಗಳ ಆಧಾರದಿಂದ ದೇವಾಲಯಗಳ ನಿರ್ಮಾಣ ಚಟುವಟಿಕೆಗಳಿಗೆ ಪ್ರೋತ್ಸಾಹಿಸಿ ದತ್ತಿದಾನಗಳ ಮೂಲಕ ಅವುಗಳಿಗೆ ಪೋಷಣೆ ನೀಡಿದವರಲ್ಲಿ ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ, ಕಲಚುರಿ, ಯಾದವ ಅರಸುಮನೆತನಗಳು ಗಮನಾರ್ಹ ಸೇವೆಯನ್ನು ಸಲ್ಲಿಸಿವೆ. ಇಂತಹ ಅರಸೊತ್ತಿಗೆಗಳ ಕಾಲದಲ್ಲಿ ಅವರಿಂದ ಪ್ರೋತ್ಸಾಹ ಪಡೆದು ರಚನೆಗೊಂಡ ದೇವಾಲಯಗಳನ್ನು ಶಾಸನಗಳು ವರ್ಣಿಸುತ್ತವೆ. ಇವುಗಳಲ್ಲಿ ೩೬ ಶೈವ, ೨ ಹರಿಹರ, ೬ ವೈಷ್ಣವ, ೨ ಸೂರ್ಯ, ೧ ಬ್ರಹ್ಮ, ೩ ಶಾಕ್ತ, ೧ ತ್ರೈಪುರುಷ, ೧೭ ಜೈನ ಒಟ್ಟು ೬೮ ದೇವಾಲಯಗಳು ಉಲ್ಲೇಖಗೊಂಡಿದ್ದು ಇತರ ದಾಖಲೆಗಳಿಂದ ಅವುಗಳ ಸಂಖ್ಯೆ ಇನ್ನೂ ಹೆಚ್ಚು ಎಂಬುದು ತಿಳಿದುಬರುವದು.

### ೪) ದೇವಾಲಯ ನಿರ್ಮಾಣ ಮತ್ತು ದತ್ತಿ ದಾನ

### ಅ) ಸ್ವ-ಪ್ರತಿಷ್ಠೆ

ಮನುಷ್ಯ ಜೀವನದಲ್ಲಿ ಏನನ್ನಾದರೂ ಸಾಧನೆಗೈದರೆ, ಸಮಾಜದಲ್ಲಿ ತನ್ನ ಸ್ಥಾನಮಾನವನ್ನು ತೋರ್ಪಡಿಸಿಕೊಳ್ಳುವಗೋಸ್ಕರ, ಸ್ವ ಪ್ರತಿಷ್ಠೆ ಬೆಳೆಸಿಕೊಳ್ಳಲು ಮತ್ತು ತಾನು ನಂಬಿಕೊಂಡುಬಂದ ಧರ್ಮದ ಏಳ್ಗೆಗಾಗಿ, ಆ ಧರ್ಮದ ದೇವರ ಆರಾಧನೆಗಾಗಿ, ದೇವಾಲಯ ನಿರ್ಮಿಸಿ ಅದರ ನಿತ್ಯಕರ್ಮಗಳಿಗೆಂದು ಭೂಮಿ-ಹಣದಾನ ಮಾಡಿರುವವಿಷಯವನ್ನು ಶಾಸನಗಳು ಉಲ್ಲೇಖಿಸುವವು.

ಕಲ್ಯಾಣಚಾಲುಕ್ಯ ಮನೆತನದ ಮೂಲಪುರುಷನಾದ ಎರಡನೇ ತೈಲಪನು ರಾಷ್ಟ್ರಕೂಟ ಮಾಂಡಳಿಕನಾಗಿದ್ದು ನಂತರ ಅವರನ್ನು ಸೋಲಿಸಿ ಕಲ್ಯಾಣದಲ್ಲಿ ಸ್ವತಂತ್ರರಾಜ್ಯವನ್ನು ಕಟ್ಟಿದ ವಿಜಯದ ನೆನಪಿಗಾಗಿ ಅನೇಕ ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಮಾರ್ಪಡಿಸಿದನಲ್ಲದೆ ಜೊತೆಗೆ ಅಲ್ಲಿ ತ್ರೈಪುರುಷ ದೇವಾಲಯ, ಹಲವು ಯಜ್ಞಯಾಗಾದಿಗಳನ್ನು ನೆರವೇರಿಸಿದನು. ಕೊಪ್ಪಳ ಜಿಲ್ಲೆಗೆ ಸಂಬಂಧಿಸಿದಂತೆ ನೋಡುವದಾದರೆ ಕ್ರಿ.ಶ. ೯೭೩ ರಲ್ಲಿ ತೈಲಪನು ಕೊಪ್ಪಳ ತಾಲೂಕಿನ ಮಾದಿನೂರನ್ನು ಅಗ್ರಹಾರವನ್ನಾಗಿ ಮಾರ್ಪಡಿಸಿ, ಅಲ್ಲಿಯ ಬ್ರಾಹ್ಮಣ ಚಟ್ಟೋಪಾಧ್ಯಾಯನಿಗೆ ಗ್ರಾಮವನ್ನು ದಾನವಾಗಿ ನೀಡಿದನು. ಅಗ್ರಹಾರವಾಗಿ ಮಾರ್ಪಡಿಸುವಾಗ ಅಲ್ಲೊಂದು ತ್ರೈಪುರುಷ ದೇವಾಲಯವನ್ನು ನಿರ್ಮಿಸಿ ಅದಕ್ಕೆಂದೆ

ಭೂಮಿದಾನ ಸಹ ಮಾಡಿದನು ಮತ್ತು ತನ್ನ ಪ್ರಥಮ ರಾಜ್ಯದೊಳಗೆ ಬ್ರಹ್ಮಾಂಡ ಕೃತುಯಜ್ಞವನ್ನು ನೆರವೇರಿಸಿದ.[೬]

ಅದೇ ರೀತಿ ೬ ನೇ ವಿಕ್ರಮಾದಿತ್ಯನ ದಂಡನಾಯಕ ಕನ್ನಡ ಸಂಧಿ ವಿಗ್ರಹಿ ಇಟಗಿಯ ಮಹದೇವ ದಂಡನಾಯಕ ತನ್ನ ಗ್ರಾಮದಲ್ಲಿ ತನ್ನ ಹೆಸರಿನಿಂದಲೇ ಶಿವನ ಗುಡಿಯನ್ನು ನಿರ್ಮಿಸಿದನು ಮತ್ತು ಅದಕ್ಕೆಂದೆ ಭೂಮಿದಾನ ನೀಡಿದ. ಶಾಸನವು ಮಹದೇವ ದಂಡನಾಯಕ ಒಬ್ಬ ಬ್ರಾಹ್ಮಣನಾಗಿದ್ದು ಅವನ ಸಂತತಿಯ ವಂಶವೃಕ್ಷವನ್ನು ನೀಡುತ್ತದೆ. ಮಹದೇವದಂಡನಾಯಕ ಬ್ರಾಹ್ಮಣನಾಗಿದ್ದು, ಅವನು ಶೈವ ಧರ್ಮವನ್ನು ಅನುಸರಿಸಿ ಶಿವನಿಗಾಗಿ ತನ್ನ ಹೆಸರಿನಿಂದ ಮಹದೇವ ದೇವಾಲಯವನ್ನು ನಿರ್ಮಿಸಿದನು. ಮಹದೇವ ದಂಡನಾಯಕ ಬ್ರಾಹ್ಮಣಧರ್ಮವನ್ನು ಬಿಟ್ಟು ಶಿವಧರ್ಮ ಸ್ವೀಕರಿಸಿದರೂ ತನ್ನ ತಂದೆಗಾಗಿ ನಾರಾಯಣ ಗುಡಿಯನ್ನು, ತಾಯಿಗಾಗಿ ಆಕೆಯ ಹೆಸರಿನ ಚಂದ್ರಲೇಶ್ವರ ದೇವಾಲಯಗಳನ್ನು ಸಹ ಕಟ್ಟಿಸಿದನು[೭] ಮತ್ತು ದಾನ-ಧರ್ಮಗಳನ್ನು ಕೈಕೊಂಡನು. ಇದು ಕೇವಲ ಸ್ವಪ್ರತಿಷ್ಠೆಗೆ ಮಾಡಿದ ಕಾರ್ಯವಾದರೂ ಅದರಲ್ಲಿ ಧರ್ಮಗಳ ಅಭ್ಯುದಯ, ತಂದೆ-ತಾಯಿಗಳ ಮೇಲಿನ ಪ್ರೀತಿವಾತ್ಸಲ್ಯಗಳು ಸೇರಿದ್ದವು.

## ಆ) ಪರೋಕ್ಷ ವಿನಯ

ವ್ಯಕ್ತಿ ತನ್ನ ಜೀವನದಲ್ಲಿ ಮಾಡಿದ ಒಳ್ಳೆಯ ಕಾರ್ಯವನ್ನು ಮನಗಂಡ ಇತರರು ಅವನು ಮರಣಿಸಿದ ನಂತರವು ಸಹ ಅವನಿಗೆ ಒಳ್ಳೆಯದನ್ನು ಬಯಸಿ ದೇವರ ದಯೆ, ದೇವರ ಸಾನಿಧ್ಯ ಸಿಗಲೆಂದು ಪರೋಕ್ಷ ವಿನಯ ಎಂಬರ್ಥದಲ್ಲಿ ಹಲವರು ತಮ್ಮ ತಾಯಿ, ಸಹೋದರ-ಸಹೋದರಿ ಇತ್ಯಾದಿ ಜನರಿಗೆ ಒಳ್ಳೆಯದನ್ನು ಬಯಸಿ ದೇವಾಲಯ ಕಟ್ಟಿಸುವ ದೇವಾಲಯಕ್ಕೆ ದಾನ ನೀಡುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಧರ್ಮದ ಬೆಳಕಿನಲ್ಲಿ ಜೀವನ ನಡೆಸಿರುವಂತಿದೆ. ಏಕೆಂದರೆ ಜಿಲ್ಲೆಯ ಶಾಸನಗಳಲ್ಲಿ ಪರೋಕ್ಷ ವಿನಯಾರ್ಥವಾಗಿ ದೇವಾಲಯ ನಿರ್ಮಾಣ, ಅದರ ಕಾರ್ಯಕ್ಕೆ ದಾನದತ್ತಿ ನೀಡಿದ ಕುರಿತು ವಿಷಯ ಪ್ರಸ್ತಾಪ ಬರುತ್ತದೆ.

೬ ನೆ ವಿಕ್ರಮಾದಿತ್ಯನ ದಂಡನಾಯಕ ಕನ್ನಡ ಸಂಧಿವಿಗ್ರಹಿ ಮಹದೇವ ದಂಡನಾಯಕ ತನ್ನ ತಂದೆ ತಾಯಿಗಳಿಗೆ ಒಳ್ಳೆಯದಾಗಲೆಂದು ಇಟಗಿಯಲ್ಲಿ ತಂದೆಯ ಹೆಸರಿನಲ್ಲಿ ನಾರಾಯಣ ದೇವಾಲಯ, ತಾಯಿಯ ಹೆಸರಿನಲ್ಲಿ ಚಂದ್ರಲೇಶ್ವರ ದೇವಾಲಯಗಳನ್ನು ನಿರ್ಮಿಸಿ ಭೂದಾನ ನೀಡಿದ ವಿಷಯವನ್ನು ಇಟಗಿಯ ಕ್ರಿ.ಶ. ೧೧೦೮-೧೧೧೩ ರ ಶಾಸನ ಉಲ್ಲೇಖಿಸುತ್ತದೆ.[೮]

ಲಕ್ಷ್ಮೀದೇವ ದಂಡನಾಯಕನ ಒಳ್ಳೆಯತನವನ್ನು ಬಯಸಿ ಬೂಚದಂಡನಾಯಕನು ಕಲ್ಲಂಗೆರೆಯಲ್ಲಿ ಅವನ ಹೆಸರಿನಿಂದಲೇ ಲಕ್ಷ್ಮೀನಾರಾಯಣ ದೇವಾಲಯ ನಿರ್ಮಿಸಿ ತನ್ನ ಲಕ್ಷ್ಮೀ ದೇವದಂಡನಾಯಕನ ಅನುಮತಿಯನ್ನು ಪಡೆದು ದೇವರಿಗೆ ಭೂದಾನ ಮಾಡಿದ ವಿಷಯ ಚಳಗೇರಿ ಶಾಸನದಲ್ಲಿದೆ.[೯] ಇಂತಹ

ಮತ್ತೊಂದು ನೇರ ಉಲ್ಲೇಖ ಕೊಪ್ಪಳ ಶಾಸನದಲ್ಲಿ ದೊರಕುತ್ತಿದ್ದು ಮಾಚಿದೇವನು ತನಗೆ ಪರೋಕ್ಷ ವಿನಯಾರ್ಥವಾಗಿ ಕುಶಜಿನಾಲಯಕ್ಕೆ ಪಾರ್ಶ್ವ ಬಿಂಬವನ್ನು ಮಾಡಿಸಿ ಪ್ರತಿಷ್ಠಾಪಿಸಿದನು.[೧೦] ಇದೇ ಕುಶಜಿನಾಲಯಕ್ಕೆ ಮಾಚಿದೇವನು ಸೋವರಾಯನಿಗೆ ಪರೋಕ್ಷ ವಿನಯಾರ್ಥವಾಗಿ ಚಂದ್ರಪ್ರಬ ಬಿಂಬವನ್ನು ಮಾಡಿಸಿದ ಕುರಿತು ವಿಗ್ರಹದ ಕೆಳಗೆ ಬರೆಯಲ್ಪಟ್ಟ ಶಾಸನದಿಂದ ತಿಳಿದುಬರುವದು.[೧೧]

## ಇ) ಪುಣ್ಯ ಸಂಪಾದನೆ

ವ್ಯಕ್ತಿಯು ತನ್ನ ಪ್ರತಿಷ್ಠೆ ಬೆಳೆಸಿಕೊಳ್ಳಲು, ಸಮಾಜದಲ್ಲಿ ಉನ್ನತಸ್ಥಾನ ಗಳಿಸಿಕೊಳ್ಳಲು ಯಾಗ, ದಾನ, ದೇವಾಲಯ ನಿರ್ಮಾಣಗಳಂತಹ ಚಟುವಟಿಕೆಗಳಲ್ಲಿ ತೊಡಗಿಕೊಂಡ ವಿಷಯ ಮೇಲಿನ ಉಲ್ಲೇಖದಿಂದ ತಿಳಿದು ಬಂದರೆ, ವ್ಯಕ್ತಿ ಸ್ವತಃ ತಾನು ಪುಣ್ಯ ಸಂಪಾದನೆ ಮಾಡಬೇಕೆಂದು ಬಯಸಿ ದೇವರಿಗೆ ಗುಡಿಕಟ್ಟಿಸಿ ಕಳಸಾರೋಹಣ ಮಾಡಿದ ಒಂದು ಉದಾಹರಣೆ ಕೊಪ್ಪಳದ ಶಾಸನದಲ್ಲಿ ದೊರಕುತ್ತದೆ.

ರಾಷ್ಟ್ರಕೂಟ ಅರಸನಾದ ಇಂದ್ರ ರಾಜ್ಯವಾಳುತ್ತಿದ್ದ ಸಮಯದಲ್ಲಿ ಇಂದ್ರನ ದಂಡನಾಯಕ ಮಾಮರಸ ಸಿದ್ಧ ಕುಪಣಕ್ಕೆ (ಕೊಪ್ಪಳ) ತೀರ್ಥವಂದನಾರ್ಥವಾಗಿ ಬಂದಿದ್ದ ಸಮಯದಲ್ಲಿ ಕದಂಬರ ಪೆರ್ಮ್ಮದೇವ ಮತ್ತು ದಡಿಯಮರಸರು ತಮಗೆ ಪುಣ್ಯವಾಗಲೆಂದು ತಾವು ಕಟ್ಟಿಸಿದ ಬಸದಿಗೆ ಕಳಸಾರೋಹಣ ಮಾಡಿಸಿದರಲ್ಲದೆ ದಾನಗಳನ್ನು ಕೈಕೊಂಡರು.[೧೨]

## ಈ) ಪುತ್ರೋತ್ಸವ

ನಮ್ಮ ಜನರ ಧಾರ್ಮಿಕ ಮನೋಧರ್ಮ ಒಂದೇ ರೀತಿಯಾಗಿರಲಿಲ್ಲ. ಅದು ಹಲವು ಬಗೆಯಿಂದ ಜನರ ಮನಸ್ಸಿನಲ್ಲಿ ಬೇರುಬಿಟ್ಟಿತ್ತು. ಮಕ್ಕಳನ್ನು ಪಡೆಯುವುದು ವೈಜ್ಞಾನಿಕವಾಗಿ ಗಂಡು ಹೆಣ್ಣು ಸಮಾಗಮ ಹೊಂದಿ ಪಡೆಯುವದಾಗಿತ್ತು. ಕೆಲವೊಮ್ಮೆ ಗಂಡಾಗಲಿ, ಹೆಣ್ಣಾಗಲಿ ಇಬ್ಬರಲ್ಲಿ ಯಾರಿಗಾದರೂ ಮಕ್ಕಳು ಪಡೆಯುವ ಸಾಮರ್ಥ್ಯವಿರದಿದ್ದರೆ ಅಂತವರಿಗೆ ಮಕ್ಕಳಾಗುತ್ತಿರಲಿಲ್ಲ. ಆದರೆ ನಮ್ಮ ಪೂರ್ವಜರು ದೈವ-ಧರ್ಮಗಳಲ್ಲಿ ಹೆಚ್ಚು ನಂಬಿಕೆಯಿಟ್ಟುಕೊಂಡಿದ್ದರಿಂದ ಮಕ್ಕಳಾಗದಿದ್ದರೆ ದೇವರು ತಮಗೆ ಕರುಣೆ ತೋರಲಿಲ್ಲವೆಂದು ಹಲವಾರು ರೀತಿಯಿಂದ ದೇವರನ್ನು ಪೂಜಿಸಿ ಆರಾಧಿಸುತ್ತಿದ್ದರು. ಮಕ್ಕಳಾದರೆ ಅದು ದೇವರು ತಮಗೆ ನೀಡಿದ ವರವೆಂದು ತಿಳಿದುಕೊಂಡು ಮತ್ತಷ್ಟು ದೇವರಲ್ಲಿ ನಂಬಿಕೆ ಬೆಳೆಸಿಕೊಳ್ಳುತ್ತಿದ್ದರು. ಒಂದು ವೇಳೆ ಮಕ್ಕಳಾಗದೇ ಇದ್ದರೆ ಅದು ತಮ್ಮ ಕರ್ಮವೆಂದು ದೇವರು ತಮ್ಮ ಮೇಲೆ ಕರುಣೆ ತೋರಲಿಲ್ಲವೆಂದು ನಿಟ್ಟುಸಿರು ಬಿಡುತ್ತಿದ್ದರು. ನಂಬಿಕೆ ಮನುಷ್ಯನನ್ನು ಯಾವ ಮಟ್ಟಕ್ಕಾದರೂ ತಂದು ನಿಲ್ಲಿಸುತ್ತಿತ್ತೆಂಬುದು ಕೆಳಗಿನ ಉದಾಹರಣೆಯಿಂದ ತಿಳಿದು ಬರುವುದು. ಕೆಲವೊಮ್ಮೆ ನಂಬಿಕೆ ಮನುಷ್ಯನನ್ನು ಅಧಃಪತನಕ್ಕೂ ನೂಕುವುದುಂಟು. ಅದು ಜನರಿಗೆ ತಿಳಿಯದೇ ಹೋದುದರಿಂದ ಅನಾಹುತಗಳು ಜರುಗುತ್ತಿದ್ದವು.

ಮಹಾಪ್ರಧಾನ ಬಾಹತ್ತರ ನಿಯೋಗಾಧಿಪತಿ ವಾಸುದೇವ ವಾಮನದೇವ ನಾಯಕ ತನಗೆ ಪುತ್ರೋತ್ಸವವಾದ ನಿಮಿತ್ಯ ಸಂಕಲೂರದ ಶ್ರೀ ಸಂಕಲಾದೇವಿಗೆ ದಾನ ನೀಡಿದ್ದನ್ನು ಶಾಸನ ಹೇಳುವುದು [೧೩] ಬಹುಶಃ ವಾಮನ ದೇವನಾಯಕ ಶ್ರೀ ಸಂಕಲಾದೇವಿಗೆ ಪುತ್ರನನ್ನು ಕೊಡಬೇಕೆಂದು ಬೇಡಿಕೊಂಡಿರಬೇಕು. ಇಲ್ಲವೇ ಪುತ್ರನು ಹುಟ್ಟಿದ ಸಂತೋಷಕ್ಕಾಗಿ ದೇವಿಗೆ ದಾನ ನೀಡಬೇಕೆಂಬ ಮನಸ್ಸು ಹುಟ್ಟಿರಬೇಕು.

## ಉ. ಶಿಲ್ಪ ಪ್ರತಿಷ್ಠೆ ಮತ್ತು ದಾನ

ಕೆಲವರು ಪುತ್ರೋತ್ಸವ ಪರೋಕ್ಷ ವಿನಯ ಇತ್ಯಾದಿ ನಿಮಿತ್ಯ ದಾನಗಳನ್ನು ನೀಡಿದರೆ ಇನ್ನು ಕೆಲವರು ದೇವಾಲಯ(ಬಸದಿ)ಗಳಲ್ಲಿ ದೇವರ ಶಿಲ್ಪಗಳನ್ನು ಶಿಲ್ಪಿಯಿಂದ ಮಾಡಿಸಿ ಪ್ರತಿಷ್ಠಾಪಿಸುತ್ತಿದ್ದರಲ್ಲದೆ ಆ ಸಮಯದಲ್ಲಿ ದಾನಗಳನ್ನು ಸಹ ನೀಡುತ್ತಿದ್ದರು. ಇಂತಹ ಎರಡು ಉದಾಹರಣೆಗಳು ಜಿಲ್ಲೆಯ ಶಾಸನಗಳಲ್ಲಿ ದೊರಕುತ್ತವೆ.

ಕುಕನೂರದಲ್ಲಿ ಗವರೇಶ್ವರ ದೇವಾಲಯ ನಿರ್ಮಾಣವಾಗಿ ದೇವರ ಶಿಲ್ಪವನ್ನು ಪ್ರತಿಷ್ಠೆ ಮಾಡುವ ಶುಭ ಸಂದರ್ಭದಲ್ಲಿ ದಾನ ನೀಡಿದರೆ ಪುಣ್ಯ ಲಭಿಸುವದೆಂಬ ನಂಬಿಕೆ ಇರಬೇಕು. ಅಂತೆಯೇ ಈಶ್ವರ ಸೆಟ್ಟಿಯು ಸ್ಥಳದ ಸಮಸ್ತರು ಗವರೇಶ್ವರ ದೇವರ ಪ್ರತಿಷ್ಠಾ ಕಾಲದಲ್ಲಿ ನೆರೆದ ಸಂದರ್ಭದಲ್ಲಿ ದೇವರಿಗೆ ದಾನ ನೀಡಿದನೆಂದು ಶಾಸನ ಉಲ್ಲೇಖಿಸುತ್ತದೆ.[೧೪]

ಮಾದಣ ದಂಡನಾಯಕ ಮೂಲಸಂಘ ದೇಶಿಯ ಗಣಕ್ಕೆ ಸೇರಿದವನಾಗಿದ್ದು ಇವನು ಯಲಬುರ್ಗದಲ್ಲಿ ತಾನೆ ಕಟ್ಟಿಸಿದ ಬಸದಿಗೆ ತನ್ನ ನೊಂಪಿಯ ನಿಮಿತ್ಯ ೨೪ ತೀರ್ಥಂಕರ ಬಿಂಬ (ಪ್ರತಿಮೆ) ಮಾಡಿಸಿ ಪ್ರತಿಷ್ಠೆ ಗೊಳಿಸಿದನೆಂದು ಶಿಲ್ಪದ ಕೆಳಗಿರುವ ಶಾಸನದಿಂದ ತಿಳಿದು ಬರುವದು.[೧೫]

## ಊ. ದೇವಾಲಯ, ಕೆರೆ, ಸತ್ರ, ಬಾವಿಗಳ ನಿರ್ಮಾಣ, ಜೀರ್ಣೋದ್ಧಾರ ಮತ್ತು ದತ್ತಿದಾನ

ಪುತ್ರೋತ್ಸವ, ಪುಣ್ಯ, ಪರೋಕ್ಷ ವಿನಯ, ಸ್ವಪ್ರತಿಷ್ಠೆ ಇತ್ಯಾದಿಗಳ ಸಲುವಾಗಿ ದತ್ತಿ ದಾನಗಳನ್ನು ನೀಡಿದ ಉದಾಹರಣೆಗಳಾದರೆ ಇನ್ನೂ ಕೆಲವರು ದೇವಾಲಯ, ಕೆರೆ, ಅನ್ನ, ಸತ್ರ ಇತ್ಯಾದಿಗಳನ್ನು ಕಟ್ಟಿಸಿ ದಾನಗಳನ್ನು ನೀಡಿರುವುದುಂಟು. ಅಂತವರ ಕುರಿತು ಶಾಸನಗಳು ಸಾಕಷ್ಟು ವರ್ಣಿಸಿವೆ.

ಸಿಂಧ ಮಹಾಮಂಡಳೇಶ್ವರ ವಿಕ್ರಮಾದಿತ್ಯ ದೇವನ ಮಹಾಪ್ರಧಾನ ತಂತ್ರಾಧಿಷ್ಠಾಯಕ ದೇವಣ ನಾಯಕನ (ಮಡದಿ)ನಾಯಕಿತಿ ಯಲಬುರ್ಗದಲ್ಲಿ ಪಾರ್ಶ್ವನಾಥ ಚೈತ್ಯವನ್ನು ಮಾಡಿಸಿದಳಲ್ಲದೆ ಅದರ ಕಾರ್ಯಚಟುವಟಿಕೆಗಳಿಗೆಂದು ದಾನವನ್ನು ಸಹ ನೀಡಿದಳು.[೧೬] ರಾಜೂರ ಗ್ರಾಮದಲ್ಲಿ ಮಾಳಪರಸ ಎಂಬುವವ ೬ ನೇ ವಿಕ್ರಮಾದಿತ್ಯನ ಆಡಳಿತ ಅವಧಿಯಲ್ಲಿ ತಾನೆ ಮಾಡಿಸಿದ ಬಸದಿಯ ಜೀರ್ಣೋದ್ಧಾರಕ್ಕೆಂದು ಭೂದಾನ ನೀಡಿದನೆಂದು ಅಲ್ಲಿಯ ಶಾಸನ ಹೇಳುತ್ತದೆ.[೧೭]

ಅದರಂತೆ ಕರುವ ಗುಲ್ಲಿ ಮಯ್ಯನು ಅಳವಂಡಿಯ ಊರ ಪಶ್ಚಿಮಕ್ಕೆ ತೋಟವನ್ನು, ಪೂರ್ವಕ್ಕೆ ಬಾವಿಯನ್ನು, ಕಲದೇಗುಲ, ಸತ್ರ, ಸತ್ರದಮನೆ ಮತ್ತು ಊರ ನಡುವೆ ಶ್ರೀ ಬಾಗಿಲನ್ನು ಮಾಡಿಸಿರುವದನ್ನು ನೋಡಿದರೆ ಅವನು ಲೋಕಕಲ್ಯಾಣಕ್ಕೆ ತನ್ನ ಸೇವೆಯನ್ನು ಮೂಡುಪಾಗಿಟ್ಟಿರುವದು ವಿದಿತವಾಗುತ್ತದೆ.[೧೮] ಇವನಂತೆಯೇ ಹುಲಿಗಿಯ ಚೌವೇದಿ (ನಾಲ್ಕು ವೇದಭಲ್ಲ) ಭಟ್ಟನ ಮಕ್ಕಳಲ್ಲಿ ಒಬ್ಬನಾದ ಸೋಮನಾಥನು ರುದ್ರ ಸದ್ಮವನ್ನು (ಶಿವದೇವಾಲಯ) ಮಾಡಿಸಿದನು. ಇವನು ಪುಲಿಗೆಯ ಊರೊಡೆಯನಾಗಿದ್ದ ಸಮಯದಲ್ಲಿ ಪತ್ನಿ ಸಮೇತನಾಗಿ ದೇವಾಲಯಕ್ಕೆ ಬಂದು ಭೂದಾನ ನೀಡಿ ಶೈವ ಧರ್ಮವನ್ನುದ್ಧರಿಸಿದನು.[೧೯]

ಇಳಿದಾಳ ಚಿಟ್ಟಿ ಸೆಟ್ಟಿಯ ಮಗ ನಾಗಿಸೆಟ್ಟಿ ಕಲ್ಕುಟಿಗನ ಕೈಯಿಂದ ಮಾದಿನೂರದಲ್ಲಿ ಸೋಮನಾಥ ದೇವರ ಸಲುವಾಗಿ ಶಿವಾಲಯವನ್ನು ಕಲ್ಲು ಸಮೇತವಾಗಿ ನಿಲ್ಲಿಸುವದರ ಜೊತೆಗೆ ಜೀರ್ಣೋದ್ಧಾರಗೊಳಿಸಿ ಶಿವಧರ್ಮವನ್ನುದ್ಧರಿಸಿದನು.[೨೦] ಇವನಂತೆಯೇ ಬಮ್ಮದೇವ ಮತ್ತು ಬಾಗಲದೇವಿಯರ ಮಗಳಾದ ಬಮ್ಮಲದೇವಿ ಮುಧುವೊಳ ಗ್ರಾಮದಲ್ಲಿ ಹರಿಹರ ದೇವಾಲಯವನ್ನು ನಿರ್ಮಿಸಿ ಸರ್ವಧರ್ಮ, ಪ್ರತಿಪಾದಕಳೆನಿಸಿದಳು.[೨೧] ಬಮ್ಮಲದೇವಿಯ ಸರ್ವಧರ್ಮವನ್ನು ಎತ್ತಿ ಹಿಡಿದ ಮತ್ತೊಬ್ಬ ಧರ್ಮಸಾಧಕ ಸಂಕಮನ ಮಂತ್ರಿ ಶ್ರೇಷ್ಠ ಏಚಿಮಯ್ಯ (ರೇಚಿದೇವ). ಇವನು ಕವಲೂರದಲ್ಲಿ ಹರಿಹರ ದೇವಾಲಯವನ್ನು ನಿರ್ಮಿಸುವದರ ಜೊತೆಗೆ ದೇವಾಲಯಕ್ಕೆ ಎಡೆಯ ಹಳ್ಳಿಯನ್ನು ದಾನವಾಗಿ ನೀಡಿ ಬಮ್ಮಲದೇವಿಯಂತೆ ಸಮಾಜದಲ್ಲಿ ಉನ್ನತ ವ್ಯಕ್ತಿಯೆನಿಸಿಕೊಂಡನು.[೨೨] ಬ್ರಾಹ್ಮಣ ಧರ್ಮದ ಶ್ರೀವತ್ಸವಗೋತ್ರದ ಭೀಮನ ಪತ್ನಿ ದುಗ್ಗಿಯಕ್ಕರ ಮಗ ಚಾವರಾಜ ಅಳವಂಡಿಯಲ್ಲಿ ಕೇಶವ ದೇವಾಲಯ, ಸಾರ್ವಜನಿಕರಿಗೆಂದು ಅರವಟ್ಟಿಗೆ, ಅಗ್ಗಿಷ್ಟಿಗೆಗಳನ್ನು ಮಾಡಿಸಿ ಬ್ರಾಹ್ಮಣ ಧರ್ಮಾರಾಧಕನಾಗಿರುವದರ ಜೊತೆಗೆ ಲೋಕಕಲ್ಯಾಣದ ಸಲುವಾಗಿ ಜನರಿಗೆ ಅರವಟ್ಟಿಗೆ, ಅಗ್ಗಿಷ್ಟಗೆಗಳನ್ನು ಕಟ್ಟಿಸಿದ[೨೩] ತಂದೆ ಕಟ್ಟಿಸಿದ ಗುಡಿಗೆ ಮಗ ಕಳಶವಿಟ್ಟ ಎಂಬ ಗಾದೆಯಂತೆ ಚಾವರಾಜನ ಮಗ ಸರ್ವದೇವನು ತಂದೆ ಕಟ್ಟಿಸಿದ ದೇವಾಲಯಕ್ಕೆ ಹೊನ್ನಬಡ್ಡಿಯಲ್ಲಿ ಬಂದ ಹಣವನ್ನು ದಾನವಾಗಿ ನೀಡಿ ತಾನು ಸಹ ತಂದೆಗಿಂತ ಕಡಿಮೆಯಿಲ್ಲವೆಂಬುದನ್ನು ತೋರಿಸಿಕೊಟ್ಟಿರುವನು.

ಚಾವರಾಜನ ಮಗ ಸರ್ವದೇವರಂತೆ ಸೋಮಯಾಜಿ ಅವನ ಮಗನ ಮಗಳಾದ ಶಾಂತಿಕಬ್ಬೆಯರು ಸಹ ಸ್ತುತಿಸಲ್ಪಡುವರು. ಏಕೆಂದರೆ ಆಗಸ್ತ್ಯ ಗೋತ್ರದ ಬ್ರಾಹ್ಮಣ ಚೌಡಭಟ್ಟನ ಮಗ ಸೋಮಯಾಜಿ ಕವಲೂರ ಗ್ರಾಮದಲ್ಲಿ ವಿಷ್ಣು ದೇವಾಲಯ ನಿರ್ಮಿಸಿ ವೈಷ್ಣವ ಧರ್ಮೋದ್ಧಾರಕನಾದಂತೆ ಅಲ್ಲಿ ಸಾರ್ವಜನಿಕರ ಸಲುವಾಗಿ ಸತ್ರ ಹಾಗೂ ಕೆರೆಯನ್ನೊಂದು ಕಟ್ಟಿಸಿ ಹೆಸರಾದನು. ಸೋಮಯಾಜಿಯಂತೆ ಇವನ ಮಗ ಮುದ್ದೆಭಟ್ಟ ಪತ್ನಿ ಮಾಕಬ್ಬೆಯರ ಮಗಳು ಹಾಗೂ ಜಕ್ಕನ ಮಡದಿಯಾದ ಶಾಂತಿಕಬ್ಬೆಯು ಕವಲೂರ ವಿಷ್ಣುದೇವಾಲಯದಲ್ಲಿ ತಾನು ಸಹ ಕೇಶವ ದೇವರನ್ನು ಪ್ರತಿಷ್ಠೆ ಮಾಡಿ ದಾನಗೈದಳು[೨೪] ಮೇಲಿನವರೆಲ್ಲ ಒಂದಿಲ್ಲೊಂದು ಉದ್ದೇಶಕ್ಕಾಗಿ ದೇವಾಲಯ, ಕೆರೆ, ಬಾವಿ, ಅನ್ನಸತ್ರ, ಅರವಟ್ಟಿಗೆಗಳನ್ನು ಕಟ್ಟಿಸಿ ಜೀರ್ಣೋದ್ಧಾರಗೊಳಿಸುವದರ ಜೊತೆಯಲ್ಲಿ ಅವುಗಳ ನಿರ್ವಹಣೆಗೆಂದು ಹಣ ಭೂದಾನ ಮಾಡಿ ತಮ್ಮ ಉದ್ದೇಶವನ್ನು ಈಡೇರಿಸಿ ಕೊಂಡವರು. ದೇವಾಲಯ ಕಟ್ಟಿಸುವ ಶಕ್ತಿಯಿಲ್ಲದವರು ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ದೇವಾಲಯಗಳಿಗೆ ತಮ್ಮ ಕೈಲಾದಷ್ಟು ದಾನ ನೀಡಿ ಧರ್ಮವಂತರಾಗಿ ಬಾಳಿರುವದನ್ನು ಜಿಲ್ಲೆಯ ಅನೇಕ ಶಾಸನಗಳು ವರ್ಣಿಸುತ್ತವೆ.

## ೫. ಪ್ರಮುಖ ವಾಸ್ತು ಲಕ್ಷಣಗಳು

ವಿಶಾಲವಾದ ಭಾರತ ದೇಶದಲ್ಲಿ ದೇವಾಲಯಗಳ ನಿರ್ಮಾಣದ ರಚನೆ ವೈವಿಧ್ಯಮಯವಾಗಿ ಬೆಳೆದು ಅದು ಶಾಸ್ತ್ರ ಗ್ರಂಥಗಳು ವ್ಯಕ್ತಪಡಿಸುವ ವಿಧಿವಿಧಾನ ನಿಷೇದಗಳೊಂದಿಗೆ ಪ್ರಾದೇಶಿಕ ಭಿನ್ನತೆ, ಪರಸ್ಪರ ಪ್ರಭಾವ, ಪಾಕೃತಿಕ ಪರಿಸರ, ಕಟ್ಟಡಗಳಿಗೆ ಬಳಸಿದ ಸಾಮಗ್ರಿಗಳ ಅನುಕೂಲತೆ, ಕಾಲಕಾಲಕ್ಕೆ ಪ್ರಬಲವಾಗುತ್ತಿದ್ದ ವಿವಿಧ ಮತಗಳು, ಜನರ ಅಭಿರುಚಿ, ಅರಸುಮನೆತಗಳ ಪ್ರೋತ್ಸಾಹ, ಸ್ಥಳದ ಆಯ್ಕೆ, ಕಟ್ಟಡದ ಅವಶ್ಯಕತೆ ಶಿಲ್ಪಿಗಳ ಮನೋಧರ್ಮ ಮತ್ತು ಅವರ ಕೈಚಳಕದಂತಹ ಹಲವಾರು ಅಂಶಗಳ ಒನ್ನಲೆಯಲ್ಲಿ ದೇವಾಲಯಗಳು ಸ್ಥಳೀಯ ಪ್ರಭೇದಗಳಿಂದ ಭಿನ್ನ-ಭಿನ್ನವಾಗಿ ಬೆಳೆದು ಬಂದಿವೆ.[೨೫] ಈ ಎಲ್ಲ ಕಾರಣಗಳಿಂದ ಪ್ರಾದೇಶಿಕವಾಗಿ ಉಗಮಗೊಂಡು ವಿಕಾಸ ಪಡೆದವು. ಈ ದೇವಾಲಯಗಳ ಹಲವು ವಾಸ್ತುಶೈಲಿಗಳು ಭಾರತ ದೇಶದ ತುಂಬೆಲ್ಲ ಕಂಡು ಬರುವಂತೆ ಕೊಪ್ಪಳ ಜಿಲ್ಲೆಯಲ್ಲಿ ಕಂಡುಬರುತ್ತವೆ.

ಈ ಜಿಲ್ಲೆಯ ದೇವಾಲಯಗಳ ಒಟ್ಟು ಸ್ವರೂಪವನ್ನು ತಿಳಿದುಕೊಳ್ಳುವ ಮುನ್ನ ಅದರ ಪ್ರಧಾನ ಅಂಶಗಳ ಸ್ಥೂಲ ಪರಿಚಯ ಮಾಡಿಕೊಳ್ಳುವದು ಸೂಕ್ತವೆನಿಸುತ್ತದೆ. ಜಿಲ್ಲೆಯಲ್ಲಿ ಕಂಡುಬರುವ ದೇವಾಲಯಗಳ ರಚನೆಯಲ್ಲಿ ಎರಡು ಮುಖ್ಯ ಮಾನ ಮತ್ತು ವಿನ್ಯಾಸ ಸೂತ್ರಗಳನ್ನು ಅಳವಡಿಸಲಾಗಿದ್ದು ಇವು ಕ್ರಮವಾಗಿ ದೇವಾಲಯ ರಚನೆಯಲ್ಲಿ ಲಂಬರೇಖೆ ಹಾಗೂ ಅಕ್ಷರೇಖೆಗಳೆಂದು ಕರೆಯುವರು. ಇವು ದೇವಾಲಯಗಳ ವಿವಿಧ ಭಾಗಗಳ ಅಳತೆ ಮತ್ತು ಪ್ರಮಾಣಗಳನ್ನು ಹಾಗೂ ಹೊರಚಾಚುವಿಕೆಯನ್ನು ಸೂಚಿಸುತ್ತವೆ. ಅಳತೆ ಪ್ರಮಾಣದ ಒಡಿತದಲ್ಲಿ ಸಿಲುಕಿದ ದೇವಾಲಯಗಳು ಮುಖ್ಯವಾಗಿ ಊರ್ಧ್ವಮುಖ ಕ್ರಮದಲ್ಲಿ ಕೆಳಗಿನಿಂದ ಮೇಲಕ್ಕೆ ಹೋದರೆ, ತಿರ್ಯ ಮುಖ ಕ್ರಮದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮಂಟಪ, ಮುಖ ಮಂಟಪ ಇತ್ಯಾದಿಗಳ ರಚನೆಗಳು ಹುಟ್ಟಿಕೊಳ್ಳುತ್ತವೆ.

ಅದೇ ರೀತಿ ಊರ್ಧ್ವ ಕ್ರಮದಲ್ಲಿ ದೇವಾಲಯವನ್ನು ಅಧಿಷ್ಠಾನ, ಭಿತ್ತಿ, ಪ್ರಸ್ತರ (ಮುಂಚಾಚು ಭಾಗ), ಗ್ರೀವ (ಗಳ), ಶಿಖರ (ಸ್ತೂಪಿ), ಸ್ತೂಪಿ (ಕಳಶ) ಗಳೆಂಬ ಆರು ಭಾಗಗಳಲ್ಲಿ ವಿಂಗಡಿಸಿ ಅದನ್ನು 'ಷಡ್ವರ್ಗ ದೇವಾಲಯ'ವೆಂದು ಕರೆಯಲಾಗಿದೆ. ಇನ್ನೂ ಈ ಷಡ್ವರ್ಗದಲ್ಲಿ ಪ್ರತಿಯೊಂದು ಭಾಗಕ್ಕೂ ಮತ್ತೆ ಅನೇಕ ಭಾಗಗಳನ್ನು ಕೂಡಿಸಲಾಗಿದೆ. ತಿರ್ಯ ಕ್ರಮದಲ್ಲಿ ಗರ್ಭಗೃಹ, ಪ್ರದಕ್ಷಿಣ ಪಥ, ಅಂತರಾಳ (ಸುಖನಾಸಿ) ಅರ್ಧಮಂಟಪ, ನವರಂಗ, ಮುಖಮಂಟಪ, ನಂದಿಮಂಟಪ, ಕಲ್ಯಾಣ ಮಂಟಪಗಳಿರುತ್ತವೆ. ಈ ಪ್ರಕಾರದ ಜಿಲ್ಲೆಯ ದೇವಾಲಯಗಳು ಶಾಸ್ತ್ರಕಾರರಿಂದ ವರ್ಣಿಸಲ್ಪಟ್ಟ ದೇವಾಲಯ ರಚನೆಯಲ್ಲಿ ಕರಾರುವಕ್ಕಾಗಿ ಕಟ್ಟಿದಂತೆ ಕಂಡು ಬಂದರೂ ಕೆಲವು ದೇವಾಲಯಗಳಲ್ಲಿ ಶಿಲ್ಪಿಗಳು ತಮ್ಮ ಅಭಿರುಚಿಗೆ ತಕ್ಕಂತೆ, ನಿರ್ಮಾಣಕಾರರ ಪ್ರೋತ್ಸಾಹಗಳಿಗೆ ಅನುಗುಣವಾಗಿ ದೇವಾಲಯಗಳ ಸೌಂದರ್ಯ ಹೆಚ್ಚಿಸಲು ಶಾಸ್ತ್ರಕಾರರ ನಿಯಮಗಳನ್ನು ಉಲ್ಲಂಘಿಸಿರುವದನ್ನು ಕಾಣುತ್ತೇವೆ.

### ಸ್ಥಳ

ದೇವಾಲಯ ನಿರ್ಮಿಸಲು ಜಿಲ್ಲೆಯ ಶಿಲ್ಪಿಗಳು ಮುಖ್ಯವಾಗಿ ಬೆಟ್ಟ, ನದಿ, ಹಳ್ಳ, ಕೊಳ್ಳ, ಬಯಲು ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಬಯಲು ಪ್ರದೇಶವೆಂದರೇ ನದಿ ಹಳ್ಳಗಳಿಂದ ದೂರವಿರುವ

ಗ್ರಾಮಗಳು. ದೇವಾಲಯಗಳನ್ನು ಗ್ರಾಮಗಳ ಮಧ್ಯೆ, ಹೊರಗಡೆ ನಾಲ್ಕು ದಿಕ್ಕುಗಳಿಗೆ ಮುಖ ಮಾಡಿ ಕಟ್ಟಲಾಗಿದೆ. ಉದಾ : ಇಟಗಿ, ಕುಕನೂರ, ತಳಕಲ್ಲ, ಕವಲೂರ, ಆಳವಂಡಿ, ಕಲ್ಲೂರ ಇತ್ಯಾದಿ ಗ್ರಾಮಗಳ ದೇವಾಲಯಗಳು ಬಯಲು ಪ್ರದೇಶಗಳಲ್ಲಿ ಕಟ್ಟಿದ ದೇವಾಲಯಗಳಾಗಿವೆ. ಮಾದಿನೂರ, ಹುಲಿಗಿ, ಏಪ್ರ, ಪುರ, ಮುಧೋಳ ಗ್ರಾಮಗಳಲ್ಲಿ ರಚನೆಗೊಂಡ ದೇವಾಲಯಗಳು ನದಿ-ಹಳ್ಳಗಳ ಮೇಲೆ ಕಟ್ಟಿದವು. ಬೆಟ್ಟ ಪ್ರದೇಶದ ಮೇಲೆ ಕಂಡು ಬರುವ ದೇವಾಲಯಗಳೆಂದರೆ ಕೊಪ್ಪಳ, ಕುಮ್ಮಟದುರ್ಗ, ಶಿವಪುರ ಇತ್ಯಾದಿ ಗ್ರಾಮಗಳಲ್ಲಿ ಕಂಡುಬರುತ್ತವೆ.

## ಸಾಮಗ್ರಿ

ಜಿಲ್ಲೆಯ ದೇವಾಲಯ ನಿರ್ಮಾಣದಲ್ಲಿ ಅವುಗಳಿಗೆ ಬಳಸಿಕೊಂಡ ಸಾಮಗ್ರಿ ಪ್ರಮುಖ ಪಾತ್ರವಹಿಸಿದ್ದು ದೇವಾಲಯಗಳು ಬಹುಕಾಲ ಬಾಳುವಿಕೆಗೆ ಹೆಚ್ಚು ಒತ್ತು ನೀಡಿರುವ ವಿಷಯವಾಗಿದೆ. ಮುಖ್ಯವಾಗಿ ದೇವಾಲಯಗಳನ್ನು ಕಟ್ಟಲು ಹೆಚ್ಚಾಗಿ ದೊರೆಯುವ ಬೆಣಚು ಶಿಲೆಯನ್ನು (ಕಲ್ಲು) ಬಳಸಿದ್ದರೂ ದಖ್ಖಿನ್‌ದ ಅಗ್ನಿಶಿಲೆಯೆಂದೆ ಕರೆಯಲ್ಪಡುವ ಬಸಾಲ್ಟ್ (ಅಗ್ನಿಶಿಲೆ), ಕೆಂಪು ಮರಳು ಶಿಲೆಗಳನ್ನು ಸಹ ಬಳಸಲಾಗಿದೆ. ಇಟಗಿ, ಕುಕನೂರ, ತಳಕಲ್ಲ, ಕವಲೂರ ಇತ್ಯಾದಿ ದೇವಾಲಯಗಳಿಗೆ ಕಪ್ಪು ಬಸಾಲ್ಟ್ ಕಲ್ಲನ್ನು ಬಳಸಿರುವರು. ಶಿವಪುರ, ಏಪ್ರ, ಕಮ್ಮಟದುರ್ಗ, ಕೊಪ್ಪಳ, ಕುಷ್ಟಗಿ ತಾಲೂಕಿನ ಕೆಲವು ಗ್ರಾಮಗಳ ದೇವಾಲಯಗಳಿಗೆ ಬಸಾಲ್ಟ್ ಜೋತೆ ಬೆಣಚು (ಗ್ರಾನೈಟ್) ಕಲ್ಲುಗಳನ್ನು ಬಳಸಿರುವರು. ಬಸಾಲ್ಟ್ ಕಲ್ಲನ್ನು ಹೊರ ಪ್ರದೇಶದಿಂದ ಆಮದಿಸಿಕೊಂಡರೆ ಸ್ಥಳೀಯವಾಗಿ ದೊರೆಯುವ ಬೆಣಚು ಶಿಲೆಯನ್ನು ಹೆಚ್ಚಾಗಿ ಬಳಸಲಾಗಿದೆ. ಕಂಬಗಳಿಗೆ ಮಾತ್ರ ಹೆಚ್ಚಾಗಿ ಬಸಾಲ್ಟ್ ಕಲ್ಲನ್ನೇ ಬಳಕೆ ಮಾಡಲಾಗಿದೆ.

## ತಲವಿನ್ಯಾಸ

ದೇವಾಲಯಗಳ ನಿರ್ಮಾಣದಲ್ಲಿ ಮೊದ ಮೊದಲು ಆಗಮಗಳ ಪ್ರಭಾವ ಕಂಡು ಬರದಿದ್ದರೂ ಭಾರತದಲ್ಲಿ ಗುಪ್ತರ ಕಾಲಕ್ಕೆ ಆಗಲೇ ಸಾವಕಾಶವಾಗಿ ದೇವಾಲಯಗಳ ರಚನೆಯ ಮೇಲೆ ಪ್ರಭಾವ



ತ.ನ. ೧ ಸಿದ್ಧಲಿಂಗೇಶ್ವರ ದೇವಾಲಯ, ಆಳವಂಡಿ (ಕೊ.ತಾ.)

ಬೀರಿರುವದನ್ನು ಕಾಣಬಹುದಾಗಿದೆ. ನಂತರ ಬಾದಾಮಿ ಚಾಲುಕ್ಯ, ಪಲ್ಲವರ ಕಾಲದಲ್ಲಿ ಅದು ಮತ್ತಷ್ಟು ಪ್ರಭಾವ ಬೀರಿತು. ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ, ವಿಜಯನಗರಗಳ ಕಾಲಕ್ಕೆ ಇಡೀ ಭಾರತದ ಯಾವುದೇ ಮೂಲೆಯ ದೇವಾಲಯಗಳನ್ನು ಗಣನೆಗೆ ತೆಗೆದುಕೊಂಡರೆ ದೇವಾಲಯಗಳ ಮೇಲೆ ಆಗಮಗಳ ಪ್ರಭಾವ ಸಂಪೂರ್ಣ ವಿಜಯಸಾಧಿಸಿದುದ್ದನ್ನು ಕಾಣುತ್ತೇವೆ. ಇಲ್ಲಿ ಆಗಮಗಳ ಪ್ರಭಾವವೆಂದರೆ ಪ್ರತಿಯೊಂದು ಧಾರ್ಮಿಕ ಮತಗಳು ತಮ್ಮ ಧರ್ಮದ ಕುರಿತು ಬರೆದ, ರಚಿಸಿದ, ಹೇಳಿದ ಕೃತಿಗಳು. ಕೃತಿಕಾರರು ಸಾಧ್ಯವಾದಷ್ಟು ಮಟ್ಟಿಗೆ ತಮ್ಮ ಮತದ ಕುರಿತು, ಮತಾಚರಣೆಯ ಕುರಿತು ಹೇಳುವದರಲ್ಲಿ ಆಸಕ್ತಿ ತೋರಿಸಿದ್ದರಿಂದ ಸ್ವ-ಮತಿಯತೆಗೆ ಹೆಚ್ಚು ಒತ್ತು ದೊರೆಯಿತು. ಸ್ವ-ಮತಿಯ ಕೃತಿಯ ಸೂತ್ರಗಳನ್ನು ಅನುಸರಿಸಿದ ರೂವಾರಿಗಳು ದೇವಾಲಯ ರಚನೆಯ ಓಗ್ಗುವಿಕೆಗೆ ಕಾರಣಕರ್ತರಾದರು.

ಓೀಗಾಗಿ ದೇವಾಲಯಗಳ ತಲವಿನ್ಯಾಸ ರಚನೆಯು ಸಹ ಈಗ ಮೂಲಸ್ವರೂಪದಿಂದ ಮುಂದಕ್ಕೆ ಬೆಳೆಯುತ್ತ ನಡೆದು ಸಂಕೀರ್ಣ ತಲವಿನ್ಯಾಸ ವ್ಯವಸ್ಥೆ ರೂಪುಗೊಂಡಿತು. ಉದಾ : ಮೂಲತಃ ಕೇವಲ ಗುಡು ಅಥವಾ ಒಂದೇ ಒಂದು ಕೋಣೆಯಿರುವಂತೆ ರಚನೆಗೊಂಡ ದೇವಾಲಯ ಬರುಬರುತ್ತ ಅದರ ಮುಂದುಗಡೆಗೆ ಹತ್ತಿಕೊಂಡಂತೆ ಅಂತರಾಳ, ಅಂತರಾಳವಿರದಿದ್ದರೆ ಅರ್ಧಮಂಟಪ ಇವುಗಳಿಗೆ ಹತ್ತಿಕೊಂಡು ನವರಂಗ ಮಂಟಪ, ಮಹಾಮಂಟಪ, ನಂದಿ ಮಂಟಪ, ಧ್ವಜ ಸ್ತಂಭ, ಬಲಿಪೀಠ, ದೀಪಸ್ತಂಭ, ಸುತ್ತಲೂ ಪ್ರಾಕಾರಗೋಡೆ ಅದಕ್ಕೆ ಹತ್ತಿಕೊಂಡು ಒಳಗಡೆ ಸ್ತಂಭ ಮಂಟಪಗಳ ಜೊತೆಗೆ ಪರಿವಾರ ದೇವರುಗಳ ಮಂಟಪಗಳು ರಚನೆಗೊಂಡವು. ಇದು ಕೇವಲ ತಲವಿನ್ಯಾಸದಲ್ಲಿ ಒಂದೇ ಗರ್ಭಗೃಹವಿರುವ ಏಕಕೂಟ ತಲವಿನ್ಯಾಸ ಮಾದರಿ ಮಾತ್ರ. ಆಗಮಗಳ ಪ್ರಭಾವದಿಂದ ನಾಲ್ಕು, ಐದು, ಆರು, ಏಳು, ಎಂಟು, ಒಂಬತ್ತು ಗರ್ಭಗೃಹಗಳನ್ನು ಹೊಂದಿತ್ತು. ಜಿಲ್ಲೆಯ ಕ್ರಿ.ಶ. ೮ ನೇ ಶತಮಾನದಿಂದ ೧೩ ನೇ ಶತಮಾನದ ಸುಮಾರು ಕ್ರಿ.ಶ. ೫೦೦-೬೦೦ ವರ್ಷಗಳ ಕಾಲಾವಧಿಯಲ್ಲಿ ರಚನೆಗೊಂಡ ದೇವಾಲಯಗಳಲ್ಲಿ ನಾಲ್ಕು, ಆರು, ಏಳು, ಎಂಟು ಗರ್ಭಗೃಹ ದೇವಾಲಯ ಹೊರತುಪಡಿಸಿದರೆ ಒಂದು, ಎರಡು, ಮೂರು, ಐದು ಹಾಗೂ ಒಂಬತ್ತು ಗರ್ಭಗೃಹಗಳಿರುವ ದೇವಾಲಯ ರಚನೆ ಗೊಂಡಿರುವದನ್ನು ಕಾಣುತ್ತೇವೆ. ಇವುಗಳಲ್ಲಿ ಒಂದೇ ಗರ್ಭಗೃಹ ಹೊಂದಿದ ದೇವಾಲಯಗಳೇ ಹೆಚ್ಚಾಗಿವೆ. ಉದಾ : ಇಂತಹ ಹಲವು ದೇವಾಲಯಗಳನ್ನಿಲ್ಲಿ ನೋಡಬಹುದಾಗಿದೆ.



ತ.ನ. ೨ ರಾಮಲಿಂಗೇಶ್ವರ ದೇವಾಲಯ, ಕುಷ್ಟಗಿ (ಕು.ತಾ.)

### ಏಕಕೂಟ ತಲವಿನ್ಯಾಸ

ಏಕಕೂಟ ತಲವಿನ್ಯಾಸ ಮಾದರಿಯಲ್ಲಿ ರಚನೆಗೊಂಡ ದೇವಾಲಯಗಳು ವಿವಿಧ ರೀತಿಯಲ್ಲಿ ರಚನೆಗೊಂಡಿದ್ದು ಕೆಲವು ಕೇವಲ ಗರ್ಭಗೃಹ ಮಾತ್ರ ಹೊಂದಿದ್ದರೆ, ಕೆಲವು ಗರ್ಭಗೃಹ, ಮುಖಮಂಟಪ ಹಾಗೂ ಗರ್ಭಗೃಹ, ಅಂತರಾಳ (ಸುಖನಾಸಿ) ಗಳನ್ನು ಹೊಂದಿವೆ. ಇನ್ನೂ ಕೆಲವು ಗರ್ಭಗೃಹ, ಅರ್ಧಮಂಟಪ ಇಲ್ಲವೆ ಅಂತರಾಳ, ನವರಂಗ ಮಂಟಪಗಳನ್ನು ಹೊಂದಿದ್ದರೆ ಇನ್ನೂ ಕೆಲವು ದೇವಾಲಯಗಳು ಗರ್ಭಗೃಹ, ಅಂತರಾಳ, ಸಭಾಮಂಟಪಗಳ ಜೊತೆಯಲ್ಲಿ ಮಹಾಮಂಟಪ ಮತ್ತು ಪ್ರಾಕಾರ ಗೋಡೆಯನ್ನು ಹೊಂದಿವೆ.

ಕಡೂರದ ಕಲ್ಲೇಶ್ವರ ದೇವಾಲಯ ಕ್ರಿ.ಶ. ೯-೧೦ ನೇ ಶತಮಾನಕ್ಕೆ ಸೇರಿದ್ದಾಗಿದ್ದು ನಾಲ್ಕಡಿ ಎತ್ತರದ ಅಧಿಷ್ಠಾನದ ಮೇಲೆ ಪೂರ್ವಮುಖಮಾಡಿ ಕೇವಲ ಗರ್ಭಗೃಹ ಮಾತ್ರವಿರುವಂತೆ ರಚನೆಗೊಂಡಿದೆ. ಇದೊಂದು ಗರ್ಭಗೃಹ ಮಾತ್ರ ಹೊಂದಿದ ರಚನೆಯಾದರೆ ಕೊಪ್ಪಳದ ಗಣೇಶ ದೇವಾಲಯವು ಗರ್ಭಗೃಹ ಎರಡು ಕಂಬದ ಮುಖಮಂಟಪ ಹೊಂದಿರುವದು. ಗೊಂಡಬಾಳುವಿನ ಕಲ್ಲೇಶ್ವರ ದೇವಾಲಯ ಏಕಕೂಟ ದೇವಾಲಯ ರಚನೆಯ ಮುಂದಿನ ಹೆಜ್ಜೆಯಾಗಿದ್ದು ಗರ್ಭಗೃಹ ಮತ್ತು ಅಂತರಾಳಗಳನ್ನು ಹೊಂದಿರುವದು. ಇದೇ ಮಾದರಿ ರಚನೆಯನ್ನು ನವಲಿಯ ಪಾತಾಳೇಶ್ವರ ದೇವಾಲಯ ಹೊಂದಿರುವದು. ಕರಮುಡಿಯ ಕುಸುಮೇಶ್ವರ ಗುಡಿ ಗೊಂಡಬಾಳುವಿನ ಮೂಳೇಶ್ವರ ದೇವಾಲಯದ ನಂತರದ ಹೆಜ್ಜೆಯಾಗಿದ್ದು ಇದು ಗರ್ಭಗೃಹ, ಅರ್ಧಮಂಟಪ, ನವರಂಗ ಮಂಟಪ ಹಾಗೂ ಎರಡು ಕಂಬದ ಮುಖಮಂಟಪಗಳನ್ನು ಹೊಂದಿದೆ. ಕರಮುಡಿಯ ಕುಸುಮೇಶ್ವರ ಇಟಗಿಯ ಮೂರ್ತಿನಾರಾಯಣ ದೇವಾಲಯಗಳು ಅಂತರಾಳ ಹೊಂದಿದ್ದು ಮುಖಮಂಟಪ ಹೊಂದಿಲ್ಲ ಬಹುಶಃ ಬಿದ್ದು ಹೋಗಿರಬೇಕು. ಮೇಲಿನ ಈ ದೇವಾಲಯಗಳು ಬೇರೆ ಬೇರೆ ರೀತಿಯ ತಲವಿನ್ಯಾಸ




ತ.ನ. ೩ ಸಿದ್ಧಲಿಂಗೇಶ್ವರ ದೇವಾಲಯ ಹಿರೇ ಸಿಂದೋಗಿ (ಕೊ.ತಾ.)

ಭಾಗಗಳನ್ನು ಹೊಂದಿದಂತೆ ಯಲಬುರ್ಗಾದ ಈಶ್ವರ ದೇವಾಲಯವು ಮತ್ತೊಂದು ರೀತಿಯದು. ಇದು ಕೇವಲ ಗರ್ಭಗೃಹ ನವರಂಗ ಮಂಟಪಗಳನ್ನು ಹೊಂದಿದ್ದು ನವರಂಗಕ್ಕೆ ಮೂರು ಪ್ರವೇಶ ದ್ವಾರಗಳಿರುವವು. ಕುಕನೂರದ ಕಲ್ಲೇಶ್ವರ ದೇವಾಲಯವು ಸಹ ಗರ್ಭಗೃಹ, ಅರ್ಧಮಂಟಪ, ನವರಂಗ ಮಂಟಪ ಹೊಂದಿದೆ.

ತಾವರಗೇರಿಯ ಲಕ್ಷ್ಮೀ ವೆಂಕಟೇಶ್ವರ (ಲಕ್ಷ್ಮೀನಾರಾಯಣ) ದೇವಾಲಯವು ಸಂಕೀರ್ಣ ದೇವಾಲಯವಾಗಿದ್ದು ಗರ್ಭಗೃಹ, ಪ್ರದಕ್ಷಿಣಪಥ, ನವರಂಗ ಮಂಟಪ ಮತ್ತು ಪ್ರಾಕಾರಗೋಡೆಗಳನ್ನು ಹೊಂದಿದ ಸಾಂಧಾರ ಪ್ರಕಾರಕ್ಕೆ ಸೇರಿದ ತಲವಿನ್ಯಾಸ ಹೊಂದಿದೆ. ಕವಲೂರಿನ ವೆಂಕಟರಮಣ ದೇವಾಲಯವು ಗರ್ಭಗೃಹ, ಅಂತರಾಳ, ಅರ್ಧಮಂಟಪ, ನವರಂಗ, ಮುಖಮಂಟಪ, ದೀಪಸ್ತಂಭ ಹಾಗೂ ಸುತ್ತಲೂ ಪ್ರಾಕಾರ ಗೋಡೆಯನ್ನು ಹೊಂದಿರುವದು. ಕುಕನೂರದ ಮಹಾಮಾಯೇ ದೇವಾಲಯವು ಸಹ ಗರ್ಭಗೃಹ, ಅಂತರಾಳ, ಪ್ರದಕ್ಷಿಣಪಥ, ನವರಂಗಮಂಟಪ, ಮಹಾಮಂಟಪಗಳನ್ನು ಹೊಂದಿರುವದು.

## ದ್ವಿಕೂಟ ತಲವಿನ್ಯಾಸ

ವಿವಿಧ ರೀತಿಯ ಭಾಗಗಳನ್ನು ಹೊಂದಿದ ಏಕಕೂಟ ತಲವಿನ್ಯಾಸ ಹೊಂದಿದ ಹಲವಾರು ದೇವಾಲಯಗಳು ಜಿಲ್ಲೆಯ ತುಂಬೆಲ್ಲ ಕಂಡು ಬಂದಂತೆ, ದ್ವಿಕೂಟ ತಲವಿನ್ಯಾಸ ದೇವಾಲಯಗಳು ಸಹ ಕಂಡು ಬರುತ್ತವೆಯಾದರೂ ದ್ವಿಕೂಟಾಚಲ ರಚನೆಯ ದೇವಾಲಯಗಳು ಕಡಿಮೆ ಕಂಡು ಬರುತ್ತವೆ. ಮುಧೋಳದ ಮಲ್ಲಿಕಾರ್ಜುನ ದೇವಾಲಯವು ದ್ವಿಕೂಟ ತಲವಿನ್ಯಾಸ ಮಾದರಿ ರಚನೆಯಲ್ಲಿ ನಿರ್ಮಿಸಲ್ಪಟ್ಟಿದೆ. ಇದರಲ್ಲಿ ಎರಡು ಗರ್ಭಗೃಹ ಎರಡು ಅಂತರಾಳ, ದೊಡ್ಡದಾದ ತೆರೆದ ಮೂರು ಪ್ರವೇಶ ಮಂಟಪಗಳಿರುವ ಮಹಾಮಂಟಪಗಳಿಂದ ಕಟ್ಟಲ್ಪಟ್ಟಿದೆ. ಅಂಟೂರು ಠಾಣಾದ ಜಂಬುನಾಥ ದೇವಾಲಯವು ಸಹ ದ್ವಿಕೂಟ




ತ.ನ. ೪ ಯತೀಶ್ವರ ದೇವಾಲಯ, ಕವಲೂರು (ಕೊ.ತಾ.)

ಮಾದರಿಯಲ್ಲಿದ್ದರೂ ಒಂದು ಗರ್ಭಗೃಹ, ಅಂತರಾಳ, ನವರಂಗ ಮಂಟಪ, ಈ ಮಂಟಪದ ಒಂದು ಬದಿಗೆ ಮತ್ತೊಂದು ಅರ್ಧ ಮಂಟಪವಿದ್ದು ಅದನ್ನೆ ಗರ್ಭಗೃಹವನ್ನಾಗಿ ಮಾಡಿರುವುದುಂಟು. ಆದರೆ ಇದು ಮೂಲತಃ ದ್ವಿಕೂಟ ದೇವಾಲಯವಲ್ಲ. ಕುಕನೂರಿನ ಮುಂದಿನ ಮಲ್ಲಿಕಾರ್ಜುನ ದೇವಾಲಯವು ಸಹ ದ್ವಿಕೂಟ ತಲವಿನ್ಯಾಸದಲ್ಲಿ ಪೂರ್ವ ಪಶ್ಚಿಮ ಮುಖಮಾಡಿ ಕಟ್ಟಲಾಗಿದ್ದು, ಗರ್ಭಗೃಹಗಳ ಮುಂದೆ ಅಂತರಾಳಗಳು ಇವುಗಳಿಗೆ ಹೊಂದಿಕೊಂಡು ಒಂದೇ ನವರಂಗ ಮಂಟಪ ಇದಕ್ಕೆ ದಕ್ಷಿಣೋತ್ತರವಾಗಿ ಎರಡು ಪ್ರಮುಖ ಮುಖಮಂಟಪಗಳಿವೆ.

## ತ್ರಿಕೂಟ ತಲವಿನ್ಯಾಸ

ದ್ವಿಕೂಟಾಚಲಗಳಂತೆ ಕೊಪ್ಪಳ ಜಿಲ್ಲೆಯಲ್ಲಿ ತ್ರಿಕೂಟಾಚಲಗಳು ಸಹ ಹೆಚ್ಚಿನ ಪ್ರಮಾಣದಲ್ಲಿ ರಚನೆಗೊಂಡಿವೆ. ಸಾಮಾನ್ಯವಾಗಿ ತ್ರಿಕೂಟ ತಲವಿನ್ಯಾಸದಲ್ಲಿ ಒಂದೇ ಸಾಲಿನಲ್ಲಿ ಮೂರು ಗರ್ಭಗೃಹವಿರುವದು ವಾಡಿಕೆ. ಆದರೆ ಆಗಮಿಕ ಪ್ರಭಾವದಿಂದ ಗರ್ಭಗೃಹ, ಅಂತರಾಳ ಅಥವಾ ಅರ್ಧಮಂಟಪ, ನವರಂಗ ಮಂಟಪ ಇದರ ಎಡಬಲಕ್ಕೆ ಹತ್ತಿಕೊಂಡು ಗರ್ಭಗೃಹಗಳು, ಅಂತರಾಳ ಅಥವಾ ಅರ್ಧಮಂಟಪ ನವರಂಗ ಮಂಟಪಗಳು ಮತ್ತು ಮುಖಮಂಟಪಗಳಿರುತ್ತವೆ. ಇಂತಹ ಎರಡು ಬಗೆಯ ತ್ರಿಕೂಟ ತಲವಿನ್ಯಾಸದಲ್ಲಿ ರಚನೆಗೊಂಡ ದೇವಾಲಯಗಳು ಜಿಲ್ಲೆಯಲ್ಲಿ ಒಟ್ಟು ೧೨ ಕಂಡು ಬರುತ್ತವೆ. ಹೆಬ್ಬಾಳ ಗ್ರಾಮದಲ್ಲಿರುವ ಸೋಮಶೇಖರ ದೇವಾಲಯವು ದಕ್ಷಿಣಕ್ಕೆ ಮುಖ ಮಾಡಿದಂತೆ ಗರ್ಭಗೃಹ, ಅರ್ಧಮಂಟಪ, ನವರಂಗಮಂಟಪ ಅದಕ್ಕೆ ಹೊಂದಿಕೊಂಡು ಎಡಬಲಗಳಲ್ಲಿ ಮತ್ತೆರಡು ಗರ್ಭಗೃಹ, ಅರ್ಧಮಂಟಪಗಳಿವೆ. ನವರಂಗಕ್ಕೆ ಒಂದೇ ದ್ವಾರವಿದ್ದು ಲಿಂಗ (ಶಿವ), ಸೂರ್ಯ, ವಿಷ್ಣು ಇವರಿಗಾಗಿ ಕಟ್ಟಿಸಿದ ತ್ರೈಪುರುಷ ದೇವಾಲಯ ಇದಾಗಿದೆ. ನವಲಿಯ ಈಶ್ವರ ದೇವಾಲಯವು ಸಹ ಹೆಬ್ಬಾಳು ಸೋಮಶೇಖರ ದೇವಾಲಯ ತಲವಿನ್ಯಾಸ ರಚನೆಯನ್ನು




ತ.ನ. ೫ ವೈಜನಾಥ ದೇವಾಲಯ ತಾವರಗೇರ, (ಕು.ತಾ.)

ಹೊಂದಿರುವುದು. ಪೂರ್ವ ಮುಖ ಮಾಡಿ ರಚನೆಗೊಂಡ ದೇವಾಲಯದಲ್ಲಿ ಸದ್ಯಕ್ಕೆ ಒಂದರಲ್ಲಿ ಲಿಂಗ ಇನ್ನೊಂದರಲ್ಲಿ ನಂದಿ ಶಿಲ್ಪವಿದ್ದು ಪೂಜೆ ನಡೆಸುತ್ತಿರುವರು. ಇದು ಸಹ ತ್ರೈಪುರುಷ ದೇವಾಲಯವಾಗಿದೆ. ಓರೇಮ್ಯಾಗೇರಿಯ ಕಲ್ಲೇಶ್ವರ ದೇವಾಲಯವು ಮೂರು ಗರ್ಭಗೃಹ, ಮೂರು ಅಂತರಾಳ, ನವರಂಗಮಂಟಪ ಹಾಗೂ ಮುಖಮಂಟಪ ಹೊಂದಿದ್ದು, ಎಡಬಲಗಳ ಗರ್ಭಗೃಹಗಳು ಸಂಪೂರ್ಣ ಬಿದ್ದು ಹೋಗಿವೆ. ಮುಧೋಳದ ತ್ರಿಲಿಂಗೇಶ್ವರ ದೇವಾಲಯವು ವಿಶಿಷ್ಟವಾಗಿದ್ದು ಮೂರು ಗರ್ಭಗೃಹ, ಅರ್ಧಮಂಟಪ, ನವರಂಗಮಂಟಪ ಅದಕ್ಕೆ ಹೊಂದಿಕೊಂಡು ತೆರೆದ ಮಹಾಮಂಟಪ ಮತ್ತು ಸುತ್ತಲೂ ಪ್ರಾಕಾರಗೋಡೆಯನ್ನು ಹೊಂದಿರುವ ದೇವಾಲಯವಾಗಿದ್ದು, ಮೂರು ಲಿಂಗಗಳಿರುವುದರಿಂದ ದೇವಾಲಯವನ್ನು ತ್ರಿಲಿಂಗೇಶ್ವರ ಎಂದು ಗ್ರಾಮಸ್ಥರು ಕರೆಯುವರು.

ಹುಲಗಿಯ ಪಾರ್ಶ್ವನಾಥ ಜೈನ ಬಸದಿಯು ಮತ್ತೊಂದು ರೀತಿಯ ತ್ರಿಕೂಟ ತಲವಿನ್ಯಾಸ ರಚನೆಯಲ್ಲಿ ಕಟ್ಟಿದ ದೇವಾಲಯ. ಮೂಲತಃ ಏಕಕೂಟ ಬಸದಿ, ಗರ್ಭಗೃಹ, ಅಂತರಾಳ, ನವರಂಗ ಮಂಟಪ ಹೊಂದಿದ್ದು, ಸ್ವಲ್ಪ ಕಾಲದ ನಂತರ ನವರಂಗ ಮಂಟಪಕ್ಕೆ ಮತ್ತೊಂದು ನವರಂಗ ಮಂಟಪವನ್ನು ಜೋಡಿಸುವದರ ಜೊತೆಗೆ ಅದರ ಎಡಬಲಕ್ಕೆ ಎರಡು ಗರ್ಭಗೃಹಗಳನ್ನು ಕೂಡಿಸಿ ತ್ರಿಕೂಟ ಬಸದಿಯನ್ನಾಗಿಸಲಾಗಿದೆ. ಮೂಲ ಗರ್ಭಗೃಹದಲ್ಲಿ ಪಾರ್ಶ್ವನಾಥನ ಶಿಲ್ಪ, ಬಲಗಡೆಯ ಗರ್ಭಗೃಹದಲ್ಲಿ ಮಹಾವೀರನ ಶಿಲ್ಪವಿದ್ದರೆ ಎಡಗಡೆಯ ಗರ್ಭಗೃಹದಲ್ಲಿ ಸಹಸ್ರ ಜಿನ ಬಿಂಬಶಿಲ್ಪವಿರುವದು. ಇನ್ನೊಂದು ರೀತಿಯ ತ್ರಿಕೂಟಾಚಲ ತಲವಿನ್ಯಾಸ ರಚನೆಯ ದೇವಾಲಯ ಕುಮ್ಮಟದುರ್ಗದ ಜೈನ ಬಸದಿಯಾಗಿದ್ದು ಅದರಲ್ಲಿ ಮೂರು ಗರ್ಭಗೃಹ ಒಂದೇ ಸಾಲಿನಲ್ಲಿ ದಕ್ಷಿಣ ಮುಖಮಾಡಿ ಕಟ್ಟಲ್ಪಟ್ಟಿವೆ. ಇವುಗಳ ಮುಂದೆ ಎಂಟು ಕಂಬಗಳ ನವರಂಗ ಮಂಟಪವಿರುವದು. ಇಂತಹ ಬೇರೆ ಬೇರೆ ರೀತಿಯ ತಲವಿನ್ಯಾಸದಲ್ಲಿ ನಿರ್ಮಿಸಿದ ದೇವಾಲಯಗಳು. ಪುರ್ತಗೇರಿ, ಬೈರಾಪುರ, ಕವಲೂರ, ಅಂಟೂರಠಾಣ ಮತ್ತು ತಾವರಗೇರ ಗ್ರಾಮಗಳಲ್ಲಿ ಕಂಡು ಬರುವವು.[೨೬]

## ಪಂಚಕೂಟ ತಲವಿನ್ಯಾಸ

ತ್ರಿಕೂಟಗಳಂತೆ ಜಿಲ್ಲೆಯಲ್ಲಿ ಪಂಚಕೂಟ ದೇವಾಲಯಗಳ ಮಾದರಿಗಳು ದೊರಕುತ್ತವೆ. ಈ ತಲವಿನ್ಯಾಸದ ಒಂದೇ ಒಂದು ದೇವಾಲಯ ಕೊಪ್ಪಳದಲ್ಲಿ ದೊರಕುತ್ತದೆ. ಕೊಪ್ಪಳದ ಡಣಕನಬಾವಿಯ ಉತ್ತರಕ್ಕಿರುವ ಈ ದೇವಾಲಯವನ್ನು ಪಾರ್ಶ್ವನಾಥ ಬಸದಿಯೆಂದು ಕರೆದರು. ಮೂಲತಃ ಚಲ್ಲಕೇತನ ಮನೆತನದ ೨ ನೇ ಶಂಕರಗಂಡನು ಕಟ್ಟಿಸಿದ ಜಯಧೀರ ಜಿನಾಲಯವಾಗಿದೆ.[೨೭] ಇದು ಮೂಲವಾಗಿ ತ್ರಿಕೂಟ ತಲವಿನ್ಯಾಸ ರಚನೆಯಲ್ಲಿ ನಿರ್ಮಾಣವಾಗಿದ್ದು ನಂತರದಲ್ಲಿ ನವರಂಗ ಮಂಟಪಕ್ಕೆ ಮತ್ತೊಂದು ನವರಂಗ ಮಂಟಪವನ್ನು ಜೋಡಿಸಿ ಅದರ ಎಡಬಲಕ್ಕೆ ಮತ್ತೆರಡು ಗರ್ಭಗೃಹಗಳನ್ನು ಜೋಡಿಸಿ ಪಂಚಕೂಟ ತಲವಿನ್ಯಾಸ ರಚನೆಯನ್ನಾಗಿಸಲಾಗಿದೆ. ಒಂದೇ ಸಾಲಿನಲ್ಲಿ ಪೂರ್ವ ಮುಖ ಮಾಡಿ ಮೂರು ಗರ್ಭಗೃಹಗಳು ಅವುಗಳ ಮುಂದುಗಡೆ ೧೨ ಕಂಬದ ನವರಂಗ ಮಂಟಪ ಇದಕ್ಕೆ ಹತ್ತಿಕೊಂಡು ನಾಲ್ಕುಕಂಬದ ಮತ್ತೊಂದು ನವರಂಗ ಮಂಟಪ ಹಾಗೂ ಅದರ ಎಡಬಲಕ್ಕೆ ದಕ್ಷಿಣೋತ್ತರ ಮುಖ ಮಾಡಿದಂತೆ ಎರಡು ಗರ್ಭಗೃಹಗಳಿವೆ.

## ನವಕೂಟ ತಲವಿನ್ಯಾಸ

ಮೇಲಿನ ವಿವಿಧ ತಲವಿನ್ಯಾಸದ ದೇವಾಲಯಗಳ ಜೊತೆಗೆ ಜಿಲ್ಲೆಯಲ್ಲಿ ನವಕೂಟ ತಲವಿನ್ಯಾಸ ರಚನೆಯ ದೇವಾಲಯವು ಸಹ ಕಂಡುಬರುತ್ತದೆ. ಅದು ಕುಕನೂರ ಗ್ರಾಮದಲ್ಲಿದ್ದು ರಾಷ್ಟ್ರಕೂಟರ ಕಾಲದಲ್ಲಿ ಕಟ್ಟಲ್ಪಟ್ಟಿದೆ. ಮೂಲತಃ ನವಲಿಂಗೇಶ್ವರ ದೇವಾಲಯವೆಂದು ಕರೆಯಲಾಗುವ ದೇವಾಲಯ ಪೂರ್ವ, ಪಶ್ಚಿಮ, ದಕ್ಷಿಣೋತ್ತರ ಮುಖ ಮಾಡಿ ಕಟ್ಟಲಾಗಿದೆ. ಪೂರ್ವ ಮುಖಮಾಡಿ ಮೂರು ಗರ್ಭಗೃಹ, ದಕ್ಷಿಣ ಮುಖ ಮಾಡಿ ಮೂರು ಗರ್ಭಗೃಹ, ಉತ್ತರ ಮುಖಮಾಡಿ ಎರಡು ಗರ್ಭಗೃಹ ಹಾಗೂ ಪಶ್ಚಿಮಕ್ಕೆ ಮುಖ ಮಾಡಿ ಒಂದು ಗರ್ಭಗೃಹ ಕಟ್ಟಲಾಗಿದ್ದು ಇವು ಒಂದಕ್ಕೊಂದು ಹೊಂದಿಕೊಂಡಿವೆ. ಇವುಗಳ ಮುಂದುಗಡೆ ಅರ್ಧಮಂಟಪಗಳಿದ್ದು ಎರಡರಲ್ಲಿ ಮುಂದೆ ಅಂತರಾಳಗಳಿವೆ. ಒಂಬತ್ತು ಗರ್ಭಗೃಹಗಳಲ್ಲಿ ಲಿಂಗಗಳಿರುವದರಿಂದ ನವಲಿಂಗೇಶ್ವರ ದೇವಾಲಯವೆಂದು ವಾಡಿಕೆಯಲ್ಲಿ ಕರೆಯಲ್ಪಟ್ಟಿದೆ. ನವಕೂಟ ತಲವಿನ್ಯಾಸ ಹೊಂದಿದ ದೇವಾಲಯ ಬಹಳ ವಿರಳವಾಗಿದ್ದುದರಿಂದ ಕುಕನೂರದ ಈ ನವಲಿಂಗೇಶ್ವರ ದೇವಾಲಯ ಪ್ರಾಮುಖ್ಯತೆ ಪಡೆದುಕೊಂಡಿದೆ.

ಕೊಪ್ಪಳ ಜಿಲ್ಲೆಯ ದೇವಾಲಯಗಳು ಅನೇಕ ತಲವಿನ್ಯಾಸ ರಚನೆಯ ತಳಹದಿಯ ಮೇಲೆ ರೂಪುಗೊಂಡಿದ್ದು ಅವು ಅಧಿಷ್ಠಾನ, ಗೋಡೆ, ಶಿಖರ, ದ್ವಾರ, ಕಂಬ, ಜಾಲಂದ್ರ, ಕಕ್ಷಾಸನ, ಸೋಪಾನ, ಮುಂಚಾಚುಗಳೆಂಬ ಹಲವು ಬಗೆಯ ವೈವಿಧ್ಯಮಯ ಅಲಂಕಾರಿಕ ಭಾಗಗಳನ್ನು ಹೊಂದಿವೆ. ಈ ಎಲ್ಲ ಲಕ್ಷಣಗಳನ್ನು ಹೊಂದಿದ ಕೆಲವು ಪ್ರಮುಖ ದೇವಾಲಯಗಳ ಕುರಿತು ನಾವಿಲ್ಲಿ ನೋಡಿರುವದರಿಂದ ದೇವಾಲಯಗಳ ಭಾಗಗಳನ್ನು ಪ್ರತ್ಯೇಕವಾಗಿ ನೋಡಲಾಗಿಲ್ಲ. ಒಟ್ಟು ಜಿಲ್ಲೆಯ ದೇವಾಲಯಗಳ ಸಮೀಕ್ಷೆ ಮಾಡಿದರೆ ಸಾಂಧಾರ, ನಿರಾಂಧಾರ, ಅಲಂಕಾರ, ಅಲಂಕಾರ ರಹಿತ, ದ್ರಾವಿಡ, ವೇಸರ ಫಾಂಸನಾ (ಮೆಟ್ಟಿಲು ರೂಪ) ಪದ್ಧತಿಯ ಶಿಖರಗಳನ್ನೊಳಗೊಂಡ ದೇವಾಲಯಗಳು ಸಾಕಷ್ಟು ಕಂಡುಬರುತ್ತವೆ. ಕೆಲವು ತೆರೆದ ಮಹಾಮಂಟಪಗಳನ್ನು ಹೊಂದಿದ್ದರೆ ಇನ್ನೂ ಕೆಲವು ದೇವಾಲಯಗಳು ಪ್ರಾಕಾರ ಗೋಡೆಗಳನ್ನು ಹೊಂದಿರುವವು.

## ಪ್ರಮುಖ ದೇವಾಲಯಗಳ ವಿವರಣೆ

ಕೊಪ್ಪಳ ಜಿಲ್ಲೆಯಲ್ಲಿ ಬರುವ ಕೊಪ್ಪಳ, ಮಾದಿನೂರ, ಕುಕನೂರ, ಇಟಗಿ, ಯಲಬುರ್ಗ, ಆನೆಗುಂದಿಗಳಂತಹ ಪ್ರಮುಖ ಗ್ರಾಮಗಳ ಕುರಿತು ಅಲ್ಲಿ ಕಂಡುಬರುವ ವಾಸ್ತುಶಿಲ್ಪ ಸ್ಮಾರಕಗಳ ಕುರಿತು ಇದುವರೆಗೆ ಸಾಕಷ್ಟು ಅಧ್ಯಯನ ನಡೆದಿರುವದರಿಂದ ಅಲ್ಲಿರುವ ದೇವಾಲಯಗಳ ಕುರಿತು ಚರ್ಚಿಸದೆ ಅಧ್ಯಯನ ನಡೆಯದ ಗ್ರಾಮಗಳ ದೇವಾಲಯಗಳ ಕುರಿತು ನಾವಿಲ್ಲಿ ಪ್ರಯತ್ನಿಸಿದ್ದೇವೆ.

### ೧. ಅಂಟೂರ ಠಾಣ

ಕುಷ್ಟಗಿ ತಾಲೂಕಿನ ಗ್ರಾಮವಾದ ಅಂಟೂರಠಾಣ ಐತಿಹಾಸಿಕ ಮಹತ್ವ ಹೊಂದಿರುವುದು. ಇಲ್ಲಿ ಕಲ್ಯಾಣ ಚಾಲುಕ್ಯರ ಅವಧಿಯ ಎರಡು ದೇವಾಲಯ ಮತ್ತು ಶಾಸನಗಳಿವೆ. ಕ್ರಿ.ಶ. ೧೦೮೨ ರ ಜಗದೇಕ ಮಲ್ಲ ಪೆರ್ಮಾಡಿ ದೇವನು ಪತ್ತರಠಾಣದ ಶ್ರೀ ಸ್ವಯಂಭುದೇವರ ಅಂಗಭೋಗಕ್ಕೆ ನೈವೇದ್ಯಕ್ಕೆ ಗ್ರಾಮಸ್ಥರ ಸಮ್ಮುಖದಲ್ಲಿ

ದಾನ ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ.[೨೮] ಶಾಸನೋಕ್ತ ಶ್ರೀ ಸ್ವಯಂಭು ದೇವಾಲಯವು ಇಂದಿನ ಜಂಭುನಾಥೇಶ್ವರ ದೇವಾಲಯವಾಗಿರುವಲ್ಲಿ ಯಾವ ಸಂಶಯವಿಲ್ಲ. ಈ ದೇವಾಲಯದ ಜೊತೆಗೆ ಗ್ರಾಮದಲ್ಲಿ ತ್ರಿಕುಟ ತಲವಿನ್ಯಾಸದ ಮತ್ತೊಂದು ಚಾಲುಕ್ಯ ದೇವಾಲಯವಿದ್ದು ಅದು ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದೆ. ಮತ್ತು ಉಳಿದುಕೊಂಡ ಒಂದು ಗರ್ಭಗೃಹದಲ್ಲಿ ಇತ್ತೀಚೆಗೆ ಗ್ರಾಮಸ್ಥರು ಮೌನೇಶ್ವರ ಶಿಲ್ಪವನ್ನು ಪ್ರತಿಷ್ಠಗೊಳಿಸಿರುವರು.

### ಜಂಭುನಾಥೇಶ್ವರ ದೇವಾಲಯ

ಗ್ರಾಮದ ಪೂರ್ವಭಾಗದಲ್ಲಿ ಪಶ್ಚಿಮ ಕ್ಕೆ ಮುಖಮಾಡಿ ಕಟ್ಟಲಾದ ಈ ದೇವಾಲಯ ಏಕಕೂಟ ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ತೆರೆದ ನವರಂಗ ಮಂಟಪ ಹೊಂದಿರುವುದು. ಗರ್ಭಗೃಹದಲ್ಲಿ ಶಿವಲಿಂಗ ಪ್ರತಿಷ್ಠಾಪಿಸಲಾಗಿದೆ. ದ್ವಾರವು ಆರೆಂಗಭ, ಹೂಬಳ್ಳಿ ಕೆತ್ತನೆಗಳನ್ನು ಹೊಂದಿದ್ದು ಮೇಲಿನ ಮಂಗಲಫಲಕದಲ್ಲಿ ಗಜಲಕ್ಷ್ಮೀ ಉಬ್ಬು ಶಿಲ್ಪವಿರುವುದು. ಅಂತರಾಳದ ಪ್ರವೇಶ ದ್ವಾರದ ಪಾರ್ಶ್ವಗಳಲ್ಲಿ ಜಾಲಂಧ್ರ ಕಿಂಡಿಗಳನ್ನು ಜೋಡಿಸಲಾಗಿದೆ. ನವರಂಗ ಮಂಟಪದಲ್ಲಿ ನಾಲ್ಕು ಘಂಟಾಮಾದರಿ ಕಂಬಗಳಿವೆ. ಮೇಲಿನ ಛತ್ತು (ಭುವೇಶ್ವರಿ) ಪದ್ಮ ಕೆತ್ತನೆ ಹೊಂದಿರುವುದು. ಈ ಮಂಟಪದಲ್ಲಿ ಒಟ್ಟು ೨೨ ಕಂಬಗಳಿದ್ದು ಸುತ್ತಲಿನ ಕಟಾಂಜನದ ಮೇಲೆ ಕುಳಿತುಕೊಳ್ಳಲು ಕಕ್ಷಾಸನಗಳಿರುವವು. ಅಧಿಷ್ಠಾನದ ಸ್ವರೂಪ ತಿಳಿದು ಬರುವುದಿಲ್ಲ ಮತ್ತು ಅದರ ಮೇಲಿನ ಗೋಡೆಯು ಸಹ ಸರಳವಾಗಿದೆ.

### ೨. ಆಳವಂಡಿ

ಕೊಪ್ಪಳ ತಾಲೂಕಿನ ಗ್ರಾಮವಾದ ಆಳವಂಡಿಯು ಅಗ್ರಹಾರವಾಗಿ ಮೆರೆದಿತ್ತಲ್ಲದೆ,ದೇವಾಲಯ ವಾಸ್ತುಕಲೆಯ ಕೇಂದ್ರವು ಸಹ ಆಗಿತ್ತು. ಇಲ್ಲಿ ಹಲವಾರು ಶಾಸನಗಳು ಕಂಡುಬರುವು. ಕ್ರಿ.ಶ. ೧೧೬೧ರ



ಛಾ.ಚಿ. ೧೯ ಸಿದ್ದಲಿಂಗೇಶ್ವರ ದೇವಾಲಯ, ಹಿರೇಸಿಂಧೋಗಿ (ಕೊ.ತಾ.)



**ಛಾ.ಚಿ. ೨೦ ಸೋಮೇಶ್ವರ ದೇವಾಲಯ, ಹುಲಗಿ, (ಕೊ.ತಾ.)**

ಶಾಸನವು ಕಲದೇಗುಲವನ್ನು ಹೆಸರಿಸಿದರೆ[೨೯] ಕ್ರಿ.ಶ. ೧೦೫೭ರ ಶಾಸನವು ಕೇಶದ ದೇವಾಲಯವನ್ನು ಹೆಸರಿಸುವುದು.[೩೦] ಕ್ರಿ.ಶ. ೧೧೮೨ರ ಮತ್ತೊಂದು ಶಾಸನ ಭಿಲ್ಲೇಶ್ವರ ದೇವರನ್ನು ಉಲ್ಲೇಖಿಸುವುದು.[೩೧] ಕ್ರಿ.ಶ. ೧೨೦೪ ಹೊಯ್ಸಳ ವೀರಬಲ್ಲಾಳನ ಶಾಸನವು ರಂಗನಾಥ ದೇವಾಲಯದ ಕುರಿತು ಹೇಳುವುದು.[೩೨] ಶಾಸನಗಳು ಹೆಸರಿಸುವ ದೇವಾಲಯಗಳು ನಾಲ್ಕು ಆಗಿದ್ದರೆ ಇಂದು ಗ್ರಾಮದಲ್ಲಿ ಐದು ದೇವಾಲಯಗಳು ಕಂಡುಬರುವವು.

**ಸಿದ್ಧಲಿಂಗೇಶ್ವರ ದೇವಾಲಯ** (ನೋಡಿ. ತ.ನ-೧)

ಊರ ಮಧ್ಯದಲ್ಲಿರುವ ಈ ದೇವಾಲಯವನ್ನು ಪೂರ್ವಮುಖಿ ಮಾಡಿ ಕಟ್ಟಲಾಗಿದೆ. ಏಕಕೂಟ ತಲವಿನ್ಯಾಸದಲ್ಲಿರುವ ದೇವಾಲಯ ಗರ್ಭಗೃಹ, ಅಂತರಾಳ, ನವರಂಗ ಮಂಟಪಗಳನ್ನು ಹೊಂದಿದೆ.



**ಛಾ.ಚಿ. ೨೧ ಮಹದೇವ ದೇವಾಲಯ, ಇಟಗಿ (ಯ.ತಾ.)**



**ಛಾ.ಚಿ. ೨೨ ನವಲಿಂಗೇಶ್ವರ ದೇವಾಲಯ ಹೊರಗೋಡೆ ಮತ್ತು ಮಂಟಪದ ಕಂಬ (ಯ.ತಾ.)**

ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಲಾಗಿದ್ದು ದ್ವಾರವು ಸರಳ ಕೆತ್ತನೆಯಲ್ಲಿರುವುದು. ಅಂತರಾಳ ದ್ವಾರದ ಮಂಗಲ ಫಲಕದಲ್ಲಿ ಗಣೇಶನ ಶಿಲ್ಪ ಕೆತ್ತಲಾಗಿದೆ. ಮುಂದಿನ ನವರಂಗಮಂಟಪದ ಮಧ್ಯ ನಾಲ್ಕು ಚೌಕಾದ ಕಂಬಗಳಿದ್ದು ಅವು ಪೀಠ, ಪಟ್ಟಿಕೆ, ಅಷ್ಟಪೈಲುಕಾಂಡ, ಗೋಲಾಕಾರ ಫಲಕ, ಚೌಕಾಕಾರದ ಫಲಕ ಮತ್ತು ಬೋದುಗೆ ಭಾಗಗಳನ್ನು ಹೊಂದಿರುವವು. ಗರ್ಭಗೃಹದ ಮೇಲ್ಗಡೆ ಇತ್ತೀಚಿನ ದಿನಗಳಲ್ಲಿ ಕಟ್ಟಲಾದ ಶಿಖರವಿರುವುದು. ಹೊರಗೋಡೆ ಸರಳ ಕೆತ್ತನೆ ಹೊಂದಿದ್ದು ಅಧಿಷ್ಠಾನ ನೆಲದಲ್ಲಿ ಹುದುಗಿ ಕೊಂಡಿರುವುದು.

## ೩. ಕಲ್ಲೂರ

ಯಲಬುರ್ಗಾ ತಾಲೂಕಿನ ಗ್ರಾಮವಾದ ಕಲ್ಲೂರ ಹಿಂದೊಮ್ಮೆ ಕುಕನೂರ -೩೦ರ ರಾಜಕೀಯ ಚಿಕ್ಕ ಆಡಳಿತದ ಉಪವಿಭಾಗವಾಗಿತ್ತು. ಐತಿಹಾಸಿಕ ಮಹತ್ವ ಪಡೆದಿರುವ ಕಲ್ಲೂರದಲ್ಲಿ ಚಾಲುಕ್ಯ ವಿಜಯನಗರ ಕಾಲದ ಹಲವಾರು ಶಾಸನಗಳು ಹಾಗೂ ದೇವಾಲಯ ಸ್ಮಾರಕಗಳು ಕಂಡುಬರುತ್ತವೆ. ಇಂತಹವುಗಳಲ್ಲಿ ಕಲ್ಲೇಶ್ವರ ದೇವಾಲಯ ಪ್ರಮುಖವಾದುದು. ಕಲ್ಯಾಣಚಾಲುಕ್ಯ ಕಾಲದ ಶಾಸನಗಳಲ್ಲಿ ಸೋಬನೇಶ್ವರ, ಸ್ವಯಂಭು ಕಲಿದೇವ, ಕಲ್ಲೇಶ್ವರ ದೇವಾಲಯಗಳ ಉಲ್ಲೇಖ ದೊರಕುವದು.[೩೩] ಆದರೆ ಇಂದೂ ಗ್ರಾಮದಲ್ಲಿ ಕಲ್ಲೇಶ್ವರ ದೇವಾಲಯ ಮಾತ್ರ ಕಂಡುಬರುವುದು. ಹೀಗಾಗಿ ಶಾಸನ ಹೆಸರಿಸುವ ಸ್ವಯಂಭೂ ಕಲದೇವ, ಕಲ್ಲೇಶ್ವರ ಮತ್ತು ಸೋಬನೇಶ್ವರ ದೇವಾಲಯಗಳು ಬೇರೆ ಬೇರೆಯಾಗಿರದೆ, ಕ್ರಿ.ಶ. ೧೦೦೨ ರಿಂದ ವಿಜಯನಗರ ಕಾಲದವರೆಗಿನ ಶಾನಗಳಲ್ಲಿ ಹಲವು ಹೆಸರಿನಿಂದ ಕರೆಯಿಸಿಕೊಂಡರೂ ಇಂದು ಶಾಸನ ಮತ್ತು ಗ್ರಾಮಸ್ಥರಿಂದ ಕಲ್ಲೇಶ್ವರ ದೇವಾಲಯ ಎಂದು ಕರೆಯಿಸಿಕೊಂಡ ಗುಡಿಯೇ ಕಲ್ಲೇಶ್ವರ ದೇವಾಲಯ ಎಂಬುವುದರಲ್ಲಿ ಸಂಶಯವಿಲ್ಲ.

## ಕಲ್ಲೇಶ್ವರ ದೇವಾಲಯ

ಗ್ರಾಮದ ಮಧ್ಯದಲ್ಲಿ ಪೂರ್ವಮುಖ ಮಾಡಿದಂತೆ ಕಟ್ಟಲಾದ ದೇವಾಲಯ ಗರ್ಭಗೃಹ ಅರ್ಧಮಂಟಪ ನವರಂಗ ಮಂಟಪ ಹಾಗೂ ಮಹಾಮಂಟಪ ಹಾಗೂ ಪ್ರಾಕಾರ ಗೋಡೆಯನ್ನು ಹೊಂದಿದೆ. ಏಕಕೂಟ ತಲವಿನ್ಯಾಸದ ಸಂಕೀರ್ಣ ದೇವಾಲಯ ಇದಾಗಿದೆ. ಗರ್ಭಗೃಹ, ಅರ್ಧಮಂಟಪ ನವರಂಗ ಮಂಟಪಗಳು ಕಲ್ಯಾಣ ಚಾಲುಕ್ಯರ ಸಮಕಾಲೀನವು. ಮಹಾಮಂಟಪ, ಪ್ರಾಕಾರಗೋಡೆ, ಕೈಪಿಡಿ ಗೋಡೆ ಭಾಗ ಮತ್ತು ಸಾಲುಮಂಟಪ ಪ್ರವೇಶ ಮಂಟಪ, ಅದರ ಮೇಲಿನ ದ್ರಾವಿಡ ಗೋಪುರ ಭಾಗಗಳು ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡಿರುವವು.

ಎತ್ತರದ ಜಗಲಿಯ ಮೇಲೆ (ಮೂಲ ಅಧಿಷ್ಠಾನ ಭಾಗ ಮುಚ್ಚಿದೆ) ಕಟ್ಟಲಾದ ದೇವಾಲಯದ ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಮೂಲ ಶಿವಲಿಂಗ ಪ್ರತಿಷ್ಠಾಪಿತಗೊಂಡಿದೆ. ದ್ವಾರವು ಅರೆಗಂಭ ಶಾಖೆಗಳ ಕೆತ್ತನೆಯ ಜೊತೆಗೆ ಮಂಗಲದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪ ಕೆತ್ತನೆ ಹೊಂದಿದೆ. ನವರಂಗ ಮಂಟಪದ್ವಾರವು ಗರ್ಭಗೃಹ ದ್ವಾರದಂತೆ ಇರುವುದು. ಮಂಟಪದ ಮಧ್ಯ ನಾಲ್ಕು ಚೌಕಾದ ಕಂಬಗಳಿದ್ದು ಅವು ಪೀಠ, ಪಟ್ಟಿಕೆ, ಅಷ್ಟ ಪೈಲು ಕಾಂಡ, ವೃತ್ತಫಲಕ, ಬೋದುಗೆಗಳನ್ನು ಹೊಂದಿರುವವು. ಮೇಲಿನ ಛತ್ತು



**ಛಾ.ಚಿ. ೨೩ ಮಹದೇವ ದೇವಾಲಯದ ನವಶಾಖಾ ದ್ವಾರ, ಇಟಗಿ (ಯ.ತಾ.)**



**ಛಾ.ಚಿ. ೨೪ ಸೋಮೇಶ್ವರ ದೇವಾಲಯದ ಅಂತರಾಳ ದ್ವಾರ, ಹುಲಗಿ (ಕೊ.ತಾ.)**

ಪದ್ಮ ಕೆತ್ತನೆಯುಳ್ಳದ್ದಾಗಿದೆ. ಮುಂದಿನ ಮಹಾಮಂಟಪವು ವಿಜಯನಗರ ಕಾಲದಲ್ಲಿ ನಿರ್ಮಾಣಹೊಂದಿದೆ. ಗರ್ಭಗೃಹದ ಮೇಲಿರುವ ಶಿಖರವು ಮೆಟ್ಟಲು ರೂಪದಲ್ಲಿದೆ. ದೇವಾಲಯದ ಸುತ್ತಲೂ ಪ್ರಾಕಾರ ಗೋಡೆ ಮಂಟಪಗಳ ಮತ್ತು ಪ್ರವೇಶಮಂಟಪ ಹಾಗೂ ಗೋಪುರಗಳಿವೆ. ಪ್ರವೇಶ ಗೋಪುರದಲ್ಲಿ ಅನೇಕ

ಹಂತಗಳಿದ್ದು ದ್ರಾವಿಡ ಶೈಲಿಯಲ್ಲಿದೆ. ಇದರ ಪ್ರತಿ ಹಂತಗಳಲ್ಲಿ ಕುಡುಗಳಿದ್ದು ಅವುಗಳಲ್ಲಿ ಗಾರೆಶಿಲ್ಪಗಳನ್ನು ಮಾಡಲಾಗಿದೆ.

**೪. ಕವಲೂರ**

ಕೊಪ್ಪಳ ತಾಲೂಕಿನ ಗ್ರಾಮವಾದ ಕವಲೂರ ಐತಿಹಾಸಿಕ ಮಹತ್ವವುಳ್ಳದ್ದಾಗಿದೆ. ಗ್ರಾಮದಲ್ಲಿ ಹರಿಹರೇಶ್ವರ, ವೆಂಕಟರಮಣ, ಯತೀಶ್ವರ, ಈಶ್ವರ, ಮಲ್ಲಿಕಾರ್ಜುನ ದೇವಾಲಯಗಳಿದ್ದಂತೆ ಇಲ್ಲಿ ಎರಡು ಶಾಸನಗಳು ಕಂಡುಬರುವವು. ಕಲಚುರಿ ಸಂಕಮನ ಕಾಲದ ಕ್ರಿ.ಶ. ೧೧೭೭ ರ ಶಾಸನ ಸಂಕಮನ ಮಂತ್ರಿ ಶ್ರೇಷ್ಠನಾದ ಎಚಿಮಯ್ಯ ರೇಚಿದೇವನು ಹರಿಹರ ದೇವಾಲಯವನ್ನು ನಿರ್ಮಿಸಿ ಅದಕ್ಕೆ ಎಡೆಯ ಹಳ್ಳಿಯನ್ನು ದಾನವಾಗಿ ನೀಡಿದನೆಂದಿದೆ.[೩೪] ಈ ಶಾಸನೋಕ್ತ ದೇವಾಲಯವು ಗ್ರಾಮದ ದೇಸಾಯಿಯವರ ಕಿಲ್ಲೆಯಲ್ಲಿರುವ ಹರಿಹರೇಶ್ವರ ದೇವಾಲಯವಾಗಿದೆ. ಕ್ರಿ.ಶ. ೧೮೯೭ ರ ೬ ನೇ ವಿಕ್ರಮಾದಿತ್ಯನ ಶಾಸನವು ಅಗತ್ಸ್ಯಗೋತ್ರದ ಚೌಡಭಟ್ಟನ ಮಗ ಮತ್ತು ಸೋಮಯಾಜಿ ವಿಷ್ಣುದೇವಾಲಯ, ಸತ್ರ, ಕೇರೆಗಳನ್ನು



**ಛಾ.ಚಿ. ೨೫ ಸೋಮೇಶ್ವರ ದೇವಾಲಯ ನವರಂಗ ಮಂಟಪ, ಹುಲಗಿ (ಕೊ.ತಾ.)**

ಕಟ್ಟಿಸಿದನೆಂದು ಮತ್ತು ಸೋಮಯಾಚಿಯ ಮಗ ಮುದ್ದೇಭಟ್ಟನ ಪತ್ನಿ ಮಾಕಬ್ಬೆಯರ ಮಗಳು ಶಾಂತಿಕಬ್ಬೆ ದೇವಾಲಯದಲ್ಲಿ ಕೇಶವ ದೇವರ ಶಿಲ್ಪ ಮಾಡಿದ ಪ್ರತಿಷ್ಠಾಪಿಸಿ ದಾನಗೈದ ವಿಷಯವನ್ನು ತಿಳಿಸುವುದು.[೩೫] ಈ ಶಾಸನ ತಿಳಿಸುವ ವಿಷ್ಣುದೇವಾಲಯ ಗ್ರಾಮದ ಮಧ್ಯದಲ್ಲಿರುವ ವೆಂಕಟರಮಣ ದೇವಾಲಯವೇ ಆಗಿದೆ.

**ಯತೀಶ್ವರ ದೇವಾಲಯ** (ನೋಡಿ. ತ.ನ-೪)

ಗ್ರಾಮದ ಮಧ್ಯದಲ್ಲಿರುವ ಈ ದೇವಾಲಯ ಪೂರ್ವಮುಖಿಮಾಡಿ ಮತ್ತು ತ್ರಿಕೂಟ ತಲವಿನ್ಯಾಸದಲ್ಲಿ ಕಟ್ಟಲ್ಪಟ್ಟಿರುವುದು. ಈಗ ಎರಡು ಗರ್ಭಗೃಹಗಳು ಮಾತ್ರ ಉಳಿದಿದ್ದು ಒಂದು ಗರ್ಭಗೃಹ ಸಂಪೂರ್ಣ ಬಿದ್ದುಹೋಗಿದೆ. ಮೂಲ ಗರ್ಭಗೃಹದಲ್ಲಿ ಶಿವಲಿಂಗ ಪ್ರತಿಷ್ಠೆ ಮಾಡಲಾಗಿದ್ದು ಅದರ ದ್ವಾರವು ಸರಳ ಕೆತ್ತನೆಯ



ಛಾ.ಚಿ. ೨೬ ಮಹದೇವ ದೇವಾಲಯದ ನವರಂಗ ಮಂಟಪದ ಕಂಬಗಳು, ಇಟಗಿ (ಯ.ತಾ.)

ಜೊತೆಯಲ್ಲಿ ಕೆಳಗಡೆ ಶೈವ ದ್ವಾರಪಾಲಕರ ಉಬ್ಬು ಶಿಲ್ಪಕೆತ್ತನೆಯನ್ನು ಹೊಂದಿದೆ. ಮತ್ತೊಂದು ಗರ್ಭಗೃಹದಲ್ಲಿ ಯಾವುದೇ ಶಿಲ್ಪ ಕಂಡುಬರದಿದ್ದರೂ ದ್ವಾರವು ವೈಷ್ಣವ ದ್ವಾರ ಪಾಲಕರ ಉಬ್ಬುಶಿಲ್ಪ ಕೆತ್ತನೆಯನ್ನು ಹೊಂದಿದೆ. ಮೂಲತಃ ಇದೊಂದು ತ್ರೈಪುರುಷ ದೇವಾಲಯ. ನವರಂಗಮಂಟಪದಲ್ಲಿ ಚೌಕಾದ ನಾಲ್ಕು ಕಂಬಗಳಿರುವವು. ಹೊರಭಾಗದ ಅಲಂಕಾರದಲ್ಲಿ ಅಧಿಷ್ಠಾನವು ಉಪಾನ, ಜಗತಿ, ಕಂಪ, ಕಂಠ, ತ್ರಿಪಟ್ಟಕುಮುದ, ಕಪೋತ ಭಾಗಗಳನ್ನು ಹೊಂದಿರುವುದು. ಇದರ ಮೇಲಿನ ಗೋಡೆಯು ಸರಳ ಕೆತ್ತನೆ ಹೊಂದಿದ್ದು ಮೇಲೆ ಮುಂಚಾಚು ಭಾಗವಿರುವುದು.

### ೫. ಕುಷ್ಟಗಿ

ಹೊಸದಾಗಿ ರಚನೆಗೊಂಡ ಕೊಪ್ಪಳ ಜಿಲ್ಲೆಯ ಒಂದು ತಾಲೂಕ ಕೇಂದ್ರ ಸ್ಥಳವಾದ ಕುಷ್ಟಗಿ ಇಂದು ತಾಲೂಕು ಕೇಂದ್ರವಾದಂತೆ ಒಂದೊಮ್ಮೆ ಅನೇಕ ಪ್ರಾಚೀನ ವಾಸ್ತು ಸ್ಮಾರಕಗಳನ್ನು ಹೊಂದಿದ ಮುಖ್ಯಕೇಂದ್ರ. ಕುಷ್ಟಗಿಯ ನಾಲ್ಕು ದಿಕ್ಕುಗಳಲ್ಲದೇ ಮಧ್ಯಭಾಗದಲ್ಲಿ ಪ್ರಾಚೀನ ಮತ್ತು ಮಧ್ಯಕಾಲೀನ ಅನೇಕ ದೇವಾಲಯಗಳು ಕಂಡುಬರುತ್ತವೆ. ಇವುಗಳಲ್ಲಿ ಉಳಿದುಬಂದ ದೇವಾಲಯವೆಂದರೆ ರಾಮಲಿಂಗೇಶ್ವರ ದೇವಾಲಯ ಮಾತ್ರ.

**ರಾಮಲಿಂಗೇಶ್ವರ ದೇವಾಲಯ** (ನೋಡಿ. ತ.ನ-೨)

ಗ್ರಾಮದ ಮಧ್ಯ ಪೂರ್ವಮುಖಿಮಾಡಿ ಕಟ್ಟಲಾದ ಈ ದೇವಾಲಯ ಏಕಕೂಟ ತಲವಿನ್ಯಾಸ ಮಾದರಿ ಹೊಂದಿದ್ದು ಗರ್ಭಗೃಹ, ಅಂತರಾಳ, ನವರಂಗಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಕಪ್ಪುಶಿಲೆಯ ಶಿವಲಿಂಗ ಪ್ರತಿಷ್ಠೆಗೊಂಡಿದೆ. ಇದರ ದ್ವಾರವು ಅರೆಗಂಭಪಟ್ಟಿಕೆ, ಆಯುಧಹಿಡಿದ ವೀರರ ಚಿಕ್ಕ ಶಿಲ್ಪ ಪಟ್ಟಿಕೆ ಹಾಗೂ ಪದ್ಮ ಪಟ್ಟಿಕೆಯ ಶಾಖೆಗಳನ್ನು ಹೊಂದಿದ್ದು ಮಂಗಲ ಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ

ಕೆತ್ತನೆಯಿರುವುದು. ಮುಂದಿನ ನವರಂಗ ಮಂಟಪದಲ್ಲಿ ನಾಲ್ಕು ಚೌಕಾದ ಕಂಬಗಳಿವೆ. ಕಂಬಗಳ ಪಟ್ಟಿಕೆಗಳಲ್ಲಿ ರಾಮಾಯಣ, ಮಹಾಭಾರತ, ಕಾವ್ಯಗಳ ಉಬ್ಬುಶಿಲ್ಪವಿರುವವು. ಅಧಿಷ್ಠಾನ, ಉಪಾನ, ಜಗತಿ, ಕಂಪ, ಕಂಠ, ತ್ರಿಪಟ್ಟಿಕುಮುದ ಹಾಗೂ ಕಪೋತ ಪಟ್ಟಿಕೆಗಳನ್ನು ಹೊಂದಿರುವುದು. ಗೋಡೆಯು ಕೆತ್ತನೆ ಹೊಂದದೆ ಸರಳವಾಗಿದೆ. ಗರ್ಭಗೃಹದ ಮೇಲೆ ಏಕತಲ ಶಿಖರವಿದ್ದು ನಂತರದ ಕಾಲದಲ್ಲಿ ಕಟ್ಟಿದ್ದಾಗಿದೆ.

## ೬. ಚಳಗೇರಿ

ಕುಷ್ಟಗಿ ತಾಲೂಕಿಗೆ ಸೇರಿದ ಚಳಗೇರಿ ಗ್ರಾಮ ಐತಿಹಾಸಿಕ ಹಿನ್ನೆಲೆಯುಳ್ಳದ್ದಾಗಿದೆ. ಗ್ರಾಮದಲ್ಲಿ ಚಾಲುಕ್ಯ ಶಾಸನ ಹಾಗೂ ದೇವಾಲಯಗಳುಂಟು. ಕ್ರಿ.ಶ. ೧೧೭೨ರ ಕಲಚುರಿ ಸೋವಿದೇವನ ಶಾಸನವು ಕಲ್ಲಂಗೆರೆ ಅಂದರೆ ಇಂದಿನ ಚಳಗೇರಿಯಲ್ಲಿ ಬೂಚದಂಡನಾಯಕನು ಲಕ್ಷ್ಮೀದೇವದಂಡನಾಯಕನ ಅನುಮತಿ ಪಡೆದು ತಾನು ಕಟ್ಟಿಸಿದ ದೇವಾಲಯಕ್ಕೆ ದಾನ ನೀಡಿದನೆಂದು ಉಲ್ಲೇಖಿಸುವುದು.[೩೬] ಶಾಸನ ಹೆಸರಿಸುವ ಲಕ್ಷ್ಮೀನಾರಾಯಣ ದೇವಾಲಯವನ್ನು ಇಂದು ಗ್ರಾಮಸ್ಥರು ಲಕ್ಷ್ಮೀದೇವಾಲಯವೆಂದು ಕರೆಯುವರು. ಈ ದೇವಾಲಯದ ಜೊತೆಗೆ ಚಾಲುಕ್ಯಕಾಲದ ದೇವಾಲಯವಿದೆ. ಅದು ರಾಮಲಿಂಗೇಶ್ವರ ಹೆಸರಿನಿಂದ ಕರೆಯಲಾಗುತ್ತಿದ್ದು ಜೀರ್ಣೋದ್ಧಾರಗೊಂಡಿದೆ.

## ಲಕ್ಷ್ಮೀದೇವಾಲಯ (ಲಕ್ಷ್ಮೀನಾರಾಯಣ)

ಎತ್ತರವಾದ ಅಧಿಷ್ಠಾನದ ಮೇಲೆ ಕಟ್ಟಲಾದ ಈ ದೇವಾಲಯ ಗರ್ಭಗೃಹ ಪ್ರದಕ್ಷಿಣಪಥ, ತೆರೆದ ನವರಂಗಮಂಟಪ ಮತ್ತು ಆವರಣ ಗೋಡೆಯನ್ನು ಹೊಂದಿದ್ದು ಸಂಪೂರ್ಣ ಜೀಣೋದ್ಧಾರಗೊಂಡಿರುವುದು. ಗರ್ಭಗೃಹದಲ್ಲಿರುವ ಮೂಲ ಲಕ್ಷ್ಮೀನಾರಾಯಣ ಶಿಲ್ಪವು ಸ್ಥಳಾಂತರಗೊಂಡಿದ್ದು ನಂತರದಲ್ಲಿ ಲಕ್ಷ್ಮಿಯ ಶಿಲ್ಪವನ್ನು ಪ್ರತಿಷ್ಠೆಗೊಳಿಸಿರುವರು.

## ರಾಮಲಿಂಗೇಶ್ವರ ದೇವಾಲಯ

ಗ್ರಾಮದ ದಕ್ಷಿಣಕ್ಕೆ ಪೂರ್ವಮುಖಿಮಾಡಿ ಕಟ್ಟಲಾದ ಈ ದೇವಾಲಯ ಏಕಕೂಟ ತಲವಿನ್ಯಾಸದಲ್ಲಿ ಗರ್ಭಗೃಹ, ನವರಂಗ ಮಂಟಪಗಳನ್ನು ಹೊಂದಿದೆ. ಎರಡು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠೆ ಮಾಡಲಾಗಿದೆ.

## ೭. ಚಂದ್ರಗಿರಿ

ಕುಷ್ಟಗಿ ತಾಲೂಕಿಗೆ ಸೇರಿದ ಚಂದ್ರಗಿರಿ ಗ್ರಾಮವು ಹನುಮಸಾಗರದಿಂದ ಪಶ್ಚಿಮಕ್ಕೆ ೫ ಕಿ.ಮೀ. ಅಂತರದಲ್ಲಿದೆ. ಇದು ಸಹ ಪ್ರಾಚೀನ ಸ್ಮಾರಕಗಳ ಸ್ಥಳ. ಇಲ್ಲಿ ಚಂದ್ರಲಿಂಗ, ಈಶ್ವರ ಹಾಗೂ ಗಂಗಮಾಳಮ್ಮ ಹೆಸರಿನ ದೇವಾಲಯಗಳಿದ್ದು ಇವೆಲ್ಲವು ೧೨-೧೩ನೇ ಶತಮಾನಕ್ಕೆ ಸೇರಿದವುಗಳಾಗಿವೆ. ಇವುಗಳಲ್ಲಿ ಈಶ್ವರ ದೇವಾಲಯ ೧೨ ನೇ ಶತಮಾನಕ್ಕೆ ಸೇರಿದ್ದು ಗ್ರಾಮದ ಈಶಾನ್ಯಕ್ಕೆ ಪೂರ್ವ ಮುಖಿಮಾಡಿ ಕಟ್ಟಲ್ಪಟ್ಟಿದೆ.

## ಈಶ್ವರ ದೇವಾಲಯ

ಚಂದಾಲಿಂಗೇಶ್ವರ ದೇವಾಲಯದ ಬಲಬದಿಯ ಗರ್ಭಗೃಹಕ್ಕೆ ಹತ್ತಿಕೊಂಡಂತಿರುವ ದೇವಾಲಯ ಕಲ್ಯಾಣ ಚಾಳುಕ್ಯಶೈಲಿಯಲ್ಲಿ ನಿರ್ಮಾಣಗೊಂಡಿರುವುದು. ಏಕಕೂಟ ತಲವಿನ್ಯಾಸ ಮಾದರಿಯಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗ ಪ್ರತಿಷ್ಠೆಗೊಂಡಿದ್ದು ದ್ವಾರವು ಪಂಚಶಾಖೆಗಳಲ್ಲಿ ಸರಳ ಕೆತ್ತನೆ ಹೊಂದಿರುವದು. ದ್ವಾರದ ಮಂಗಲ ಫಲಕದಲ್ಲಿ ಗಜಲಕ್ಷ್ಮಿಯ ಶಿಲ್ಪಕೆತ್ತನೆ ಇದ್ದರೆ ಇದರ ಮೇಲೆ ಶಿಖರ ಪಟ್ಟಿಕೆ ಇರುವದು. ಮುಂದಿನ ನವರಂಗ ಮಂಟಪ ತೆರೆದಂತಿದ್ದು ಅದಕ್ಕೆ ಮೂರು ಪ್ರವೇಶಗಳಿವೆ. ಈ ಮಂಟಪದಲ್ಲಿ ಪೀಠ, ಪಟ್ಟಿಕೆ, ಎಂಟು ಹದಿನಾರು ಕೊನದ ಕಾಂಡ, ಪಟ್ಟಿಕೆ ಸಾದಾ ಬೊದುಗೆಳನ್ನು ಹೊಂದಿದ ಕಂಬಗಳಿವೆ. ಮಂಟಪದ ಕಟಾಂಜನದ ಮೇಲೆ ಕಕ್ಷಾಸನಗಳಿರುವವು. ಗರ್ಭಗೃಹದ ಮೇಲೆ ದ್ರಾವಿಡ ಲಕ್ಷಣದ ದ್ವಿತಲ ಶಿಖರ ಕಂಡುಬರುತ್ತದೆ.

## ೮. ತಳಕಲ್ಲ

ಯಲಬುರ್ಗಿ ತಾಲೂಕಿಗೆ ಸೇರಿದ ತಳಕಲ್ಲ ಗ್ರಾಮವು ಗದಗ-ಕೊಪ್ಪಳ ಮಧ್ಯದ ಹೆದ್ದಾರಿಯ ಮೇಲ್ಗಡೆಯಿರುವುದು. ಈ ಗ್ರಾಮದಲ್ಲಿ ಒಟ್ಟು ಮೂರು ಪ್ರಾಚೀನ ದೇವಾಲಯಗಳು ಕಂಡುಬರುತ್ತಿದ್ದು ಅವುಗಳನ್ನು ಗ್ರಾಮಸ್ಥರು ಕಲ್ಲೇಶ್ವರ, ಸಿದ್ಧಲಿಂಗೇಶ್ವರ ಹಾಗೂ ವೀರಭದ್ರೇಶ್ವರ ಹೆಸರಿನಿಂದ ಕರೆಯುತ್ತಾರೆ. ಇವುಗಳಲ್ಲಿ ಕಲ್ಲೇಶ್ವರ ದೇವಾಲಯವೇ ಮೂಲರೂಪದಲ್ಲಿರುವುದು. ಕ್ರಿ.ಶ. ೯೯೧ರ ಶಾಸನವು ಕಲ್ಯಾಣ ಚಾಲುಕ್ಯ ೨ನೇ ತೈಲಪನ ಕಾಲಕ್ಕೆ ಸೇರಿದ್ದು, ಅವನ ಸಾಮಂತನಾದ ಸೋಭನರಸನು ಎರಡುನೂರು, ಬನವಾಸಿ ೧೨೦೦೦ ಪ್ರದೇಶಗಳನ್ನು ಆಳುತ್ತಿದ್ದ ಸಮಯದಲ್ಲಿ ಅಗ್ರಹಾರ ತಳಕಲ್ಲದ ನಾಗಲೇಶ್ವರ ದೇವಾಲಯಕ್ಕೆ ೪೦೦ ಮತ್ತರು ಭೂಮಿಯನ್ನು ದಾನವಾಗಿ ನೀಡಿದ ವಿಷಯವನ್ನರಹುತ್ತದೆ.[೩೭] ಈ ಗ್ರಾಮದಲ್ಲಿ ಪ್ರಾಚೀನ ದೇವಾಲಯ ಒಂದೇ ಕಂಡುಬಂದುದರಿಂದ ಶಾಸನ ಹೆಸರಿಸುವ ನಾಗಲೇಶ್ವರ ದೇವಾಲಯವೇ ಕಲ್ಲೇಶ್ವರ ದೇವಾಲಯವಾಗಿದೆ. ಶಾಸನಕ್ಕಿಂತ ಮುಂಚೆಯೇ ಈ ದೇವಾಲಯ ನಿರ್ಮಾಣವಾಗಿದ್ದುದು ಸ್ಪಷ್ಟವಾಗಿದೆ. ಸಿದ್ಧಲಿಂಗೇಶ್ವರ ದೇವಾಲಯ ಇಂದು ಜೀರ್ಣದ್ಧಾರಗೊಂಡಿದ್ದರೂ ಕ್ರಿ.ಶ. ೧೦೮೬ರ ಶಾಸನ ಇದನ್ನು ಹೆಸರಿಸುತ್ತದೆ.[೩೮]

## ಕಲ್ಲೇಶ್ವರ ದೇವಾಲಯ (ನಾಗಲೇಶ್ವರ)

ಏಕಕೂಟ ತಲವಿನ್ಯಾಸ ಮಾದರಿಯಲ್ಲಿ ಪೂರ್ವ ಮುಖಮಾಡಿದಂತೆ ಗ್ರಾಮದ ಮಧ್ಯದಲ್ಲಿ ಕಟ್ಟಲಾದ ಈ ದೇವಾಲಯ ಗರ್ಭಗೃಹ, ನವರಂಗಮಂಟಪಗಳನ್ನು ಹೊಂದಿರುವುದು. ಗರ್ಭಗೃಹದಲ್ಲಿ ಪ್ರಾಚೀನ ಶಿವಲಿಂಗವಿದ್ದಂತೆ ದ್ವಾರವು ಸರಳ ಕೆತ್ತನೆಯಲ್ಲಿದೆ. ಮೇಲಿನ ಮಂಗಲ ಫಲಕದಲ್ಲಿ ಗಜಲಕ್ಷ್ಮೀಯ ಉಬ್ಬುಶಿಲ್ಪವಿರುವುದು. ಮುಂದಿನ ನವರಂಗ ಮಂಟಪದಲ್ಲಿ ನಂದಿಶಿಲ್ಪ ಪ್ರತಿಷ್ಠೆಗೊಂಡಂತೆ ಮಧ್ಯದಲ್ಲಿ ನಾಲ್ಕು ಚೌಕಾದ ಕಂಬಗಳಿವೆ. ದೇವಾಲಯ ಹೆಚ್ಚು ಜೀರ್ಣೋದ್ಧಾರಗೊಂಡಿರುವುದರಿಂದ ಹೊರಗೋಡೆಯ ಮೂಲಸ್ವರೂಪ ಹಾಳಾಗಿಹೋಗಿದೆ.



ಛಾ.ಚಿ. ೨೭ ಸೋಮೇಶ್ವರ ದೇವಾಲಯದ ಶಿಖರಗಳ ನೋಟ, ಪುರ (ಕು.ತಾ.)

## ೯. ಪುರ

ಪ್ರಾಚೀನ ಕಾಲದ ಪಟ್ಟಣವಾದ ಪುರ ಕುಷ್ಟಗಿ ತಾಲೂಕಿಗೆ ಸೇರಿದ ಪ್ರಮುಖ ಗ್ರಾಮ ಈ ಗ್ರಾಮದಲ್ಲಿ ಮೂರು ಶಾಸನಗಳು ಹಾಗೂ ಎರಡು ದೇವಾಲಯಗಳು ದೊರಕುತ್ತಿವೆ. ಕ್ರಿ.ಶ. ೧೦೧೮ರ ಶಾಸನವು ಕೆಳವಾಡಿ-೩೦೦ ರಾಜಕೀಯ ಆಡಳಿತ ವಿಭಾಗವನ್ನು ಆಳುತ್ತಿದ್ದ ದಂಡನಾಯಕನು ಪುರದ ಮೂಲಸ್ಥಾನ ದೇವಾಲಯಕ್ಕೆ ದಾನ ನೀಡಿರುವುದನ್ನು ಗಮನಿಸಿದರೆ ಶಾಸನಕ್ಕಿಂತ ಮುಂಚೆ ದೇವಾಲಯ ನಿರ್ಮಾಣವಾಗಿರುವುದು ಸ್ಪಷ್ಟವಾಗುವುದು.[೩೯] ಚಾಲುಕ್ಯ ಒಂದನೇ ಸೋಮೇಶ್ವರನ ಕಾಲದ ತೇದಿಯಿಲ್ಲದ ಶಾಸನವು ಸೌರಾಷ್ಟ್ರ



ಛಾ.ಚಿ. ೨೮ ಸೋಮೇಶ್ವರ ದೇವಾಲಯದ ಪ್ರಾಕಾರ ದ್ವಾರದ ಮೇಲಿನ ನಾಗಶಿಲ್ಪಗಳು, ಪುರ (ಕು.ತಾ.)

ಸೋಮನಾಥ ದೇವಾಲಯವನ್ನು ಉಲ್ಲೇಖಿಸುತ್ತಿದ್ದು[೪೦] ಮೇಲಿನ ಶಾಸನದ ಮೂಲಸ್ತಾನ ಮತ್ತು ಈ ಶಾಸನದ ಸೋಮನಾಥ ದೇವಾಲಯಗಳು ಬೇರೆ ಬೇರೆಯಾಗಿರದೆ ಇವೆರಡು ಒಂದೇಯಾಗಿವೆ. ಗ್ರಾಮದಲ್ಲಿರುವ ದೇವಾಲಯವನ್ನು ಇಂದು ಸಹ ಸೋಮೇಶ್ವರನ ಹೆಸರಿನಿಂದಲೇ ಕರೆಯುವರು. ಕ್ರಿ.ಶ. ೧೨ನೇ ಶತಮಾನದ ಚಾಲುಕ್ಯ ಶಾಸನವು ಗವರೇಶ್ವರ ದೇವಾಲಯದ ಕುರಿತು ಹೆಸರಿಸುತ್ತದೆ. ಈ ದೇವಾಲಯಕ್ಕೆ ವ್ಯಾಪಾರಸ್ಥರಾದ



ಛಾ.ಚಿ. ೨೯ ಸೋಮೇಶ್ವರ ದೇವಾಲಯದ ಶಾಸನೋಕ್ತ ಮೂರು ಕಾಲಿನ ಕಲ್ಲಿನ ಮಂಚ, ಪುರ (ಕು.ತಾ.)

ನಾನಾದೇಶಿ, ಮುಮ್ಮರಿದಂಡರು, ಕರಣರು, ಹಾಗೂ ವಿವಿಧ ಅಗ್ರಹಾರಗಳ ಸಮಸ್ತ ಸ್ಥಳದವರು ಸೇರಿ ದೇವರ ಅಂಗಭೋಗ, ರಂಗಭೋಗ ಪಾತ್ರಪಾವುಳ, ಚೈತ್ರ ಪಂಚಪರ್ವ ಇತ್ಯಾದಿಗಳಿಗೆ ಹಲವು ರೀತಿಯ ದಾನಗಳನ್ನು ನೀಡಿರುವುದನ್ನು ಹೇಳುವುದು.[೪೧] ಈ ಶಾಸನ ಹೆಸರಿಸುವ ಗವರೇಶ್ವರ ದೇವಾಲಯವು ಗ್ರಾಮದ ಈಶ್ವರ ದೇವಾಲಯವಾಗಿರುವುದು.

## ಸೋಮೇಶ್ವರ ದೇವಾಲಯ

ಗ್ರಾಮದ ವಾಯುವ್ಯ ಭಾಗಕ್ಕೆ ಹತ್ತಿಕೊಂಡು ಉತ್ತರ ಮುಖಮಾಡಿ ಕಟ್ಟಲಾದ ದೇವಾಲಯ ಸಂಕೀರ್ಣ ಮಾದರಿ ದೇವಾಲಯವಾಗಿದೆ. ಸೂತ್ತಲೂ ಪ್ರಾಕಾರ ಅದರ ಒಳಗೆ ಮಂಟಪಗಳು, ಮೂಲ ಗುಡಿಯ



ಛಾ.ಚಿ. ೩೦ ಸೋಮೇಶ್ವರ ದೇವಾಲಯದಲ್ಲಿರುವ ಪಂಚತಂತ್ರ ಕಥೆಯುಳ್ಳ ಶಿಲ್ಪಗಳು, ಪುರ (ಕು.ತಾ.)

ಹೊರಗೊಡೆಗೆ ಹತ್ತಿಕೊಂಡು ಮಂಟಪಗಳು ಇರುವವು. ಈ ದೇವಾಲಯದ ವೈಶಿಷ್ಟ್ಯವೆಂದರೆ ದೇವಾಲಯ, ಮಂಟಪ, ದ್ವಾರಗಳು ಚಿಕ್ಕದಾಗಿರುವುದು. ಎಲ್ಲವುಗಳಿಗೆ ಹೋಗಬೇಕಾದರೇ ಸಂಪೂರ್ಣ ಬಗ್ಗಿಯೇ ಹೋಗಬೇಕು. ಗರ್ಭಗೃಹದಲ್ಲಿ ಲಿಂಗವಿದ್ದಂತೆ-ಮಂಟಪ-ಪ್ರಾಕಾರದ ಒಳಮಂಟಪಗಳಲ್ಲಿ ಕೇವಲ ಲಿಂಗಗಳ ಪ್ರತಿಷ್ಠೆ ಕಂಡುಬರುವುದು. ಕೋಟಿ ಲಿಂಗಗಳೆಂದು ಕರೆಯುವವಾಡಿಕೆ ಇದೆ. ಮೇಲಿನ ಶಾಸನ ಸೌರಾಷ್ಟ್ರ ಸೋಮನಾಥದೇವನು ಓಹಿಲನಿಗೆ ''ಹಲಿಯ ಹೆಕ್ಕು ದೇಗುಲವ ಮಾಡು, ಸರಿಗೆಯ ಹೆಕ್ಕು ಕೆರೆಯನಗಳಿಸು,



**ಛಾ.ಚಿ. ೩೧ ಸೋಮೇಶ್ವರ ದೇವಾಲಯದ ಮಂಟಪದ ವೀರಭದ್ರ ಶಿಲ್ಪ, ಪುರ (ಕು.ತಾ.)**



**ಛಾ.ಚಿ. ೩೨ ಸೋಮೇಶ್ವರ ದೇವಾಲಯದ ಮಂಟಪದ ಲಿಂಗಹೊತ್ತ ರಾವಣನ ಶಿಲ್ಪ, ಪುರ (ಕು.ತಾ.)**

ಬಾಗಿಲಿಲ್ಲದ ಕೋಟೆ ಕಟ್ಟಿಸು'' ಎಂದು ಆಜ್ಞೆಮಾಡಿದನೆಂದು ಹೇಳುವುದು. ಮುಂದುವರೆದು ಶಾಸನ ''ಓಹಿಲನು ಮಾಡಿಸಿದ ಕೋಟಿಲಿಂಗಕ್ಕೆ ತ್ರಿಕಾಲ ಮಜ್ಜನಕ್ಕೆ ಎರದಾತನೆ ಮೂರಕಾಲ ಮಂಚದ ಮೇಲೆ ಒರಗಲವ ಪೆಳಿದವನೊರಗಿದಡೆ ಪ್ರತ್ಯಾಯ''ವೆಂದು ಉಲ್ಲೇಖಿಸುವದು. ಶಾಸನ ಉಲ್ಲೇಖಿಸುವ ಮೂರು ಕಾಲಿನ ಕಲ್ಲಿನ ಮಂಚ ಇವತ್ತಿಗೂ ದೇವಾಲಯದಲ್ಲಿ ಕಂಡುಬರುತ್ತದೆ.

ದೇವಾಲಯದ ಮತ್ತೊಂದು ವೈಶಿಷ್ಟವೆಂದರೆ ಇಲ್ಲಿರುವ ಶಿಲ್ಪಗಳದಾಗಿದೆ. ದೇವಾಲಯದ ಸುತ್ತಲಿನ ಚಿಕ್ಕಚಿಕ್ಕ ಮಂಟಪಗಳಲ್ಲಿ ಹಾಗೂ ಕಂಬಗಳಿಗೆ ಆನಿಸಿದಂತೆ ಅನೇಕ ಶಿಲ್ಪ-ವಿವಿಧ ಪ್ರಕಾರದ ಕೋಟಿ ಲಿಂಗಗಳನ್ನು ಪ್ರತಿಷ್ಠಾಪಿಸಲಾಗಿದೆ. ಅವುಗಳಲ್ಲಿ ಬಹುಶಃ ಓಹಿಲಯ್ಯ, ಗಣೇಶ, ದಂಪತಿಗಳು(ಶರಣರು), ಉಮಾಮಹೇಶ್ವರ, ಷಣ್ಮುಕ, ಸೂರ್ಯ, ಲಕ್ಷ್ಮೀನರಸಿಂಹ, ದೇವಿ, ಲಿಂಗಹೊತ್ತ ಆನೆ, ನಾಲ್ಕು ನಾಳದ ಲಿಂಗ, ಮಂಟಪಗಳಲ್ಲಿ ಲಿಂಗಕ್ಕೆ ಹಲವಾರು ಲಿಂಗಗಳಿರುವ ಲಿಂಗಗಳು, ಪಂಚಮುಖಲಿಂಗ, ವೈಶ್ಯಕುಲದ ಶಿವ ಆರಾಧಕನು ತನ್ನ ಎತ್ತು ಬಂಡೆಗಳ ಜೊತೆ ಸ್ವರ್ಗಕ್ಕೆ ಹೋಗುವ ವೀರಗಲ್ಲು, ಯಮ, ಪಂಚತಂತ್ರ ಕತೆಯ ಶಿಲ್ಪ, ಕೊಡೆಕಲ್ಲ ಬಸವಣ್ಣನು ಸಾರಿದ ವಚನದ ಶಿಲ್ಪ ಅಂದರೆ ಕಲ್ಲು ಕೋಳಿಯಾಗುವುದು, ಮುಲ್ಲಾ ಬಂದು ಚುರಿಹಾಕುವುದರ ದೃಶ್ಯ ಶಿಲ್ಪ ಏದೆ. ಭೈರವ, ತ್ರಿಶೂಲ ಗಂಟೆ,ಸೂರ್ಯ, ನಾಗ, ನಾಗಯಕ್ಷ, ದೇವಿ, ಮಂಟಪದ ಮೇಲ್ಛಜನ ಶಿವಶರಣರು,



ಛಾ.ಚಿ. ೩೩ ಸೋಮೇಶ್ವರ ದೇವಾಲಯದ ಮಂಟಪದ ಕೋಟ ಲಿಂಗಗಳು, ಪುರ (ಕು.ತಾ.)



ಛಾ.ಚಿ. ೩೪ ಸೋಮೇಶ್ವರ ದೇವಾಲಯದಲ್ಲಿರುವ ವ್ಯಾಪಾರಿಯ ವೀರಗಲ್ಲು ಶಿಲ್ಪ, ಪುರ (ಕು.ತಾ.)

ದೇವಿ, ವೀರಭದ್ರ, ಪ್ರಾಕಾರ ದ್ವಾರದ ಒಳಗೆ ಹಲವು ನಾಗ-ನಾಗಿ ಹಾವುಗಳ ಸುರುಳಿ ಪಟ್ಟಿಕೆ, ಮೂರು ಕಾಲಿನ ಮಂಚ (ಕಲ್ಲಿನ), ದೊಡ್ಡ ಲಿಂಗಹೊತ್ತ (ಗೋಕರ್ಣ ಲಿಂಗ) ರಾವಣ ಇತ್ಯಾದಿ ಶಿಲ್ಪಗಳು ಇಲ್ಲಿ ಪ್ರತಿಷ್ಠೆಗೊಂಡಿವೆ. ದೇವಾಲಯದ ಮೇಲೆ ಇರುವ ಶಿಖರಗಳನ್ನು ವಿಜಯನಗರದ ಅವಧಿಯಲ್ಲಿ ಜಿರ್ಣೋದ್ಧಾರ ಗೊಳಿಸಲಾಗಿದೆ.

## ಈಶ್ವರ ದೇವಾಲಯ

ಎತ್ತರದ ಸ್ಥಳದಮೇಲೆ ಕಟ್ಟಲಾದ ಈ ದೇವಾಲಯ ಸಂಪೂರ್ಣ ಜೀರ್ಣಾವಸ್ಥೆಯಲ್ಲಿದೆ. ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮಂಟಪಗಳಿದ್ದು, ಗರ್ಭಗೃಹ ಅಂತರಾಳಗಳು ಸಂಪೂರ್ಣ ಜೀರ್ಣಾವಸ್ಥೆಯಲ್ಲಿದ್ದರೆ, ನವರಂಗ ಮಂಟಪ ಸಂಪೂರ್ಣ ಹಾಳಾಗಿದೆ. ಗರ್ಭಗೃಹದಲ್ಲಿ ಶಿವಲಿಂಗ ಪ್ರತಿಷ್ಠಾಪಿಸಲಾಗಿದೆ. ದ್ವಾರವು ಪಂಚಶಾಖೆಗಳಲ್ಲಿದ್ದು ಹೂಬಳ್ಳಿ, ವಜ್ರ ಕೆತ್ತನೆಗಳಿರುವವು. ಕೆಳಭಾಗದಲ್ಲಿ ಶೈವದ್ವಾರಪಾಲಕರ ಶಿಲ್ಪ. ಮಂಗಲಫಲಕದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ ಹಾಗೂ ಶಿಖರ ಪಟ್ಟಿಕೆ ಅಲಂಕಾರಗಳಿವೆ.

## ೧೦. ಬಳಗೇರಿ

ಶಾಸನೋಕ್ತವಾಗಿ ಬಳಂಗೆರೆ, ಬೆಳ್ಳಂಗೆರೆಯೆಂದು ಕರೆಯಿಸಿಕೊಂಡ ಈ ಬಳಗೇರಿ ಗ್ರಾಮ ಯಲಬುರ್ಗಿ ತಾಲೂಕಿಗೆ ಸೇರಿದ ಗ್ರಾಮ ಮತ್ತು ಐತಿಹಾಸಿಕ ಮಹತ್ವ ಪಡೆದಂತಹುದು. ಇಲ್ಲಿ ಗ್ರಾಮನಾಮದಿಂದಲೇ ಈ ಹೆಸರು ಪಡೆದ ಕಲ್ಯಾಣಚಾಲುಕ್ಯ ಕಾಲದ ಬಳ್ಳೇಶ್ವರ ದೇವಾಲಯವುಂಟು. ಇದನ್ನು ಚಾಲುಕ್ಯ ಅಹವಮಲ್ಲ ಮತ್ತು ಇರಿವಬೆಡಂಗರ ಕಾಲದ ಎರಡು ಶಾಸನಗಳು ಸೋಬನೇಶ್ವರ ದೇವಾಲಯವೆಂದು ಕರೆಯುತ್ತವೆ. ಕ್ರಿ.ಶ. ೧೦೦೨ರ ಶಾಸನವು ಇಬ್ಬರ ಸಮಕಾಲೀನ ಸಾಮಂತನಾಗಿದ್ದ ಶೋಭನರಸನು ಸೋಭನೇಶ್ವರ ದೇವಾಲಯಕ್ಕೆ ತೋಟವನ್ನು ದಾನವಾಗಿ ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ.[೪೨]

**ಬಳ್ಳೇಶ್ವರ ದೇವಾಲಯ**

ಈ ದೇವಾಲಯವು ಗ್ರಾಮದ ಮಧ್ಯಭಾಗದಲ್ಲಿ ಪೂರ್ವಮುಖಿಮಾಡಿದಂತೆ ಕಟ್ಟಲ್ಪಟ್ಟಿರುವುದು. ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ನವರಂಗ ಮಂಟಪಗಳನ್ನು ಹೊಂದಿರುವುದು. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠೆಗೊಳಿಸಲಾಗಿದ್ದು ದ್ವಾರವು ಶೈವದ್ವಾರಪಾಲಕರ ಜೊತೆಗೆ ಅರೆಗಂಭ ಕೆತ್ತನೆಯ ಶಾಖೆ ಹಾಗೂ ಮಂಗಲ ಫಲಕದಲ್ಲಿ ಗಜಲಕ್ಷ್ಮೀಯ ಉಬ್ಬುಶಿಲ್ಪ ಕೆತ್ತನೆಹೊಂದಿರುವುದು. ನವರಂಗಮಂಟಪದಲ್ಲಿ ನಾಲ್ಕು ಚೌಕಾದ ಕಂಬಗಳಿರುವವು. ಹೊರಗೋಡೆ ಯನ್ನು ನಂತರದಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ.

**೧೧. ಮುಧೋಳ**

ಯಲಬುರ್ಗಾ ತಾಲೂಕಿನ ಪ್ರಮುಖ ಗ್ರಾಮವಾದ ಮುಧೋಳ ಪ್ರಾಚೀನ ಇತಿಹಾಸವುಳ್ಳದ್ದಾಗಿದೆ. ಇಲ್ಲಿ ವಾಸ್ತುಶಿಲ್ಪಕಲೆಯ ಅನೇಕ ದೇವಾಲಯಗಳಿರುವವು. ಅವುಗಳಲ್ಲಿ ಸಿದ್ಧೇಶ್ವರ ತ್ರಿಲಿಂಗೇಶ್ವರ ಹಾಗೂ ಮಲ್ಲಿಕಾರ್ಜುನ ದೇವಾಲಯಗಳಲ್ಲದೆ ಹಲವು ಶಾಸನಗಳು ಪ್ರಾಮುಖ್ಯ ಪಡೆದುಕೊಂಡಿವೆ.

**ಮಲ್ಲಿಕಾರ್ಜುನ ದೇವಾಲಯ**

ಈ ಮಲ್ಲಿಕಾರ್ಜುನ ದೇವಾಲಯವು ಗ್ರಾಮದ ಪೂರ್ವಭಾಗದಲ್ಲಿದ್ದು ಪೂರ್ವಮುಖಿಮಾಡಿದಂತೆ ದ್ವಿಕೂಟ ತಲವಿನ್ಯಾಸದಲ್ಲಿ ಕಟ್ಟಲ್ಪಟ್ಟಿದೆ. ಕಲ್ಯಾಣ ಚಾಲುಕ್ಯ ಅರಸನಾದ ಒಂದನೇ ಸೋಮೇಶ್ವರನ ಕಾಲದ ಶಾಸನವು ಬಮ್ಮದೇವ ಮತ್ತು ಬಾಗಲದೇವಿಯರ ಮಗಳಾದ ಬೊಮ್ಮಲದೇವಿ (ಬಮ್ಮಲದೇವಿ) ಮುಧೋಳ ಗ್ರಾಮದಲ್ಲಿ ಹರಿಹರ ದೇವರಿಗಾಗಿ ದೇವಾಲಯವನ್ನು ನಿರ್ಮಿಸಿದಳೆಂದು ಉಲ್ಲೇಖಿಸುತ್ತದೆ.[೮೩] ಹೀಗಾಗಿ ಸದ್ಯ ಗ್ರಾಮದಲ್ಲಿ ದ್ವಿಕೂಟ ತಲವಿನ್ಯಾಸದಲ್ಲಿ ಕಂಡುಬರುವ ಈ ಮಲ್ಲಿಕಾರ್ಜುನ ದೇವಾಲಯ ಶಾಸನೋಕ್ತ ಹರಿಹರ ದೇವಾಲಯವಾಗಿರುವುದರಲ್ಲಿ ಯಾವುದೇ ಸಂಶಯವಿಲ್ಲ. ಒಂದೇ ಸಾಲಿನಲ್ಲಿ ಪೂರ್ವ ಮುಖಿಮಾಡಿದಂತೆ ಎರಡು ಗರ್ಭಗೃಹಗಳು ಕಟ್ಟಲ್ಪಟ್ಟಿದ್ದು ಒಂದರಲ್ಲಿ ಲಿಂಗಪೀಠವಿದ್ದರೆ ಮತ್ತೊಂದರಲ್ಲಿ ಯಾವುದೇ ಪೀಠ -ಶಿಲ್ಪ ಕಂಡುಬರುವುದಿಲ್ಲ. ಎರಡು ದ್ವಾರಗಳಲ್ಲಿ ಹೂಪಟ್ಟಿಕೆ, ವಜ್ರ, ಅರೆಗಂಭ, ಪದ್ಮ ಶಾಖೆಗಳಿರುವವು. ಮೇಲಿನ ಮಂಗಲ ಫಲಕದಲ್ಲಿ ಗಜಲಕ್ಷ್ಮೀಯ ಉಬ್ಬು ಶಿಲ್ಪವಿದೆ. ಇದರ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರ ಪಟ್ಟಿಕೆಯಿರುವುದು. ಅಂತರಾಳ ದ್ವಾರಗಳು ಸರಳ ಶೈಲಿಯ ಕೆತ್ತನೆ ಹೊಂದಿವೆ. ಎರಡು ಗರ್ಭಗೃಹ ಅಂತರಾಳಗಳಿಗೆ ಹೊಂದಿಕೊಂಡು ತೆರೆದ ನವರಂಗ ಮಂಟಪವಿದ್ದು ಅದರ ಮಧ್ಯದಲ್ಲಿ ಘಂಟಾಮಾದರಿಯ ಎಂಟು ಕಂಬಗಳು ಕಟಾಂಜನದ ಮೇಲ್ಗಡೆ ಆರು ಕಂಬಗಳು ಮತ್ತು ಅಂತರಾಳಗಳ ಮುಂದುಗಡೆ ಎರಡು ಒಟ್ಟು ೧೬ ಕಂಬಗಳಿಂದ ಕೂಡಿದ ೩ ರೀತಿಯ ಕಂಬಗಳಿರುವವು. ಅಧಿಷ್ಠಾನ ಉಪಾನ, ಜಗತಿ, ತ್ರಿಪಟ್ಟಕುಮುದ, ಕಂಪ, ಕಂಠ ಹಾಗೂ ಕಪೋತ ಭಾಗಗಳನ್ನು ಹೊಂದಿದೆ. ಇದರ ಮೇಲಿನ ಗೋಡೆಯು ಕೂಟಮಾದರಿಯಲ್ಲಿದ್ದು ಅರೆಗಂಭಗಳ ಕೆತ್ತನೆಗಳಿವೆ. ಗೋಡೆಯ ಮೇಲೆ ಮುಂಚಾಚು ಭಾಗವಿದ್ದಂತೆ ಮೇಲಿನ ಕೈಪಿಡಿ(ವ್ಯಾಳಪಟ್ಟಿಕೆ) ಗೋಡೆ ಹಾಳಾಗಿದ್ದು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ.

ಇದೇ ಗ್ರಾಮದಲ್ಲಿ ಶಾಸನೋಕ್ತ ಗವರೇಶ್ವರ ದೇವಾಲಯವು ಇಂದು ತ್ರಿಲಿಂಗೇಶ್ವರ ಹೆಸರಿನಿಂದ ಕರೆಯಲ್ಪಡುತ್ತದೆ.[೪೪]

## ೧೨. ಶಿರೂರ

ಶಿರೂರ ಗ್ರಾಮವು ಐತಿಹಾಸಿಕ ಮಹತ್ವ ಪಡೆದಿದ್ದು ಇಂದು ಯಲಬುರ್ಗ ತಾಲೂಕಿಗೆ ಸೇರಿರುವುದು. ಇಲ್ಲಿ ಕ್ರಿ.ಶ. ೧೨ನೆಯ ಶತಮಾನಕ್ಕೆ ಸಂಬಂಧಿಸಿದ ಕಲ್ಯಾಣ ಚಾಲುಕ್ಯ ವಾಸ್ತು ಶೈಲಿಯ ದೇವಾಲಯವಿದ್ದು ಗ್ರಾಮಸ್ಥರು ಇದನ್ನು ಕಲ್ಲೇಶ್ವರ ಹೆಸರಿನಿಂದ ಕರೆಯುವರು.

## ಕಲ್ಲೇಶ್ವರ ದೇವಾಲಯ

ದೇವಾಲಯವು ಗ್ರಾಮದ ಪಶ್ಚಿಮಕ್ಕೆ ಪೂರ್ವಮುಖಿಮಾಡಿ ಕಟ್ಟಲಾಗಿದೆ. ಏಕಕೂಟ ತಲವಿನ್ಯಾಸದಲ್ಲಿ ನಿರ್ಮಿಸಲಾದ ದೇವಾಲಯ ಗರ್ಭಗೃಹ, ಅರ್ಧಮಂಟಪ, ಸಭಾಮಂಟಪಗಳನ್ನು ಹೊಂದಿರುವುದು. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದ್ದು, ದ್ವಾರವು ಸರಳ ಕೆತ್ತನೆ ಹೊಂದಿದೆ. ಅರ್ಧಮಂಟಪಕ್ಕೆ ಹತ್ತಿಕೊಂಡು ಕಟ್ಟಲಾದ ನವರಂಗ ಮಂಟಪ ನಾಲ್ಕು ಕಂಬಗಳುಳ್ಳದ್ದಾಗಿದೆ. ಅಧಿಷ್ಠಾನವು ನೆಲದಲ್ಲಿ ಹುದುಗಿಕೊಂಡಿರುವುದರಿಂದ ಸ್ವರೂಪ ತಿಳಿಯುವುದಿಲ್ಲ. ಗೋಡೆಯು ಸರಳವಾಗಿದೆ. ದೇವಾಲಯದ ಮುಂದುಗಡೆ ಸಾಂಪ್ರದಾಯಿಕವಾದ ಗರುಢಗಂಭವನ್ನು ಪ್ರತಿಷ್ಠೆಗೊಳಿಸಲಾಗಿದೆ.



**ಛಾ.ಚಿ. ೩೫ ಸೋಮೇಶ್ವರ ದೇವಾಲಯದ ಮಂಟಪದಲ್ಲಿರುವ ಶಾಸನ,ಹುಲಗಿ, (ಕೊ.ತಾ.)**

## ಅಡಿಟಿಪ್ಪಣಿಗಳು

೧. ತಿಪ್ಪೇರುದ್ರಸ್ವಾಮಿ, ಎಸ್., ೧೯೮೫, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು-೫೩೧-೫೫೫, ಮೈಸೂರು.

೨. ರಾಮಚಂದ್ರರಾವ್ ಎಸ್. ಕೆ., ೧೯೮೦, ಭಾರತದ ದೇವಾಲಯ ನೆಲೆ:ಹಿನ್ನೆಲೆ, ಪು-೧, ಬೆಂಗಳೂರು.

೩. ಅದೇ, ಪು-೧೧-೧೬

೪. ಅಪರ್ಣಾ, ಕೂ.ಸ., ೧೯೯೯, ದೇವಾಲಯ ವಾಸ್ತುಶಿಲ್ಪ ಪರಿಚಯ, ಪು-೨, ಹಂಪಿ.

೫. ನಾರಾಯಣ ಪಿ.ವಿ., ೧೯೮೩, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು-೩೨೧, ಗದಗ.

೬. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೨
ಕೊಪ್ಪಳ ಜಿಲ್ಲೆ, ನಂ. ೨೬, ಮಾದಿನೂರ, ಕ್ರಿ.ಶ. ೯೭೩, ಪು-೩೧, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೭. ಅದೇ, ನಂ-೬೭, ಇಟಗಿ (ಯ.ತಾ), ಕ್ರಿ.ಶ. ೧೧೦೮-೧೧೧೩, ಪು-೬೮.

೮. ಅದೇ,

೯. ಅದೇ, ನಂ-೨೧, ಚಳಗೇರಿ (ಕು.ತಾ), ಕ್ರಿ.ಶ. ೧೧೭೨, ಪು-೨೯೮.

೧೦. ಅದೇ, ನಂ-೩೬, ಕೊಪ್ಪಳ (ಕೊ.ತಾ), ಕ್ರಿ.ಶ. ೧೨ ನೆ ಶತಮಾನ, ಪು-೪೧.

೧೧. ಅದೇ, ನಂ-೩೭, ಕೊಪ್ಪಳ (ಕೊ.ತಾ), ಪು-೪೨

೧೨ ಅದೇ, ನಂ-೩೪, ಕೊಪ್ಪಳ (ಕೊ.ತಾ), ಕ್ರಿ.ಶ. ೮೮೩, ಪು-೪೦.

೧೩. ಅದೇ, ನಂ-೨೮, ಸಂಕನೂರ (ಕು.ತಾ), ಕ್ರಿ.ಶ. ೧೨೩೮, ಪು-೧೮೩.

೧೪. ಅದೇ, ನಂ-೫೦, ಕುಕನೂರು (ಯ.ತಾ), ಕ್ರಿ.ಶ. ೧೦೦೫, ಪು-೨೨೩.

೧೫. ಅದೇ, ನಂ-೪ ಯಲಬುರ್ಗಾ (ಯ.ತಾ), ಕ್ರಿ.ಶ. ೧೨ ನೇ ಶತಮಾನ, ಪು-೧೬೧.

೧೬. ಅದೇ, ನಂ-೧, ಯಲಬುರ್ಗಾ(ಯ.ತಾ), ೧೨ ನೆ ಶತಮಾನ, ಪು-೧೬೦.

೧೭. ಅದೇ, ನಂ- ೭೦, ರಾಜೂರ (ಯ.ತಾ), ಕ್ರಿ.ಶ. ೧೧ನೇ ಶತಮಾನ, ಪು-೨೭೨.

೧೮. ಅದೇ, ನಂ- ೬, ಆಳವಂಡಿ (ಕೊ.ತಾ), ಕ್ರಿ.ಶ. ೧೦೬೧, ಪು-೧೩.

೧೯. ಅದೇ, ನಂ-೧೪೮, ಹುಲಗಿ (ಕೊ.ತಾ), ಕ್ರಿ.ಶ. ೧೦೮೮, ಪು-೧೪೫.

೨೦. ಅದೇ, ನಂ-೨೪, ಮಾದಿನೂರ (ಕೊ.ತಾ), ಕ್ರಿ.ಶ. ೧೨ನೇ ಶತಮಾನ, ಪು-೩೦.

೨೧. ಅದೇ, ನಂ-೩೨, ಮುಧೋಳ (ಯ.ತಾ), ಕ್ರಿ.ಶ. ೧೧೭೭, ಪು-೧೯೦.

೨೨. ಅದೇ, ನಂ-೩, ಕವಲೂರ (ಕೊ.ತಾ), ಕ್ರಿ.ಶ. ೧೦೫೭.

೨೩. ಅದೇ, ನಂ-೮, ಆಳವಂಡಿ (ಕೊ.ತಾ), ಕ್ರಿ.ಶ. ೧೦೫೭, ಪು-೧೬.

೨೪. ಅದೇ, ನಂ-೧, ಕವಲೂರ (ಕೊ.ತಾ), ಕ್ರಿ.ಶ. ೧೦೯೭.

೨೫. ಅಪರ್ಣ ಕೂ.ಸ., ೧೯೯೯, ದೇವಾಲಯ ವಾಸ್ತುಶಿಲ್ಪ ಪರಿಚಯ, ಪು-೫, ಹಂಪಿ.

೨೬. ಸುರೇಶ ಕೆ.ಎಂ. ಮತ್ತು ಸಂಗಡಿಗರು., ೨೦೦೧, ಕರ್ನಾಟಕ ದೇವಾಲಯಕೋಶ (ಕೊಪ್ಪಳ ಜಿಲ್ಲೆ), ಪು-೩ರಿಂದ ೪೨

೨೭. ದೇವರಕೊಂಡಾರೆಡ್ಡಿ. (ಸಂ), ೧೯೯೯, ಕ.ವಿ.ಶಾ.ಸಂ-೨, ಕೊ.ಜಿ, ನಂ-೧೧, ಉಪ್ಪಿನ ಬೆಟಗೇರಿ ಕ್ರಿ.ಶ. ೯೬೪, ಪು-೨೨, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೨೮. ಅದೇ, ನಂ-೨೭, ಅಂಟೂರಠಾಣ, (ಕು.ತಾ) ಕ್ರಿ.ಶ. ೧೦೮೨, ಪು-೩೦೭.

೨೯. ಅದೇ, ನಂ-೬, ಅಳವಂಡಿ, (ಕೊ.ತಾ) ಕ್ರಿ.ಶ. ೧೦೬೧, ಪು-೧೩.

೩೦. ಅದೇ, ನಂ-೮, ಅಳವಂಡಿ, (ಕೊ.ತಾ), ಕ್ರಿ.ಶ. ೧೦೫೭, ಪು-೧೬.

೩೧. ಅದೇ, ನಂ-೯, ಅಳವಂಡಿ, (ಕೊ.ತಾ), ಕ್ರಿ.ಶ. ೧೧೮೨, ಪು-೨೦.

೩೨. ಅದೇ, ನಂ-೭, ಅಳವಂಡಿ, (ಕೊ.ತಾ), ಕ್ರಿ.ಶ. ೧೨೦೪, ಪು-೧೭.

೩೩. ಅದೇ, ನಂ-೧೦, ೧೩, ೧೨, ಕಲ್ಲೂರ, (ಯ.ತಾ), ಕ್ರಿ.ಶ. ೧೦೦೨, ೧೧೮೫, ಕ್ರಿ.ಶ. ೧೧೮೬, ಪು-೧೬೭.

೩೪. ಅದೇ, ನಂ-೩, ಕವಲೂರ (ಕೊ.ತಾ), ಕ್ರಿ.ಶ. ೧೧೭೭, ಪು-೪.

೩೫. ಅದೇ, ನಂ-೧, ಕವಲೂರ (ಕೊ.ತಾ), ಕ್ರಿ.ಶ. ೧೧೯೭, ಪು-೧.

೩೬. ಅದೇ, ನಂ-೨೧, ಚಳಗೇರಿ, (ಯ.ತಾ), ಕ್ರಿ.ಶ. ೧೧೭೨, ಪು-೨೯೮.

೩೭. ಅದೇ, ನಂ-೫೯, ತಳಕಲ್ಲು (ಯ.ತಾ) ಕ್ರಿ.ಶ. ೯೯೧, ಪು-೨೫೪.

೩೮. ಅದೇ,

೩೯. ಅದೇ, ನಂ-೧೮, ಪುರ (ಕು.ತಾ), ಕ್ರಿ.ಶ. ೧೦೧೮, ಪು-೨೯೬.

೪೦. ಅದೇ, ನಂ-೧೪, ಪುರ (ಕು.ತಾ), ಕ್ರಿ.ಶ. ೧೧ ನೆ ಶತಮಾನ, ಪು-೨೯೧.

೪೧. ಅದೇ, ನಂ-೧೩, ಪುರ (ಕು.ತಾ), ಕ್ರಿ.ಶ. ೧೨ ನೆ ಶತಮಾನ, ಪು-೨೯೦.

೪೨. ಅದೇ, ನಂ-೩೭, ಬಳಗೇರಿ (ಯ.ತಾ), ಕ್ರಿ.ಶ. ೧೦೦೨, ಪು-೧೯೭.

೪೩. ಅದೇ, ನಂ-೩೨, ಮುಧೋಳ (ಯ.ತಾ), ಕ್ರಿ.ಶ. ೧೧ ನೆ ಶತಮಾನ, ಪು-೨೯೬.

೪೪. ಅದೇ, ನಂ-೨೫, ಮೂಧೋಳ (ಯ.ತಾ), ಕ್ರಿ.ಶ. ೧೧೫೪, ಪು-೧೮೪.



Chapter- 11

## ಅಧ್ಯಾಯ-ಹನ್ನೊಂದು

# ಸಮೀಕ್ಷೆ

Conclusion

ಸಂಸ್ಕೃತಿಯು ಒಮ್ಮೆಲೆ ಹುಟ್ಟಿ ಒಮ್ಮೆಲೆ ಬೆಳೆದು ಸಮಾಜವನ್ನು ಆಕ್ರಮಿಸುವಂಥದ್ದಲ್ಲ. ಸಂಸ್ಕೃತಿ ರೂಪಗೊಳ್ಳಬೇಕಾದರೆ ಅಲ್ಲಿ ಕಾಣದ, ಕಾಣುವ ಶಕ್ತಿಗಳು ನಿರ್ವಹಿಸಿದ ಪಾತ್ರ, ಮಾನವನ ಬೌದ್ಧಿಕ ಆಸಕ್ತಿಗಳು ಅವನ ಹುಟ್ಟು ಜೀವನ ಬದುಕಿಗಾಗಿ ನಡೆಸಿದ ಪ್ರಯತ್ನಗಳು ಆರ್ಥಿಕ ಚಟುವಟಿಕೆಗಳಿಗೆ ಕಾರಣವಾಗಿ ಸಾಮಾಜಿಕ ಬದಲಾವಣೆ, ಧಾರ್ಮಿಕ ಆಚರಣೆಗಳು ಕಾಲ ಗತಿಸಿದಂತೆಲ್ಲಾ ರಾಜಕೀಯ ಸಂಘಟನೆಗಳು ಹುಟ್ಟಿಕೊಂಡು ರಾಜ್ಯ ಸ್ಥಾಪನೆಗೆ ಕಾರಣವಾಗಿ ಮಾನವನ ಸಾಂಸ್ಕೃತಿಕ ಪರಿಸರವು ನಿರ್ಮಾಣವಾಗುತ್ತದೆ.

ಸಂಸ್ಕೃತಿಯ ಹಿನ್ನೆಲೆಯಲ್ಲಿ ಪ್ರಾಗೈತಿಹಾಸ ಕಾಲದ ಮಾನವನ ವಿಕಸನದ ಹಂತಗಳನ್ನು ನೋಡಿದಾಗ ಅವನು ತನ್ನ ಬದುಕಿಗಾಗಿ ಏನೆಲ್ಲಾ ಉಪಾಯಗಳನ್ನು ಮಾಡಿಕೊಂಡು ಕಲ್ಲಿನಿಂದ ಆಯುದ್ಧಗಳನ್ನು ತಯಾರಿಸಿ ಪ್ರಾಣಿಗಳನ್ನು ಬೇಟೆಯಾಡಿ, ಗೆಡ್ಡೆ ಗೆಣಸು ತಿಂದು ಮರದ ಪೊಟರೆಗಳಲ್ಲಿ, ಗುಡ್ಡಗಾಡಿನ ಗವಿಬಂಡೆಗಳ ಆಶ್ರಯದಲ್ಲಿ ಸಾವಿರಾರು ವರ್ಷಗಳವರೆಗೆ ತನ್ನ ಜೀವನವನ್ನು ಸಾಗಿಸಿದ, ಅದನ್ನೇ ನಾವು ಆತ ಕಂಡು ಕೊಂಡ ಹೊಸ ಹೊಸ ವಿಚಾರಗಳ ಶೋಧನೆಗಳನ್ನು ಅನುಸರಿಸಿ ಹಳೆಯ ಶಿಲಾಯಗ, ತಾಮ್ರ ಶಿಲಾಯುಗ, ಇತಿಹಾಸ ಕಾಲವೆಂದು ವಿಂಗಡಿಸಿ ಅವರ ಸಾಂಸ್ಕೃತಿಕ ಬದುಕನ್ನು ಅರಿಯಲು ಪ್ರಯತ್ನಿಸಿರುವೇನು. ಈ ಶಿಲಾಯುಗದ ಮಡಿಕೆ ಚೂರುಗಳು, ಬೃಹತ್ ಶಿಲಾಗೋರಿಗಳು ಕರ್ನಾಟಕ ಇತರ ಪ್ರದೇಶಗಳಲ್ಲಿರುವಂತೆ ಕೊಪ್ಪಳ ಜಿಲ್ಲೆಯ ಗುಡ್ಡ ಗಾಡು ಪ್ರದೇಶದಲ್ಲಿ ಸಹ ಕಂಡು ಬಂದಿರುವವು. ಶಿಲಾಯುಗದ ಸಂಸ್ಕೃತಿಯನ್ನು ಅಧ್ಯಯನಿಸಲು ಈ ಭಾಗದಲ್ಲಿ ಕೊರತೆ ಏನು ಇಲ್ಲ. ಇನ್ನೂ ಹೆಚ್ಚಿನ ಸಂಶೋಧನೆ ಕೈಗೊಂಡು ಉತ್ಖನನ ನಡೆಸಿದಾಗ ಈ ಭಾಗದ ಶ್ರೀಮಂತವಾದ ಸಂಸ್ಕೃತಿಯನ್ನು ಗುರ್ತಿಸಲು ಸಾಧ್ಯವಿದೆ ಎಂಬುದನ್ನರಿತು ಮುಂದಡಿ ಇಟ್ಟಿರುವೆ.

ಜಿಲ್ಲೆಯ ಶಿಲಾಮಾನವನ ನೆಲೆಗಳು ಅಲ್ಲಿಯ ಸುತ್ತಮುತ್ತಲಿನ ಜನರಿಂದ ಹಾಳಾಗುತ್ತಿದ್ದು ಅವುಗಳ ರಕ್ಷಣೆಯ ಕಾರ್ಯತ್ವರಿತಗತಿಯಿಂದ ನಡೆಯಬೇಕೆಂದೆನಿಸುತ್ತದೆ. ಅದೇನೇಇದ್ದರೂ ಕೊಪ್ಪಳ ಜಿಲ್ಲೆಯ ಗುಡ್ಡಗಾಡಿನ ಪ್ರದೇಶ, ಅದಕ್ಕೆ ಹೊಂದಿಕೊಂಡ ವಿಶಾಲವಾದ ಭೂಮಿ, ಈ ಜಿಲ್ಲೆಗೆ ಹೊಂದಿಕೊಂಡು ಹರಿಯುತ್ತಿರುವ ತುಂಗಾನದಿ, ಅದಕ್ಕೆ ಬಂದು ಸೇರುವ ಸಣ್ಣಪುಟ್ಟ ಹಳ್ಳಗಳ ಪ್ರದೇಶದಲ್ಲಿ ನೈಸರ್ಗಿಕ ಸಂಪನ್ಮೂಲಗಳು ದೊರಕುವಿಕೆಯಿಂದ ಜಿಲ್ಲೆಯಲ್ಲಿ ಶಿಲಾಯುಗದ ಮಾನವನು ಶ್ರೀಮಂತ ಸಂಸ್ಕೃತಿಯನ್ನು ಕಟ್ಟಿ ಜೀವನ ನಡೆಸಿರುವದು ವೇದ್ಯವಾಗುತ್ತದೆ. ಇಲ್ಲಿ ಸಿಗುವ ನೈಸರ್ಗಿಕ ಸಂಪನ್ಮೂಲಗಳ ನಾಡಿನ ಇತಿಹಾಸ ರಚನೆಯಲ್ಲಿ ನಾವು ಪ್ರಾದೇಶಿಕ ಚರಿತ್ರೆಯ ಅಧ್ಯಯನ ಮಾಡುವುದು ಬಹಳ ಅವಶ್ಯಕವೆಂದು ಇಲ್ಲಿಯವರೆಗೆ ನಡೆದ ಅಧ್ಯಯನದಿಂದ ಅರಿತುಕೊಂಡಿದ್ದೇವೆ. ಕ್ರಿ.ಸ. ೧೯೯೭ ರಲ್ಲಿ ಹೊಸದಾಗಿ ರಚಿತಗೊಂಡ ಕೊಪ್ಪಳ

ಜಿಲ್ಲೆಯನ್ನು ನನ್ನ ಸಂಶೋಧನೆಗೆ ಆಯ್ಕೆ ಮಾಡಿಕೊಂಡು ಶಾಸನಗಳನ್ನು ಮುಖ್ಯ ಆಕರಗಳಾಗಿ ಬಳಸಿಕೊಳ್ಳುವದರ ಜೊತೆಯಲ್ಲಿ ಪ್ರಾಗೈತಿಹಾಸ ಕಾಲಕ್ಕೆ ಸಂಬಂಧಿಸಿದ ಉಪಕರಣಗಳನ್ನು ಬಳಸಿಕೊಂಡು ಇತರ ಆಕರಗಳ ಸಹಾಯದಿಂದ ಅಧ್ಯಯನಕ್ಕೆ ಹಾಕಿಕೊಂಡ ಕಾಲಮಿತಿಯಲ್ಲಿ ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಇತಿಹಾಸವನ್ನು ಈ ಪ್ರಬಂಧದ ೧೧ ಅಧ್ಯಾಯಗಳಲ್ಲಿ ಹಿಡಿದಿಡಲು ಪ್ರಯತ್ನಿಸಿರುವೆನು. ಈ ನನ್ನ ಸಂಶೋಧನಾ ಹಾದಿಯಲ್ಲಿ ಅನೇಕ ಹೊಸ ಸಂಗತಿಗಳು, ಹಲವು ಹಳೆಯ ಸಂಗತಿಗಳ ಪರಿಷ್ಕರಗಳು, ಕುತೂಹಲಕಾರವಾದ ವಿಷಯಗಳು ನನ್ನ ಗಮನಕ್ಕೆ ಬಂದಿದ್ದು ವಿಶೇಷವಾಗಿರುವ ಶಾಸನಾಧಾರಿತವಾಗಿ ಪುರ ಪಟ್ಟಣದ ವಾಸ್ತು ಶಿಲ್ಪಕಲೆಯು ಆಶ್ಚರ್ಯ ಮೂಡಿಸಿದರೆ, ಶಿಲಾಯುಗದ ಅನೇಕ ನೆಲೆಗಳು ಹೆಚ್ಚಿನ ಸಂಶೋಧನೆಯನ್ನು ಮುಂದುವರೆಸಲು ಪ್ರಚೋದನೆ ನೀಡಿವೆ. ಇನ್ನೂ ಕೆಲವು ಪ್ರಾಗಿತಿಹಾಸಕಾಲದ ನೆಲೆಗಳು ಪ್ರಾಚೀನ ಗ್ರಾಮಗಳು, ಅಗ್ರಹಾರಗಳು, ಬ್ರಹ್ಮ ಪೂರಿಗಳು, ಘಟಿಕಾ ಸ್ಥಾನಗಳು ಇಂದು ನೋಡಲು ಕಾಣಸಿಗುವುದಿಲ್ಲವೆಂದು ನಾವು ನಿರಾಶಯ ಪಡಬೇಕಾಗಿಲ್ಲ. ಆ ದಿಸೆಯಲ್ಲಿ ಸಂಶೋಧನೆ ಮುಂದುವರೆಸುವುದೆ ಸಂಶೋಧಕನ ಗುರಿಯಾಗಿರಬೇಕೆಂಬ ಹಿನ್ನೆಲೆಯಲ್ಲಿ ಶಾಸನಗಳ ಅಧ್ಯಯನ ಮತ್ತು ಕ್ಷೇತ್ರಕಾರ್ಯಕ್ಕೆ ಹೆಚ್ಚಿನ ಮಹತ್ವ ಕೊಟ್ಟು ನಿಜ ಸ್ಥಿತಿಯನ್ನು ಅರಿಯಲು ಪ್ರಯತ್ನಿಸಲಾಗಿದೆ.

ಜಿಲ್ಲೆಯ ಸಂಸ್ಕೃತಿಯು ಕರ್ನಾಟಕ ಸಂಸ್ಕೃತಿಗಿಂತ ಭಿನ್ನವಾದುದೇನಲ್ಲ. ಏಕೆಂದರೆ ಭಾರತದಲ್ಲಿ ಆಳಿಹೋದ ಮೌರ್ಯರ ಇತಿಹಾಸದಿಂದ ಲಿಖಿತ ದಾಖಲೆಗಳು ಜಿಲ್ಲೆಯ ಕೊಪ್ಪಳದ ಗವಿಮಠ, ಪಾಲ್ಕಿಗುಂಡುಗಳಲ್ಲಿ ದೊರೆತಿದ್ದು, ಅವರ ಕಾಲದೆನ್ನಲಾದ ಹಿರೇಬೆನಕಲ್ ಗುಡ್ಡದ ಮೋರೇರ ಮನೆಗಳು, ಬ್ರಹತ್ ಶಿಲಾ ಮಾನವನ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಇವರ ನಂತರ ಬಂದ ಶಾತವಾಹನರ ಸಾಕಷ್ಟು ನೆಲೆಗಳು ಈ ಜಿಲ್ಲೆಯಲ್ಲಿ ಕಂಡು ಬಂದಿರುವುದರಿಂದ ಅವುಗಳ ಇತಿಹಾಸ ನಾಡಿನ ಸಂಸ್ಕೃತಿಯಲ್ಲಿ ಸಮಾವೇಶಗೊಳ್ಳುತ್ತದೆ. ಮೌರ್ಯ ಶಾತವಾಹನರ ನಂತರ ಕರ್ನಾಟಕದ ರಾಜಕೀಯ ಭೂಪಟದಲ್ಲಿ ಕಾಣಿಸಿಕೊಂಡವರೆಂದರೆ ಗಂಗರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು ಮತ್ತು ಯಾದವರಾಗಿದ್ದಾರೆ. ಈ ಅರಸುಮನೆತನಗಳ ಆಳ್ವಿಕೆಯ ವ್ಯಾಪ್ತಿಗೆ ಒಳಪಟ್ಟ ಕೊಪ್ಪಳ ಜಿಲ್ಲೆ ನಾಡಿನ ಇತರ ಜಿಲ್ಲೆಗಳಿಗಿಂತ ಭಿನ್ನವಾಗಿಲ್ಲವೆಂದು ತಿಳಿದರು ಕೆಲವೊಂದು ವಿಶಿಷ್ಟ ಸಂಗತಿಗಳು ಹೊರಬರುತ್ತವೆ. ವೀರರಾದ ಆಳರಸರನ್ನು (ಮಹಾಸಾಮಂತ ಮಹಾಮಂಡಳೇಶ್ವರ ಮನ್ನೆಯರು), ಅಧಿಕಾರಿಗಳನ್ನು ಜಿಲ್ಲೆಯು ಸೃಷ್ಟಿಸಿದೆ.

ಯಲಬುರ್ಗಿಯ ಸಿಂಧರು ಈ ಭಾಗದಿಂದಲೆ ತಮ್ಮ ಸಾಮಂತ ಸಾರ್ವಭೌಮತ್ವವನ್ನು ಘೋಷಿಸಿ ಸ್ವತಂತ್ರವಾಗಿ ರಾಜ್ಯಭಾರ ಮಾಡಿದ್ದಾರೆ. ಮಹಾದೇವ ದಂಡನಾಯಕನಂಥ ಮಹಾನ್ ದಂಡನಾಯಕ, ಕನ್ನಡ ಸಂಧಿವಿಗ್ರಹಿಯನ್ನು ನೀಡಿದ ಜಿಲ್ಲೆಯು ಇತರರಿಗೂ ರಾಜಕೀಯ ನೆಲೆಯನ್ನು ಕಲ್ಪಿಸಿಕೊಟ್ಟಿದೆ. ಕಲಚೂರಿ ಮನೆತನದ ಬಿಜ್ಜಳ ಮಗ ರಾಯಮುರಾರಿ ಸೋವಿದೇವನು ಮಾದಿನೂರ ಗ್ರಾಮದ ರಾಜಧಾನಿಯಿಂದ (ನೆಲೆವಿಡು) ರಾಜ್ಯಭಾರ ಮಾಡಿದ್ದು, ದಕ್ಷಿಣ ಭಾರತದ ಮಹಾಮಂಡಳೇಶ್ವರಲ್ಲಿಯೇ ಪ್ರಮುಖರಾದ

ಯಲಬುರ್ಗಿ ಸಿಂಧರು, ಚಾಲುಕ್ಯ, ಕಲಚುರಿ, ಯಾದವ ಮನೆತನಗಳಲ್ಲಿ ಗೌರವಹೊಂದಿ ಮುಂದೆ ಸ್ವತಂತ್ರವಾಗಿ ಚಾಲುಕ್ಯ ಸಮ್ರಾಜ್ಯದ ಬೆನ್ನೆಲುಬಾಗಿನಿಂತು ಆದರ್ಶ ಆಡಳಿತ ನಡೆಸುವಲ್ಲಿ ಜಿಲ್ಲೆಯ ಇತಿಹಾಸಕ್ಕೆ ಮೆರಗುನಿಡಿದ್ದಾರೆ. ಕುಕನೂರು ಗ್ರಾಮ ಮೌರ್ಯರ ಕಾಲದಿಂದ ವಿಜಯನಗರ ಅರಸರ ಕಾಲದವರೆಗೆ ಆಳಿದ ಅರಸುಗಳ ಆಧಿಪತ್ಯಕ್ಕೆ ಒಳಗಾಗಿ ಇಲ್ಲಿ ಅರಳಿನಿಂತ ದೇವಾಲಯಗಳು ಇಟಗಿಯ ಮಹಾದೇವ ದೇವಾಲಯಗಳು ಅವರ ಹಿರಿಮೆಯ ಪ್ರತೀಕಗಳೆನಿಸಿವೆ. ಹೀಗೆ ಅನೇಕ ಅರಸು ಮನೆತನಗಳ ಆಳ್ವಿಕೆಯಲ್ಲಿ ತನ್ನನ್ನು ರೂಪಿಸಿಕೊಂಡ ಕೊಪ್ಪಳ ಜಿಲ್ಲೆಯ ರಾಜಕೀಯ ವ್ಯವಸ್ಥೆಯನ್ನು ೩ ನೇ ಅಧ್ಯಾಯದಲ್ಲಿ ಚರ್ಚಿಸಲಾಗಿದ್ದು, ಜಿಲ್ಲೆಯ ಚಾರಿತ್ರಿಕ ವಿಷಯವನ್ನು ಹೇಳುವ ದಾಖಲೆಯೊಂದು ಹಿರೇಮನ್ನಾಪೂರದಲ್ಲಿ ದೊರಕುತ್ತದೆ. ಅದು ಕಲ್ಯಾಣ ಚಾಲುಕ್ಯ ಅರಸ ಸತ್ಯಾಶ್ರಯನಿಗೆ ಮಕ್ಕಳಿಲ್ಲವೆಂಬ ವಿದ್ವಾಂಸರ ವಾದವನ್ನು ತಳ್ಳಿಹಾಕಿ ಅವನಿಗೆ ವಿಕ್ರಮಾದಿತ್ಯದೇವನೆಂಬ ಮಗನಿದ್ದನೆಂದು ಹೇಳುತ್ತದೆ.

ನಾಲ್ಕನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಕೊಪ್ಪಳ ಜಿಲ್ಲೆಯ ಶಾಸನೋಕ್ತ ಪ್ರಾಚೀನ ಆಡಳಿತ ವಿಭಾಗಗಳನ್ನು ಅವಲೋಕಿಸಿದಾಗ ಕುಂತಳ ದೇಶ, ತಿರುಳ್ಗನ್ನಡ ನಾಡು, ಕೊಪ್ಪಳ ನಾಡು, ಕೋಪಣ ನಗರ, ಬೆಳ್ವಲನಾಡು, ಕೂಕನೂರ-೩೦, ಎಕ್ಕಲವಾಡ-೧೪, ಎಡೆದೊರೆ ಇಚ್ಛಾಸಿರ, ಕರಡಿಕಲ್ಲು-೩೦೦, ನರೆಯಂಗಲ್ಲ-೧೨, ಕಿಸುಕಾಡು-೭೦, ಮಾಸವಾಡಿ-೧೪೦, ಕೆಳವಾಡಿ-೩೦೦ ಗಳಂತಹ ಪ್ರಾಚೀನ ನಾಡು, ದೇಶಗಳಲ್ಲಿ ಕೊಪ್ಪಳ ಹರಿದು ಹಂಚಿಹೊಗಿತ್ತೆಂದು ಶಾಸನಗಳು ಉಲ್ಲೇಖಿಸುತ್ತವೆ. ಆದರೆ ಅವುಗಳ ಪ್ರತ್ಯೇಕ ಅಧ್ಯಯನ ನಡೆದಾಗ ಅವುಗಳ ವಿಸ್ತೀರ್ಣತೆಯ ನಿರ್ದಿಷ್ಟ ಸ್ವರೂಪವನ್ನು ಕಾಣಲು ಸಾಧ್ಯವಾಗುತ್ತದೆ.

ಪ್ರಾಚೀನ ಆಡಳಿತ ವ್ಯವಸ್ಥೆ ಒಂದು ರೀತಿಯಲ್ಲಿ ನಿರಂಕುಶಾಧಿಕಾರದಂತೆ ಕಂಡುಬಂದರೂ ರಾಜರುಗಳ ಆಧೀನದಲ್ಲಿ ಕೇಂದ್ರ, ನಾಡು-ಕಂಪಣ-ಗ್ರಾಮಾಡಳಿತ ಪದ್ಧತಿಯಲ್ಲಿ ನಡೆದುಬಂದಿದೆ. ಶಾಸನಗಳಲ್ಲಿ ಅರಸರಿಗಿದ್ದ ಸ್ವತಂತ್ರ ಅಧಿಕಾರ-ಸಂಬಳ ಇತ್ಯಾದಿಗಳ ಬಗ್ಗೆ ಸ್ಪಷ್ಟವಾಗಿಲ್ಲವಾದರು, ಹೊರನಾಡಿನ ಶಾಸನಗಳಿಂದಲಾದರೂ ಅರಿಯಬೇಕಾಗಿದೆ. ರಾಜಕೀಯ ಹಿನ್ನೆಲೆಯಲ್ಲಿ ಸಾಮಾಜಿಕ ವ್ಯವಸ್ಥೆಯ ಕುರಿತು ನೋಡಿದಾಗ ಸಮಾಜದ ಮುಖ್ಯಅಂಗವಾದ ಕುಟುಂಬದಲ್ಲಿ ಸ್ತ್ರೀ-ಪುರುಷರು ಅದರ ಸದಸ್ಯರಾಗಿ ತಮ್ಮ ಸಾಂಸ್ಕೃತಿಕ ಬದುಕನ್ನು ರೂಪಿಸಿಕೊಳ್ಳಲು ಮಾಡಿಕೊಂಡ ನಿಯಮ ಕಟ್ಟ ಸಂಪ್ರದಾಯಗಳು, ನಂಬಿಕೆಗಳು, ಅವರು ಆಚರಿಸುವ ಹಬ್ಬ ಹರಿದಿನಗಳು ರೂಢಿಯಲ್ಲಿದ್ದವು. ಅಂದಿನ ಸಮಾಜದಲ್ಲಿ ಸೂಳೆಗಾರಿಕೆ, ತೊತ್ತುಗಳಂತಹ ಅನಿಷ್ಟ ಪದ್ಧತಿಗಳನ್ನು ಇಂದಿಗೂ ಕುಡಾ ಹೊಗಲಾಡಿಸಲು ಸಾಧ್ಯವಾಗಿಲ್ಲ. ಅದರ ಹಿಂದಿನ ನಿಜಸ್ಥಿತಿಯನ್ನು ಅರಿತುಹೇಳಬೇಕಾಗುವುದು. ಶ್ರಮಿಕವರ್ಗದ ಜನರ ಸ್ಥಿತಿಗತಿ, ಜನ ಸಾಮಾನ್ಯರ ಬದುಕು ಭವಣೆಗಳು ಯಾವರೀತಿಯಾಗಿದ್ದವು ಜಾತಿ ವ್ಯವಸ್ಥೆಗೆ ಮೂಲ ಕಾರಣವಾದ ವರ್ಣ ವ್ಯವಸ್ಥೆಯ ಹಿಂದಿರುವ ಉದ್ದೇಶವೇನೆಂದು ಸಂಶೋಧಕರು ಚಿಂತಿಸಬೇಕಾಗಿದೆ ಮತ್ತು ಇಂದು ಅವು ಪ್ರಸ್ತುತವೇ, ಹಾಗಾದರೆ ಅದು ಯಾವ ಪ್ರಮಾಣದಲ್ಲಿದೆ ಎಂಬುದನ್ನು ಮೊದಲು ಅರಿಯಬೇಕಾಗುತ್ತದೆ.

ಆರ್ಥಿಕ ವಿಷಯದ ಕುರಿತು ಜಿಲ್ಲೆಯ ಶಾಸನಗಳು ನಿಡುವ ಮಾಹಿತಿಯನ್ನು ಗಮನಿಸಿದಾಗ ಕೊಪ್ಪಳ ಜಿಲ್ಲೆಯ ಪ್ರದೇಶದಲ್ಲಿರುವ ಪ್ರಾಚೀನರು ನದಿ-ಹಳ್ಳಗಳ ಹರವಿನಿಂದ-ಕೆರೆ-ಭಾವಿಗಳ ಸಹಾಯದಿಂದ ನೀರಾವರಿ ಕಲ್ಪಿಸಿಕೊಂಡು ಫಲವತ್ತಾದ ಭೂಮಿಯಲ್ಲಿ ಬೆಳೆಗಳನ್ನು ಬೆಳೆಯುತ್ತಿದ್ದರು. ವ್ಯವಸಾಯ ಪದ್ಧತಿಗನುಸಾರವಾಗಿ ಬೆಳೆದು ಬಂದ ವ್ಯಾಪಾರ, ಉದ್ಯೋಗ-ವಾಣಿಜ್ಯ-ವ್ಯವಹಾರಗಳಿಗೆ ಇಲ್ಲಿರುವ ನೈಸರ್ಗಿಕ ಸಂಪನ್ಮೂಲಗಳು ಕಾರಣವಾಗಿರುವಂತೆ ಕಾಣುತ್ತದೆ. ಅವರ ಆದಾಯದ ಉತ್ಪನ್ನದ ಮೇಲೆ ಹಾಕುವ ತೆರಿಗೆ ಪದ್ಧತಿ ಅಂದು ಜಾರಿಯಲ್ಲಿದ್ದ ಬಗ್ಗೆ ತಿಳಿಯುತ್ತದೆಯಾದರೂ ವಡ್ಡರಾವುಳ, ಬೆಳ್ಳಾಯ, ಬಣ್ಣಿಗೆ-ಸುಂಕಗಳಂತ ಅನೇಕ ಶಬ್ದಗಳ ಅರ್ಥಗಳನ್ನೂ ಸ್ಪಷ್ಟಗೊಳಿಸಬೇಕಾಗಿದೆ.

ದೇಶದ ಚರಿತ್ರೆಯ ರಚನಾ ಶಕ್ತಿಗಳಲ್ಲೊಂದಾದ ಧರ್ಮಗಳಲ್ಲಿ ಬೌದ್ಧಧರ್ಮ ಮೊದಲುಗೊಂಡು,ಜೈನ ಧರ್ಮದ ಕಾಲಕ್ಕೆ ಈ ಭಾಗದಲ್ಲಿ ಪವಿತ್ರಕ್ಷೇತ್ರವೆನಿಸಿದ ಕೊಪ್ಪಳ ಪ್ರಾಚೀನ ಕಾಲದಲ್ಲಿ ಜೈನರ ತೀರ್ಥಕ್ಷೇತ್ರ, ದಕ್ಷಿಣದ ಕಾಸಿ ಎಂದು ಹೆಸರುಗಳಿಸಿತ್ತು. ಇವುಗಳೊಂದಿಗೆ ಬೆಳೆದುಬಂದ ಶೈವ-ವೈಷ್ಣ ಧರ್ಮಗಳು ಸಮಾನ ಅವಕಾಶ ಪಡೆದು ಗಟ್ಟಿಯಾಗಿ ತಳವುರಿ ಬೆಳೆದುಬಂದಿವೆ. ಆಗ ಈ ಪ್ರದೇಶದ ಜನ ಹೇಗೆ ಬೇರೆ ಬೇರೆ ಧರ್ಮಗಳ ಪರಿಸರಕ್ಕೆ ಹೊಂದಿಕೊಂಡಿದ್ದರೆಂಬುದು ಕುತೂಹಲಕಾರಿಯಾಗಿದ್ದರೂ ಸೂಕ್ಷ್ಮ ವಿಚಾರಗಳನ್ನು ಜಾಗರೂಕತೆಯಿಂದ ವಿಶ್ಲೇಷಿಸಿ ಆ ಧರ್ಮಗಳು ಬೆಳೆದುಬಂದ ಬಗೆಯನ್ನು ಇಲ್ಲಿ ಪರಿಚಯಿಸಲಾಗಿದೆ.

ಜಿಲ್ಲೆಯ ಇಟಗಿ, ಕುಕನೂರ, ಕೊಪ್ಪಳ, ಪುರ, ಕನಕಗಿರಿ, ಅಳವಂಡಿ ಪ್ರಾಚೀನ ವಾಸ್ತುಶಿಲ್ಪಕಲೆಗೆ ಹೇಳಿಮಾಡಿಸಿದ ಸ್ಥಳವಾಗಿದ್ದರಿಂದ,ಇಲ್ಲಿ ಬೃಹತ್ ಪ್ರಮಾಣದಲ್ಲಿ ನಿರ್ಮಾಣಗೊಂಡ ದೇವಾಲಯಗಳ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿರುವುದರಿಂದ,ದೇವಾಲಯಗಳ ಕುರಿತು ಹೆಚ್ಚಿಗೆ ಅಧ್ಯಯನ ನಡೆಯದೆ ಇರುವ ದೇವಾಲಯಗಳನ್ನು ಗುರುತಿಸಿ ಚರ್ಚಿಮಾಡಲಾಗಿದ್ದು, ಸಂಶೋಧಕರ ನಿರ್ಲಕ್ಷತನದಿಂದ ಉಳಿದುಕೊಂಡ ಪುರದ ಸೋಮೇಶ್ವರ ದೇವಾಲಯ ಕೋಟಿ ಲಿಂಗಗಳು, ಬೇರೆ ಬೇರೆ ಶಿಲ್ಪಗಳು, ಮೂರುಕಾಲಿನ ಕಲ್ಲಿನ ಮಂಚ, ತಲೆಯ ಮೇಲೆ ಲಿಂಗವನ್ನು ಹೊತ್ತೊಯುತ್ತಿರುವ ರಾವಣನಂತಹ ವಿಶಿಷ್ಟ ಶಿಲ್ಪಗಳು, ಸಣ್ಣಬಾಗಿಲುಗಳುಳ್ಳ ಸೋಮೇಶ್ವರ ದೇವಾಲಯ ನಿಜಕ್ಕೂ ಕೊಪ್ಪಳ ಜಿಲ್ಲಾ ಪ್ರದೇಶದಲ್ಲಿಯೇ ವೈಶಿಷ್ಟ್ಯತೆಯನ್ನು ಹೊಂದಿದೆ. ಅಂತಹ ದೇವಾಲಯಗಳ ಬಗ್ಗೆ ಇನ್ನು ಆಗಬೇಕಾದ ಸಂಶೋಧನೆ ಈ ಭಾಗದಲ್ಲಿ ಸಾಕಷ್ಟಿದ್ದು ಅದನ್ನು ತುಂಬಿಕೊಡುವ ಪ್ರಯತ್ನ ಮಾಡಿರುವೆನು.

ಶಿಕ್ಷಣ ಮತ್ತು ಸಾಹಿತ್ಯದಲ್ಲಿ ಜಿಲ್ಲೆ ತುಂಬಾ ಶ್ರೀಮಂತವಾಗಿದ್ದು ಇಲ್ಲಿ ಒಂಬತ್ತು ಅಗ್ರಹಾರಗಳು, ಹದಿನೇಳು ಕವಿಗಳು, ಪ್ರಾಥಮಿಕ, ಪ್ರೌಢ, ಉನ್ನತ ಶಿಕ್ಷಣ, ಸ್ತ್ರೀ ಶಿಕ್ಷಣ, ಪದವಿಗಳು, ಬೆಳೆದುಕೊಂಡು ಬಂದ ಶಾಸನ ಸಾಹಿತ್ಯ ಚಟುವಟಿಕೆಗಳನ್ನು ತಿಳಿಯಲು ಸಂಶೋಧಕರಿಗೆ ಕನ್ನಾನೆಲವಾಗಿದೆ. ಆದರೆ ಅಂದಿನ ಶಿಕ್ಷಣ ಸಮಾಜದ ಮೂಲ ಬೇಡಿಕೆಗಳಲ್ಲೊಂದಾಗಿದ್ದರೂ ಜನ ಸಾಮಾನ್ಯರಿಗೆ ನಿಲುಕದ ಮಾತಾಗಿತ್ತು ಏಕೆ ? ಎಂಬ

ವಿಚಾರಗಳಿಗೆ ಶಾಸನಗಳು ಮೌನ ತಾಳಿರುವುದೇಕೆ ಎನ್ನುವ ಇತ್ಯಾದಿ ವಿಚಾರಗಳಿಗೆ ಉತ್ತರ ಕಂಡುಕೊಳ್ಳಬೇಕಾಗಿದೆ.

ಅದೆ ನೇನಿದ್ದರೂ ಇಲ್ಲಿ ಪ್ರಕಟಗೊಂಡ ಶಾಸನಗಳನ್ನಾಧರಿಸಿ ಕ್ಷೇತ್ರಕಾರ್ಯದ ಅಧ್ಯಯನದಿಂದ ದೊರೆತ ಮಾಹಿತಿ ಮತ್ತು ಪ್ರಾಚ್ಯವಸ್ತುಗಳ ಸಹಾಯದಿಂದ ಈಡಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನವನ್ನು ಶಿಲಾಯುಗದ ನಾಗರಿಕೆಯಿಂದ ಮೊದಲುಗೊಂಡು ಕ್ರಿ.ಶ. ೧೩೩೬ ರ ಕಾಲಮಿತಿಯಲ್ಲಿ ಕಟ್ಟಿಕೊಡಲು ಪ್ರಯತ್ನ ಮಾಡಲಾಗಿದೆ. ಆದರೆ ಈ ಭಾಗದಲ್ಲಿ ಪ್ರಾಗಿತಿಹಾಸ ಕಾಲದ- ಅಧ್ಯಯನ ಶಿಲಾಗೋರಿಗಳು, ಶಿಲಾಯುಗದ ಮಾನವನ ನೆಲೆಗಳು, ದೇವಾಲಯ ಶಾಸನಗಳ ರಕ್ಷಣಾ ಕಾರ್ಯ ನಡೆದಾಗ ಮಾತ್ರ ಈ ನಾಡಿನ ಸಾಂಸ್ಕೃತಿಕ ಇತಿಹಾಸ ಮುಂದಿನ ಪೀಳಿಗೆಗೆ ಉಳಿಸಲು ಸಹಾಯಕವಾಗುವುದೆಂಬ ವಿಚಾರವನ್ನು ಮುಂದಿಟ್ಟುಕೊಂಡು ಸಮೀಕ್ಷಿಸಲಾಗಿದೆ.



# ಗ್ರಂಥಋಣ Bibliography


೧. ಶಾಸನ ಸಂಪುಟಗಳು

Annual Report on Indian Epigraphy
Annual Report on South Indian Epigraphy
Annual Report of Hyderabad State Archaeological Department
Annual Report of Mysore Archaeological Department
Corpus of Kadamba Inscriptions
Epigraphia Carnatica Volums
Epigraphia Indica Volums
Indian Antiquery Volums
Inscriptions in Kannada District of Hyderabad State.(Ed. Desai, P.B.)
Inscriptions of Karnataka (Koppal District), Volums
Karnataka Inscriptions Volums
ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, (ಕೊಪ್ಪಳ ಜಿಲ್ಲೆ) (ಸಂ- ದೇವರಕೊಂಡಾರೆಡ್ಡಿ)
ಶಾಸನ ಪರಿಚಯ (ದೇಸಾಯಿ, ಪಿ.ಬಿ.)

೨. ಗ್ರಂಥಗಳು

**English Books**

| | | |
|---|---|---|
| Altekar, A.S. | 1934 : | The Rastrakutas and Their Times Poona, Oriental Book Agency |
| Appadorai, A. | 1990 : | Economic Conditions in Southern India (Reprint) 2-Vols, Madras, University of Madras |
| Basavaraj, K.R. | 1983 : | Administration Under the Chalukyas of KalyanaMadras, New Era Publication |
| | 1984 : | History and Culture of Karnataka (Early times to Unification) Dharwad, Chalukya Publication |
| Channabasappa, S.Patil<br>Sree Vinoda, C. Patil | 1998 : | Inscriptions of Karnataka, (Koppal District) Mysore, Directore of Archaeology and Museum |
| Dikshit, G.S.<br>Kuppuswamy, G.R.<br>Mohan, S.R. | 1993 : | Tank Irrigation in Karnataka A Historical Survey, Banglore |

| | | |
|---|---|---|
| Dikshit, G.S. | 1964 : | Local Self Government in Medieval Karnataka Dharwad, Karnatak University |
| Desai, P.B., Ritti, S.H. and Gopal, B.R. | 1974 : | A History of Karnataka (From Prehistory to unification) Dharwad, Karnatak University |
| Desai, P.B. | 1957 : | Jainism in South India and Some Jaina Epigraphs Sollapur, Jain Samrakshan Sargha |
| Desai Dinkar | 1951 : | Mahamandalesvaras Under the Chalukyas of Kalyan Bombay, Indian Historical Research Institute |
| Gatapanadi, S.G. | 1977 : | Taxetion in Ancient and Medieval Karnataka (Unpublished Thesis), Dharwad Karnatak University |
| Gururajachar, S. | 1974 : | Some Aspects of Economic and Social life in Karnataka, 1000 - 1300 Mysore, Mysore University |
| Gopal, B.R. | 1981 : | The Chalukyas of Kalyana and Kalachuries Dharwad, Karnatak University |
| Kadabadi, B.K. | 1979 : | Vaddaradane A Study Dharwad, Karnatak University |
| Kuppuswamy, G.R. | 1975 : | Economic Condition in Karnataka (973 - 1336) Dharwad, Karnatak University |
| Patil, C.S. | 1992 : | The Temples of Bellary and Raichur District Karnataka, (1000 - 1325) Mysore, Directore of Archaeology Museum |
| Sankaliya, H.D. | 1956 : | Animal Fossils and Palaeolithic Industries the Pravar Basin at Nevasa, District Ahmadanagar (Ancient India, Vol-XII) |
| Santakumari, S.L. | 1986 : | History of the Agraharas, Karnataka 400-1300 Madras, New Era Publications |
| Sundara, A. | 1975 : | The Early Chamber Tomes of South India Delhi, Concept Publishing Co |
| Yazdani, G.(Ed) | 1982 : | The Early History of the Deccan Part -I New Delhi, Reprint Corporation Oriental Book House |

## ಕನ್ನಡ ಗ್ರಂಥಗಳು


ಅಣ್ಣಿಗೇರಿ, ಎ.ಎಂ. ಮತ್ತು ಮೇವುಂಡಿ ಮಲ್ಲಾರಿ ೧೯೬೧ : ಶಾಸನ ಸಾಹಿತ್ಯ ಪರಿಚಯ
ಕನ್ನಡ ಸಂಶೋಧನ ಸಂಸ್ಥೆ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಅಪರ್ಣಾ, ಕೂ. ಸಾ. ೧೯೯೯ : ದೇವಾಲಯ ವಾಸ್ತು ಶಿಲ್ಪ ಪರಿಚಯ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಅಶ್ವತ್ಥ, ಪಿ.ಎಸ್. ಮತ್ತು ಸಂಗಡಿಗರು ೧೯೯೯ : ವಿಮೋಚನ ಕೊಪ್ಪಳ ಜಿಲ್ಲೆ ಹೈದ್ರಾಬಾದ್ ವಿಮೋಚನಾ ಹೋರಾಟ ಕತೆ
ಜಿಲ್ಲಾ ಆಡಳಿತ, ಕೊಪ್ಪಳ

ಈಶ್ವರನ್, ಹಿರೇಮಲ್ಲೂರು. ೧೯೮೧ : ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ

ಡಾ. ಕಲಬುರ್ಗಿ, ಎಂ.ಎಂ. ೧೯೯೯ : ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಭಾಗ-೧
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ. ಕಲಬುರ್ಗಿ, ಎಂ.ಎಂ. ೧೯೭೩ : ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಾ. ಕಲಬುರ್ಗಿ, ಎಂ.ಎಂ. ೧೯೭೪ : ಶಾಸನ ವ್ಯಾಸಂಗ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕಮಲೇಶ, ಕೆ.ಆರ್. ಮತ್ತು ಜಗನ್ನಾಥ, ಎಸ್.ಎ. ೧೯೯೯ : ಭಗೀರಥ ಸಂಕಲ್ಪ
ಶ್ರೀ ಭಗೀರಥ ಉಪ್ಪಾರ ಸಂಘ, ಬೆಂಗಳೂರು

ಕಲ್ಗುಡಿ, ಬಸವರಾಜ ೧೯೮೫ : ಮಹಾಸತಿ ಆಚರಣೆ ಒಂದು ಅಧ್ಯಯನ
ಬೆಂಗಳೂರು, ಬೆಂಗಳೂರು ವಿಶ್ವವಿದ್ಯಾಲಯ

ಕೃಷ್ಣಭಟ್ಟ, ಕೆ.ವಿ. (ಸಂ) ೧೯೭೫ : ಸಾಹಸ ಭೀಮ ವಿಜಯ
ಮೈಸೂರು

ಡಾ. ಕೊಪ್ಪಾ, ಎಸ್. ಕೆ. ೧೯೯೦ : ತರ್ದವಾಡಿ ನಾಡು : ಒಂದು ಅಧ್ಯಯನ
ಪ್ರತಿಭಾ ಪ್ರಕಾಶನ, ಇಂಡಿ.

ಗೋಪಾಲರಾವ್, ಎಸ್.ಎಚ್. ೧೯೯೩ : ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ
ಪ್ರಾಚ್ಯವಸ್ತು ನಿರ್ದೇಶನಾಲಯ, ಮೈಸೂರು.

ಡಾ. ಚಿದಾನಂದ ಮೂರ್ತಿ, ಎಂ. ೧೯೭೯ : ಕನ್ನಡ ಶಾಸನಗಳ ಸಾಂಸ್ಕೃತಿಕಅಧ್ಯಯನ
ಪ್ರಸಾರಾಂಗ, ಮೈಸೂರ ವಿಶ್ವವಿದ್ಯಾಲಯ, ಮೈಸೂರ

ಚೆನ್ನಬಸಪ್ಪ, ಎಸ್.ಪಾಟೀಲ ೧೯೯೯ : ಕರ್ನಾಟಕದ ಕೋಟೆಗಳು, ಸಂ-೧
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ. ಚೆನ್ನಬಸವ ಹಿರೇಮಠ ೨೦೦೦ : ಎಡದೊರೆ ನಾಡು
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

| | | |
|---|---|---|
| | ೧೯೯೫ : | ಕುರುಗೋಡಿನ ಸಿಂಧರು<br>ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ |
| ಡಾ. ಚೆನ್ನಕ್ಕ ಎಲಿಗಾರ | ೧೯೯೦ : | ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ<br>ಪ್ರಸಾರಾಂಗ,ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ತಂಬಡ ವಿಜಯ ಪೂಣಚ್ಚ,(ಸಂ)<br>ಗೋವಿಂದರಾಜು, ಸಿ.ಆರ್.,<br>ಕೆ. ಮೋಹನಕೃಷ್ಣ ರೈ.,<br>ಎನ್.ಚೆನ್ನಸ್ವಾಮಿ ಹೊಸಲೆ. | ೨೦೦೧ : | ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೪, ಚರಿತ್ರೆ<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ತಿಪ್ಪೇರುದ್ರ ಸ್ವಾಮಿ, ಎಚ್. | ೧೯೬೮ : | ಕರ್ನಾಟಕ ಸಂಸ್ಕೃತಿ ಸಮೀಕ್ಷೆ |
| | ೧೯೬೯ : | ವಚನಗಳಲ್ಲಿ ವೀರಶೈವ ಧರ್ಮ |
| ಡಾ. ದೇವರಕೊಂಡಾರೆಡ್ಡಿ(ಸಂ) | ೧೯೯೯ : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ದೇಸಾಯಿ, ಪಾಂಡುರಂಗರಾಯರು | ೧೯೮೩ : | ಕರ್ನಾಟಕದ ಕಲಚುರಿಗಳು<br>ಧಾರವಾಡ, ಆಲೂರ ವೆಂಕಟರಾವ್ ಪ್ರತಿಷ್ಠಾನ |
| ಡಾ. ದೇಸಾಯಿ, ಪಿ.ಬಿ. | ೧೯೫೬ : | ಶಾಸನ ಪರಿಚಯ<br>ಕರ್ನಾಟಕ ಇತಿಹಾಸ ಸಂಶೋಧನ ಮಂಡಳ, ಧಾರವಾಡ |
| ನರಸಿಂಹಾಚಾರ, ಆರ್. | ೧೯೭೨ : | ಕರ್ನಾಟಕ ಕವಿಚರಿತೆ, ಸಂ-೧ |
| | ೧೯೭೩ : | ಕರ್ನಾಟಕ ಕವಿಚರಿತೆ, ಸಂ-೨ |
| | ೧೯೭೪ : | ಕರ್ನಾಟಕ ಕವಿಚರಿತೆ, ಸಂ-೩<br>ಕನ್ನಡ ಸಾಹತ್ಯ ಪರಿಷತ್ತು, ಬೆಂಗಳೂರು |
| ಡಾ. ನಾಗಯ್ಯ, ಜೆ.ಎಂ.<br>ಬೆಳಗಾವಿ. | ೧೯೯೨ : | ಆರನೆಯ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ<br>ವೀರಶೈವ ಅಧ್ಯಯನ ಸಂಸ್ಥೆ, ನಾಗನೂರ ರುದ್ರಾಕ್ಷಿಮಠ, |
| ನಾಗೇಗೌಡ, ಎಚ್. ಎಲ್. | ೧೯೬೯ : | ಪ್ರವಾಸಿ ಕಂಡ ಇಂಡಿಯಾ, ಸಂ-೧<br>ಪ್ರಸಾರಾಂಗ, ಮೈಸೂರ ವಿಶ್ವವಿದ್ಯಾಲಯ, ಮೈಸೂರ |
| ನಾರಾಯಣ, ಪಿ.ವ್ಹಿ. | ೧೯೮೩ : | ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ<br>ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ<br>ಸಂಸ್ಥಾನಮಠ, ಗದಗ. |
| ಡಾ. ಪಪ್ಪು, ಆರ್.ಎಸ್.<br>(ಸಂ) | ೧೯೯೭ : | ಪ್ರಾಚೀನತಮ ಮಾನವ ಸಂಸ್ಕೃತಿಗಳು : ವಿಕಸನದ ಹಂತಗಳು<br>ಷೇಕ ಅಲಿ, ಬಿ. ಮತ್ತು ಸುಂದರ ಅ, ಕರ್ನಾಟಕ ಚರಿತ್ರೆ,<br>ಸಂಪುಟ-೧, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಪಾಟೀಲ, ಬಿ.ಸಿ.,<br>ರಾಜಶೇಖರಪ್ಪ, ಬಿ. ಮತ್ತು<br>ಶಂಭುಲಿಂಗಪ್ಪ. | ೧೯೯೮ : | ಕೊಪ್ಪಳದ ಹೆಚ್ಚಿನ ಶಾಸನಗಳು<br>ಹರಿಹರ ಪ್ರಕಾಶನ, ಕೊಪ್ಪಳ |

